ಕನ್ನಡ ಅಧ್ಯಯನ ಕೇಂದ್ರ ಮಾಲೆ 21

# ಶಾಸನ ಪದ್ಯ ಮಂಜರಿ

(ಕ್ರಿ.ಶ. 700-1560)

ಸಂಕಲನ

**ಆರ್. ನರಸಿಂಹಾಚಾರ್ಯ**

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ

**ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು**

*Śāsana-padya-mañjari* (Poetical extracts from Inscriptions). Compiled by Rao Bahadur R. Narasimhacharya; Introduction by Dr. M. Chidanandamurthy. Published by the Bangalore University, Bangalore. Centre of Kannada Studies, Series No. 21.

ಪ್ರಧಾನ ಸಂಪಾದಕರು:
ಡಾ|| ಜಿ. ಎಸ್. ಶಿವರುದ್ರಪ್ಪ

ಪ್ರಥಮ ಮುದ್ರಣ 1923
ದ್ವಿತೀಯ ಮುದ್ರಣ (ವಿಸ್ತೃತ) 1975



ಪ್ರಕಾಶಕರು:
ಕೆ. ಸಿ. ಶಿವಪ್ಪ
ಉಪ–ನಿರ್ದೇಶಕ
ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 560056.

ಬೆಲೆ: ರೂ. 12–00

ಮುದ್ರಕರು:
ಆರ್. ಕೆ. ಮೂರ್ತಿ
ಡಬ್ಲ್ಯು. ಕ್ಯು. ಜಡ್ಜ್ ಪ್ರೆಸ್, ಬೆಂಗಳೂರು 560025

# ಮುನ್ನುಡಿ

ಅರ್ಧ ಶತಮಾನದ ನಂತರ, ದಿವಂಗತ ರಾವ್‌ಬಹದೂರ್ ಆರ್. ನರಸಿಂಹಾಚಾರ್ಯರ 'ಶಾಸನ ಪದ್ಯಮಂಜರಿ' ಯನ್ನು, ಬೆಂಗಳೂರು ವಿಶ್ವವಿದ್ಯಾಲಯವು ಎರಡನೆಯ ಮುದ್ರಣವನ್ನಾಗಿ ಪ್ರಕಟಿಸುತ್ತಿದೆ. ಈ ಐವತ್ತು ವರ್ಷಗಳಲ್ಲಿ ಶಾಸನ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ನಡೆದಿದ್ದರೂ, ರಾ. ನರಸಿಂಹಾಚಾರ್ಯರ 'ಶಾಸನ ಪದ್ಯಮಂಜರಿ' ಇಂದಿಗೂ ಆರಂಭಕಾಲದ ಶ್ರದ್ಧೆ, ಶ್ರಮ, ಅಭಿರುಚಿಗಳ ದಾಖಲೆಯಾಗಿ ಕನ್ನಡ ಶಾಸನ ಪದ್ಯಗಳ ಸೊಗಸಾದ ಸಂಕಲನವಾಗಿದೆ. ಈಗ ಎರಡನೆಯ ಮುದ್ರಣವಾಗಿ ಹೊರಬರುತ್ತಿರುವ ಈ ಸಂಕಲನವನ್ನು ಮೊದಲನೆಯ ಮುದ್ರಣದೊಂದಿಗೆ ಹೋಲಿಸಿ ನೋಡಿದವರಿಗೆ ಇದೊಂದು ಹೊಸ ದೃಷ್ಟಿಯ ಪರಿಷ್ಕರಣವೆಂಬಂತೆ ತೋರದೆ ಇರದು. ಮೊದಲ ಮುದ್ರಣದ ನಂತರ, ಮೂಲ ಸಂಕಲನಕಾರರು ಅನೇಕ ಶಾಸನಗಳಿಂದ ಆಯ್ದು ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಿದ ಅದೇ ಬಗೆಯ ಶಾಸನಗಳನ್ನು, ಎರಡನೆಯ ಮುದ್ರಣದ ಈ ಕೃತಿಯಲ್ಲಿ ಸಮಾವೇಶಗೊಳಿಸಲಾಗಿದೆ; ಹೊಸದಾಗಿ ಸೇರಿಸಿದ ಈ ಪದ್ಯಗಳ ಕಠಿಣ ಪದಗಳಿಗೆ ಅರ್ಥವನ್ನು ಬರೆದು ಮೊದಲಿನ ಅರ್ಥಕೋಶಕ್ಕೆ ಅನುಬಂಧರೂಪವಾಗಿ ಕೊಡಲಾಗಿದೆ; ಎಷ್ಟೋ ಕಡೆ, ರಾ. ನರಸಿಂಹಾಚಾರ್ಯರ ಶಾಸನ ಪದ್ಯಗಳ ಪಾಠ ತಪ್ಪೆಂದು ಕಂಡೆಡೆ ತಿದ್ದಲಾಗಿದೆ; ಮತ್ತು ಈ ಎರಡನೆಯ ಮುದ್ರಣಕ್ಕೆ ವಿಸ್ತಾರವಾದ ಮತ್ತು ಅತ್ಯಂತ ಉಪಯುಕ್ತವಾದ ಪ್ರಸ್ತಾವನೆಯನ್ನು ಕೊಡಲಾಗಿದೆ. ಈ ಎಲ್ಲ ಹೊಸ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಹಾಗೂ ಜವಾಬ್ದಾರಿಯಿಂದ ಮಾಡಿ, ಈ ಎರಡನೆಯ ಪರಿಷ್ಕರಣಕ್ಕೆ ಕಾರಣರಾದವರು, ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕರಾದ ಡಾ. ಎಂ. ಚಿದಾನಂದಮೂರ್ತಿಯವರು. ಕನ್ನಡ ಶಾಸನಗಳ ಕ್ಷೇತ್ರದಲ್ಲಿ ಅಧಿಕೃತವಾಗಿ ಕೆಲಸ ಮಾಡಬಲ್ಲವರೆಂದು ಹೆಸರಾಗಿರುವ ಡಾ. ಚಿದಾನಂದಮೂರ್ತಿಯವರ ವಿಶೇಷವಾದ ಶ್ರಮದಿಂದಾಗಿ, ರಾ. ನರಸಿಂಹಾಚಾರ್ಯರ, ಶಾಸನಪದ್ಯಮಂಜರಿ, ಇದೀಗ ಹೊಸರೂಪದಿಂದ ಪ್ರಕಟವಾಗಲು ಸಾಧ್ಯವಾಗಿದೆ. ಇದಕ್ಕಾಗಿ ನಾನು ಡಾ. ಮೂರ್ತಿಯವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

'ಶಾಸನಪದ್ಯ ಮಂಜರಿ'ಯ ಪುನರ್ ಮುದ್ರಣದ ಅಗತ್ಯವನ್ನು ಕಂಡುಕೊಂಡು, ನಾವು, ದಿವಂಗತ ಆರ್. ನರಸಿಂಹಾಚಾರ್ಯರ ಮೊಮ್ಮಕ್ಕಳಾದ ಶ್ರೀ ಆರ್. ರಾಮಸ್ವಾಮಿಯವರನ್ನು, ಅನುಮತಿಗಾಗಿ ಕೇಳಿಕೊಂಡಾಗ, ಶ್ರೀಯುತರು ತುಂಬ ಅಭಿಮಾನದಿಂದ ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದಾರೆ. ಅದಕ್ಕಾಗಿ ಬೆಂಗಳೂರು ವಿಶ್ವವಿದ್ಯಾಲಯವು ಅವರಿಗೆ ಕೃತಜ್ಞವಾಗಿದೆ. ಈ ಕೃತಿಯನ್ನು ಅಚ್ಚುಕಟ್ಟಾಗಿ ಪ್ರಕಟಿಸುವುದರಲ್ಲಿ ನೆರವಾದ ಪ್ರಕಟಣ ವಿಭಾಗದ ಉಪನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪನವರಿಗೆ ವಂದನೆಗಳು.

**ಜಿ. ಎಸ್. ಶಿವರುದ್ರಪ್ಪ**
ಪ್ರಧಾನ ಸಂಪಾದಕರು

Dedicated
By Gracious Permission
to
His Highness
Sir Sri Krishna Raja Odeyar Bahadur
G. C. S. I., G. B. E.,
Maharaja of Mysore.

ಈ ಪುಸ್ತಕವು
ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ
ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್
ಜಿ. ಸಿ. ಎಸ್. ಐ., ಜಿ. ಬಿ. ಇ.
ಮಹಾಸ್ವಾಮಿಯವರಿಗೆ
ಅಪ್ಪಣೆಯನ್ನು ಪಡೆದು
ಅರ್ಪಿಸಲ್ಪಟ್ಟಿದೆ.




'ಅರ್ಪಣೆ' ಮೊದಲ ಮುದ್ರಣದಲ್ಲಿದ್ದಂತೆ

## ಶಾಸನಗಳಿರುವ ಪ್ರದೇಶಗಳ ವರ್ಣಾನುಕ್ರಮಣಿಕೆ

## Alphabetical list of the Places where the Inscriptions are found


ಅಮರಾವತಿ 272
ಅರ್ಜುನವಾಡ 310
ಅರಸಿಕೆರೆ 31, 64, 114, 118, 147, 157, 162, 177, 186, 198, 200, 208, 229, 231, 233, 235, 242, 243, 248, 249, 254, 263, 265, 274, 285, 297, 298, 308, 314, 324.
ಇಟ್ಟಗಿ 78
ಎಮ್ಮನೂರು 131
ಐಹೊಳೆ 180
ಕಡೂರು 91, 122, 179, 181, 190, 195, 203, 220, 245, 267, 273, 281, 299, 330
ಕರುಗುದರಿ 76
ಕರುಗೋಡು 222, 223
ಕುಪ್ಪಗುಡ್ಡೆ 307
ಕುಳೇನೂರು 20
ಕೃಷ್ಣರಾಜಪೇಟೆ 302, 315, 327
ಕೋಟೂರು 6
ಗದುಗು 23, 61
ಗಾವರವಾಡ 39
ಗುಬ್ಬಿ 292
ಗೇರಸೊಪ್ಪೆ 334, 336, 339
ಚಿಕ್ಕನಾಯಕನಹಳ್ಳಿ 134, 188, 207, 216, 239, 300
ಚಿಕ್ಕಮಗಳೂರು 35, 92, 104, 114, 206, 215
ಚಿತ್ರದುರ್ಗ 325
ಚೆನ್ನಗಿರಿ 135, 287
ಚೆನ್ನರಾಯಪಟ್ಟಣ 55, 99, 106, 117, 123, 197, 211, 218, 227, 261, 276, 289, 290, 306, 317
ಜೂರ (ಮಧ್ಯಭಾರತ) 9
ಡಂಬಳ 100
ತರೀಕೆರೆ 230, 270
ತಾಡಪತ್ರಿ 258
ತಿಪಟೂರು 201, 259, 326
ತಿರುಮುಕೂಡಲು ನರಸೀಪುರ 12, 182
ತೀರ್ಥಹಳ್ಳಿ 69
ತುಮಕೂರು 152, 153
ತೇರದಾಳು 98
ತೋರಗಲ್ಲು 240
ದಾವಣಗೆರೆ 125, 152, 156, 159, 169, 182, 214 [ಅ], 291, 321
ನಗರ 34, 44, 54, 130, 158
ನರಗುಂದ 141
ನರೇಂದ್ರ 100
ನಾಗಮಂಗಲ 88, 108, 124, 127, 209, 214, 228, 244, 257,

284, 294, 311, 316, 323
ನಾಗಾಯಿ 30, 53
ನೀರಲ್ಗಿ 43
ನಂಜನಗೂಡು 176, 331
ಪಟ್ಟದಕಲ್ 165
ಪಾವುಗಡ 296, 305
ಬನವಾಸಿ 66
ಬಂಕಾಪುರ 29
ಬಾದಾಮಿ 4
ಬಿಜಾಪುರ 49
ಬೆಳಗಾಮಿ 19, 51
ಬೇಲೂರು 10, 58, 62, 84, 86, 107, 109, 113, 115, 116, 136, 139, 154(ಅ), 155, 194, 210, 226, 234, 236, 237, 251, 255, 264, 266, 280, 286, 293, 312, 318, 319, 320, 321
ಬೇಲೂರು 17
ಮಳವಳ್ಳಿ 85
ಮಾಡಗಿಹಾಳು 191
ಮುತ್ತಗೆರಿ 73, 241
ಮುಳುಗುಂದ 27
ಮುಳುಬಾಗಿಲು 5
ಮೂಡಗೆರೆ 103
ಮೂಡಬಿದಿರೆ 340, 341, 344
ಮಂಜರಾಬಾದ್ 21, 56
ಮಂಡ್ಯ 7
ರೋಣ 18, 212
ಲಕ್ಷ್ಮೇಶ್ವರ 42, 50, 68, 138, 174
ಶಿವಮೊಗ್ಗ 79, 83, 94, 192
ಶ್ರವಣಬೆಳ್ಗೊಳ 1, 2, 3, 8, 11, 13, 65, 80, 82, 89, 90, 93, 96, 97, 105, 111, 119, 120, 126, 150, 167, 168, 172, 202, 205, 219, 224, 262
ಶ್ರೀರಂಗಪಟ್ಟಣ 15
ಶಿಕಾರಿಪುರ 16, 26, 28, 36–40, 45, 46, 48, 57, 63, 70, 81, 102, 133, 142, 144, 146, 148, 160, 166, 173, 178, 189, 196, 213, 221, 225, 260, 268, 271, 277, 309
ಸಾಗರ 24, 59, 151, 282, 343, 345
ಸೂಡಿ 32
ಸೊರಬ 22, 41, 87, 101, 128, 145, 149, 171, 175, 184, 256, 275, 278, 283, 295, 333, 337, 338, 342
ಹಳೇಬೀಡು 33
ಹಾವೇರಿ 121
ಹಾಸನ 90, 110, 129, 132, 140, 143, 154, 170, 183, 185, 193, 199, 246, 288
ಹಿಪ್ಪರಿಗೆ 247
ಹುಣಸೂರು 137

ಹೂಲಿ 14, 25, 52, 60, 71, 72, 73, 74, 75, 163, 164, 232
ಹೊನ್ನಾಳಿ 204, 238, 250, 252, 253, 269, 279, 303, 304
ಹೊಳೆನರಸೀಪುರ 187, 301, 322, 328

# ಶಾಸನಗಳಲ್ಲಿ ಹೇಳಿರುವ ರಾಜವಂಶಗಳು

# Dynasties of Kings mentioned in the Inscriptions


## ಗಂಗರು

ಬೂತುಗ II 10
ಮಾರಸಿಂಹ II 11, 12
ಭುಜಬಳಗಂಗ (ಸಾಮಂತ) 79
ನನ್ನಿಯಗಂಗ (ಸಾಮಂತ) 83, 94, 148
ಸತ್ಯಗಂಗ (ಸಾಮಂತ) 192

## ನೊಳಂಬರು

ವೀರಮಹೇಂದ್ರ 5

## ಚಾಳುಕ್ಯರು

ಜಯಸಿಂಹ I 16, 17, 18, 19, 20, 22–4
ತ್ರೈಲೋಕ್ಯಮಲ್ಲ (ಸೋಮೇಶ್ವರ I) 26–9, 30, 32, 34, 36
ಭುವನೈಕಮಲ್ಲ (ಸೋಮೇಶ್ವರ II) 25, 37–9, 40–3
ತ್ರಿಭುವನಮಲ್ಲ (ವಿಕ್ರಮಾದಿತ್ಯ VI) 44–6, 48-53, 57, 59-63, 66–70, 74–9, 81, 87, 98, 100ಅ, 232
ಭೂಲೋಕಮಲ್ಲ (ಸೋಮೇಶ್ವರ III) 101–2
ಜಯಸಿಂಹ II (ಜಗದೇಕಮಲ್ಲ) 125, 128, 130, 135
ತ್ರೈಲೋಕ್ಯಮಲ್ಲ (ನೂರ್ಮಡಿ ತೈಲ) 138, 141, 145, 149, 151, 171

## ರಾಷ್ಟ್ರಕೂಟರು

ಕೃಷ್ಣರಾಜ III 7, 9
ಇಂದ್ರರಾಜ IV 13

## ಚೋಳರು

ರಾಜಾದಿತ್ಯ 7
ರಾಜರಾಜ 15

## ಕಳಚುರ್ಯರು

ಬಿಜ್ಜಳ 142, 144, 146, 148, 152, 156, 159–60, 163–4, 166, 169, 173–4
ರಾಯಮುರಾರಿ ಸೋಮದೇವ 175, 178, 189, 191, 196
ಸಂಕಮ 212–3, 214ಅ
ಆಹವಮಲ್ಲ 221, 225

## ಸೇವುಣರು

ಭಿಲ್ಲಮ 241, 247
ಸಿಂಹಣ 278–9, 295
ಕನ್ನರ 310
ರಾಮದೇವ 318, 321

## ಕೊಂಗಾಳ್ವರು

ಅದಟರಾದಿತ್ಯ 47

## ಹೊಯ್ಸಳರು

ವಿನಯಾದಿತ್ಯ (ತ್ರಿಭುವನಮಲ್ಲ ಹೊಯ್ಸಳ) 31, 33, 58, 62
ಎರೆಯಂಗ 55, 64
ವಿಷ್ಣುವರ್ಧನ 84–6, 88, 89, 91–2, 95–6, 99, 103–116, 118, 122, 124, 132
ನಾರಸಿಂಹ I 117, 123, 127,

129, 134, 136–7, 139–40, 143, 147, 150, 152, 153–5, 157, 162, 170, 172, 176, 179, 181, 183, 185, 188, 190, 192, 194

ಬಲ್ಲಾಳ II 177, 186, 193, 195, 197–200, 202–4, 206–11, 214–18, 220, 224, 226–31, 233–7, 239, 242-6, 248–9, 251, 254–7, 259–61, 264–70, 273–7, 280–2, 284–7

ನಾರಸಿಂಹ II 288–93, 297–8

ಸೋಮೇಶ್ವರ 294, 299, 301–2, 306, 308

ನಾರಸಿಂಹ III 313–8, 320, 322–5, 327

ಬಲ್ಲಾಳ III 326, 328

**ಸಾಂತರರು**

ವೀರಸಾಂತರ 34

ನನ್ನಿಸಾಂತರ 44

ವಿಕ್ರಮಸಾಂತರ 54

ತ್ರಿಭುವನಮಲ್ಲ ಸಾಂತರ 59, 69

ಪೆರ್ಮಾಡಿ ಸಾಂತರ 101

ಶ್ರೀವಲ್ಲಭ 130

ಜಗದ್ದೇವ 133

ಕಾಮಸಾಂತರ 151

ತೈಲಪ 155

**ಪಾಂಡ್ಯರು**

ವೀರಪಾಂಡ್ಯ 125, 135, 156

ವಿಜಯಪಾಂಡ್ಯ 182

**ಸಿಂದರು**

ಕಂಚರಸ 27

ಈಶ್ವರದೇವ I 169

ಚಾಮುಂಡ II 165, 180

ಈಶ್ವರದೇವ II 204

ರಾಜಮಲ್ಲ 222–3

ಮಲ್ಲಿದೇವರಸ 238, 250, 252–3

ಈಶ್ವರದೇವ III 279

ಬೀರದೇವರಸ 303–4

**ಕಾದಂಬರು**

ಹರಿಕೇಸರಿ 29

ಶಾಂತಿವರ್ಮ 43

ದಯಸಿಂಹ 56

ತೈಲಪ II 76

ಜಯಕೇಶಿ 100

ತೈಲಪ III 101–2, 138

ಸೋಯಿದೇವ 149, 152ಅ, 166, 173, 184, 193

ಮಲ್ಲಿದೇವರಸ 283

**ನಿಡುಗಲ್ಲ ರಾಜರು**

ಇರುಂಗೋಳ 296, 305

**ವಿಜಯನಗರದ ರಾಜರು**

ಬುಕ್ಕ I 330

ಹರಿಹರ II 332–3, 335

ದೇವರಾಯ I 337

ದೇವರಾಯ II 340

**ಗೇರಸೊಪ್ಪೆ ರಾಜರು**

ಭೈರವರಾಯ 341

ದೇವರಾಯ 345

**ಹಾಡುವಳ್ಳಿ ರಾಜರು**

ಸಾಳುವೇಂದ್ರ 343

**PREFACE**
(To First Edition)

In my *Karnataka-Kavicharite* or *Lives of Kannada Poets* I have given extracts from those inscriptions of which the composers are known. But we have besides numerous Kannada inscriptions both in and outside Mysore which are excellent specimens of poetical composition though their authors are not known. These, too, well deserve the attention of the Kannadigas. They have only to be brought to their notice to be appreciated by them. Being however imbedded in bulky volumes such as the Epigraphia Carnatica or in the issues of learned journals such as the Epigraphia Indica, the Indian Antiquary, the Journal of the Bombay Branch of the Royal Asiatic Society and so forth, these records are not easily accessible to most people, and even if the volumes and issues can be procured, very few can afford to spend the time and labour involved in wading through them to get at the inscriptions. I have therefore put together in the present work extracts from some selected inscriptions in order to give to the Kannadigas a taste of the style and beauty of these compositions of their own countrymen, which cannot but arouse a feeling of pride in them.

The number of inscriptions selected is 283.* With the exception of 24 which are in the Bombay Presidency, all of them are in Mysore. Details about their localities are given in 'The Alphabetical list of Places' at the beginning of the book. The inscriptions bear consecutive numbers from 1 to 283 (345) and are in chronological order, ranging in date from about A.D. 700 to 1465 (C.1560). Each record has at the top a brief note giving the subject-matter and in most cases the name of the reigning sovereign. The number of stanzas given in the extracts ranges from 1 to 40, and the total number of stanzas extracted is 1456 (now 1781). The dynasties of rulers to which the inscriptions relate are the Ganga, the Nolamba, the Chalukya, the Rashtrakuta, the Chola, the Kala-

---

* The number of inscriptions in the present edition is 345. The number of inscriptions from Bombay-Karnataka has also increased considerably. Besides there are inscriptions from Madras-Karnataka, Hyderabad-Karnataka and other places added in this Volume.

churya, the Sevuna, the Kongalva, the Hoysala, the Santara, the Pandya, the Sinda, the Kadamba, and those of Nidugal and Vijayanagara. For details about the dynasties, their kings and the inscriptions relating to them reference is invited to 'Dynasties of Kings mentioned in the Inscriptions' given at the beginning.

The importance of the inscriptions is not merely confined to their literary merit. They likewise throw considerable light on the political, social and religious conditions of the times to which they relate. The historical information given about the kings and their officers is of great value. The references to certain customs and practices in vogue at the time of the records are full of interest. Thus we learn from number 6, of about 900, that a man named Sambhu entered fire in fulfilment of a promise made to a Chalukya prince of the name of Parahitaraja. No. 286, of about 1220, gives a pathetic account of how on the death of Ballala II a prince named Kuvara-Lakshma, deeming it a shame to survive his lord, committed suicide along with his loving wife and his devoted battalion of a thousand choice warriors. No. 225, of 1181, refers to the grant to a temple of the property of those who died heirless. Twenty-four of the inscriptions are *nishidigals* or epitaphs recording the death by starvation of Jaina men and women, mostly monks and nuns; and seventeen are *viragals* or memorials of heroes who fell in battle. Again, No. 36 refers to the establishment of a hostel for students so far back as 1066, as also Nos. 144 and 198 of the 12th century. No. 4, of about 700, shows the antiquity of the *tripadi* metre in Kannada. Finally, most of the records bear testimony to the prowess, piety, generosity, patriotism and toleration of the princes and the people.

Being arranged in chronological order, these extracts are of considerable value from a linguistic point of view, as they afford glimpses of the development of the language and the changes it has gradually undergone in the course of time.

It was originally intended to give these extracts in the third volume of the *Karnataka-Kavicharite* along with extracts from works of which the authors are unknown. But their importance in several respects other than that of their literary merit induced me to publish them as a separate book.

Difficult words are explained in the notes at the end of the book. A few grammatical and philological notes have also been added where they were deemed necessary.

I have to express my deep gratitude to His Highness the Maharaja of Mysore for gracious permission to dedicate this work to him.

BANGALORE
*10th October,* 1923

R. NARASIMHACHARYA

## ಅವತರಣಿಕೆ

(ಪ್ರಥಮ ಮುದ್ರಣಕ್ಕೆ)

ಕರ್ಣಾಟಕ ಕವಿಚರಿತೆಯಲ್ಲಿ ಇಂಥ ಕವಿಗಳಿಂದ ರಚಿತವಾದುವು ಎಂದು ತಿಳಿದು ಬಂದ ಕೆಲವು ಶಾಸನಗಳಿಂದ ಮಾತ್ರ ಸ್ವಲ್ಪ ಭಾಗಗಳನ್ನು ಅನುವಾದ ಮಾಡಿದ್ದೇನೆ. ಆದರೆ ಮೈಸೂರು ಸಂಸ್ಥಾನದಲ್ಲಿಯೂ ಇತರ ಪ್ರದೇಶಗಳಲ್ಲಿಯೂ ಕವಿಗಳು ಗೊತ್ತಿಲ್ಲದಿದ್ದರೂ ಉತ್ತಮ ಕಾವ್ಯಸರಣಿಯಲ್ಲಿ ರಚಿತವಾದ ಅನೇಕ ಕನ್ನಡ ಶಾಸನಗಳು ದೊರೆಯುತ್ತವೆ. ಇವುಗಳೂ ಕನ್ನಡಿಗರ ಅವಲೋಕನಕ್ಕೆ ಯೋಗ್ಯವಾದುವು; ಇವುಗಳನ್ನು ಅವರ ದೃಷ್ಟಿಪಥಕ್ಕೆ ತಂದಕೂಡಲೆ ಅವರು ಓದಿ ಆನಂದಿಸುವರು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಈ ಶಾಸನಗಳು ಹೆಚ್ಚು ಬೆಲೆಯುಳ್ಳ ದೊಡ್ಡ ದೊಡ್ಡ ಸಂಪುಟಗಳಲ್ಲಿಯೂ ಮಾಸಿಕ ಅಥವಾ ತ್ರೈಮಾಸಿಕ ಪತ್ರಿಕೆಗಳಲ್ಲಿಯೂ ಅಡಗಿರುವುದರಿಂದ ಅನೇಕರಿಗೆ ಸುಲಭವಾಗಿ ಸಿಕ್ಕಲಾರವು; ಒಂದು ವೇಳೆ ಈ ಸಂಪುಟಗಳನ್ನೂ ಪತ್ರಿಕೆಗಳನ್ನೂ ದೊರಕಿಸಿಕೊಂಡರೂ ಬೇಕಾದ ಶಾಸನಗಳನ್ನು ಹುಡುಕಿ ತೆಗೆವುದು ಶ್ರಮಸಾಧ್ಯವು. ಕನ್ನಡಿಗರಿಗೆ ಈ ಶ್ರಮವನ್ನು ತಕ್ಕಮಟ್ಟಿಗೆ ತಪ್ಪಿಸಿ ಈ ಕವಿತೆಯ ಶೈಲಿಯ ಮತ್ತು ಸೊಬಗಿನ ರಸವನ್ನು ಸ್ವಲ್ಪಮಟ್ಟಿಗಾದರೂ ಆಸ್ವಾದನಮಾಡಲು ಅವಕಾಶವುಂಟು ಮಾಡಬೇಕೆಂಬ ಉದ್ದೇಶದಿಂದ ಕೆಲವು ಶಾಸನಗಳನ್ನು ಆರಿಸಿ ಅವುಗಳಿಂದ ಯೋಗ್ಯವಾದ ಭಾಗಗಳನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇನೆ. ಇವು ಕನ್ನಡ ನಾಡಿನವರ ಕೃತಿಗಳಾದುದರಿಂದ ಇವುಗಳ ಉತ್ತಮಸರಣಿ ಕನ್ನಡಿಗರ ಹೃದಯದಲ್ಲಿ ಸ್ವಭಾವವಾಗಿ ಹೆಮ್ಮೆಯನ್ನು ಉಂಟುಮಾಡದೆ ಇರಲಾರದು.

ಈ ಪುಸ್ತಕಕ್ಕಾಗಿ ಆರಿಸಿದ ಶಾಸನಗಳ ಸಂಖ್ಯೆ 283.* ಇವುಗಳಲ್ಲಿ, ಬಾಂಬೆ ಪ್ರಾಂತದಲ್ಲಿರುವ 24 ಶಾಸನಗಳನ್ನು ಬಿಟ್ಟರೆ, ಉಳಿದುವೆಲ್ಲಾ ಮೈಸೂರು ಸಂಸ್ಥಾನದಲ್ಲಿಯೇ ಇವೆ. ಒಟ್ಟು ಶಾಸನಗಳಿರುವ ಪ್ರದೇಶಗಳು 56: ಮೈಸೂರು ಸಂಸ್ಥಾನದಲ್ಲಿ 36, ಬಾಂಬೆ ಪ್ರಾಂತದಲ್ಲಿ 20. ಇವುಗಳ ವಿವರವು ಪುಸ್ತಕದ ಆದಿಭಾಗದಲ್ಲಿ ಕೊಟ್ಟಿರುವ ಪ್ರದೇಶಗಳ ಪಟ್ಟಿಯಿಂದ ವ್ಯಕ್ತವಾಗುತ್ತದೆ. ಶಾಸನಗಳಿಗೆ 1 ರಿಂದ 283(345) ರವರೆಗೆ ಅನುಕ್ರಮವಾದ ಸಂಖ್ಯೆಗಳು ಕೊಟ್ಟಿವೆ; ಅವು ಸುಮಾರು 700 ರಿಂದ 1465 (1781) ರವರೆಗೆ ಕಾಲಕ್ರಮವಾದ ಆನುಪೂರ್ವಿಯಲ್ಲಿ ಮುದ್ರಿತವಾಗಿವೆ. ಒಂದೊಂದು ಶಾಸನದ ಆದಿಭಾಗದಲ್ಲಿಯೂ ಅದರಲ್ಲಿ ಉಕ್ತವಾದ ವಿಷಯವೂ ಇದ್ದಕಡೆ ಆಗ ಆಳುತ್ತಿದ್ದ ರಾಜನ ಹೆಸರೂ ಹೇಳಿದೆ. ಅನುವಾದಮಾಡಿರುವ ಭಾಗಗಳಲ್ಲಿ 1 ರಿಂದ 40 ರವರೆಗೆ ಪದ್ಯಗಳಿವೆ; ಒಟ್ಟು ಅನುವಾದಮಾಡಿರುವ ಪದ್ಯಗಳ ಸಂಖ್ಯೆ

---

* ಈ ಮುದ್ರಣದಲ್ಲಿನ ಶಾಸನಗಳ ಸಂಖ್ಯೆ 345. ಬೊಂಬಾಯ್-ಕರ್ನಾಟಕದ ಶಾಸನಗಳ ಸಂಖ್ಯೆಯೂ ಹೆಚ್ಚಿದೆ. ಜೊತೆಗೆ ಮದ್ರಾಸ್-ಕರ್ನಾಟಕ, ಹೈದರಾಬಾದ್-ಕರ್ನಾಟಕ ಶಾಸನಗಳ ಜೊತೆ ಇತರ ಪ್ರದೇಶಗಳ ಶಾಸನಗಳೂ ಸೇರಿವೆ.

1456. (ಈಗ 1781). ಈ ಶಾಸನಗಳು — ಗಂಗ, ನೊಳಂಬ, ಚಾಳುಕ್ಯ, ರಾಷ್ಟ್ರ ಕೂಟ, ಚೋಳ, ಕಳಚುರ್ಯ, ಸೇವುಣ, ಕೊಂಗಾಳ್ವ, ಹೊಯ್ಸಳ, ಸಾಂತರ, ಪಾಂಡ್ಯ, ಸಿಂದ, ಕಾದಂಬ, ನಿಡುಗಲ್ಲು, ವಿಜಯನಗರ, ಗೇರಸೊಪ್ಪೆ, ಹಾಡುವಳ್ಳಿ – ಎಂಬ 17 ರಾಜವಂಶಗಳಿಗೆ ಅನ್ವಯಿಸುತ್ತವೆ. ದೇವಗಿರಿಯ ಯಾದವ ವಂಶದ ರಾಜರಿಗೆ ಸೇವುಣರು ಎಂದು ಹೆಸರು. ಕೊಂಗಾಳ್ವರು ಕೊಡಗು ಅರಕಲ್ಗೂಡು ಈ ಪ್ರಾಂತಗಳಲ್ಲಿ ರಾಜ್ಯ ವಾಳಿದರು. ಸಾಂತರರಿಗೆ ನಗರದ ತಾಲ್ಲೂಕಿನಲ್ಲಿಯ ಪೊಂಬುಚ್ಚವು ರಾಜಧಾನಿಯಾಗಿ ದ್ದಿತು. ಪಾಂಡ್ಯರು ಚಿತ್ರದುರ್ಗ ಪ್ರಾಂತದಲ್ಲಿ ಆಳುತ್ತಿದ್ದರು. ಇವರ ರಾಜಧಾನಿ ಉಚ್ಚಂಗಿ. ಸಿಂದರ ರಾಜ್ಯಕ್ಕೆ ಸಿಂದವಾಡಿ ಎಂದು ಹೆಸರು; ಇವರು ಹೊನ್ನಾಳಿಯ ಪ್ರಾಂತದಲ್ಲಿ ದೊರೆಗಳಾಗಿದ್ದರು. ನಿಡುಗಲ್ಲ ರಾಜರು ಚೋಳವಂಶದವರು; ಇವರ ಪೂರ್ವದ ರಾಜಧಾನಿ ಹೆಂಜೆರು. ಇದು ಈಗ ಮಡಕಸಿರಾ ತಾಲ್ಲೂಕಿನಲ್ಲಿರುವ ಹೇಮಾವತಿ ಎಂಬ ಸ್ಥಳವು. ಈಚೆಗೆ ಪಾವುಗಡ ತಾಲ್ಲೂಕಿನಲ್ಲಿಯ ನಿಡುಗಲ್ಲು ಇವರ ರಾಜಧಾನಿಯಾಯಿತು. ಈ ವಂಶಗಳ ರಾಜರ ಮತ್ತು ಅವರಿಗೆ ಸಂಬಂಧಿಸಿದ ಶಾಸನಗಳ ವಿವರವನ್ನು ಆರಂಭ ದಲ್ಲಿ ಕೊಟ್ಟಿರುವ ರಾಜವಂಶಗಳ ಪಟ್ಟಿಯಿಂದ ತಿಳಿದುಕೊಳ್ಳಬಹುದು.

ಈ ಶಾಸನಗಳಿಗೆ ಕವಿತಾಶೈಲಿಯೊಂದರಿಂದಲೇ ಮಹತ್ವವುಂಟಾಗಿದೆ ಎಂದು ತಿಳಿಯಬಾರದು. ಇವು ಆ ಆ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಇವುಗಳಲ್ಲಿ ರಾಜರುಗಳ ವಿಷಯವಾಗಿಯೂ ಅವರಿಗೆ ಅಧೀನರಾದ ಅಧಿಕಾರಿಗಳ ವಿಷಯವಾಗಿಯೂ ಹೇಳಿರುವ ಚರಿತ್ರಸಂಬಂಧ ವಾದ ಅಂಶಗಳು ಬಹಳ ಮುಖ್ಯವಾದುವು. ಅಲ್ಲದೆ ಆ ಆ ಕಾಲದಲ್ಲಿ ಬಳಕೆಯಲ್ಲಿ ದ್ದಂತೆ ಇವುಗಳಿಂದ ತಿಳಿದು ಬರುವ ಕೆಲವು ಪದ್ಧತಿಗಳೂ ಆಚಾರಗಳೂ ನಮಗೆ ಕುತೂಹಲವನ್ನು ಉಂಟುಮಾಡತಕ್ಕವುಗಳಾಗಿವೆ. ಈ ವಿಷಯವನ್ನು ಕೆಲವು ಉದಾ ಹರಣೆಗಳಿಂದ ಸ್ಪಷ್ಟಪಡಿಸುತ್ತೇನೆ. ಸುಮಾರು 900 ರಲ್ಲಿ ಹುಟ್ಟಿದ 6 ನೆಯ ಶಾಸನ ದಲ್ಲಿ ಶಂಭು ಎಂಬುವನು ಚಾಳುಕ್ಯವಂಶದ ಪರಹಿತರಾಜನಿಗೆ ಭಾಷೆಕೊಟ್ಟಂತೆ ಅಗ್ನಿಪ್ರವೇಶ ಮಾಡಿ ಸತ್ತಂತೆ ಹೇಳಿದೆ. ಸುಮಾರು 1220 ರಲ್ಲಿ ಬರೆದ 286 ನೆಯ ಶಾಸನದಲ್ಲಿ 2 ನೆಯ ಬಲ್ಲಾಳನು ಸಾಯಲು ತನ್ನ ಸ್ವಾಮಿಯ ಮರಣಾನಂತರ ತಾನು ಬದುಕಿರುವುದು ನಾಚಿಕೆಗೇಡೆಂದು ಭಾವಿಸಿ ಆ ದೊರೆಯ ದಂಡನಾಥನಾದ ಕುವರ ಲಕ್ಷ್ಮನು ತನ್ನ ಸತಿಯೊಡನೆಯೂ ತನ್ನ ಕೈಯ ಕೆಳಗಿದ್ದ ಸಾವಿರ ಜನ ವೀರರೊಡನೆಯೂ ಸತ್ತನೆಂದು ಹೇಳಿದೆ. 1181 ರಲ್ಲಿ ಹುಟ್ಟಿದ 225 ನೆಯ ಶಾಸನದಲ್ಲಿ ಮಂತ್ರಿ ಕೇಶವ ರಾಜನು ಗವರೇಶ್ವರ ದೇವರಿಗೆ ಅಪುತ್ರಿಕಮೃತಕಧನವನ್ನು ಬಿಟ್ಟಂತೆ ಹೇಳಿದೆ. ಈ ಶಾಸನಗಳಲ್ಲಿ 24 ನಿಷಿದಿಗಲ್ಲುಗಳೂ 17 ವೀರಗಲ್ಲುಗಳೂ ಇವೆ. (ಈ ಸಂಖ್ಯೆ ಈಗ ಸ್ವಲ್ಪ ಹೆಚ್ಚಾಗುತ್ತದೆ). ಅನಶನವ್ರತದಿಂದ ಸತ್ತ ಜೈನ ಸ್ತ್ರೀ ಪುರುಷರ, ಮುಖ್ಯವಾಗಿ ಸನ್ಯಾಸಿ ಸನ್ಯಾಸಿನಿಯರ, ಜ್ಞಾಪಕಾರ್ಥವಾಗಿ ನಟ್ಟ ಕಲ್ಲುಗಳಿಗೆ ನಿಷಿದಿಗಲ್ಲುಗಳೆಂದೂ ಯುದ್ಧದಲ್ಲಿ ಮಡಿದ ವೀರರ ಜ್ಞಾಪಕಾರ್ಥವಾಗಿ ನಟ್ಟ ಕಲ್ಲುಗಳಿಗೆ ವೀರಗಲ್ಲುಗಳೆಂದೂ ಹೆಸರು. ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಭೋಜನಶಾಲೆಗಳ ಏರ್ಪಾಡು ಬಹಳ ಕಾಲಕ್ಕೆ ಹಿಂದೆಯೇ, ಎಂದರೆ 11, 12ನೆಯ ಶತಮಾನಗಳಲ್ಲಿಯೇ ಇದ್ದಿತು ಎಂಬಂಶವು

36, 144,198ನೆಯ ಶಾಸನಗಳಿಂದ ತಿಳಿಯುತ್ತದೆ. ಸುಮಾರು 700 ರಲ್ಲಿ ಹುಟ್ಟಿದ 4ನೆಯ ಶಾಸನದಿಂದ ಕನ್ನಡದಲ್ಲಿ ತ್ರಿಪದಿಯ ಪ್ರಾಚೀನತೆ ವ್ಯಕ್ತವಾಗುತ್ತದೆ. ಹೀಗೆ ಈ ಶಾಸನಗಳಿಂದ ವಿಮರ್ಶಾರ್ಹವಾದ ಹಲವು ವಿಷಯಗಳು ತಿಳಿದುಬರುತ್ತವೆ. ಇದಲ್ಲದೆ ಇವುಗಳಲ್ಲಿ ಹಲವು ರಾಜರ ಮತ್ತು ಪ್ರಜೆಗಳ ಶೌರ್ಯ, ದೈವಭಕ್ತಿ, ಔದಾರ್ಯ, ದೇಶವಾತ್ಸಲ್ಯ, ಧಾರ್ಮಿಕಸಮ ಬುದ್ಧಿ ಇವುಗಳನ್ನು ಘಂಟಾಘೋಷವಾಗಿ ಸಾರುತ್ತವೆ.

ಈ ಪುಸ್ತಕದಲ್ಲಿ ಅನುವಾದಮಾಡಿರುವ ಶಾಸನ ಭಾಗಗಳು ಕಾಲಕ್ರಮವಾದ ಆನುಪೂರ್ವಿಯಲ್ಲಿರುವುದರಿಂದ ಕಾಲಕ್ರಮದಲ್ಲಿ ಉಂಟಾದ ಭಾಷೆಯ ಬೆಳೆವಣಿಗೆ, ಮಾರ್ಪಾಡು ಇವುಗಳನ್ನು ತೋರಿಸುವುದರ ಮೂಲಕ ಭಾಷಾಚರಿತ್ರಜ್ಞಾನಕ್ಕೆ ಸಹ ಕಾರಿಗಳಾಗಿವೆ.

ಮೊದಲು ಈ ಶಾಸನಭಾಗಗಳನ್ನು ಕರ್ಣಾಟಕ ಕವಿಚರಿತೆಯ 3 ನೆಯ ಸಂಪುಟ ದಲ್ಲಿಯ ಕವಿಗಳು ಗೊತ್ತಿಲ್ಲದ ಗ್ರಂಥಗಳ ಭಾಗಗಳೊಡನೆ ಕೊಡಬೇಕೆಂದು ಎಣಿಸಿ ದ್ದೆನು; ಆದರೆ ಕವಿತಾಶೈಲಿಯೊಂದರಲ್ಲಿ ಮಾತ್ರವಲ್ಲದೆ ಹಿಂದೆ ತಿಳಿಸಿದಂತೆ ಇತರ ವಿಧಗಳಲ್ಲಿಯೂ ಇವುಗಳಿಗೆ ಇರುವ ಪ್ರಾಮುಖ್ಯವನ್ನು ನೋಡಿ ಪ್ರತ್ಯೇಕವಾಗಿ ಕೊಡು ವುದು ಯುಕ್ತವೆಂದು ತೋರಿ ಈ ಪುಸ್ತಕರೂಪವಾಗಿ ಮಾಡಿ ಕನ್ನಡಿಗರಿಗೆ ಕಾಣಿಕೆ ಯಾಗಿ ಒಪ್ಪಿಸಿದ್ದೇನೆ.

ಪುಸ್ತಕದ ಅಂತ್ಯಭಾಗದಲ್ಲಿ ಕ್ಲಿಷ್ಟಪದಗಳಿಗೆ ಅರ್ಥವೂ ಅವಶ್ಯವಾದ ಕಡೆ ವ್ಯಾಕರಣ, ಶಬ್ದತತ್ವ ಇವಕ್ಕೆ ಸಂಬಂಧಿಸಿದ ಟಿಪ್ಪಣವೂ ಕೊಟ್ಟಿವೆ.

ಈ ಪುಸ್ತಕವನ್ನು ತಮಗೆ ಅರ್ಪಿಸಲು ಅಪ್ಪಣೆಯನ್ನು ದಯೆಪಾಲಿಸಿದುದಕ್ಕಾಗಿ ಶ್ರೀಮನ್ಮಹಾರಾಜರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಬೆಂಗಳೂರು
10–10–1923

**ಆರ್. ನರಸಿಂಹಾಚಾರ್ಯ**

## ಪರಿವಿಡಿ


1. ಅರ್ಪಣೆ — iv
2. ಮುನ್ನುಡಿ—ಡಾ. ಜಿ. ಎಸ್. ಶಿವರುದ್ರಪ್ಪ — v
3. ಶಾಸನಗಳಿರುವ ಪ್ರದೇಶಗಳ ವರ್ಣಾನುಕ್ರಮಣಿಕೆ — vi-viii
4. ಶಾಸನಗಳಲ್ಲಿ ಹೇಳಿರುವ ರಾಜವಂಶಗಳು — ix-x
5. Preface (to First Edition) — xi-xiii
6. ಅವತರಣಿಕೆ (ಪ್ರಥಮ ಮುದ್ರಣಕ್ಕೆ) — xiv-xvi
7. ಪ್ರಸ್ತಾವನೆ (ಎಂ. ಚಿದಾನಂದಮೂರ್ತಿ) — xvii-xL
8. ಶಾಸನಪದ್ಯ ಮಂಜರಿ — 1-315
9. ಟಿಪ್ಪಣ ಮತ್ತು ಅರ್ಥಕೋಶ — 317-384
10. ಪದ್ಯಗಳ ವರ್ಣಾನುಕ್ರಮಣಿಕೆ — 385-409

# ಪ್ರಸ್ತಾವನೆ

[ದಿ] ರಾ.ಬ. ಆರ್. ನರಸಿಂಹಾಚಾರ್ಯರು ಶಾಸನಗಳಿಂದ ಆರಿಸಿಕೊಟ್ಟ ಬಿಡಿ ಭಾಗ ಅಥವಾ ಪದ್ಯಗಳನ್ನುಳ್ಳ **'ಶಾಸನ ಪದ್ಯಮಂಜರಿ'**ಯು ಶಾಸನಗಳ ಸೊಗಸನ್ನರಿಯ ಬಯಸುವವರಿಗೆ ಇಂದಿಗೂ ಒಳ್ಳೆಯ ಸಂಕಲನ ಗ್ರಂಥವಾಗಿದೆ. ಆ ಪುಸ್ತಕವು ಪ್ರಕಟವಾದ ಮೇಲೆ (1923), ಅವರೇ ಅನೇಕ ಶಾಸನಗಳಿಂದ ಅಂತಹುದೇ ಭಾಗಗಳನ್ನಾರಿಸಿ ಅನುಬಂಧರೂಪವಾಗಿ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ (12.1; 13.2; 13.4; 14.1; 17.2) ಪ್ರಕಟಿಸಿದರು. ಅಲ್ಲಿಯ ಪದ್ಯಗಳನ್ನು ಈ ಸಂಕಲನದಲ್ಲಿ ಸಮಾವೇಶಗೊಳಿಸಿದ್ದರ ಫಲವಾಗಿ ಮುನ್ನೂರಇಪ್ಪತ್ತೈದರಷ್ಟು ಹೆಚ್ಚು ಪದ್ಯಗಳು ಮೂಲಗ್ರಂಥಕ್ಕೆ ಸೇರಿದಂತಾಗಿದೆ. ಹೀಗೆ ಹೊಸದಾಗಿ ಸೇರಿದ ಪದ್ಯಗಳಲ್ಲಿ ಕಂಡುಬರುವ ಕಠಿಣ ಪದಗಳಿಗೆ ಅರ್ಥ ಬರೆದು, ಮೊದಲ ಆವೃತ್ತಿಯ ಟಿಪ್ಪಣಿ ಭಾಗದ ನಂತರ ಹೊಸದಾಗಿ ಸೇರಿಸಲಾಗಿದೆ. ನರಸಿಂಹಾಚಾರ್ಯರು ಒಂದೊಂದು ಪದ್ಯದ ಸಂಖ್ಯೆಯನ್ನೂ ಕೊಟ್ಟು ಆಯಾ ಪದ್ಯಕ್ಕೆ ಅಗತ್ಯವಿದ್ದ ಟಿಪ್ಪಣಿಯನ್ನೂ ಅಲ್ಲಿ ಬರುವ ಕಠಿಣ ಪದಗಳಿಗೆ ಅರ್ಥವನ್ನೂ ಬರೆದಿದ್ದರು. ಅವರ ಆ ಭಾಗವನ್ನು ಹಾಗೇ ಇಲ್ಲಿ ಉಳಿಸಿಕೊಂಡಿದೆ. (ಪದ್ಯಗಳ ಸಂಖ್ಯೆಯನ್ನು ಈ ಹೊಸ ಆವೃತ್ತಿಗೆ ಹೊಂದಿಕೊಳ್ಳುವಂತೆ ಮಾರ್ಪಡಿಸಿದೆ). ಆರ್. ನರಸಿಂಹಾಚಾರ್ಯರ ಟಿಪ್ಪಣಿ ಅರ್ಥಗಳ ಜೊತೆ ನಾನು ಹೊಸದಾಗಿ ಬರೆದು ಸೇರಿಸಿದ ಅರ್ಥಗಳನ್ನು ಮಿಶ್ರಗೊಳಿಸಲು ಮನಸ್ಸು ಒಪ್ಪಲಿಲ್ಲ. ಆ ಕಾರಣದಿಂದ ಈ ಗ್ರಂಥದಲ್ಲಿ ಎರಡು ಭಾಗದಲ್ಲಿ ಅರ್ಥಗಳು ದೊರಕುತ್ತವೆ. ಇದರಿಂದ ಓದುಗರಿಗೆ ಅಷ್ಟು ತೊಂದರೆಯೇನೂ ಆಗಲಾರದೆಂದು ಭಾವಿಸುತ್ತೇನೆ. ಒಂದು ಪದ್ಯಕ್ಕೆ ಟಿಪ್ಪಣಿ ದೊರಕದಿದ್ದರೆ ಅದು ಹೊಸದಾಗಿ ಸೇರಿದ ಪದ್ಯವಾಗಿರುವ ಸಂಭವವಿರುತ್ತದೆ. ಅಲ್ಲಿ ಬಂದಿರಬಹುದಾದ ಕಠಿಣ ಪದದ ಅರ್ಥಕ್ಕೆ ನಾನು ಬರೆದ ಅರ್ಥಕೋಶದ ಸಹಾಯ ಪಡೆಯಬಹುದು.

ಈ ಆವೃತ್ತಿ ಮೂಲಗ್ರಂಥದ (ವಿಸ್ತೃತ) ಪುನರ್ಮುದ್ರಣವಾಗಿದ್ದರೂ, ಕರಡುಗಳನ್ನು ತಿದ್ದುವಾಗ, ಕೆಲವೆಡೆ ಆರ್. ನರಸಿಂಹಾಚಾರ್ಯರು ಅಂಗೀಕರಿಸಿರುವ ಪಾಠ ಸ್ಪಷ್ಟವಾಗಿ ತಪ್ಪೆಂದು ಕಂಡು ಬಂದ ಕಡೆ ಮಾತ್ರ ಅದನ್ನು ತಿದ್ದುವ ಸ್ವಾತಂತ್ರ್ಯವನ್ನು ವಹಿಸಿದ್ದೇನೆ.* ಇಂಥ ಕೆಲವು ಕಡೆ ಮೂಲ ಅಂಗೀಕೃತ ಪಾಠವನ್ನೂ ಕೊಟ್ಟು ತಿದ್ದು

---

*ಉದಾಹರಣೆಗೆ ಪದ್ಯ 7. 'ರಘುಕುಳದಹನೋಗ್ರೇಷುವಿಂ' ಎಂದು ಮೊದಲ ಆವೃತ್ತಿಯಲ್ಲಿದೆ. ಅದು 'ರಘುಕುಳಧವನುಗ್ರೇಷುವಿಂ' ಎಂದಿರಬೇಕೆಂಬ ಬಗ್ಗೆ ಅನುಮಾನವಿಲ್ಲ. 'ರಘುಕುಳಧವ' ನಾದ ರಾಮನ ಉಗ್ರಬಾಣದಿಂದ ಎಂಬುದು ಆ ಮಾತಿನ ಅರ್ಥ. 30ನೇ ಶಾಸನದ ಟಿಪ್ಪಣಿಯಲ್ಲಿ ನಾಗವಾವಿಯ ಘಟಿಕಾಸ್ಥಾನದಲ್ಲಿ ಆರುಜನ ಸರಸ್ವತೀ ಭಾಂಡಾರಿಗರಿದ್ದರೆಂದು ಬರೆದಿದೆ. ಶಾಸನ ಪಾಠವನ್ನು ಸರಿಯಾಗಿ ಲಕ್ಷಿಸದೇ ಇದ್ದುದರಿಂದ ಈ ತಪ್ಪು ಕಲ್ಪನೆ ರೂಢಮೂಲವಾಗಿ ಬಂದುಬಿಟ್ಟಿದೆ. ವಾಸ್ತವವಾಗಿ ಅಲ್ಲಿ ಇದ್ದುದು ಒಬ್ಬ ಸರಸ್ವತೀ ಭಂಡಾರಿ ಮಾತ್ರ, ಅಂತೆಯೇ ಇಲ್ಲಿಯೂ ತಿದ್ದಿ ಬರೆದಿದೆ.

ಪಾಠನ್ನು ಸೂಚಿಸಿದ್ದೇನೆ. ಒಂದೆರಡು ಕಡೆ ನಾನು ಪ್ರಶ್ನಾರ್ಥಕ ಚಿಹ್ನೆ ಬಳಸಿದ್ದೇನೆ. ಆದರೆ, ಇಲ್ಲೆಲ್ಲ ನನ್ನ ಜವಾಬ್ದಾರಿ ಮತ್ತು ಮಿತಿಗಳನ್ನು ಮರೆಯಲಿಲ್ಲವೆಂಬ ಸಮಾಧಾನ ನನಗಿದೆ. ಅರ್ಥಕೋಶದಲ್ಲಿ ನಾನು ಬರೆದು ಸೇರಿಸಿದ ಅರ್ಥಗಳಿಗೆ ನಾನೇ ಜವಾಬ್ದಾರಿ ಯೆಂಬುದನ್ನು ಮತ್ತೆ ಹೇಳಬೇಕಿಲ್ಲ.

ನರಸಿಂಹಾಚಾರ್ಯರು ತಮ್ಮ ಪುಸ್ತಕಕ್ಕೆ ಬರೆದ ಸಂಕ್ಷಿಪ್ತ ಮುನ್ನುಡಿಯನ್ನು ಇಲ್ಲಿಯೂ ಕೊಟ್ಟಿದೆ. ಇಲ್ಲಿ ಪ್ರಸ್ತಾವನೆಯ ರೂಪದಲ್ಲಿ ಶಾಸನಗಳ ವರ್ಗೀಕರಣ, ಮಹತ್ವ ಮತ್ತು ಅವುಗಳ ಸಾಹಿತ್ಯಿಕ ಮೌಲ್ಯವನ್ನು ಕುರಿತು ವಿವೇಚಿಸಿದ್ದೇನೆ. ಈ ವಿವೇ ಚನೆ ಈ ಗ್ರಂಥದ ಚೌಕಟ್ಟಿಗೆ ಹೊರತಾಗಿ ನಿಲ್ಲಲಾರದೆಂಬ ನಂಬಿಕೆ ನನಗಿದೆ.

### ಶಾಸನಗಳ ವರ್ಗೀಕರಣ

ಕರ್ನಾಟಕದಲ್ಲಿ ದೊರಕುವ ಇಪ್ಪತ್ತು ಸಾವಿರಕ್ಕೆ ಮೇಲ್ಪಟ್ಟ ಶಾಸನಗಳನ್ನು ಹೇಗೆ ವರ್ಗೀಕರಿಸಬಹುದೆಂಬುದು ಇನ್ನೂ ನಿರ್ಧಾರವಾಗಿಲ್ಲ. ಇಲ್ಲಿಯವರೆಗೆ ಶಾಸನ ಗಳು ದೊಡ್ಡ ಸಂಪುಟಗಳಲ್ಲಿ, ಪತ್ರಿಕೆಗಳಲ್ಲಿ ಒಟ್ಟೊಟ್ಟಾಗಿ ಮತ್ತು ಬಿಡಿಯಾಗಿ ಪ್ರಕಟವಾಗುತ್ತ ಬಂದಿವೆ. ಬೇರೆ ಬೇರೆ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸುತ್ತಿರುವ ವಿದ್ವಾಂಸರು ಅವುಗಳನ್ನು ಯಥೋಚಿತವಾಗಿ ಬಳಸಿಕೊಳ್ಳುತ್ತ ಬಂದಿದ್ದಾರೆ. ಶಾಸನ ಗಳು ಒಂದು ಅಕ್ಷಯ ಪಾತ್ರೆಯಿದ್ದಂತೆ: ಅವರವರಿಗೆ ಏನೇನು ಬೇಕು ಅದೆಲ್ಲವೂ ಅಲ್ಲಿ ಸಿಗುತ್ತದೆ; ಆದರೆ ಅದರಿಂದ ಸ್ವೀಕರಿಸಿದರೂ ಅದು ತುಂಬಿಯೇ ಇರುತ್ತದೆ. ಈ ಮಾತು ಒಂದು ಅಲಂಕಾರವೆಂದೂ ಉತ್ಪ್ರೇಕ್ಷೆಯೆಂದೂ ಹೇಳಿಯಾರೆಂಬ ಅಳುಕು ನನಗಿರುವುದರಿಂದ ಅದನ್ನು ಒಂದೆರಡು ಮಾತುಗಳಲ್ಲಿ ಸ್ಪಷ್ಟಪಡಿಸುತ್ತೇನೆ.

ಶಾಸನಗಳ ಉಪಯೋಗವನ್ನು ಮಾಡಿಕೊಳ್ಳುತ್ತಿರುವವರು ಬಹುಮಟ್ಟಿಗೆ ಇತಿ ಹಾಸಕಾರರು. ಶಾಸನಗಳಲ್ಲಿ ಬೇರೆ ಬೇರೆ ಕಾಲದ ರಾಜರ ರಾಜವಂಶಗಳ ಹೆಸರು ಗಳೂ ತೇದಿಗಳೂ ದೊರಕುವುದರಿಂದ ಭಾರತೀಯ ಇತಿಹಾಸದ ಪುನಾರಚನೆಯಲ್ಲಿ ಶಾಸನಗಳ ಪಾತ್ರ ಪ್ರಮುಖವಾದುದಾಗಿದೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಅರಿಯುವಲ್ಲಿ, ಶಾಸನಗಳು ಬಹು ಒಳ್ಳೆಯ ಆಕರಗಳಾಗಿವೆ. ಸಾಹಿತ್ಯ ಕೃತಿಗಳಿಗಿಂತ ಶಾಸನಗಳಲ್ಲಿ ಆಯಾ ಕಾಲದ ಆಡುಭಾಷೆ ತನ್ನ ಸ್ವಸ್ವರೂಪದಲ್ಲಿ ಕಾಣಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚು. ಕನ್ನಡ ಭಾಷೆಯ ಇತಿಹಾಸವನ್ನು ಚಿತ್ರಿಸುವವರಿಗೆ ಆ ದೃಷ್ಟಿ ಯಿಂದ ಶಾಸನಗಳಿಂದ ಒದಗುವ ಸಹಾಯ ಅಪಾರ. ಇವೇ ಮುಂತಾದ ಅನೇಕ ದೃಷ್ಟಿಗಳಿಂದ ಶಾಸನಗಳನ್ನು ವಿದ್ವಾಂಸರು ಬಳಸಿಕೊಂಡಿದ್ದಾರೆ, ಅವುಗಳ ಕೆಚ್ಚಲಿಂದ ಹಾಲನ್ನು ಹಿಂಡಿ ಕೊಟ್ಟಿದ್ದಾರೆ. ಶಾಸನಗಳನ್ನು ಇನ್ನೂ ಬಗೆಬಗೆಯ ದೃಷ್ಟಿಗಳಿಂದ ಬಳಸಿಕೊಳ್ಳಲು ಅವಕಾಶಗಳಿವೆ. ಉದಾಹರಣೆಗೆ, ಶಾಸನಗಳಲ್ಲಿ ಸಾವಿರಾರು ಊರ ಹೆಸರುಗಳೂ ಅದಕ್ಕಿಂತ ಎಷ್ಟೋ ಪಾಲು ಹೆಚ್ಚು ವ್ಯಕ್ತಿಗಳ ಹೆಸರುಗಳೂ ದೊರಕು ತ್ತವೆ. ಅವುಗಳ ಶಾಸ್ತ್ರೀಯ ಅಧ್ಯಯನಕ್ಕೆ ಇನ್ನೂ ಯಾರೂ ಪ್ರಯತ್ನಿಸಿಲ್ಲ. ಶಾಸನಗಳ

ಮೇಲಿನ ಶಿಲ್ಪಗಳು ನಮಗೆ ಎಷ್ಟೋ ಸಂಗತಿಗಳನ್ನು ತಿಳಿಸುತ್ತವೆ. ಅನೇಕ ಶಾಸನಗಳ ಭಾಷೆ ಕೇವಲ ವರದಿಯಂತಿರದೆ ಕಾವ್ಯದ ಮಟ್ಟಕ್ಕೂ ಏರಿರುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಗೆ ಪೋಷಕವಾಗಿ ಕನ್ನಡ ಶಾಸನ ಸಾಹಿತ್ಯ ಚರಿತ್ರೆಯನ್ನೂ ಬರೆಯಲು ಅವಕಾಶ ವುಂಟು. ಒಟ್ಟಿನಲ್ಲಿ, ಒಂದೂವರೆ ಸಹಸ್ರ ವರ್ಷಗಳ ಕನ್ನಡಿಗರ ಲೌಕಿಕ, ಮಾನಸಿಕ, ಆಧ್ಯಾತ್ಮಿಕ ಇತಿಹಾಸವನ್ನು ಅವು ಒಳಗೊಂಡಿವೆ. ಅವರ ಆಯಾ ಕಾಲದ ಅಭಿರುಚಿ ಯನ್ನು ನಿಕ್ಷಿಪ್ತಗೊಳಿಸಿಕೊಂಡಿವೆ. ಶಾಸನಗಳ ಶಾಸ್ತ್ರೀಯ ಅಧ್ಯಯನದ ಕಡೆಗೆ ವಿದ್ವಾಂಸರ ಗಮನ ಹೆಚ್ಚುಹೆಚ್ಚಾಗಿ ಹೊರಳುತ್ತಿರುವುದು ಶುಭಸಂಕೇತವಾಗಿದೆ. ಕರ್ನಾಟಕದ ಮೂರೂ ವಿಶ್ವವಿದ್ಯಾಲಯಗಳಲ್ಲಿ ಇತಿಹಾಸದ ವಿದ್ಯಾರ್ಥಿಗಳು ಮಾತ್ರ ವಲ್ಲದೆ ಭಾಷಾ-ಸಾಹಿತ್ಯಗಳ ವಿದ್ಯಾರ್ಥಿಗಳೂ ಶಾಸನ ಶಾಸ್ತ್ರವನ್ನು ಅಭ್ಯಸಿಸುತ್ತಿರು ವುದು ಸ್ವಾಗತಾರ್ಹವಾಗಿದೆ. ಮತ, ಸಮಾಜ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳ ಪರಿ ಣತರ ಗಮನ ಇನ್ನೂ ಶಾಸನಗಳ ಕಡೆ ಹೊರಳದಿರುವುದು ದುರದೃಷ್ಟದ ಸಂಗತಿ.

ಶಾಸನಗಳನ್ನು ವರ್ಗೀಕರಿಸುವುದು ಮೇಲ್ನೋಟಕ್ಕೆ ಕಾಣುವಷ್ಟು ಸರಳವಾಗಿಲ್ಲ. ಯಾವ ತತ್ವವನ್ನವಲಂಬಿಸಿ ವರ್ಗೀಕರಿಸುತ್ತೇವೆ ಎಂಬುದನ್ನು ಮೊದಲು ಖಚಿತಮಾಡಿ ಕೊಳ್ಳಬೇಕು. ಅಲ್ಲಿಯೂ ಗೆರೆ ಕೊಯ್ದಷ್ಟು ಸ್ಪಷ್ಟವಾದ ವರ್ಗಗಳನ್ನು ಏರ್ಪಡಿಸುವುದು ಕಷ್ಟವಾಗುತ್ತದೆ. ಸಾಧ್ಯವೆಂದು ಕಂಡುಬರುವ ಕೆಲವು ತತ್ವಗಳನ್ನು, ಅವುಗಳ ಸಾಧಕ ಬಾಧಕಗಳನ್ನು ಸಂಗ್ರಹವಾಗಿ ಕೆಳಗೆ ಚರ್ಚಿಸಲಾಗಿದೆ.

## I ಪ್ರಾದೇಶಿಕ

ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳ ಶಾಸನಗಳನ್ನು ಒಂದೊಂದು 'ವರ್ಗ'ವೆಂದು ಭಾವಿಸಬಹುದು. ಹಳೆಯ ಮೈಸೂರಿನ ಶಾಸನಗಳು ಪ್ರಕಟವಾಗಿರುವುದು ಜಿಲ್ಲೆ ಮತ್ತು ತಾಲ್ಲೂಕುಗಳನ್ನನುಸರಿಸಿ. ಒಂದು ಜಿಲ್ಲೆಯಲ್ಲಿ ಅನೇಕ ರಾಜಮನೆತನಗಳ, ಬೇರೆ ಬೇರೆ ಕಾಲದ, ಭಾಷೆಯ, ಉದ್ದೇಶದ, ಸ್ವರೂಪದ ಬಗೆಬಗೆಯ ಶಾಸನಗಳಿರು ತ್ತವೆ. ಆದ್ದರಿಂದ ಪ್ರಾದೇಶಿಕ ವರ್ಗೀಕರಣ ನಮಗೆ ಶಾಸನಗಳ ಸರಿಯಾದ ಅಧ್ಯಯನಕ್ಕೆ ಯಾವುದೇ ಸಹಾಯವನ್ನೂ ಮಾಡುವುದಿಲ್ಲ.

## II ಭಾಷಾಧಾರಿತ

ಸುಮಾರು ಕ್ರಿ.ಶ. 450ರ ಹಲ್ಮಿಡಿ ಶಾಸನದಿಂದ ಇತ್ತೀಚಿನವರೆಗೆ ದೊರಕುವ ಶಾಸನಗಳು ಬಹುತೇಕ ಆಯಾಕಾಲದ ಭಾಷೆಯನ್ನನುಸರಿಸುತ್ತವೆ. ಶಾಸನಗಳನ್ನು ಕಾಲಾನುಕ್ರಮವಾಗಿ ನೋಡಿದರೆ, ಸ್ಥೂಲವಾಗಿ ಸು. 800ರವರೆಗೆ ಪೂರ್ವದ ಹಳ ಗನ್ನಡದ ಶಾಸನಗಳೂ, ಅಲ್ಲಿಂದ ಸುಮಾರು 950–1000 ದವರೆಗೆ ಹಳಗನ್ನಡದ ಶಾಸನಗಳೂ, ಬಳಿಕ ಅನೇಕ ಶತಮಾನಗಳವರೆಗೆ. ನಡುಗನ್ನಡದ ಶಾಸನಗಳೂ ದೊರ ಕುತ್ತವೆ. 19–20ನೇ ಶತಮಾನಗಳಲ್ಲಿ ಹೊಸಗನ್ನಡದ ಶಾಸನಗಳು ದೊರಕುತ್ತವೆ. ಕಾಲ, ಭಾಷೆ (ಮತ್ತು ಲಿಪಿ)ಗಳನ್ನು ಅನುಸರಿಸಿ ಮಾಡಬಹುದಾದ ವರ್ಗೀಕರಣ ನಮಗೆ ಒಂದು ಶಾಸನದ ಬಗ್ಗೆ ಹೆಚ್ಚಿನ ಸಂಗತಿಗಳನ್ನು ತಿಳಿಸುವುದಿಲ್ಲ. ಅಲ್ಲದೆ,

ನಡುಗನ್ನಡದ ಕಾಲದಲ್ಲಿ ಶಾಸನವನ್ನು ರಚಿಸಿದ ಕೃತಿಕಾರ ಹಳಗನ್ನಡವನ್ನು ಬಳಸಿರುವ ಉದಾಹರಣೆಗಳು ಎಷ್ಟೋ ದೊರಕುತ್ತವೆ. ಒಂದು ಭಾಷೆಯ ಬೆಳವಣಿಗೆಯನ್ನು ನೋಡುವವರು ಬೇರೆ ಬೇರೆ ಕಾಲದ ನೂರಾರು ಶಾಸನಗಳನ್ನು ಅಕ್ಕಪಕ್ಕದಲ್ಲಿಟ್ಟು ಹೋಲಿಸಬೇಕಾಗುತ್ತದೆ.

## III ರಾಜವಂಶಾಧಾರಿತ

ಕರ್ನಾಟಕದ ಇತಿಹಾಸವನ್ನು ರಾಜವಂಶಗಳ ಆಧಾರದ ಮೇಲೆ ವಿಂಗಡಿಸುವುದು ಮೊದಲಿನಿಂದಲೂ ಬಂದಿರುವ ರೂಢಿ. ಹಿಂದೆ ದೇಶವೆಂದರೆ ರಾಜ, ರಾಜನೆಂದರೆ ದೇಶ ಎನ್ನುವಷ್ಟರಮಟ್ಟಿಗೆ ರಾಜನ ಪ್ರಾಧಾನ್ಯವಿದ್ದಿತು. ಅವನ ಕೈಯಲ್ಲಿ ದೇಶದ ಆಗುಹೋಗುಗಳು ಕೇಂದ್ರೀಕೃತವಾಗಿದ್ದು, ಒಂದು ದೃಷ್ಟಿಯಲ್ಲಿ ಇಡೀ ರಾಜ್ಯ ಅವನ ಆಸ್ತಿಯೆಂಬಂತೆ ನಡೆದುಕೊಂಡು ಹೋಗುತ್ತಿತ್ತು. ಎಂದರೆ ದೇಶದ ಇತಿಹಾಸದಲ್ಲಿ ರಾಜರ ಪಾತ್ರ ಎಷ್ಟು ಮುಖ್ಯವೆಂಬುದನ್ನು ಇದು ಸೂಚಿಸುತ್ತದೆ. ಆದರೆ, ರಾಜರ ಅಥವಾ ರಾಜವಂಶಗಳ ಇತಿಹಾಸವೇ ದೇಶದ ಇತಿಹಾಸ ಎನ್ನುವ ಭಾವನೆ ಬೆಳೆದಿರುವುದನ್ನು ಯಾವುದೇ ವಾದದಿಂದಲೂ ಸಮರ್ಥಿಸುವುದು ಕಷ್ಟ. ಅದೇನೇ ಇರಲಿ, ಗಂಗರ ಶಾಸನಗಳು, ಬಾದಾಮಿ ಚಾಲುಕ್ಯರ ಶಾಸನಗಳು, ರಾಷ್ಟ್ರಕೂಟರ ಶಾಸನಗಳು ಎಂದು ಮುಂತಾಗಿ ಶಾಸನಗಳನ್ನು ವರ್ಗೀಕರಿಸಲು ಸಾಧ್ಯವಾಗುತ್ತದೆ. ಆದರೆ ಇಲ್ಲಿಯೂ ಅನೇಕ ಸಮಸ್ಯೆಗಳಿರುತ್ತವೆ. ರಾಷ್ಟ್ರಕೂಟರ ಸಾಮಂತರಾಗಿದ್ದ ಗಂಗರ ಶಾಸನಗಳನ್ನು ಸ್ವತಂತ್ರವರ್ಗವೆಂಬಂತೆ ಭಾವಿಸಬೇಕೇ, ಅಥವಾ ರಾಷ್ಟ್ರಕೂಟರ ಶಾಸನಗಳು ಎಂಬ ವರ್ಗಕ್ಕೆ ಸೇರಿಸಬೇಕೇ? ಎಷ್ಟೋ ಶಾಸನಗಳು ರಾಜರ ಹೆಸರನ್ನೇ ಹೇಳುವುದಿಲ್ಲ. ಅಂಥ ಸಮಸ್ಯೆಗಳು ಉಳಿದೇ ಉಳಿಯುತ್ತವೆ. ಆದರೂ, ರಾಜವಂಶದ ಆಧಾರದ ಮೇಲೆ ಶಾಸನಗಳನ್ನು ವರ್ಗೀಕರಿಸುವ ಕ್ರಮ ಹಿಂದೆ ಹೇಳಿದವುಗಳಿಗಿಂತಲೂ ಹೆಚ್ಚು ಸಮರ್ಪಕವಾದುದು ಎಂಬುದರಲ್ಲಿ ಸಂದೇಹವಿಲ್ಲ.

## IV ವಸ್ತ್ವಾಧಾರಿತ

ಶಾಸನಗಳನ್ನು ಯಾವುದರ ಮೇಲೆ ಕೊರೆದಿದ್ದಾರೆ ಆ ವಸ್ತುವನ್ನು (material) ಲಕ್ಷ್ಯದಲ್ಲಿಟ್ಟುಕೊಂಡು ಶಾಸನಗಳನ್ನು ವರ್ಗೀಕರಿಸುವುದು ಸಾಂಪ್ರದಾಯಿಕವಾಗಿ ಬಂದಿರುವ ಪದ್ಧತಿ. ಇಲ್ಲಿ ಶಾಸನವೆಂದರೆ ಎಲ್ಲ ಬರಹಗಳನ್ನೂ ಒಳಗೊಳ್ಳುವುದಿಲ್ಲವೆಂದೂ, ಹಲವು ಕಾಲ ಉಳಿಯಬಲ್ಲ ಗಟ್ಟಿ ಪದಾರ್ಥಗಳ ಮೇಲೆ ಕೊರೆದದ್ದು ಮಾತ್ರ ಶಾಸನವೆಂಬ ಹೆಸರನ್ನು ಪಡೆಯುತ್ತದೆಯೆಂದೂ ನಾವು ನೆನಪಿಡಬೇಕು. ಉದಾಹರಣೆಗೆ, ಬಟ್ಟೆ, ಕಾಗದ, ತಾಳೆಗರಿ (ಅಥವಾ ಭೂರ್ಜಪತ್ರ) ಇವುಗಳ ಮೇಲೆ ಬರೆದಂತಹ ಲೇಖನಗಳು 'ಶಾಸನ' (inscription) ಎನ್ನಿಸಿಕೊಳ್ಳುವುದಿಲ್ಲ. ಕಲ್ಲು, ಲೋಹದಂತಹ ಗಟ್ಟಿ ಪದಾರ್ಥಗಳ ಮೇಲೆ ಕೊರೆದದ್ದು ಮಾತ್ರ ಶಾಸನವೆನ್ನಿಸಿಕೊಳ್ಳುತ್ತದೆ. ನಮ್ಮಲ್ಲಿ ಬಳಸಿರುವ ಲೋಹವೆಂದರೆ ವಿಶೇಷವಾಗಿ ತಾಮ್ರ.

ಈ ದೃಷ್ಟಿಯಿಂದ ಕರ್ನಾಟಕದ ಶಾಸನಗಳನ್ನು ಸ್ಥೂಲವಾಗಿ ಶಿಲಾಶಾಸನಗಳೆಂದೂ ತಾಮ್ರಶಾಸನಗಳೆಂದೂ (ತಾಮ್ರಪಟ) ಎರಡು ದೊಡ್ಡ ವರ್ಗಗಳಾಗಿ ಮಾಡಬಹುದು. ಕಲ್ಲಿನ ಮೇಲೆ ಇರುವ ಬರಹಗಳು ಶಿಲಾಶಾಸನಗಳು (ಎಷ್ಟೋ ಸಾರಿ 'ಶಾಸನ' ಎನ್ನುವ ಮಾತು ಶಿಲಾಶಾಸನವೆಂಬ ಅರ್ಥದಲ್ಲಿಯೇ ಬಳಕೆಯಾಗುತ್ತದೆ). ತಾಮ್ರದ ಮೇಲೆ ಲಿಖಿತವಾಗಿರುವುವು ತಾಮ್ರಪಟ ಅಥವಾ ತಾಮ್ರಶಾಸನಗಳು. ಇವುಗಳನ್ನು ಹಳ್ಳಿಗಳಲ್ಲಿ 'ಚೆಪ್ಪೋಡು' ಅಥವಾ 'ಚೆಪ್ಪೇಡು' ಎನ್ನುವುದೂ ಉಂಟು. (ಚೆಪ್ಪು = ಚೆಂಬು ಎಂದರೆ ತಾಮ್ರ; 'ಏಡು' ಎಂದರೆ ಹಲಗೆ).

ಶಿಲಾಶಾಸನಗಳನ್ನು ಬೇಕಾದರೆ ಮತ್ತೆ ಕೆಲವು ಉಪವರ್ಗಗಳಾಗಿ ಮಾಡಬಹುದು. ಶಿಲ್ಪಿ ಬೇರೆ ಕಡೆಯಿಂದ ತಂದು ಕಲ್ಲಿಗೆ ಒಂದು ಆಕಾರ ಕೊಟ್ಟು, ಕೊರೆದ ಶಾಸನ, ಬಂಡೆಯ ಮೇಲೆ ಕೊರೆದ ಶಾಸನ, ಗುಹೆಯ ಅಥವಾ ದೇವಸ್ಥಾನದ ಗೋಡೆಯ ಮೇಲೆ ಕೊರೆದ ಶಾಸನ, ಕಂಬದ ಮೇಲಿನ ಶಾಸನ, ವಿಗ್ರಹಗಳ ಪಾದಪೀಠದ ಮೇಲಿನ ಶಾಸನ, ಗಾಣಗಳ ಮೇಲಿನ ಶಾಸನ ಇತ್ಯಾದಿ. ಇದರ ಪಟ್ಟಿಯನ್ನು ಸುಲಭವಾಗಿ ಇನ್ನೂ ಬೆಳೆಸಬಹುದು, ಮತ್ತು ಈ ಉಪವರ್ಗಗಳಿಂದ ಉಪಯೋಗ ಕಡಿಮೆಯೆಂಬುದೂ ಸ್ಪಷ್ಟ.

ಶಿಲಾಶಾಸನಗಳ ಒಂದು ಮಹತ್ವದ ಅಂಶವೆಂದರೆ ಅವುಗಳ ನೈಜತ್ವ. ಶಿಲೆಯ ಮೇಲೆ ಗುಟ್ಟಾಗಿ ತಮಗೆ ಬೇಕಾದ ವಿಷಯವನ್ನು ಬರೆಯಿಸಿ, ಇದ್ದಕ್ಕಿದ್ದಂತೆ ಅವುಗಳನ್ನು ಎಂದೋ ಒಂದು ದಿವಸ ಪ್ರಕಟಪಡಿಸಿ ಜನರನ್ನು ಮೋಸಪಡಿಸಲು ಸಾಧ್ಯವಿಲ್ಲ. ಆದ್ದರಿಂದ ಶಿಲಾಶಾಸನಗಳ ಮೇಲಿರುವ ಬರಹಗಳ ಪ್ರಾಮಾಣಿಕತೆಯನ್ನು ಸಾಮಾನ್ಯವಾಗಿ ಯಾರೂ ಶಂಕಿಸುವುದಿಲ್ಲ.

ಲೋಹದಲ್ಲಿ ತಾಮ್ರದ ಬಳಕೆಯೇ ಹೆಚ್ಚು, ಶಾಸನಗಳನ್ನು ಬರೆಯಿಸಲು. ತಾಮ್ರವನ್ನು ಓಲೆಯಗರಿಗಳ ಆಕಾರದ ಪತ್ರಗಳಾಗಿ ಮಾಡಿ, ಅದರ ಮೇಲೆ ಸಂಗತಿಯನ್ನು ಕೊರೆಯುತ್ತಿದ್ದರು. ಒಂದಕ್ಕಿಂತ ಹೆಚ್ಚು ಪತ್ರಗಳಿದ್ದರೆ, ಅವುಗಳ ಒಂದು ಅಂಚಿನಲ್ಲಿ ರಂಧ್ರವನ್ನು ಮಾಡಿ, ಎಲ್ಲ ಪತ್ರಗಳನ್ನೂ ಕೂಡಿಸುವಂತೆ ಕೊಂಡಿಯೊಂದನ್ನು ಸೇರಿಸಿ, ಕೊಂಡಿಯನ್ನು ಬೆಸೆದ ಜಾಗಕ್ಕೆ ಮುದ್ರೆಯನ್ನು ಹಾಕುತ್ತಿದ್ದರು. (ಇಕ್ಕೇರಿ ದೊರೆಗಳ ಅನೇಕ ತಾಮ್ರಪಟಗಳಿಗೆ ಬರೀ ಕೊಂಡಿ ಇರುವುದುಂಟು). ಆ ಮುದ್ರೆ ಆಯಾ ರಾಜವಂಶದ ಚಿಹ್ನೆಯಾಗಿರುತ್ತಿತ್ತು.

ತಾಮ್ರಪತ್ರಗಳನ್ನು ಯಾರಿಗೂ ತಿಳಿಯದಂತೆ ಶಿಲ್ಪಿಯೊಬ್ಬನ ಕೈಯಿಂದ ಮಾಡಿಸಿ, ಇದ್ದಕ್ಕಿದ್ದಂತೆ ಒಂದು ದಿನ ಬಹಿರಂಗಪಡಿಸಲು ಸಾಧ್ಯ. ಆದ್ದರಿಂದ ಎಷ್ಟೋ ಕೃತಕ ತಾಮ್ರಪತ್ರಗಳು ಸೃಷ್ಟಿಯಾಗಿವೆ. ತಾಮ್ರಪತ್ರವೆಂದ ತಕ್ಷಣ, ಶಾಸನ ಶಾಸ್ತ್ರಜ್ಞರು ಅದರ ನೈಜತೆಯ ಪ್ರಶ್ನೆಯನ್ನು ಮೊದಲು ಹಾಕಿಕೊಳ್ಳುತ್ತಾರೆ. ಅನೇಕ ಗಂಗರ ತಾಮ್ರಪಟಗಳ ಸಾಚಾತನವನ್ನು ವಿದ್ವಾಂಸರು ಇನ್ನೂ ಪ್ರಶ್ನಿಸುತ್ತಿದ್ದಾರೆ. ಶಿಲಾಶಾಸನ

ಗಳು ಒಂದು ರೀತಿಯಲ್ಲಿ ಬಹಿರಂಗ ದಾಖಲೆಗಳು. ತಾಮ್ರಪಟಗಳು ವೈಯಕ್ತಿಕ ಆಸ್ತಿಯಿದ್ದಂತೆ.

ತಾಮ್ರವನ್ನು ಬಿಟ್ಟರೆ ಕಂಚು, ಬೆಳ್ಳಿ ಮುಂತಾದ ಲೋಹಗಳ ಮೇಲೆ ಕೆಲವು ಶಾಸನಗಳು ಸಿಕ್ಕಿವೆ. ಸಂಖ್ಯೆಯಲ್ಲಿ ನೋಡಿದರೆ, ಶಿಲಾಶಾಸನಗಳೇ ಹೆಚ್ಚು. ಅವುಗಳಿಗಿಂತ ತಾಮ್ರಪತ್ರಗಳ ಸಂಖ್ಯೆ ಕಡಮೆ.

ಮಣ್ಣಿನ ಪಾತ್ರೆ ಹಸಿಯಿರುವಾಗ, ಅದರ ಮೇಲೆ ಅಕ್ಷರಗಳನ್ನು ಬರೆದು ಒಣಗಿಸಿ ಸುಟ್ಟರೆ, ಆ ಮಡಕೆ ಇರುವವರೆಗೆ ಶಾಸನವಿರುತ್ತದೆ. ಅಂತಹ ಮಡಕೆಯ ಮೇಲಿನ ಅಪೂರ್ವ ಶಾಸನವೊಂದು ಕೋಲಾರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಸಂತೇಕಲ್ಲಹಳ್ಳಿಯಲ್ಲಿ ದೊರಕಿದೆ. ಸುಟ್ಟ ಇಟ್ಟಿಗೆ ಮೇಲೆ ಶಾಸನಗಳು ದೊರಕಿಲ್ಲ. ಈಚಿನ ಕೆಲವು ಮರದ ರಥಗಳ ಮೇಲೆ ಶಾಸನಗಳಿರುವುದನ್ನು ಇಲ್ಲಿ ಸ್ಮರಿಸಬಹುದು.

## V ವಿಷಯಾಧಾರಿತ

ಮೇಲಿನ ಎಲ್ಲ ರೀತಿಗಳಿಗಿಂತ ವಿಷಯವನ್ನು (contents) ಆಧರಿಸಿ ಶಾಸನಗಳನ್ನು ವರ್ಗೀಕರಿಸುವುದು ಹೆಚ್ಚು ಸೂಕ್ತವಾದುದು. 'ವಿಷಯ' ಎನ್ನುವುದು ಒಂದು ಶಾಸನದಲ್ಲಿ ಯಾವ ಸಂಗತಿ ಪ್ರಮುಖವಾಗಿರುತ್ತದೆಯೋ ಅದನ್ನು ಸೂಚಿಸುತ್ತದೆ. ಇಲ್ಲಿಯೂ ಅನೇಕ ತೊಂದರೆಗಳುಂಟು. ಒಂದು ಶಾಸನದಲ್ಲಿ ವೀರನೊಬ್ಬ ಸತ್ತು ಅವನ ಹೆಂಡತಿ ಸಹಗಮನ ಮಾಡಿದ ಸಂಗತಿಯಿದ್ದರೆ, ಅದನ್ನು ವೀರಗಲ್ಲೆಂದು ಕರೆಯಬೇಕೇ ಮಾಸ್ತಿಕಲ್ಲೆಂದು ಕರೆಯಬೇಕೇ ಎಂಬ ಸಮಸ್ಯೆ ಎದುರಾಗುತ್ತದೆ. ವೀರನಿಗೋ, ಅವನು ಸತ್ತಿದ್ದರೆ ಅವನ ವಂಶದವರಿಗೋ ದಾನ ಕೊಟ್ಟಿದ್ದರೆ ಅಂತಹ ಶಾಸನವನ್ನು ವೀರಗಲ್ಲಿನ ಕೆಳಗೆ ಸೇರಿಸಬೇಕೋ ದಾನಶಾಸನವೆಂದು ಪರಿಗಣಿಸಬೇಕೋ ಎಂಬ ಸಮಸ್ಯೆ ಎದುರಾಗುತ್ತದೆ. ಎಲ್ಲ ರೀತಿಯ ವರ್ಗೀಕರಣಗಳಲ್ಲೂ ಇಂತಹ ಒಂದಲ್ಲ ಒಂದು ರೀತಿಯ ಸಮಸ್ಯೆಗಳಿದ್ದೇ ಇರುತ್ತವೆ. ಆದ್ದರಿಂದ ಈ ಬಗೆಯ ವರ್ಗೀಕರಣ ಅತ್ಯಂತ ಸಮರ್ಪಕವಾದುದೆಂದು ಹೇಳಲು ಸಾಧ್ಯವಿಲ್ಲದಿದ್ದರೂ, ಇದರಲ್ಲಿ ಕೆಲವು ಪ್ರಯೋಜನಗಳಿವೆ. ಅವುಗಳನ್ನು ನೋಡುವ ಮುನ್ನ, ಈ ಬಗೆಯ ವರ್ಗೀಕರಣದಲ್ಲಿ ಎಷ್ಟು ಬಗೆಗಳನ್ನು ಅಳವಡಿಸಬಹುದೆಂಬುದನ್ನು ಮೊದಲು ನೋಡೋಣ.

ಒಂದು ಶಾಸನ ಹುಟ್ಟಲು ಯಾವುದೋ ಮೂಲಕಾರಣವೊಂದು ಇರುತ್ತದೆ. ಉದಾಹರಣೆಗೆ ರಾಜನೊಬ್ಬನ ದಿಗ್ವಿಜಯ, ವ್ಯಕ್ತಿ ದೇವಸ್ಥಾನವೊಂದಕ್ಕೆ ಕೊಟ್ಟ ದತ್ತಿ, ಅಥವಾ ಯುದ್ಧದಲ್ಲಿ ಮಡಿದ ವೀರ ಅಥವಾ ಸಲ್ಲೇಖನದ ಮೂಲಕ ಪ್ರಾಣತ್ಯಾಗ ಮಾಡಿದ ಸನ್ಯಾಸಿ-ಇಂತಹ ಅಥವಾ ಇವರ ವಿಷಯಗಳನ್ನು ಶಾಶ್ವತವಾಗಿ ಉಳಿಸಬೇಕೆನ್ನುವ ಉದ್ದೇಶವೇ ಶಾಸನಗಳನ್ನು ಬರೆಯಿಸಲು ಪ್ರಚೋದನೆಯಾಗಿರುತ್ತದೆ.

ಅದನ್ನು ಗಮನದಲ್ಲಿಟ್ಟುಕೊಂಡು ಶಾಸನಗಳನ್ನು ಕೆಳಗೆ ಕಂಡಂತೆ ಕೆಲವು ಮುಖ್ಯ ವರ್ಗಗಳಲ್ಲಿ ಅಳವಡಿಸಬಹುದು:

(1) ದಾನ ಶಾಸನಗಳು
(2) ಪ್ರಶಸ್ತಿ ಶಾಸನಗಳು
(3) ವೀರಗಲ್ಲುಗಳು
(4) ಗರುಡಗಲ್ಲುಗಳು
(5) ಮಾಸ್ತಿಕಲ್ಲುಗಳು
(6) ಧಾರ್ಮಿಕ ಆತ್ಮಹತ್ಯೆ ಶಾಸನಗಳು-ನಿಸಿದಿಗಲ್ಲುಗಳು
(7) ಯೂಪಶಾಸನಗಳು
(8) ಅಂಕಿತನಾಮ ಶಾಸನಗಳು
(9) ಜಯಪತ್ರಗಳು
(10) ರಾಜಾಜ್ಞೆಗಳು
(11) ಇತರೆ

(1) **ದಾನಶಾಸನಗಳು:** ಕರ್ನಾಟಕದ ಶಾಸನಗಳಲ್ಲಿ ಇವುಗಳದೇ ಮೇಲುಗೈ. ವ್ಯಕ್ತಿ ಅಥವಾ ಸಂಘವು ಯಾವುದೋ ಸಾರ್ವಜನಿಕ ಕಾರ್ಯಕ್ಕಾಗಿ ಮಾಡಿದ ದಾನದ ವಿಷಯವನ್ನು ಹೇಳತಕ್ಕುವೇ ದಾನಶಾಸನಗಳು. ತಾಮ್ರಪಟಗಳೆಲ್ಲವೂ ದಾನಶಾಸನಗಳು. ವಿಷಯದ ದೃಷ್ಟಿಯಿಂದ ವೈವಿಧ್ಯ ಇರುವುದೆಲ್ಲ ಶಿಲಾಶಾಸನಗಳಲ್ಲಿಯೇ. ಶಿಲಾಶಾಸನಗಳಲ್ಲೂ ದಾನಶಾಸನಗಳ ಸಂಖ್ಯೆಯೇ ಹೆಚ್ಚು.

ದಾನಶಾಸನಗಳನ್ನು ಬೇಕಾದರೆ ಮತ್ತೆ ಒಳವರ್ಗಗಳಾಗಿ ಬೇರ್ಪಡಿಸಬಹುದು.

(ಅ) ದೇವಸ್ಥಾನಗಳಿಗೆ: ದೇವಸ್ಥಾನ ನಿರ್ಮಾಣಕ್ಕೆ, ದೇವಸ್ಥಾನದ ಅಧಿಕಾರಿ ವರ್ಗದವರಿಗೆ, ಪೂಜಾದಿಗಳಿಗೆ, ರಿಪೇರಿ ಕೆಲಸಗಳಿಗೆ ಕೊಡುತ್ತಿದ್ದ ದಾನಗಳು.

(ಆ) ಮಠಗಳಿಗೆ: ದೇವಸ್ಥಾನದ ಅಂಗವಾಗಿಯೋ ಪ್ರತ್ಯೇಕವಾಗಿಯೋ ಇರುತ್ತಿದ್ದ ಮಠಗಳ ಸನ್ಯಾಸಿಗಳಿಗಾಗಿ ಕೊಡುತ್ತಿದ್ದ ದಾನಗಳು.

(ಇ) ವ್ಯಕ್ತಿಗಳಿಗೆ: ವಿದ್ವಾಂಸರಿಗೆ, ಅಗ್ರಹಾರಗಳಲ್ಲಿ ಅಥವಾ ಬ್ರಹ್ಮಪುರಿಗಳಲ್ಲಿ ಅಥವಾ ಬೇರೆ ಕಡೆಗಳಲ್ಲಿರುತ್ತಿದ್ದ ಬ್ರಾಹ್ಮಣರಿಗೆ ಕೊಡುತ್ತಿದ್ದ ದತ್ತಿಗಳು; ಜೈನ, ಶೈವ ಇತ್ಯಾದಿ ವಿದ್ವಾಂಸರಿಗೆ ಕೊಡುತ್ತಿದ್ದ ದತ್ತಿಗಳು.

(ಈ) ವಿದ್ಯಾಭ್ಯಾಸಕ್ಕೆ: ದೇವಸ್ಥಾನ, ಮಠ, ಅಗ್ರಹಾರಗಳಿಗೆ ಕೊಡುತ್ತಿದ್ದ ಅನೇಕ ದತ್ತಿಗಳ ಉದ್ದೇಶವೇ ವಿದ್ಯೆ ಅಥವಾ ಜ್ಞಾನಪ್ರಸಾರವಾಗಿತ್ತು: ಕೆಲವು ಶಾಸನಗಳಲ್ಲಿ ಘಟಿಕಾಸ್ಥಾನವೆನ್ನುವ ಉನ್ನತ ವಿದ್ಯಾಕೇಂದ್ರಗಳಿಗೆ ಕೊಟ್ಟಿರುವ ದತ್ತಿಗಳ ಪರಿಚಯವಾಗುತ್ತದೆ. ವಿದ್ಯಾಭ್ಯಾಸದ ದತ್ತಿಶಾಸನಗಳಲ್ಲಿ ಉಪಾಧ್ಯಾಯರ ಮತ್ತು ವಿದ್ಯಾರ್ಥಿ

ಗಳ ಜೀವನೋಪಾಯಕ್ಕೆ, ವಿದ್ಯಾರ್ಥಿಗಳ ಅನ್ನಸತ್ರಗಳಿಗೆ (hostels), ಅವರ ಬಟ್ಟೆ ಇತ್ಯಾದಿಗಳಿಗೆ, ಪುಸ್ತಕ ಭಂಡಾರಗಳಿಗೆ ಕೊಟ್ಟಿರುವ ದಾನಗಳ ವಿವರಗಳಿರುತ್ತವೆ.

(ಉ) ಲೋಕೋಪಯೋಗಿ ಕಾರ್ಯಗಳಿಗೆ-ಎಂದರೆ, ಸಾರ್ವಜನಿಕರ ಲೌಕಿಕ ಹಿತಕ್ಕಾಗಿ ಮಾಡಿದ ದಾನಗಳು. ಇಲ್ಲಿ ಕೆರೆ ಕಟ್ಟಿಸುವುದು, ಬಾವಿ ತೋಡಿಸುವುದು, ಆರಾಮ ಅಥವಾ ಸಾರ್ವಜನಿಕೋದ್ಯಾನವನ್ನು ಮಾಡಿಸುವುದು, ಪ್ರವಾಸಿಗರಿಗೆ ಸತ್ರ, ಅರವಂಟಿಗೆಗಳನ್ನಿಡಿಸುವುದು ಇವು ಸೇರ್ಪಡೆಯಾಗುತ್ತವೆ.

(ಎ) ಯುದ್ಧದಲ್ಲಿ ಗೆದ್ದ ಅಥವಾ ಮಡಿದ ವೀರರಿಗೆ, ಅಥವಾ ಅವರ ವಂಶದವರಿಗೆ ಮತ್ತು ಸಹಗಮನ ಮಾಡಿದ ಮಹಾಸತಿಯರ ಜ್ಞಾಪಕಾರ್ಥವಾಗಿ ಕೊಟ್ಟ ದತ್ತಿಗಳು. ವೀರಗಲ್ಲು, ಮಾಸ್ತಿಕಲ್ಲುಗಳ ಪೂಜೆಗಾಗಿಯೂ ದತ್ತಿಗಳನ್ನು ಕೊಟ್ಟಿರುವುದುಂಟು.

(2) **ಪ್ರಶಸ್ತಿ ಶಾಸನಗಳು:** ಕೆಲವು ಶಾಸನಗಳ ಕೊನೆಯಲ್ಲಿ ದಾನದ ವಿಷಯ ಬಂದಿದ್ದರೂ, ಎಷ್ಟೋ ಸಾರಿ ಆ ಸಂಗತಿಯನ್ನು ಹೇಳುವ ನೆಪದಲ್ಲಿ ರಾಜನ ಪ್ರಶಸ್ತಿಯನ್ನು ಕೊಂಡಾಡಲಾಗಿರುತ್ತದೆ. (ಉದಾ: ಐಹೊಳೆಯ ಪುಲಿಕೇಶಿ ಶಾಸನ). ಬೊಪ್ಪಣನ ಗೊಮ್ಮಟಸ್ತುತಿಯಂತಹ ಶುದ್ಧ ಸ್ತೋತ್ರರೂಪವಾದ ಶಾಸನವೂ ಬಾಹುಬಲಿಸ್ವಾಮಿಯ ಒಂದು ಬಗೆಯ ಪ್ರಶಸ್ತಿಯೇ. ಆದರೆ, ಸಮುದ್ರಗುಪ್ತನ ಸಂಸ್ಕೃತ ಭಾಷೆಯ ಅಲಹಾಬಾದ್ ಸ್ತಂಭ ಶಾಸನದಂತಹ ಶುದ್ಧ ಪ್ರಶಸ್ತಿ ಶಾಸನಗಳು ಕರ್ನಾಟಕದಲ್ಲಿ ಕಡಮೆ.

(3) **ವೀರಗಲ್ಲುಗಳು:** ದಾನಶಾಸನಗಳನ್ನು ಬಿಟ್ಟರೆ ಸಂಖ್ಯೆಯಲ್ಲಿ ವೀರಗಲ್ಲುಗಳು ಗಮನಾರ್ಹವಾಗುತ್ತವೆ. ಗೆದ್ದು ಬಂದ ವೀರನ ವಿಜಯದ ಸ್ಮಾರಕವಾಗಿಯೋ ಅಥವಾ ಹೋರಾಡುತ್ತಾ ಸತ್ತ ವೀರನ ಸ್ಮಾರಕವಾಗಿಯೋ ಹಾಕಿಸಿದ ಶಾಸನಗಳೇ ವೀರಶಾಸನ ಅಥವಾ ವೀರಗಲ್ಲುಗಳು. ವೀರಗಲ್ಲುಗಳನ್ನು ಸೌಕರ್ಯದ ದೃಷ್ಟಿಯಿಂದ ಇನ್ನೂ ಕೆಲವು ಉಪವರ್ಗಗಳಾಗಿ ವಿಂಗಡಿಸಬಹುದು.

(ಅ) ರಾಜನ (ಯಜಮಾನನ) ಪರವಾಗಿ ಹೋರಾಡಿದ ಅಥವಾ ಮಡಿದ ವೀರರು.

(ಆ) 'ತುರುಗೋಳ್' (ಗೋಗ್ರಹಣ) ವೀರರು-ಯುದ್ಧದಲ್ಲಿ, ಎಂದರೆ ದನಗಳನ್ನು ಕಳ್ಳರಿಂದ ಬಿಡಿಸಲು ನಡೆದ ಯುದ್ಧ ಅಥವಾ ಜಗಳದಲ್ಲಿ ಮಡಿದ ವೀರರು, ಕಳ್ಳರಿಂದ ಅಪಮಾನಿತರಾದ ಸ್ತ್ರೀಯರನ್ನು ಬಿಡಿಸಿದ ಉದಾಹರಣೆಗಳೂ ದೊರಕುತ್ತವೆ.

(ಇ) ಬೇಟೆವೀರರು — ಹುಲಿ, ಆನೆ, ಕಾಡುಹಂದಿ ಮುಂತಾದ ದುಷ್ಟಮೃಗಗಳನ್ನು ಬೇಟೆಯಾಡಿದವರು ಅಥವಾ ಆ ಸಂದರ್ಭದಲ್ಲಿ ಮಡಿದವರು. ಆತಕೂರು ಶಾಸನದಲ್ಲಿ ಕಾಳಿ ಎಂಬ ನಾಯಿಯು ಹಂದಿಯೊಡನೆ ಕಾದಾಡಿ ಸತ್ತದ್ದರಿಂದ ಅದೂ ವೀರರ ಗುಂಪಿಗೆ ಸೇರುತ್ತದೆ. ಇಂತಹ ಇನ್ನೂ ಕೆಲವು ಶಾಸನಗಳು ಕರ್ನಾಟಕದಲ್ಲಿವೆ.

(ಈ) ದಾರಿಯಲ್ಲಿ ಎದುರಾದ ಕಳ್ಳರನ್ನು ಕೊಂದ ವೀರರು.

ವೀರಗಲ್ಲುಗಳನ್ನು ಗುರುತಿಸುವುದು ಸುಲಭ, ಒಂದರಿಂದ ಹಿಡಿದು ನಾಲ್ಕು, ಐದು ಹಂತಗಳವರೆಗೆ ಇರುವ ಚಿತ್ರಗಳಲ್ಲಿ ಯುದ್ಧ ಸೂಚಕವಾದ ಲಕ್ಷಣವಿದ್ದರೆ (ಉದಾಹರಣೆಗೆ, ಖಡ್ಗ, ಬಿಲ್ಲು, ಬಾಣ ಹಿಡಿದ ವೀರ; ಕುದುರೆ ಸವಾರ; ವಾಸ್ತವವಾಗಿ ಯುದ್ಧಮಾಡು ತ್ತಿರುವುದು) ಅದನ್ನು ವೀರಗಲ್ಲೆಂದು ತಕ್ಷಣ ಗುರುತಿಸಬಹುದು. ಕಲ್ಲಿನ ಮೇಲೆ ಯುದ್ಧದ ಚಿತ್ರದ ಜೊತೆ ದನಗಳೂ ಇದ್ದರೆ 'ತುರುಗೋಳ್' ಯುದ್ಧವೆಂದು ಗುರು ತಿಸಬಹುದು. ಬೇಟೆಯ ಶಾಸನಗಳಲ್ಲಿ ಕಾಡುಪ್ರಾಣಿಯ ಜೊತೆ ವೀರ ಹೋರಾಡುವ ಚಿತ್ರವಿರುತ್ತದೆ. ಯಾವುದೇ ಚಿತ್ರಗಳೂ ಇಲ್ಲದ ವೀರಶಾಸನಗಳೂ, ಯಾವುದೇ ಬರಹ ವಿಲ್ಲದೆ ಕೇವಲ ಚಿತ್ರಗಳೇ ಇರುವ ಶಿಲೆಗಳೂ ಉಂಟು. ಇವನ್ನೆಲ್ಲ ವೀರಗಲ್ಲುಗಳೆಂದೇ ವ್ಯವಹರಿಸುವುದು ರೂಢಿ.

(4) **ಗರುಡಗಲ್ಲುಗಳು:** ಇವುಗಳನ್ನು ವೀರಗಲ್ಲುಗಳೆಂದೇ ಕರೆಯುವುದು ಪದ್ಧತಿ. ಆದರೆ ಇವನ್ನು ಬೇರೆಯ ಒಂದು ವರ್ಗವೆಂದು ಭಾವಿಸುವುದು ಉಚಿತ. ರಾಜ ಸತ್ತರೆ ಅವನ ಜೊತೆ ತಾವೂ ಮಡಿಯುವುದಾಗಿ ಅವನು ಬದುಕಿರುವಾಗಲೇ ಪ್ರತಿಜ್ಞೆ ಕೈಗೊಂಡು, ಅವನು ಮಡಿದಾಗ ಅನೇಕರು ಪ್ರಾಣತ್ಯಾಗಮಾಡಿಕೊಳ್ಳು ತ್ತಿದ್ದರು. ಇಂಥವರನ್ನು ವೇಳೆವಾಳಿಗಳೆಂದೂ ಗರುಡರೆಂದೂ ಶಾಸನಗಳಲ್ಲಿ ಕರೆದಿದೆ. ಇವರೂ 'ವೀರ'ರೇ ನಿಜ. ಆದರೆ ವೀರಗಲ್ಲುಗಳ ವೀರರು ಯುದ್ಧದಲ್ಲಿ ಹೋರಾಡಿ ಅನ್ಯರಿಂದ ಹತರಾದರೆ, ಗರುಡರು ತಾವು ಮಾಡಿದ ಪ್ರತಿಜ್ಞೆಯ ಪೂರೈಕೆಗಾಗಿ ತಮ್ಮನ್ನು ತಾವು ಕೊಂದುಕೊಳ್ಳುತ್ತಾರೆ. ಎರಡರ ಮೂಲದಲ್ಲೂ ಅನ್ನವನ್ನು ಕೊಟ್ಟ ರಾಜ ಅಥವಾ ಯಜಮಾನನ ಬಗ್ಗೆ ಇರುವ ಭಕ್ತಿ ಅಥವಾ ಕೃತಜ್ಞತಾಭಾವಗಳಿವೆ. ಕೆಲವರು ತಮ್ಮ ಒಡತಿಯರಿಗಾಗಿ ಹಾಗೆ ಆತ್ಮಹತ್ಯೆ ಮಾಡಿಕೊಂಡಿರುವುದೂ ಉಂಟು.

(5) **ಮಾಸ್ತಿಕಲ್ಲುಗಳು:** 'ಮಾಸ್ತಿ' ಅಥವಾ ಮಹಾಸತಿ ಎಂಬುದು ತನ್ನ ಗಂಡನ ಸಾವಿನ ನಂತರ ತನ್ನನ್ನು ತಾನು ಕೊಂದುಕೊಂಡ ಸ್ತ್ರೀಯನ್ನು ಸೂಚಿಸುತ್ತದೆ. ಒಂದು ರೀತಿಯಲ್ಲಿ ಗರುಡರೂ ಮಾಸ್ತಿಯರೂ ಒಂದೇ — ತಮ್ಮ 'ಯಜಮಾನ'ರ (ಯಜಮಾನ, ಗಂಡ) ಸಾವಿನ ನಂತರ ತಾವು ಬದುಕಿರಬಾರದು ಎಂಬ ಭಾವನೆ ಎರಡಕ್ಕೂ ಸಮಾನ. ಮಾಸ್ತಿಯ ಸ್ಮಾರಕವಾಗಿ ಬಲಗೈ ಎತ್ತಿ ನಿಂತಿರುವ ಸ್ತ್ರೀ ವಿಗ್ರಹ ವಿರುತ್ತದೆ. ಒಮ್ಮೊಮ್ಮೆ ಪಕ್ಕದಲ್ಲಿ ಅವಳ ಗಂಡನನ್ನು ಚಿತ್ರಿಸಿರುವುದುಂಟು. ಒಂದು ಕಂಬದಿಂದ ಹೊರಟಂತಿರುವ ತೋಳು ಮಾಸ್ತಿಯನ್ನು ಸೂಚಿಸುವುದುಂಟು. ಮಾಸ್ತಿ ಕಲ್ಲುಗಳ ಮೇಲೆ ಶಾಸನಗಳು ವಿರಳವಾದರೂ, ಶಾಸನಗಳು ಇರುವ ಮಾಸ್ತಿಕಲ್ಲುಗಳು ಹಲವಾರು ಇವೆ. ಶಿಲ್ಪವಿಲ್ಲದೆ ಕೇವಲ ಶಾಸನವಿರುವ ಮಾಸ್ತಿಕಲ್ಲುಗಳೂ ಇವೆ. ಸ್ತ್ರೀ ವಿಗ್ರಹ, ಪುರುಷ(ವೀರ)ಸಮೇತಳಾದ ಸ್ತ್ರೀ, ಎತ್ತಿದ ಕೈ ಇವು ಮಾಸ್ತಿಕಲ್ಲಿನ ಸೂಚಕಗಳು.

(6) **ಧಾರ್ಮಿಕ ಆತ್ಮಹತ್ಯೆ ಶಾಸನಗಳು — ನಿಸಿದಿಗಲ್ಲುಗಳು:** ಗರುಡ ಮತ್ತು ಮಾಸ್ತಿಯರು ಆತ್ಮಹತ್ಯೆ ಮಾಡಿಕೊಂಡು ಸ್ವರ್ಗಕ್ಕೆ ಹೋಗುತ್ತಾರೆಂದು

ಜನ ನಂಬಿದ್ದರು. ಆದರೆ, ಅವರ ಆತ್ಮಹತ್ಯೆಯ ಉದ್ದೇಶ ಮೋಕ್ಷಪ್ರಾಪ್ತಿಗಿಂತ ಹೆಚ್ಚಾಗಿ, ತಮ್ಮ 'ಕರ್ತವ್ಯ' ಪರಿಪಾಲನೆಯಾಗಿದ್ದಿತು. ಆದರೆ ಮೋಕ್ಷದ ಉದ್ದೇಶ ದಿಂದ ಆತ್ಮಹತ್ಯೆ ಮಾಡಿಕೊಂಡಿರುವ ನಿದರ್ಶನಗಳುಂಟು. ಆತ್ಮಹತ್ಯೆ ಸಾಮಾನ್ಯವಾಗಿ ನಿಷಿದ್ಧವಾದರೂ, ಮೋಕ್ಷಕ್ಕಾಗಿ ಹಾಗೆ ಮಾಡಿಕೊಳ್ಳುವುದನ್ನು ಸ್ಮೃತಿ ಗ್ರಂಥಗಳು ಮಾನ್ಯಮಾಡಿವೆ. ಉದಾಹರಣೆಗೆ, ಮುತ್ತಮುದುಕರು, ರೋಗಿಗಳು, ಜೀವನದ ನಿಸ್ಸಾರತೆಯನ್ನು ನಿಜವಾಗಿಯೂ ಅರಿತವರು ಬೇಕಾದರೆ ಆತ್ಮಹತ್ಯೆಮಾಡಿಕೊಳ್ಳ ಬಹುದೆಂದು ಅಲ್ಲಿ ಹೇಳಿದೆ. ಕಾಶಿ, ಪ್ರಯಾಗ ಇತ್ಯಾದಿ ಕ್ಷೇತ್ರಗಳಲ್ಲಿ ಪ್ರಾಣತ್ಯಾಗ ಮಾಡುವುದು ಶ್ರೇಷ್ಠವೆಂಬ ಭಾವನೆ ಅಲ್ಲಿ ವ್ಯಕ್ತವಾಗಿದೆ. ಕರ್ನಾಟಕದಲ್ಲಿ, ತುಂಗಭದ್ರಾ ನದಿಯನ್ನು ಪ್ರವೇಶಮಾಡಿ ಅಥವಾ ಬೇರೆ ಬೇರೆ ಪುಣ್ಯದಿನಗಳಲ್ಲಿ ಅಗ್ನಿಪ್ರವೇಶವನ್ನು ಮಾಡಿ ಅಥವಾ ದೇವರಿಗೆ ಹರಕೆ ಹೊತ್ತು ಪ್ರಾಣತ್ಯಾಗ ಮಾಡಿದ ನಿದರ್ಶನಗಳುಳ್ಳ ಶಾಸನಗಳು ದೊರಕುತ್ತವೆ. ಇವೆಲ್ಲವನ್ನೂ ಧಾರ್ಮಿಕ ಆತ್ಮಹತ್ಯೆಗಳೆಂದು ಕರೆಯ ಬಹುದು. ರಾಜರಿಗೆ ಮಕ್ಕಳಾಗಲೆಂದು ದೇವರಿಗೆ ಹರಕೆ ಹೊತ್ತು ಮಡಿದ ನಿದರ್ಶನ ಗಳೂ ದೊರಕುತ್ತವೆ (ಇಂಥವು ಗರುಡ ಸಂಪ್ರದಾಯ ಮತ್ತು ಧಾರ್ಮಿಕ ಆತ್ಮಹತ್ಯೆ ಸಂಪ್ರದಾಯಗಳಿಗೆ ಮಧ್ಯ ನಿಲ್ಲುತ್ತವೆ).

ಜೈನರಲ್ಲಿ, ಸಂಪೂರ್ಣವಾಗಿ ಆಹಾರಾದಿಗಳನ್ನು ತೊರೆದು ಆತ್ಮಹತ್ಯೆ ಮಾಡಿ ಕೊಂಡ ನೂರಾರು ನಿದರ್ಶನಗಳು ದೊರಕುತ್ತವೆ. ಇದನ್ನು ಸಲ್ಲೇಖನ ವ್ರತವೆಂದೂ ಸಮಾಧಿಮರಣವೆಂದೂ ಕರೆಯುತ್ತಾರೆ. ಹಾಗೆ ಮಡಿದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳನ್ನು ಅಥವಾ ಬರಸಿದ ಬರಹಗಳನ್ನು 'ನಿಸಿದಿಗಲ್ಲು', 'ನಿಸಿದಿಗೆ' ಎಂದು ಕರೆಯು ತ್ತಾರೆ. ಕೆಲವು ನಿಸಿದಿಗಳ ಮೇಲೆ ಗುರುವಿನ ಮುಂದೆ ಭಕ್ತಿಯಿಂದ ಕುಳಿತು ಅರ್ಹಂತನ ಸ್ತೋತ್ರಮಾಡುತ್ತಿರುವ ಶಿಷ್ಯನ ಚಿತ್ರವಿರುತ್ತದೆ.

(7) **ಯೂಪ ಶಾಸನಗಳು:** ಇವುಗಳ ಸಂಖ್ಯೆ ತೀರಾ ಕಡಮೆ — ಕರ್ನಾಟಕ ದಲ್ಲಿ ಚಿಕ್ಕಮಗಳೂರು, ಕೋಲಾರ ಜಿಲ್ಲೆಗಳಲ್ಲಿ ಇವು ದೊರೆತಿವೆ. ಯಾಗದ ಸಂದರ್ಭ ದಲ್ಲಿ ಬಲಿ ಕೊಡಲಿದ್ದ ಪ್ರಾಣಿಗಳನ್ನು ಕಟ್ಟಿಹಾಕಲು ಬಳಸುತ್ತಿದ್ದ ಸ್ತಂಭಗಳೇ ಯೂಪಗಳು. ಅವುಗಳ ಮೇಲೆ ವಿರಳವಾಗಿ ಶಾಸನಗಳನ್ನು ಕೊರೆದಿರುವುದುಂಟು.

(8) **ಅಂಕಿತನಾಮ ಶಾಸನಗಳು:** ಈ (ಅಷ್ಟೊಂದು ಉಚಿತವಲ್ಲದ ಹೆಸರಿನ) ಶೀರ್ಷಿಕೆಯ ಕೆಳಗೆ ನೂರಾರು ಶಾಸನಗಳನ್ನು ಅಳವಡಿಸಬಹುದು.

(ಅ) ಯಾತ್ರಾರ್ಥಿಗಳಾಗಿಯೋ ಪ್ರೇಕ್ಷಕರಾಗಿಯೋ ಒಂದು ಸ್ಥಳಕ್ಕೆ ಬಂದವರು ಕೆತ್ತಿರುವ ಅಥವಾ ಕೆತ್ತಿಸಿರುವ ಬಹು ಸಂಖ್ಯೆಯ ಹೆಸರುಗಳು.

(ಆ) ವಿಗ್ರಹಗಳ ಪಾದಪೀಠಗಳ ಮೇಲೆ ಮತ್ತು ತೂಬು ಇತ್ಯಾದಿಗಳ ಮೇಲೆ ಕಾಣಿಸುವ ಶಿಲ್ಪಿಗಳ, ವಿಗ್ರಹಗಳ, ಮಾಡಿಸಿದವರ ಹೆಸರುಗಳು.

(೯) ಗಾಣಗಳ ಮೇಲೆ ದೊರಕುವ ಅವುಗಳ ಯಜಮಾನರ ಹೆಸರುಗಳು.

(9) **ಜಯಪತ್ರಗಳು:** ಎರಡು ಮತ ಅಥವಾ ಜಾತಿಗಳ ಮಧ್ಯೆ ಶ್ರೇಷ್ಠತೆಯ ಅಥವಾ ವಿಶಿಷ್ಟ ಗೌರವಗಳ ಪ್ರಶ್ನೆಯೊಂದು ಬಂದು, ಒಂದು ವರ್ಗದವರು ಇನ್ನೊಂದು ವರ್ಗದವರಿಗೆ ಸವಾಲು ಹಾಕಬಹುದು. ಆಗ ಆ ಸವಾಲನ್ನು ಗೆದ್ದ ಪಂಗಡದವರಿಗೆ ರಾಜ ಅಥವಾ ಅಧಿಕಾರಿಗಳು ಕೊಟ್ಟ ಜಯಪತ್ರಗಳ ಶಾಸನಗಳು ಅನೇಕ ಕಲ್ಲುಗಳ ಮೇಲೆ ದೊರಕುತ್ತವೆ. 'ಸೀಮಾವಿವಾದ' ಅಥವಾ 'ಭೂವಿವಾದ'ದ ಸಂದರ್ಭಗಳಲ್ಲಿ ಹಿಂದಿನ ಶಾಸನಗಳನ್ನು ನೋಡಿ, 'ಜಯಪತ್ರ'ವನ್ನು ಕೊಡುತ್ತಿದ್ದ ನಿದರ್ಶನಗಳೂ ಇವೆ.

(10) **ರಾಜಾಜ್ಞೆಗಳು:** ಅಶೋಕನ ಶಾಸನಗಳು ರಾಜಾಜ್ಞೆಗಳಿಗೆ ಒಳ್ಳೆಯ ನಿದರ್ಶನಗಳು. ಇಂತಹ ರಾಜಾಜ್ಞೆಗಳು ನಮಗೆ ದೊರಕದಿದ್ದರೂ, ವರ್ತಕರಿಗೆ ಮಾಡಿದ ನಿಯಮಗಳನ್ನು ಹೇಳುವ ಶಾಸನಗಳಾಗಲಿ, ಆಸ್ತಿಗೆ ಸಂಬಂಧಿಸಿದ ನಿಯಮಗಳಾಗಲಿ ಯಾವ ಯಾವ ಅಪರಾಧಕ್ಕೆ ಎಂತೆಂತಹ ಶಿಕ್ಷೆ ಎಂಬುದನ್ನು ಹೇಳುವ ಶಾಸನಗಳಾಗಲಿ ರಾಜಾಜ್ಞೆಗಳೇ. ವಿಜಯನಗರದ ದೊರೆಗಳು ನಾವಿದರಿಗೆ ತೋರಿಸಿದ ರಿಯಾಯ್ತಿಗಳೂ ಅಷ್ಟೇ.

(11) **ಇತರೆ:** ಕರ್ನಾಟಕದ ಸಾವಿರಾರು ಶಾಸನಗಳನ್ನೆಲ್ಲ ಮೇಲಿನ ಹತ್ತು ವರ್ಗಗಳಲ್ಲಿ ಸೇರ್ಪಡಿಸುವುದು ಕಷ್ಟ. ಅನೇಕ ಶಾಸನಗಳು ಹಾಗೇ ಉಳಿಯುವ ಸಂಭವವೂ ಹೆಚ್ಚು. ಆದರೆ ಅವುಗಳ ಸಂಖ್ಯೆ ಬಹಳ ಹೆಚ್ಚೇನೂ ಆಗುವುದಿಲ್ಲ.

ಹಿಂದೆ ಆಗಲೇ ಹೇಳಿದಂತೆ ಒಂದು ಶಾಸನವು ಬೇರೆ ಬೇರೆ ವರ್ಗಗಳಿಗೆ ಸೇರುವಂತಿರುವಾಗ, ಅದರ ಮುಖ್ಯ ಸಂಗತಿ ಯಾವುದರ ಕಡೆ ಹೆಚ್ಚು ಬಾಗುತ್ತದೆ ಎಂಬುದನ್ನು ನೋಡಿ ನಿರ್ಧರಿಸಬೇಕಾಗುತ್ತದೆ. ಅಥವಾ, ಒಂದು ಶಾಸನ ಬೇರೆ ಬೇರೆ ವರ್ಗಗಳಿಗೆ ಸಮಾನವಾಗಿಯೇ ಸೇರುವಂತಿರಬಹುದು. ಇನ್ನು ಕೆಲವು ಶಾಸನಗಳ ಮೇಲಿನ ವಿಷಯ ಏನೂ ಅರ್ಥವಾಗದಿದ್ದರೆ ಅದನ್ನು ಯಾವ ವರ್ಗಕ್ಕೆ ಸೇರಿಸಬಹುದೆಂಬ ಪ್ರಶ್ನೆಯೇ ಏಳುವುದಿಲ್ಲ. ಮೇಲಿನ ವರ್ಗೀಕರಣ ನಿರ್ದಿಷ್ಟವಾಗಿರುವಂತೆ ಮಾಡುವುದು ಸಾಧ್ಯವಿಲ್ಲದ ಮಾತು. ಅನೇಕ ಸಹಸ್ರ ಶಾಸನಗಳು ಅಚ್ಚಾಗಿರುವಾಗ, ಆ ಶಾಸನಗಳಲ್ಲಿ ಒಂದು ಕ್ರಮವನ್ನು ಕಾಣಲು, ಯಾವುದೇ ಶಾಸನದ ಮಾದರಿಯನ್ನು (type) ಬೇಗ ಗುರುತಿಸುವಂತೆ ಸಹಾಯಕವಾಗಲು ಮೇಲಿನ ವರ್ಗೀಕರಣ ಸಹಾಯಮಾಡುತ್ತದೆ. ಮತ್ತು ಒಂದು ಶಾಸನದ ಅಧ್ಯಯನಕ್ಕೆ ಅದು ಸೂಕ್ತ ಹಿನ್ನೆಲೆಯನ್ನೂ ಚೌಕಟ್ಟನ್ನೂ ಒದಗಿಸುತ್ತದೆ. ಇಲ್ಲಿ ಒಂದೊಂದು ವರ್ಗ, ಉಪವರ್ಗಕ್ಕೂ ಉದಾಹರಣೆಗಳನ್ನು ಕೊಟ್ಟು ವಿವರಿಸುವ ಗೋಜಿಗೆ ಹೋಗಿಲ್ಲ. ಶಾಸನಾಭ್ಯಾಸಿಗಳಿಗೆ ಆಯಾ ವರ್ಗ ಉಪವರ್ಗಗಳಿಗೆ ಸಂಬಂಧಿಸಿದಂತೆ ಹತ್ತಾರು ಉದಾಹರಣೆಗಳು ಜ್ಞಾಪಕಕ್ಕೆ ಬರುತ್ತವೆ. ಅನಿವಾರ್ಯವಾದ ಕಡೆ ಕೆಲವು ಶಾಸನಗಳ ಕಡೆ ವಿದ್ವಾಂಸರ ಗಮನ ಸೆಳೆದಿದ್ದೇನೆ. ಮೇಲಿನ

ವರ್ಗೀಕರಣವನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಇನ್ನೂ ಸಮರ್ಪಕಮಾಡಲು ಅವಕಾಶವಿದೆ. ವೀರಗಲ್ಲು, ಗರುಡಗಲ್ಲು, ಮಾಸ್ತಿಕಲ್ಲು ಮತ್ತು ಧಾರ್ಮಿಕ ಆತ್ಮಹತ್ಯೆ ಶಾಸನಗಳನ್ನು 'ಸ್ಮಾರಕ ಶಾಸನಗಳು' ಎಂಬ ದೊಡ್ಡ ವರ್ಗದ ಉಪವರ್ಗಗಳೆಂದೂ ಭಾವಿಸಬಹುದು.

## ಶಾಸನಗಳ ಸಾಹಿತ್ಯಿಕ ಮೌಲ್ಯ

ಆರ್. ನರಸಿಂಹಾಚಾರ್ಯರು ತಮ್ಮ "ಶಾಸನಪದ್ಯ ಮಂಜರಿ"ಯ (1923) ಅವತರಣಿಕೆಯಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. —"...ಕನ್ನಡಿಗರಿಗೆ (ಶಾಸನ ಗಳಲ್ಲಿಯ) ಕವಿತೆಯ ಶೈಲಿಯ ಮತ್ತು ಸೊಬಗಿನ ರಸವನ್ನು ಸ್ವಲ್ಪಮಟ್ಟಿಗಾದರೂ ಆಸ್ವಾದನಮಾಡಲು ಅವಕಾಶವುಂಟುಮಾಡಬೇಕೆಂಬ ಉದ್ದೇಶದಿಂದ ಕೆಲವು ಶಾಸನ ಗಳನ್ನು ಆರಿಸಿ ಅವುಗಳಿಂದ ಯೋಗ್ಯವಾದ ಭಾಗಗಳನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇನೆ. ಇವು ಕನ್ನಡನಾಡಿನವರ ಕೃತಿಗಳಾದುದರಿಂದ ಇವುಗಳ ಉತ್ತಮಸರಣಿ ಕನ್ನಡಿಗರ ಹೃದಯದಲ್ಲಿ ಸ್ವಭಾವವಾಗಿ ಹೆಮ್ಮೆಯನ್ನು ಉಂಟುಮಾಡದೆ ಇರಲಾರದು. ......ಈ ಶಾಸನಗಳಿಗೆ ಕವಿತಾಶೈಲಿಯೊಂದರಿಂದಲೇ ಮಹತ್ವವುಂಟಾಗಿದೆ ಎಂದು ತಿಳಿಯ ಬಾರದು. ಇವು ಆ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ." ಅದೇ ಅವತರಣಿಕೆಯ ಮುಂದಿನ ಮಾತುಗಳಿಂದ ಇನ್ನೂ ಕೆಲವು ಸಂಗತಿಗಳು ತಿಳಿಯುತ್ತವೆ. ಈ ಪುಸ್ತಕದಲ್ಲಿ ಬಂದಿರುವ ಪದ್ಯಗಳನ್ನು ತಮ್ಮ ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟದಲ್ಲಿಯ "ಕವಿಗಳು ಗೊತ್ತಿಲ್ಲದ ಗ್ರಂಥಗಳ ಭಾಗಗಳೊಡನೆ ಕೊಡಬೇಕೆಂದು" ಯೋಚಿಸಿದ್ದರು. ಆದರೆ, ಇವುಗಳಿಗೆ ಕವಿತಾ ಶೈಲಿಯ ಜೊತೆಗೆ ಉಳಿದ ಅನೇಕ ದೃಷ್ಟಿಗಳಿಂದ ಮಹತ್ವವು ಇರುವುದರಿಂದ ಪ್ರತ್ಯೇಕ ಸಂಪುಟವಾಗಿ ಪ್ರಕಟಿಸುವ ಮನಸ್ಸು ಮಾಡಿದರು.

ಇದರಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಶ್ರೀಯುತರು ಶಾಸನಗಳನ್ನು ಮುಖ್ಯವಾಗಿ ಕಾವ್ಯವಾಗಿ ನೋಡಿ ಈ ಸಂಕಲನವನ್ನು ಸಿದ್ಧಪಡಿಸಿದರು.

ಆ ಕಾರಣದಿಂದಾಗಿ ಶಾಸನಪದ್ಯ ಮಂಜರಿಗೆ ಒಂದೆರಡು ಮಿತಿಗಳೂ ಪ್ರಾಪ್ತ ವಾದುವು. ಪುಸ್ತಕದ ಹೆಸರೇ ಹೇಳುವಂತೆ, ಇಲ್ಲಿರುವುದೆಲ್ಲಾ ಪದ್ಯಗಳು (ಮುಂದೆ ಅವರು ಅನುಬಂಧವಾಗಿ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಿದ ಭಾಗದಲ್ಲಿ ಮಾತ್ರ ಒಂದು ಗದ್ಯದ ಭಾಗವಿದೆ. ಈ ಪುಸ್ತಕದ 322 ನೇ ಶಾಸನ, 1795 ನೇ ಗದ್ಯ ನೋಡಿ). ಶಾಸನಗಳಲ್ಲಿ ಬರುವ ಪದ್ಯಗಳಷ್ಟೇ ಗದ್ಯಭಾಗಗಳು ಸತ್ವಶಾಲಿಯಾಗಿರುತ್ತವೆ. ಅವು 'ಕಾವ್ಯ' ಎಂದು ಅನ್ನಿಸಿಕೊಳ್ಳಲು ಅರ್ಹವಾಗಿದ್ದರೂ ಪದ್ಯವಲ್ಲವೆಂಬ ಕಾರಣಕ್ಕಾಗಿ ಈ ಸಂಕಲನದಿಂದ ಹೊರಗುಳಿಯಬೇಕಾಯ್ತು. ಶಾಸನ ಗಳಲ್ಲಿ ಸ್ವಾರಸ್ಯವಾಗಿರುವ ಭಾಗಗಳನ್ನು ಮಾತ್ರ ಆರಿಸಿಕೊಡುತ್ತ ಹೋಗುವುದರಿಂದ, ಯಾವುದೇ ಶಾಸನದ ಸಮಗ್ರ ಚಿತ್ರವೂ ದೊರಕುವುದು ಕಷ್ಟವಾಗುತ್ತದೆ. ಅನೇಕ ಕಡೆ ಈ ಸಂಕಲನವು ಬಿಡಿ ಮುಕ್ತಕಗಳ ಮಾಲಿಕೆಯಂತಾಗಿದೆ. ಇದು ಈ ಸಂಕಲನದ

ಬಗ್ಗೆ ಆಡಬಹುದಾದ ಒಂದು ವಿಮರ್ಶೆಯ ಮಾತು. ಆದರೆ ಅದೊಂದು ದೊಡ್ಡ ಲೋಪ ಎಂದು ಅದನ್ನೇ ಮುಂದುಮಾಡುವುದು ತಪ್ಪಾದೀತು. ಆರ್. ನರಸಿಂಹಾ ಚಾರ್ಯರು ಯಾವ ಉದ್ದೇಶದಿಂದ ಈ ಸಂಕಲನವನ್ನು ಆರಂಭಿಸಿದರೋ ಅದರ ಮಿತಿಗಳು ಇಡೀ ಗ್ರಂಥವನ್ನು ವ್ಯಾಪಿಸಿದುವು ಎಂಬುದನ್ನು ಮಾತ್ರ ಗ್ರಹಿಸಿದರೆ ಸಾಕು. ತಮ್ಮ ಕಾಲದ ಅತ್ಯಂತ ಶ್ರೇಷ್ಠ ವಿದ್ವಾಂಸರಾಗಿದ್ದ ಅವರಿಗೆ ಶಾಸನಗಳಲ್ಲಿ ಬರಿಯ ಕಾವ್ಯತ್ವ/ಪದ್ಯತ್ವ ಮಾತ್ರ ಮುಖ್ಯವಾಗಿ ಕಂಡಿತು ಎಂದು ಯಾರಾದರೂ ಆಕಸ್ಮಾತ್ ಭಾವಿಸಿದರೆ ತಪ್ಪಾದೀತು. ಶಾಸನಗಳ ಬಹುಮುಖ ಮೌಲ್ಯವನ್ನು ಅವರು ಗುರುತಿಸಿದ್ದರೆಂಬು ದಕ್ಕೆ ಅವರ ಅವತರಣಿಕೆಯೇ ಸಾಕ್ಷಿ ಎಂದು ಹೇಳುವುದೂ ಅನುಚಿತ.

ಶಾಸನಪದ್ಯ ಮಂಜರಿ ಪ್ರಕಟವಾದಂದಿನಿಂದ (1923) ಇಂದಿನವರೆಗೆ ಸಾವಿರಾರು ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಶಾಸನಗಳ ಪರಿಚಯವನ್ನು ಸಮರ್ಥವಾಗಿ ಮಾಡಿ ಕೊಡುತ್ತ ಬಂದಿದೆ. ಎಷ್ಟೋ ಸಾರಿ ಆಕರ ಗ್ರಂಥವಾಗಿ ಪರಿಣಮಿಸಿದೆ. ಅಲ್ಲಿಯ ಟಿಪ್ಪಣಗಳು ಕನ್ನಡ ವಿದ್ವತ್ತಿಗೆ ಒಂದು ಒಳ್ಳೆಯ ಕಾಣಿಕೆ. ಶಾಸನ ಪದ್ಯಮಂಜರಿಗೆ ಕೇವಲ ಐತಿಹಾಸಿಕ ಮಹತ್ವವೆಂದು ಭಾವಿಸಬೇಕಾಗಿಲ್ಲ. ಇಂದಿಗೂ ಅದರ ಅಗತ್ಯವಿದ್ದೇ ಇದೆ. ಶಾಸನಾಭ್ಯಾಸಿಗಳಿಗೆ ಇದೊಂದು ಕೈದೀವಿಗೆಯಾಗಿ ಹಿಂದಿನಂತೆಯೇ ಮುಂದಿನ-ವರಿಗೂ ದಾರಿ ತೋರಿಸುತ್ತದೆಯೆಂಬುದರಲ್ಲಿ ಅನುಮಾನವಿಲ್ಲ.

ಈ ಕಾಲದಲ್ಲಿ ಅವರ ಗ್ರಂಥ ಪುನರ್ಮುದ್ರಣವಾಗುವುದರಲ್ಲಿ ಒಂದು ಔಚಿತ್ಯವೂ ಇದೆ. ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುವವರು ಶಾಸನಗಳನ್ನು ಸಾಮಾನ್ಯವಾಗಿ ಉಪೇಕ್ಷೆ ಮಾಡುತ್ತಾರೆ. ಶಾಸನಗಳಲ್ಲಿ ಪರಿಶ್ರಮವಿರುವವರಿಗೆ ಅವುಗಳ ಸಾಹಿತ್ಯಿಕ ಮೌಲ್ಯ ಗೌಣವಾಗಿರುತ್ತದೆ. ಎರಡು ಮೂರು ಪ್ರಯತ್ನಗಳನ್ನು ಬಿಟ್ಟರೆ ಶಾಸನಗಳನ್ನು ಸಾಹಿತ್ಯದ ದೃಷ್ಟಿಯಿಂದ ನೋಡಿ ಪರಿಶೀಲಿಸುವ, ವಿಮರ್ಶಿಸುವ ಕಾರ್ಯ ಹೆಚ್ಚಾಗಿ ನಡೆದಿಲ್ಲವೆಂದೇ ಹೇಳಬೇಕು. ಎ. ಎಮ್. ಅಣ್ಣೀಗೇರಿ ಮತ್ತು ಮೇವುಂಡಿ ಮಲ್ಲಾರಿ ಯುವರು "ಶಾಸನ ಸಾಹಿತ್ಯ ಸಂಚಯಂ" ಎಂಬ ಗ್ರಂಥದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದ ಶಾಸನ ಭಾಗಗಳನ್ನು ಆರಿಸಿಕೊಟ್ಟು ವಿಸ್ತಾರವಾದ ಮುನ್ನುಡಿ ಬರೆದಿದ್ದಾರೆ. ಮೇವುಂಡಿ ಮಲ್ಲಾರಿಯುವರು "ಕನ್ನಡ ನಾಡಿನ ಕೆಲವು ಶಾಸನ ಕವಿಗಳು" ಎಂಬ ಪುಸ್ತಕ ದಲ್ಲಿ ಐವತ್ತೊಂದು ಶಾಸನ ಕವಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ತಿ.ತಾ. ಶರ್ಮ, ಡಾ॥ ಪಾಂಡುರಂಗ ದೇಸಾಯಿ ಮತ್ತು ಡಾ॥ ಶ್ರೀನಿವಾಸ ರಿತ್ತಿಯುವರು ಶಾಸನ ಕವಿಗಳ ಬಗ್ಗೆ ಪರಿಚಯಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಡಾ॥ ಎಂ. ಎಂ. ಕಲಬುರ್ಗಿಯುವರ "ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಗ್ರಂಥದಲ್ಲಿ ಶಾಸನ ಸಾಹಿತ್ಯದ ಬಗ್ಗೆ ಒಂದು ಪ್ರತ್ಯೇಕ ಅಧ್ಯಾಯುವಿದೆ. ಈ ಸಂದರ್ಭದಲ್ಲಿ ನನ್ನ ಒಂದು ಲೇಖನ ('ಶಾಸನಗಳು ಮತ್ತು ಕನ್ನಡ ಸಾಹಿತ್ಯ'—ಸಂಶೋಧನ ತರಂಗ, ಸಂಪುಟ 2) ಅದೇ ಶಾಸನ ಸಾಹಿತ್ಯ ಸಂಬಂಧಿಯಾಗಿದ್ದು ಉಲ್ಲೇಖನೀಯುವಾಗಿದೆ. ನಾನು ಇಲ್ಲಿ ಆ ವಿಷಯಕ್ಕೆ ಸಂಬಂಧಿಸಿದಂತೆ ಎಲ್ಲವನ್ನೂ ಪಟ್ಟಿಮಾಡಿಲ್ಲವಾದರೂ ಆ ಬಗ್ಗೆ ನಡೆದಿರುವ ವಿವೇಚನೆ, ಬಂದಿರುವ ಬರಹ ಕಡಮೆಯೆಂಬುದು ಮಾತ್ರ ನಿಶ್ಚಿತ.

ಶಾಸನಗಳನ್ನು ಕಾವ್ಯ/ಸಾಹಿತ್ಯವಾಗಿ ನೋಡುವಾಗ ಕೆಲವು ಸಂಗತಿಗಳನ್ನು ಸ್ಪಷ್ಟ ಮಾಡಿಕೊಳ್ಳುವುದು ಅತ್ಯಗತ್ಯ. ಶಾಸನಗಳನ್ನು ಕಾವ್ಯವಾಗಲಿ ಎಂಬ ಉದ್ದೇಶದಿಂದ ರಚಿಸಿಲ್ಲ. ಯಾವುದೋ ದಾನವನ್ನೋ ವೀರನ ಶೌರ್ಯವನ್ನೋ ಮಹಾಸತಿಯ ಪತಿ ಭಕ್ತಿಯನ್ನೋ ವರ್ಣಿಸುವುದು ಶಾಸನಕವಿಗಳ ಸಾಮಾನ್ಯ ಉದ್ದೇಶವಾಗಿರುತ್ತದೆ. ಅನೇಕರು ತೀರ ಸಾಮಾನ್ಯವಾದ ನೀರಸ ಗದ್ಯದಲ್ಲಿ ಒಂದು ಸಂಗತಿಯನ್ನು ಹೇಳಿಬಿಡುವುದುಂಟು. ಹಬ್ಬೆಯ ನಾಯಕನ ಶಿರಸಂಗಿ ಶಾಸನದ ಕವಿ ಸಜ್ಜನ ತಿಲಕನಿಗೆ ಶಾಸನವೊಂದನ್ನು ಬರೆಯುವುದೇ ನೆಪವಾಗಿ ಅವನು ಋಷ್ಯಶೃಂಗರ ಕತೆಯನ್ನೇ ವರ್ಣಿಸಿಬಿಡುತ್ತಾನೆ. ಆ ಶಾಸನ ಒಂದು ಚಿಕ್ಕ ಪ್ರೌಢ ಚಂಪೂ ಕಾವ್ಯದಂತಿದೆ. ಹೀಗೆ ಶಾಸನ ಪಾಠಗಳನ್ನು ಸಿದ್ಧಪಡಿಸಿದವರಲ್ಲಿ ರನ್ನ, ನಾಗಚಂದ್ರ, ಶಾಂತಿನಾಥ, ಜನ್ನ, ಮಧುರ ಮುಂತಾದ ಸುಪ್ರಸಿದ್ಧ ಕವಿಗಳಿದ್ದಾರೆ. ಎಷ್ಟೋ ಶ್ರೇಷ್ಠಕವಿಗಳ ಹೆಸರುಗಳು (ಉದಾಹರಣೆಗೆ ದೇಕಬ್ಬೆ ಶಾಸನದ ಮಲ್ಲ, ಗಂಗಾಧರಂ ಶಾಸನದ ಜಿನವಲ್ಲಭ, ಕಳಸ ಶಾಸನದ ಕವಿರಾಜರಾಜ) ಶಾಸನಗಳಲ್ಲಿ ಮಾತ್ರ ಉಳಿದುಕೊಂಡು ಬಂದಿವೆ. ಇವರು ಉಳಿದಂತೆ ಏನು ಕೃತಿರಚನೆ ಮಾಡಿದ್ದಾರೆಂಬುದು ಇನ್ನೂ ನಮಗೆ ತಿಳಿದಿಲ್ಲ. ಮಾಡಗಿ ಹಾಳ ಶಾಸನದಲ್ಲಿ ಬರುವ ಬಿಜ್ಜಯ ನಾಯಕನನ್ನು (ಶಾಸನ ಪದ್ಯಮಂಜರಿ, ಪು.174) 'ವರ್ಣಕವಿ', 'ಕನ್ನಡ ಜಾಣ' ಎಂದು ಕರೆದಿರುವುದು ನಮ್ಮ ಕುತೂಹಲವನ್ನು ಕೆರಳಿ ಸುತ್ತದೆ. ಅವನ ಕೃತಿ ಯಾವುದಾದರೂ ಬೆಳಕಿಗೆ ಬರುವವರೆಗೆ ಅವನ ಹೆಸರಿಂದೊಂದ ರಿಂದಲೇ ತೃಪ್ತರಾಗಬೇಕಾಗಿದೆ. ಹೀಗೆ ಸುಪ್ರಸಿದ್ಧರು, ಸುಪ್ರಸಿದ್ಧರಲ್ಲದಿದ್ದರೂ ನಿಜ ವಾಗಿಯೂ ಪ್ರತಿಭಾಶಾಲಿಗಳಾಗಿದ್ದು ದುರದೃಷ್ಟವಶಾತ್ ತಾವು ಬರೆದ ಕಾವ್ಯಗಳು ಮುಂದೆ ಪ್ರಸಿದ್ಧಿಗೆ ಬಾರದೆ ಹಿನ್ನೆಲೆಯಲ್ಲಿ ಉಳಿದವರು, ಸಾಮಾನ್ಯರು — ಹೀಗೆ ಎಲ್ಲ ಬಗೆಯ ಜನರೂ ಶಾಸನಗಳನ್ನು ಬರೆದಿದ್ದಾರೆ. ಅವರು ಕಾವ್ಯವೆಂದು ಬರೆಯ ದಿದ್ದರೂ ಬರೆದದ್ದು ಕಾವ್ಯವಾಯಿತು. ಕೆಲವು ಶಾಸನಗಳಂತೂ ಚಂಪೂ ಕಾವ್ಯಗಳಂತೆ ಸಮುದ್ರ ವರ್ಣನೆಯಿಂದ ಆರಂಭವಾಗಿರುವುದೂ ಲಕ್ಷಿಸಬೇಕಾದ ಸಂಗತಿ. ಅವು ಒಂದು ಬಗೆಯ ಚಿಕ್ಕ ಚಂಪೂ ಕಾವ್ಯಗಳೇ ಆಗಿರುತ್ತವೆ ಎಂದು ಹೇಳಿದರೂ ತಡೆದೀತು.

ಏಕೆಂದರೆ, ಮೊದಲಿನಿಂದಲೂ ಶಾಸನಗಳು ಭಾಷೆ ಮತ್ತು ರಚನೆಯ ದೃಷ್ಟಿಯಿಂದ ಚಂಪೂ ಕಾವ್ಯಗಳನ್ನು ತಮ್ಮ ಆದರ್ಶವಾಗಿಟ್ಟುಕೊಂಡುವು. ಚಂಪೂ ಕೃತಿಗಳು ಕನ್ನಡ ದಲ್ಲಿ ದೊರಕುವ ಮೊದಲೇ ಕನ್ನಡದಲ್ಲಿ ಒಳ್ಳೆಯ ಕಾವ್ಯಗುಣಗಳುಳ್ಳ ಶಾಸನಗಳು ರಚಿತವಾಗಿದ್ದುವು (ಉದಾ: ಬಾದಾಮಿಯ ಕಪ್ಪೆ ಅರಭಟ್ಟನ ಶಾಸನ, ಶ್ರವಣಬೆಳ್ಗೊಳದ ಮುಕ್ತಕಗಳು, ತಮಟುಕಲ್ಲಿನ ಶಾಸನ ಇತ್ಯಾದಿ). ಪಂಪ ಪೂರ್ವಕಾಲಕ್ಕೆ ಸೇರುವ ಸು. ಕ್ರಿ.ಶ. 930ರ ಕಳಸ ಶಾಸನದ ಭಾಷೆ ಚಂಪೂ ಭಾಷೆಯಷ್ಟೇ ಪ್ರೌಢವೂ ಪಕ್ವವೂ ಆಗಿರುವುದನ್ನು ನೋಡಬೇಕು. ಆ ಹೊತ್ತಿಗಾಗಲೇ ಕನ್ನಡದಲ್ಲಿ ಕವಿಗಳ ರಾಜಮಾರ್ಗವು ನಿರ್ಮಾಣವಾಗಿ, ಆ ಪರಂಪರೆಯಲ್ಲಿ ಸಾಕಷ್ಟು ಸಂಖ್ಯೆಯ ಕೃತಿಗಳು ರಚನೆಯಾಗಿದ್ದುವು. ಕನ್ನಡ ಭಾಷೆಯನ್ನು ಕಾವ್ಯರಚನೆಗಾಗಿ ಹದಗೊಳಿಸಿದ್ದರು. ಚಂಪೂ ಪರಂಪರೆಯ ಪ್ರಾಬಲ್ಯ ಕಡಮೆಯಾಗಿ, ಮುಂದೆ ಷಟ್ಪದಿ, ರಗಳೆ, ಸಾಂಗತ್ಯಗಳು ಕಾವ್ಯಪ್ರಪಂಚದಲ್ಲಿ ಮೆರೆಯುತ್ತಿದ್ದಾಗಲೂ, ಶಾಸನಗಳು ಚಂಪೂ ಕಾವ್ಯಗಳ ಬಗ್ಗೆ

ತಮಗಿದ್ದ ನಿಷ್ಠೆಯನ್ನು ಕಡಮೆಮಾಡಿಕೊಳ್ಳಲಿಲ್ಲ. ನಮಗೆ ಷಟ್ಪದೀ ರೂಪವಾದ ಅಥವಾ ರಗಳೆ, ಸಾಂಗತ್ಯಗಳಿಂದಲೇ ನಡೆಸಿಕೊಂಡು ಹೋಗಿರುವ ಯಾವ ಶಾಸನವೂ ಸಿಕ್ಕಿಲ್ಲದಿರುವುದು ಅದನ್ನು ಸಮರ್ಥಿಸುತ್ತದೆ. ಶಾಸನಗಳು ಕೇವಲ ಗದ್ಯರೂಪವಾಗಿರಬಹುದು. ಇದು ಬಿಟ್ಟರೆ ಚಂಪೂ ರೂಪವಾಗಿರುತ್ತವೆ (ಎಂದರೆ ಪದ್ಯಗಳಲ್ಲಿ ವೃತ್ತ, ಕಂದಗಳೇ ಹೆಚ್ಚು. ವೈವಿಧ್ಯಕ್ಕಾಗಿ ಷಟ್ಪದಿ, ತ್ರಿಪದಿ, ರಗಳೆಗಳು ಮಧ್ಯೆ ವಿರಳವಾಗಿ ಕಾಣಿಸಿಕೊಂಡಿರುತ್ತವೆ). 16–17ನೇ ಶತಮಾನಗಳಷ್ಟು ಈಚಿನ ಶಾಸನಗಳಲ್ಲೂ, ಶಾಸನಕರ್ತೃ ಕವಿಯೂ ಆಗಿದ್ದು ತನ್ನ ಕೃತಿ ಕಾವ್ಯಮಯವಾಗಿರಬೇಕೆಂಬ ಅಪೇಕ್ಷೆ ಅವನಿಗೆ ಇದ್ದ ಪಕ್ಷದಲ್ಲಿ ಅವನು ತನಗಿಂತ ಎಷ್ಟೋ ಶತಮಾನಗಳ ಹಿಂದೆ ಇದ್ದ ಹಳಗನ್ನಡವನ್ನೇ ಆಶ್ರಯಿಸಿಯಾನು! ವೃತ್ತ ಕಂದಗಳನ್ನೇ ಬರೆದಾನು! (ಆದರೆ ಸಾಮಾನ್ಯರು ಬರೆದ ಶಾಸನಗಳು ಸಾಮಾನ್ಯವಾಗಿ ಚಿಕ್ಕುವಾಗಿದ್ದು ಗದ್ಯರೂಪವಾಗಿರುತ್ತವೆ ಮತ್ತು ತಮ್ಮ ಕಾಲದ ಭಾಷೆಯಲ್ಲಿ ರಚಿತವಾಗಿರುತ್ತವೆ. ಮತ್ತು ಎಷ್ಟೋ ಸಾರಿ ಅವು ದೀರ್ಘ ಶಾಸನಗಳಿಗಿಂತ ಹೆಚ್ಚು ಸ್ವಾರಸ್ಯವಾಗಿರುವುದಲ್ಲದೆ ಮಹತ್ವಪೂರ್ಣವೂ ಆಗಿರುತ್ತವೆ).

ಈ ಚಂಪೂನಿಷ್ಠೆಯನ್ನು ಟೀಕಿಸಿ ಪ್ರಯೋಜನವಿಲ್ಲ. ಏಕೆಂದರೆ ಯಾವ ಶಾಸನಕರ್ತೃವೂ ಸಾಹಿತ್ಯ ಕೃತಿರಚನೆ ತನ್ನ ಉದ್ದೇಶವೆಂದು ಭಾವಿಸಿಲ್ಲ. ಅವನ ಕೃತಿಯಲ್ಲಿ ಸಾಹಿತ್ಯಿಕ ಗುಣ ಕಾಣಿಸಿಕೊಂಡಿದ್ದರೆ ಅದಕ್ಕೆ ಅವನ ಸಂಸ್ಕಾರ, ಪ್ರವೃತ್ತಿಗಳು ಕಾರಣ.

ವಾಸ್ತವವಾಗಿ ಕನ್ನಡ ಸಾಹಿತ್ಯದ ಮೊದಲ ರೂಪ ಕಾಣಿಸಿಕೊಳ್ಳುವುದೇ ಶಾಸನಗಳಲ್ಲಿ. ಕೆಲವು ವಿದ್ವಾಂಸರು ಕನ್ನಡ ಭಾಷೆಯಷ್ಟೇ ಕನ್ನಡ ಸಾಹಿತ್ಯವು ಪ್ರಾಚೀನವಾದುದೆಂದು ವಾದಿಸಲು ಪ್ರಯತ್ನಿಸಿದ್ದಾರೆ. ಭಾಷೆ ಮತ್ತು ಸಾಹಿತ್ಯಗಳು ಸಮಾನಾರ್ಥಕಗಳಲ್ಲವೆಂಬುದನ್ನು ನೆನೆದಾಗ ಅಂತಹ ವಾದದ ದೌರ್ಬಲ್ಯ ಎದ್ದುಕಾಣುತ್ತದೆ. ಪ್ರಾಚೀನ ಕನ್ನಡ ಶಾಸನಗಳಲ್ಲಿ ಮೊತ್ತಮೊದಲು ಕಾವ್ಯಗುಣ ಕಾಣಿಸಿಕೊಳ್ಳುವುದನ್ನು, ಅದಕ್ಕಿಂತ ಹೆಚ್ಚಾಗಿ ಭಾಷೆಯಲ್ಲಿ ಒಂದು ಬಗೆಯ 'ಶಿಷ್ಟಕೃತಕತೆ' (sophistication) ಕಾಣಿಸಿಕೊಳ್ಳುವುದನ್ನು ಮತ್ತು ಇತರ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡ ಸಾಹಿತ್ಯವು ಕ್ರಿ.ಶ. ಸು. 650–700 ಕ್ಕಿಂತ ಬಹಳ ಹಿಂದಕ್ಕೆ ಹೋಗಲಾರದೆಂದು ಒಂದು ಕಡೆ ವಾದಿಸಿದ್ದೇನೆ. ('ಶಾಸನಗಳು ಮತ್ತು ಕನ್ನಡ ಸಾಹಿತ್ಯ' ಎಂಬ ಲೇಖನ ನೋಡಿ). ಬಾದಾಮಿ ಚಾಲುಕ್ಯರ ಕಾಲದಲ್ಲಿ ಕನ್ನಡ ಸಂಸ್ಕೃತಿಗೆ ಒಂದು ಖಚಿತ ಮೂರ್ತರೂಪ ಬಂದಿತೆಂದು ಬಹುತೇಕ ವಿದ್ವಾಂಸರು ಒಪ್ಪಿಕೊಳ್ಳುತ್ತಾರೆ. ಈ ಅಂಶವೂ ಮೇಲಿನ ಅನುಮಾನವನ್ನು (inference) ಸಮರ್ಥಿಸುತ್ತದೆ. ಅದೇನೇ ಇರಲಿ, ಕವಿರಾಜ ಮಾರ್ಗಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಮಾದರಿಯನ್ನು ನೋಡಬಯಸುವವರು ಸು. 650–700 ರಲ್ಲಿ ರಚಿತವಾದ ಶಾಸನಸ್ಥ ಮುಕ್ತಕಗಳಿಗೇ ಹೋಗಬೇಕು.

ಸು. 900 ರಿಂದ ನಮಗೆ ದೀರ್ಘವೂ ಪದ್ಯಾತ್ಮಕವೂ ಕಾವ್ಯಮಯವೂ ಆದ ಶಾಸನಗಳು ದೊರಕುತ್ತವೆ. ಅದರಲ್ಲೂ ಪಂಪನ ಬಳಿಕ ಎಂದರೆ ಸು. 945–50 ರ

ನಂತರ ಅಂತಹ ಶಾಸನಗಳ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಇದಕ್ಕೆ ಕಾರಣ ಪಂಪ ನಿಂದ ಕನ್ನಡ ಸಾಹಿತ್ಯಕ್ಕೆ ದೊರೆತ ಉತ್ಕರ್ಷವೆಂದೇ ಕಾಣುತ್ತದೆ. ಕಾವ್ಯಶೈಲಿಯ ದೃಷ್ಟಿಯಿಂದ ಇಡೀ ಭಾರತದಲ್ಲಿ ಸಂಸ್ಕೃತವನ್ನು ಬಿಟ್ಟರೆ ಕನ್ನಡ ಶಾಸನಗಳು ಅದ್ವಿತೀಯ ವಾದುವು. ಶಾಸನಗಳ ಸಂಖ್ಯೆಯ ದೃಷ್ಟಿಯಿಂದ ತಮಿಳು ನಾಡಿಗೆ ಪ್ರಥಮ ಸ್ಥಾನ ದೊರಕುತ್ತದೆ. ಆದರೆ, ವಿಷಯವೈವಿಧ್ಯ, ಶಿಲ್ಪ, ಕಾವ್ಯಶೈಲಿಗಳ ದೃಷ್ಟಿಯಿಂದ ದೇಶೀಯ ಭಾಷೆಗಳಲ್ಲೆಲ್ಲ ಕನ್ನಡ ಶಾಸನಗಳಿಗೆ ಅಗ್ರಸ್ಥಾನ ದೊರಕುತ್ತದೆ. ಕರ್ನಾಟಕದಲ್ಲಿ ಶಾಸನ ಹಾಕಿಸುವುದು ಕಲೆಯ ಮಟ್ಟಕ್ಕೆ ಏರಿದ ಒಂದು ಗಂಭೀರ ಕ್ರಿಯೆಯಾಗಿ ಪರಿ ಣಮಿಸಿದ್ದಿತು.

ಶಾಸನಗಳ ಮೇಲೆ ಉಳಿದ ಚಂಪೂ ಕವಿಗಳಿಗಿಂತ ಪಂಪ ಮತ್ತು ರನ್ನರ ಪ್ರಭಾವ ಅಧಿಕ. ಅದರಲ್ಲೂ ಪಂಪನ ಪ್ರಭಾವವೇ ಹೆಚ್ಚು. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಕ್ರಿ.ಶ. 1186 ರ ಸಜ್ಜನ ತಿಲಕ ಕವಿಯ ಸಿರಸಂಗಿ ಶಾಸನದಲ್ಲಿರುವ (KI. Vol. I P. 40)

ನೆನೆದ ಮನಂ ಪೆಱಗುಳಿದ
ತ್ತೆನಲಿಂದ್ರನುವಾಗಳಶ್ವಿನೀ ದೇವರು ವಂ।
ದನುನಯದೆ ಬಂದು ಬೆಸನೇ
ನೆನೆ ಬೆಸಸಿದನವರನಾ ವಿಭಾಂಡಕ ಮುನಿಪಂ॥

ಎಂಬ ಪದ್ಯವು ಪಂಪನ (ಪಂಪಭಾರತ, 1.138)

ನೆನೆದ ಮನಂ ಪೆಱಗುೞಿದ
ತ್ತೆನೆ ಬೆಳಗುವ ರತ್ನ ದೀಪ್ತಿ ಸುರಧನು ನೆಗೆದ।
ತ್ತೆನೆ ನೆಯ್ದಿಲ್ದೊಳನಲರ್ದ
ತ್ತೆನೆ ಕಣ್ಗಳ ಬಳಗಮಾಗಳಿಂದ್ರಂ ಬಂದಂ॥

ಎಂಬ ಪದ್ಯದ ಸ್ಪಷ್ಟವಾದ ಅನುಕರಣೆಯೇ ಆಗಿದೆ. ಶಾಸನ ಪದ್ಯಮಂಜರಿಯ 571 ನೆಯ ಪದ್ಯವು ಆದಿಪುರಾಣದ 1.14 ನೇ ಪದ್ಯವೇ ಆಗಿದೆ. ಇದೇ ಶಾಸನ ಪದ್ಯಮಂಜರಿಯ (ಪದ್ಯ 454)

ಆ ನೆಗಟ್ದ ವಿಷ್ಣು ನೃಪನ ಮ
ನೋ ನಯನ ಪ್ರಿಯೆ ಚಲಾಳಿ ನೀಲಾಳಕಿ ಚಂ।
ದ್ರಾನನೆ ಕಾಮನ ರತಿಯೊಳ್
ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವೀ॥

ಎಂಬುದರೊಡನೆ, ಪಂಪಭಾರತದ (1.39)

> ಆ ನರಸಿಂಹ ಮಹೀಶ ಮ
> ನೋಽ ನಯನ ಪ್ರಿಯೆ ವಿಳೋಳ ನೀಳಾಳಕೆ ಚಂ।
> ದ್ರಾನನೆ ಜಾಕವ್ವೆ ದಲಾ
> ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ॥

ಎಂಬ ಪದ್ಯದ ಸ್ಪಷ್ಟಾನುಕರಣೆಯೇ ಆಗಿದೆ. ರಣರಂಗದ ವರ್ಣನೆಯಲ್ಲಿ (ಪದ್ಯ 831) ಮತ್ತು ಇತರ ಕಡೆಗಳಲ್ಲಿ (ಪದ್ಯ 1675) ಪಂಪ ನಮ್ಮ ನೆನಪಿಗೆ ಬರುತ್ತಾನೆ. ರನ್ನನ ನೆನಪು ತರುವ ಪದ್ಯಗಳೂ ಉಂಟು (498, 587 ಇತ್ಯಾದಿ). ಇಲ್ಲಿ ಬಂದಿರುವ ಒಂದು ಗದ್ಯ ಭಾಗ (1795) ಹರಿಹರನನ್ನೂ ವಚನಕಾರರನ್ನೂ ನೆನಪಿಗೆ ತರುತ್ತದೆ. ಆದರೆ ಇಂಥವು ಬಹಳ ಕಡಮೆ. ಒಟ್ಟು ಶಾಸನಕಾರರ ಮೇಲೆ ಚಂಪೂ ಕವಿಗಳ ಪ್ರಭಾವವೇ ಅಧಿಕ.

ಇದರ ಫಲವಾಗಿ, ಪ್ರೌಢಶಾಸನಗಳ ಭಾಷೆ ಕೊನೆಯವರೆಗೂ ಹಳಗನ್ನಡ ವಾಗಿಯೇ ಉಳಿದುದಲ್ಲದೆ, ಕವಿಸಮಯ ಅಲಂಕಾರಗಳ ಬಳಕೆಯಲ್ಲಿ ಶಾಸನಗಳು ಚಂಪೂ ಕಾವ್ಯಗಳ ದಾರಿಯಲ್ಲೇ ಸಾಗಿದುವು. ಕೆಲವು ಸಾರಿ ಒಂದು ಹೆಜ್ಜೆ ಮುಂದೆ ಹೋದುವು. ಶಾಸನ ಪದ್ಯಮಂಜರಿಯ 114 ನೇ ಶಾಸನವನ್ನು ಈ ದೃಷ್ಟಿಯಿಂದ ನೋಡಬಹುದು. ಇಲ್ಲಿಯ ಒಂಬತ್ತು ಪದ್ಯಗಳು (556–64) ಏಕಪ್ರಕಾರವಾಗಿ ಮುಕ್ತಪದಗ್ರಾಸಾಲಂಕಾರವನ್ನು ಹೊಂದಿವೆ ಮತ್ತು ಅವುಗಳ ಭಾಷೆ ಯಾವುದೇ ಚಂಪೂ ಕಾವ್ಯದಷ್ಟು ಕ್ಲಿಷ್ಟವೂ ಕೃತಕವೂ ಆಗಿದೆ. ಆದರೆ, ಇದೇ ಶಾಸನದಲ್ಲಿ ಬರುವ

> ಮತ್ತೆ ಕೃತಯುಗಮೆ ಬಂದಂ
> ದುತ್ತಮ ಪುರುಷರನೆ ಪಡೆವೊಡೆನಗೆ ದಲೀತಂ।
> ಬಿತ್ತೆಂದು ಕಾದಪಂ ಬಿದಿ
> ಬಿತ್ತರದಿಂ ಭರತ ರಾಜ ದಂಡಾಧಿಪನಂ॥

ಎಂಬ ಪದ್ಯ (569) ಉಕ್ತಿಯಲ್ಲಿ ಹೊಸತನವನ್ನು ವ್ಯಕ್ತಪಡಿಸುತ್ತದೆ. ಕೃತಯುಗ ಬಂದಾಗ, ಉತ್ತಮ ಪುರುಷರನ್ನು ಬೆಳಸುವುದಕ್ಕಾಗಿ ಇರಲಿ ಎಂದು ಸೃಷ್ಟಿಕರ್ತ ಕಲಿಯುಗದಲ್ಲಿ ಬೀಜವನ್ನು ಕಾಪಾಡಿದ ರೀತಿಯಲ್ಲಿ ಭರತ ದಂಡಾಧಿಪನನ್ನು ಕಾಪಾಡಿದ ಎಂಬ ಮಾತನ್ನು ಬರಿಯ ಚಮತ್ಕಾರವೆಂದು ಭಾವಿಸಿದರೆ ತಪ್ಪಾಗುತ್ತದೆ. ಇಲ್ಲಿ ಸ್ಪಷ್ಟ ವಾಗಿ ವ್ಯವಸಾಯದ ಪ್ರತಿಮೆ ಇದೆ. ಸುಗ್ಗಿಯ ಕಾಲದಲ್ಲಿ ಅತ್ಯುತ್ತಮ ಬೀಜಗಳನು ರೈತರು ಬಿತ್ತನೆಗಾಗಿ ಉಳಿಸಿಕೊಳ್ಳುತ್ತಾರೆ. ಭರತ ದಂಡಾಧೀಶನನ್ನು ಬಿತ್ತನೆಯ ಬೀಜಕ್ಕೆ ಹೋಲಿಸಿರುವುದು ಅವನ ವ್ಯಕ್ತಿತ್ವವನ್ನು ಉನ್ನತಿಗೇರಿಸಲು ಸಹಾಯಕ ವಾಗುವುದನ್ನು ಗಮನಿಸಬಹುದು. ಅವನು ಒಂದು ಗಟ್ಟಿ ಕಾಳು, ಮೀಸಲು ಧಾನ್ಯ, ವಿರಳ ವ್ಯಕ್ತಿ, ಆದರ್ಶ ಪುರುಷ ಎಂಬುದು ಸೊಗಸಾಗಿ ಸೂಚಿತವಾಗಿದೆ. ಅವನು ಸಂಕೇತಿಸುವ ಆದರ್ಶದ ಪರಂಪರೆ ಬೆಳೆಯುಬೇಕೆಂಬ ಹಾರೈಕೆಯೂ ಇಲ್ಲಿದೆ.

ಶಾಸನಗಳಲ್ಲಿ ಮತ್ತೆ ಮತ್ತೆ ಇಂತಹ ಸುಂದರ ಮುಕ್ತಕಗಳು ಕಾಣಸಿಕೊಳ್ಳುತ್ತವೆ. ಶಾಸನಗಳಲ್ಲಿ ಕಾವ್ಯಾಂಶ ಗೋಚರವಾಗುವುದು ಇಂತಹ ಮುಕ್ತಕಗಳಲ್ಲೇ ಎಂಬುದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಏಕೆಂದರೆ, ಕವಿಗೆ ಶಾಸನರಚನೆಯಲ್ಲಿ ಅನೇಕ ಮಿತಿಗಳಿರುತ್ತವೆ. ಅಲ್ಲಿ ಕೆಲವು ವಾಸ್ತವ ಸಂಗತಿಗಳನ್ನು ಹೇಳಬೇಕು; ಅನೇಕ ವ್ಯಕ್ತಿಗಳನ್ನು—ಇಷ್ಟವಿರಲಿ, ಇಲ್ಲದಿರಲಿ—ಹೊಗಳಬೇಕು. ರಾಜನ ವಂಶಾವಳಿ ಕೊಡಬೇಕು. ಹೊಲದ ಗಡಿಗಳನ್ನು ಪಟ್ಟಿಮಾಡಬೇಕು. ಶಾಸನೋಕ್ತ ದಾನವನ್ನು ಕಾಪಾಡಿದವರಿಗೆ ಏನೇನು ಪುಣ್ಯ ದೊರಕುತ್ತದೆ, ಹಾಳುಮಾಡಿದವರಿಗೆ ಏನೇನು ದುರ್ಗತಿ ಪ್ರಾಪ್ತವಾಗುತ್ತದೆ ಎಂಬುದನ್ನು ಕೊನೆಯಲ್ಲಿ ತರಬೇಕು. ಶಾಸನಕಾರ ಈ ನಿರ್ಬಂಧಗಳಿಗೆ ಒಳಪಟ್ಟೇ ತನ್ನ ಶಾಸನಪಾಠವನ್ನು ಸಿದ್ಧಪಡಿಸುತ್ತಾನೆ. ಇವುಗಳ ಮಧ್ಯೆ ಯಾವುದೋ ಅನುಭವ, ಏನೋ ಸುಂದರೋಕ್ತಿ ಅವನ ರಚನೆಯಲ್ಲಿ ಸುಳಿಯಬೇಕು. ಎಂದರೆ, ಕವಿಯ ಪ್ರತಿಭೆಯ ಸಂಪೂರ್ಣ ಆವಿಷ್ಕಾರಕ್ಕೆ ಶಾಸನವು ಸರಿಯಾದ ಜಾಗ ಎಂದು ಯಾರು ತಾನೇ ಹೇಳಲು ಸಾಧ್ಯ? ಆದರೂ ಅಲ್ಲಿ ಕಾಣಿಸಿಕೊಂಡಿರುವ ಕಾವ್ಯಕಳಪೆಯದೆಂದು ಹೇಳಲು ಸಾಧ್ಯವಿಲ್ಲ.

ಇದಕ್ಕೆ ಕೆಲವೇ ಉದಾಹರಣೆಗಳನ್ನು ನೋಡೋಣ. ಚಟ್ಟ ಎಂಬ ಹೆಸರಿನ ವ್ಯಕ್ತಿ ಕಷ್ಟದಲ್ಲಿದ್ದ ಅನೇಕರಿಗೆ ಸಹಾಯಮಾಡಿದ್ದನ್ನು ಮತ್ತು ದೇವಾಲಯವೊಂದನ್ನು ಕಟ್ಟಿಸಿದ್ದನ್ನು ಈ ಪದ್ಯ (806) ಹೊಗಳುತ್ತದೆ.

ಪಲರಂ ರಕ್ಷಿಸಿ ಮತ್ತಂ
ಪಲವಂ ನಡೆದೇಗುಲಂಗಳಂ ಮಾಡಿಸಿದಂ ।
ನೆಲನೆಲ್ಲಮಱಿಯೆ ಚಟ್ಟಂ
ನೆಲೆ ದೇಗುಲಮುಮನಿದೊಂದನೊಲ್ದೆತ್ತಿಸಿದಂ ॥

ಅವನು ಎರಡು ಬಗೆಯ ದೇವಾಲಯಗಳನ್ನು ನಿರ್ಮಿಸಿದ—ಒಂದು ಬಗೆಯವು ನಡೆದೇವಾಲಯಗಳು; ಇನ್ನೊಂದು ಬಗೆಯದು ನೆಲೆದೇಗುಲ. ಆ ನಡೆದೇಗುಲಗಳು ಯಾವೂ ಅಲ್ಲ—ಕಷ್ಟದಲ್ಲಿ ಸಿಲುಕಿ ಸೋತು ಬಿದ್ದುಹೋದವರಿಗೆ ರಕ್ಷಣೆ ಕೊಟ್ಟು ಅವರು ಮನುಷ್ಯರಂತೆ ತಲೆ ಎತ್ತಿ ಓಡಾಡುವ ಹಾಗೆ ಮಾಡಿದನಲ್ಲಾ ಆ ಜನರೇ ನಡೆದೇಗುಲಗಳು. ಇನ್ನೊಂದು ನೆಲೆದೇಗುಲ, ಅವನು ಹೊಸದಾಗಿ ಕಟ್ಟಿಸಿದ್ದು, ಕಲ್ಲಿನದು, ಸ್ಥಾವರ ಮಂದಿರ. ಈ ಕಾರ್ಯ ಎಲ್ಲರಿಗೂ ತಿಳಿದಂತೆ ನಡೆದದ್ದು ('ನೆಲನೆಲ್ಲಮಱಿಯೆ'); ಆದರೆ, ಅವನು ಯಾರಿಗೂ ತಿಳಿಯದಂತೆ ಮಾಡಿದ ಕಾರ್ಯವೆಂದರೆ ಜನೋಪಕಾರ ಎಂಬಲ್ಲಿನ ಧ್ವನಿಯೂ ಸ್ಪಷ್ಟವಾಗಿದೆ. ಇಲ್ಲಿ ಮನುಷ್ಯರನ್ನು ನಡೆದೇಗುಲಗಳೆಂದು ವರ್ಣಿಸಿ, ಅವನು ಮಾಡಿದ ಧರ್ಮಕಾರ್ಯಗಳಲ್ಲಿ ಅವನ ಸಾಮಾಜಿಕ ಸೇವೆಗೆ ಪ್ರಾಧಾನ್ಯ ಕೊಟ್ಟದ್ದರ ಔಚಿತ್ಯವನ್ನು ಗಮನಿಸಬೇಕು. ಈ ಸಂದರ್ಭದಲ್ಲಿ ಸಹಜವಾಗಿಯೇ ಬಸವಣ್ಣನವರ

ಉಳ್ಳವರು ಶಿವಾಲಯವ ಮಾಡುವರು,
ನಾನೇನ ಮಾಡುವೆ ಬಡವನಯ್ಯಾ !
ಎನ್ನ ಕಾಲೇ ಕಂಬ ದೇಹವೇ ದೇಗುಲ
ಸಿರ ಹೊನ್ನ ಕಳಸವಯ್ಯಾ.
ಕೂಡಲ ಸಂಗಮದೇವ ಕೇಳಯ್ಯಾ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ

ಎಂಬ ವಚನ ಜ್ಞಾಪಕಕ್ಕೆ ಬರುತ್ತದೆ. ಮನುಷ್ಯದೇಹವನ್ನು ಓಡಾಡುವ ದೇವಾಲಯ ವೆಂದು ಕಲ್ಪಿಸಿ, ಕಲ್ಲು ಮಣ್ಣಿನ ಸ್ಥಾವರ ದೇವಾಲಯವನ್ನು ಬಸವಣ್ಣನವರು ನಿರಾಕರಿಸಿದರು. ಆದರೆ ಮೇಲಿನ ಶಾಸನ ಪದ್ಯದಲ್ಲಿ, ಸ್ಥಾವರ ದೇವಾಲಯ ನಿರ್ಮಾಣವನ್ನು ಮಾಡುವುದರ ಜೊತೆಗೆ ಓಡಾಡುವ ದೇವಾಲಯಗಳನ್ನೂ ಚಟ್ಟ ನಿರ್ಮಿಸಿದ ಎಂಬ ಮಾತು ಅರ್ಥಪೂರ್ಣವಾಗುತ್ತದೆ. ಕ್ರಿ.ಶ. 1160 ರ ಈ ಶಾಸನವನ್ನು ಬರೆದ ಕವಿಯ ಮೇಲೆ ಅದೇ ಕಾಲದಲ್ಲಿದ್ದ ಬಸವಣ್ಣನವರ ಮೇಲಿನ ವಚನದ ಪ್ರಭಾವವಿದೆ ಎಂದು ಹೇಳುವುದು ಸ್ವಲ್ಪ ಸಾಹಸದ ಮಾತಾದರೂ, ಎರಡಕ್ಕೂ ಇರುವ ಹೋಲಿಕೆಯನ್ನು ಗುರುತಿಸದಿರುವುದು ಸಾಧ್ಯವೇ ಇಲ್ಲ.

ಕೆಲವು ಸಾರಿ ಕೇವಲ ಮಾತಿನ ಚಮತ್ಕಾರಕ್ಕಾಗಿ ಕೆಲವು ಪದ್ಯಗಳನ್ನು ಮೆಚ್ಚಿಕೊಳ್ಳುತ್ತೇವೆ. ಬ್ರಹ್ಮ ತೂಗಿ ನೋಡುವುದಕ್ಕಾಗಿ ಅಮರಾವತಿ ಮತ್ತು ಲೊಕ್ಕಿಗುಂಡಿ (ಲಕ್ಕುಂಡಿ)ಗಳನ್ನು ತಕ್ಕಡಿಯಲ್ಲಿ ಹಾಕಿದಾಗ, ಅಮರಾವತಿ ಮೇಲೆ ಉಳಿಯಿತು, ಲೊಕ್ಕಿಗುಂಡಿ ಭೂಮಿಯ ಮೇಲೆ ನೆಲಸಿತು ಎಂಬ ಮಾತಿನ ಮೂಲಕ ಸ್ವರ್ಗಕ್ಕಿಂತ ಲೊಕ್ಕಿಗುಂಡಿಯು ಹೆಚ್ಚು ವೈಭವದಿಂದ ಕೂಡಿದ ಪಟ್ಟಣವೆಂಬುದನ್ನು ಸೂಚಿಸುವುದು ಕವಿಯ ಉದ್ದೇಶ. (ಪದ್ಯ 264). ಈ ಪದ್ಯದ ಹೃದಯ, ಕೇವಲ ಅದರ ಉಕ್ತಿವೈಚಿತ್ರ್ಯ; ಅಷ್ಟೇ ಅದರ ಬೆಲೆಯೂ ಹೌದು. ಕೆಲವು ಸಾರಿ ಉಕ್ತಿವೈಚಿತ್ರ್ಯವೆಂದು ಕಂಡರೂ, ಅದು ರೂಪಕದ ಮಟ್ಟಕ್ಕೆ ಏರುವುದರಿಂದ ಒಳ್ಳೆಯ ಕಾವ್ಯವೂ ಆಗಬಲ್ಲುದು. ಇದಕ್ಕೆ ಒಳ್ಳೆಯ ಉದಾಹರಣೆಯೆಂದರೆ 902 ನೇ ಪದ್ಯ.

ನೆಲದೊಳ್ ಪೊಂಗಳನೇಕೆ ಪೂಳ್ವರೆನುತಂ ತಾಂ ಲುಬ್ಧರಂ ಮಾಣದಂ ।
ಡಲೆಯುತ್ತಿರ್ಪ ವಿವೇಕಿ ನಾಕಿ ಪಡೆದಾ ಸರ್ವಸ್ವಮಂ ಕೋರಮಂ ।
ಗಲದೊಳ್ ತನ್ನಯ ಜನ್ಮಭೂಮಿಯದಿಳಾ ವಿಖ್ಯಾತಮಪ್ಪಂತಿರಲ್ ॥
ಶಿಲೆಯೊಳ್ ಬಯ್ತನುಮೇಶ್ವರಾಲಯಕೃತಿವ್ಯಾಪಾರಪಾರಾಯಣಂ ॥

ತಾವು ಸಂಪಾದಿಸಿಟ್ಟ ಐಶ್ವರ್ಯವನ್ನು ನೆಲದಲ್ಲಿ ಹೂಳಿಡುತ್ತಿದ್ದ ಪದ್ಧತಿಯಿದ್ದ ಆ ಕಾಲದಲ್ಲಿ, ನಾಕಿ ಎಲ್ಲರಂತೆ ಹಾಗೆ ಮಾಡದೆ, ಅವನು 'ವಿವೇಕಿ'ಯಾದ್ದರಿಂದ ತನ್ನ ಸರ್ವಸ್ವವನ್ನೂ ದೇವಾಲಯದ ಶಿಲೆಯಲ್ಲಿ ಹೂತಿಟ್ಟ ಎಂಬ ಉಕ್ತಿ ಬಹಳ ಸುಂದರ ವಾಗಿದೆ. ಅವನು ತನ್ನ ಹಣದಿಂದ ಒಂದು ದೇವಾಲಯವನ್ನು ಕಟ್ಟಿಸಿದ ಎಂಬ ಸಂಗತಿಯನ್ನು ಹೇಳುವುದು ಪದ್ಯದ ಉದ್ದೇಶ. ಇಲ್ಲಿಯ 'ಉಮೇಶ್ವರಾಲಯ ಕೃತಿ ವ್ಯಾಪಾರ ಪಾರಾಯಣಂ' ಎಂಬ ಉಕ್ತಿಯನ್ನೂ ಗಮನಿಸಿ. ಉಳಿದವರು ಹಣವನ್ನು ಮಣ್ಣಲ್ಲಿ ಹೂತಿಟ್ಟು ಹಣ ಕಳೆದುಕೊಳ್ಳುತ್ತಾರೆ. ಇವನು 'ಶಿಲೆಯಲ್ಲಿ' ಹೂತಿಟ್ಟಿದ್ದರಿಂದ ಅದು

ಶಾಶ್ವತವಾಗಿ ಉಳಿಯಿತು. ಆ ಹಣ ಅವನಿಗೆ ಲಾಭವನ್ನೂ ತಂದಿದೆ: ಏಕೆಂದರೆ ಲೌಕಿಕವಾದ ಕೀರ್ತಿ, ಪಾರಮಾರ್ಥಿಕವಾದ ಪುಣ್ಯಗಳೆರಡನ್ನೂ ಅದು ಸಂಪಾದಿಸಿದೆ. ಇಟ್ಟ ಹಣ ಅವನಿಗೆ ಶತಗುಣವಾಗಿ ಸಹಸ್ರಗುಣವಾಗಿ ವರ್ಧಿಸಿದೆ.

ಕೆಲವು ಸಾರಿ ಸಮಕಾಲೀನ ಸಂಗತಿಗಳ ಹಿನ್ನೆಲೆ ತಿಳಿಯದಿದ್ದರೆ ಅನೇಕ ಪದ್ಯಗಳು ಅರ್ಥವಾಗುವುದೇ ಇಲ್ಲವೆಂಬುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು (ಪದ್ಯ 1555) ನೋಡಬಹುದು.

ಮೂಳೆಯ ಸನ್ನೆಗಾಳೆವಿಡಿಯಲ್ ನೊರೆ ನೆತ್ತರನೀಂಟಿ ಸೊಕ್ಕಿ ಕ
ಣ್ಣಾಲಿಯ ಮಾಲೆ ಸೂಡಿ ಬಲುಗಂಡದ ದಂಡೆಯನೊಪ್ಪೆ ಕಟ್ಟಿಕೊಂ
ಡಾಳಿಸಿಯುಟ್ಟು ಪಂದೊವಲನಾಹವದೊಳ್ ನಲಿದಾಡಿ ಪಾಡಿದರ್
ಸೂಳೆ ಮರುಳ್ಗಳುಗ್ಗಡಿಸಿ ಹೆಗ್ಗಡೆ ಬಾಳೆಗನಂಕಮಾಲೆಯುಂ ॥

ಬಾಳೆಗನು ಭಾಗವಹಿಸಿದ ಯುದ್ಧರಂಗದ ವರ್ಣನೆಯಲ್ಲಿ ಸಂಪ್ರದಾಯದ ಅನುಸರಣೆ ಇದೆ. ರಕ್ತಪಿಪಾಸುಗಳಾದ ಮರುಳುಗಳನ್ನು ತರುವುದು ಒಂದು ಪದ್ಧತಿ. ಇಲ್ಲಿ, 'ಸೂಳೆಮರುಳು'ಗಳು ಬಂದು ಬಾಳೆಗನ ಶೌರ್ಯಸಾಹಸಗಳನ್ನು ಕುರಿತು ಹಾಡಿದುವು ಎಂದು ಕವಿ ಚಮತ್ಕಾರವಾಗಿ ವರ್ಣಿಸುತ್ತಾನೆ. ದೇವದಾಸಿಯರ ಬಗ್ಗೆ ಕೆಲವು ಸಂಗತಿಗಳು ತಿಳಿಯದಿದ್ದರೆ ಇಡೀ ರೂಪಕ ಅರ್ಥವಾಗುವುದು ಕಷ್ಟ. ದೇವರ ಸೇವೆಗಾಗಿ ನಿಯುಕ್ತರಾಗಿದ್ದವರು ದೇವದಾಸಿಯರು. ಇವರು ಹಾಡು, ನರ್ತನಗಳ ಮೂಲಕ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ದೇವರಿಗೆ ಪೂಜೆ ಮುಗಿದು ಮುಕ್ತಾಯದ ಘಟ್ಟದಲ್ಲಿರುವಾಗ 'ಸನ್ನೆಗಾಳೆ'ಯನ್ನು ನುಡಿಸುತ್ತಿದ್ದರು*. ಇದು ದೇವದಾಸಿಯರು ಬರಲು ಸೂಚನೆ. ಕುಡಿದು ಮತ್ತರಾಗಿದ್ದ ಅವರು ಹಾರ ದಂಡೆಗಳಿಂದ ಅಲಂಕರಿಸಿಕೊಂಡು ಬಂದು ದೇವಾಲಯದ ಹೊರಗೆ ನಿಂತು ಹಾಡುತ್ತಿದ್ದರು. ಇಲ್ಲಿ ದೇವದಾಸಿ ('ಸೂಳೆ') ಯರ ಚಿತ್ರವನ್ನು ಹೆಣ್ಣು ಮರುಳುಗಳಿಗೆ ಸಮೀಕರಿಸಿದ್ದಾನೆ. ಇಂತಹ ವರ್ಣನೆಗಳಿಂದ ರಣರಂಗದ ಯಾವುದೇ ಭೀಕರಾನುಭವವೂ ವ್ಯಕ್ತವಾಗುವುದಿಲ್ಲವೆಂಬುದು ಸ್ಪಷ್ಟವಾಗಿದೆ. ಹೀಗಾಗಿ ಈ ಪದ್ಯ ಮಾತಿನ ಮಟ್ಟದಲ್ಲೇ ನಿಂತುಬಿಡುತ್ತದೆ. ಆದರೆ, ಇನ್ನು ಕೆಲವು ಪದ್ಯಗಳಲ್ಲಿ ಯುದ್ಧದ ಚಿತ್ರವನ್ನು ಓದುಗರ ಮುಂದೆ ತಂದು ನಿಲ್ಲಿಸುವಂತಹ ಉದಾಹರಣೆಗಳೂ ಇವೆ. ಪದ್ಯ 1542 ನ್ನು ಆ ದೃಷ್ಟಿಯಿಂದ ನೋಡಬಹುದು. ಅಲ್ಲಿ ವೀರ ಶತ್ರುಗಳ ಶಿರವನ್ನು 'ಪೊಡೆಸೆಂಡಾ'ಗಿ ಮಾಡಿಕೊಂಡು ಆಡಿದನು ಎಂಬಲ್ಲಿ ಅವನು ಶತ್ರುಗಳನ್ನು ಲೀಲಾಜಾಲವಾಗಿ ನಿರ್ಭಯವಾಗಿ ಎದುರಿಸಿದನೆಂಬುದು ಧ್ವನಿತವಾಗುತ್ತದೆ. ಪದ್ಯದ ಕೊನೆಯಲ್ಲಿ ಬರುವ 'ಪಗೆಯುಂ ಪರ್ದಿಂಗೆ ಬರ್ದಿಕ್ಕಿದಂ' ಎಂಬುದು ಸಾರ್ಥಕವಾದ ಪದಪ್ರಯೋಗವೆಂಬುದರಲ್ಲಿ ಅನುಮಾನವಿಲ್ಲ.

---

* ಸಿದ್ದಾಪುರ ತಾಲ್ಲೂಕಿನ ಭುವನಗಿರಿಯ ದೇವಾಲಯದ ದೇವದಾಸಿಯಿಂದ ವಿಷಯ ಸಂಗ್ರಹಿಸುವಾಗ, 'ಸನ್ನೆ ಗಂಟೆ'ಯ ವಿಷಯ ನನಗೆ ತಿಳಿಯಿತು. ಪೂಜೆ ಮುಕ್ತಾಯದ ಘಟ್ಟದಲ್ಲಿರುವಾಗ ಪೂಜಾರಿ ಸನ್ನೆ ಗಂಟೆ ಬಾರಿಸುತ್ತಾನೆ. ದೇವದಾಸಿ ಬರಬೇಕು ಎಂಬುದರ ಸಂಜ್ಞೆ ಅಥವಾ ಸನ್ನೆ ಇದು. ಆಗ ಆಕೆ ಬಂದು ಚಾಮರವನ್ನು ಬೀಸಿ ಸೇವೆ ಸಲ್ಲಿಸಬೇಕು. ಹಾಗೆ ಸಂಜ್ಞೆ ಕೊಡುವಾಗ. ಕಹಳೆಯನ್ನೂ ನುಡಿಸುತ್ತಿದ್ದರು ಎಂಬುದು ಮೇಲಿನ ಪದ್ಯದಿಂದ ಸೂಚಿತವಾಗುತ್ತದೆ.

ಶಾಸನಕಾರರು ಚಂಪೂ ಕವಿಗಳ ರೀತಿಯಲ್ಲೇ ಹೆಚ್ಚಾಗಿ ಸಂಸ್ಕೃತ ಪದಗಳಿಗೆ ಮಾರುಹೋಗಿದ್ದಾರೆ. ಆದರೆ ಇದು ನಿಯಮವೇನೂ ಅಲ್ಲ. ತೀರ ಸರಳವಾದ ಮಾತಿನಲ್ಲೇ ಒಬ್ಬ ವ್ಯಕ್ತಿಯ ಪರಿಚಯವನ್ನೋ ಒಂದು ಇಡೀ ಸನ್ನಿವೇಶವನ್ನೋ ಕಟ್ಟಿಕೊಡಬಲ್ಲರು. ಮಲಧಾರಿದೇವ (ಹೆಸರನ್ನು ಗಮನಿಸಿ) ಎಂಬ ಜೈನಮುನಿಯ ಕಠೋರ ತಪಸ್ಸಿನ ವರ್ಣನೆ ಇದಕ್ಕೆ ಉತ್ತಮ ಉದಾಹರಣೆ (ಪದ್ಯ 412)

> ನೆಱೆಯೆ ತನುತ್ರಮಿಕ್ಕಿದವೊಲಿರ್ದ ಮಲಂ ತಿನೆ ಮೆಯ್ಯನೊರ್ಮೆಯುಂ
> ತುಱಿಸುವುದಿಲ್ಲ, ನಿದ್ದೆವರೆ ಮುಗ್ಗುಲನಿಕ್ಕುವುದಿಲ್ಲ, ಬಾಗಿಲಂ
> ಕಿಱುತೆಱೆಯೆಂಬುದಿಲ್ಲುಗುಟ್ಟುವುದಿಲ್ಲ ಮಲಂಗುವುದಿಲ್ಲಹೀಂದ್ರನುಂ
> ನೆಱೆವನೆ ಬಣ್ಣಿಸಲ್ ಗುಣಗಣಾವಳಿಯಂ ಮಳಧಾರಿದೇವರಾ ॥

ಎಂದೂ ಸ್ನಾನವನ್ನು ಮಾಡದ ಅವರ ಮೈಮೇಲೆ ಮಲವು ಕವಚದಂತೆ ಅಂಟಿಕೊಂಡಿದ್ದರೂ ಒಂದು ಸಾರಿಯೂ ತುರಿಸುತ್ತಿರಲಿಲ್ಲ. ನಿದ್ದೆ ಬಂದರೂ ಮಗ್ಗುಲಾಗುವುದಿಲ್ಲ. ಸದಾ ಒಳಗೇ ವ್ರತನಿಷ್ಠರಾಗಿರುತ್ತಿದ್ದ ಆ ಜೈನಮುನಿಗಳ ಗುಣಗಣವನ್ನು ಆದಿಶೇಷನಿಗೂ ಹೊಗಳಲು ಸಾಧ್ಯವಿಲ್ಲ ಎಂಬ ಉದ್ಗಾರ ಕೊನೆಯಲ್ಲಿ ಬಂದು ಸಾರ್ಥಕವಾಗುತ್ತದೆ. ಇಡೀ ಪದ್ಯದಲ್ಲಿ ಸಂಸ್ಕೃತ ಪದಗಳ ಬಳಕೆ ಮೂರು ಮಾತ್ರ. ಹೇಳಿರುವ ರೀತಿಯೂ ಸರಳ. ಆದರೆ, ಜೈನ ವ್ರತ ನಿಷ್ಠೆಯ ಜೀವಂತ ಪ್ರತೀಕದಂತಿದ್ದ ಮಲಧಾರಿದೇವ ಮುನಿಗಳ ವ್ಯಕ್ತಿಚಿತ್ರವನ್ನು ಈ ಪದ್ಯ ಪರಿಣಾಮಕಾರಿಯಾಗಿ ನಮ್ಮ ಮುಂದಿಡುತ್ತದೆ.

ಇಂತಹ ಅನೇಕ ಸೊಗಸಾದ ವ್ಯಕ್ತಿಚಿತ್ರಗಳು ನಮಗೆ ಶಾಸನಗಳಲ್ಲಿ ದೊರಕುತ್ತವೆ. ಪುರುಷರಂತೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿ 'ರಣಭೈರವಿ' ಎನ್ನಿಸಿಕೊಂಡಿದ್ದ ಅಕ್ಕಾದೇವಿಯ ಚಿತ್ರಣವನ್ನಾಗಲಿ (ಪದ್ಯ 42–4), ಅದ್ವೈತಿ ಗುಣಗಳ್ಳ ಮುನಿಯ ಚಿತ್ರಣವನ್ನಾಗಲಿ (ಪದ್ಯ 145–150), ಉದಾರಿ ಆದಿಗೌಂಡನ ಚಿತ್ರಣವನ್ನಾಗಲಿ (ಪದ್ಯ 1290ಅ–1292) ಇಲ್ಲಿ ಉದಾಹರಿಸಬಹುದು. "ಪರಿಪೂರ್ಣ ಜ್ಯೋತಿ ನೀನಾಗಿರೆ ಬಿಡುವಳೆ ಪೇೞ್ ಮುಕ್ತಿ ನಿನ್ನಂ ಮುನೀಂದ್ರಾ" ಎನ್ನುವ ಮಾತು ಆ ಮುನಿ ಆಧ್ಯಾತ್ಮಿಕವಾಗಿ ಏರಿದ್ದ ಔನ್ನತ್ಯವನ್ನು ಸಂಗ್ರಹವಾಗಿ ಧ್ವನಿಸುತ್ತದೆ. 'ಹಸಿದರ ಮೊಗಮಂ ನೋಡಂ' ಎಂದು ಆದಿಗೌಂಡನನ್ನು ಒಂದು ಪದ್ಯವು ವರ್ಣಿಸುತ್ತದೆ. ಅವನ ಅನ್ನದಾನ ಕ್ಷಾಮಕಾಲಕ್ಕೂ ನಿಲ್ಲುತ್ತಿರಲಿಲ್ಲವೆಂದೂ, ಕೆರೆ ಕಟ್ಟಿಸುವುದು ಮುಂತಾದುವನ್ನು ಬಿಟ್ಟರೆ ಅವನಿಗೆ ಬೇರೆ ಉದ್ಯೋಗವಿರಲಿಲ್ಲವೆಂದೂ ಸ್ವಲ್ಪ ಉತ್ಪ್ರೇಕ್ಷೆಯ ಮಾತುಗಳು ಬರುವುದುಂಟು. ಆದರೆ ಈ ಮಾತುಗಳ ಹಿಂದಿನ ಉದ್ದೇಶ ಏನೆಂಬುದು ಓದುಗರಿಗೆ ಮನದಟ್ಟಾಗುತ್ತದೆ. ಕೆಲವು ಶಾಸನ ಕವಿಗಳು ಹೊಗಳುಭಟ್ಟತನದ ಕೆಲಸವನ್ನೂ ಮಾಡಿದ್ದಾರೆ. ಎಲ್ಲವೂ ಇದೇ ರೀತಿಯವೆಂದು ಭಾವಿಸುವುದು ತಪ್ಪಾಗುತ್ತದೆ. ತಾವು ಯಾರನ್ನು ಕುರಿತು ಕೃತಿರಚನೆ ಮಾಡುತ್ತಿರುವರೋ ಆ ವ್ಯಕ್ತಿಯ ಅಸಮ

ವ್ಯಕ್ತಿತ್ವಕ್ಕೆ ಸದ್ಗುಣಗಳಿಗೆ ಮನಸೋತು. ಆ ಅನುಭವವನ್ನು ಶಾಸನಗಳಲ್ಲಿ ತಂದಿರುವುದಕ್ಕೆ ಮೇಲಿನ ನಿದರ್ಶನಗಳೇ ಸಾಕು.

(ಶಿಲಾ) ಶಾಸನಗಳು ಬಹಿರಂಗ ದಾಖಲೆಗಳು : ಇಷ್ಟವಿದ್ದವರು ಯಾರಾದರೂ ಆಗಲಿ ಯಾವಾಗ ಬೇಕಾದರೂ ಅವನ್ನು ಓದಬಹುದು. ಸದಾ ತೆರೆದ ಪುಸ್ತಕಗಳಂತಿದ್ದ ಅವನ್ನು ಜಾತಿ, ಮತ, ವರ್ಗಗಳ ಭೇದವಿಲ್ಲದೆ ಜನ ಓದುತ್ತಿದ್ದರು, ಮತ್ತು ಕುತೂಹಲಿಗಳಾದ ಇತರ ಅನಕ್ಷರಸ್ಥರಿಗೆ ವಿವರಿಸಿ ಹೇಳುತ್ತಿದ್ದರು. ಈಗ ಕಲ್ಲಿನ ಮೇಲಿನ ಶಾಸನಗಳು ಶಾಸನ ತಜ್ಞರನ್ನು ಬಿಟ್ಟರೆ ಉಳಿದವರಿಗೆ ಮುಚ್ಚಿಟ್ಟ ಪುಸ್ತಕಗಳು ನಿಜ. ಆದರೆ ಅವನ್ನು ಶಿಲೆಯ ಮೇಲೆ ಬರೆಯಿಸಿ ಸಾರ್ವಜನಿಕ ಪ್ರದೇಶದಲ್ಲಿ ಹಾಕಿಸಿದಂದಿನಿಂದ ಮುಂದಿನ ಅನೇಕ ಶತಮಾನಗಳವರೆಗೆ ಅವು ನಾವು ತಿಳಿದಿರುವುದಕ್ಕಿಂತ ಎಷ್ಟೋ ಹೆಚ್ಚಿನ ಜನಕ್ಕೆ ಮುಟ್ಟುತ್ತಿದ್ದುವು. ತಿಳಿದವರಂತೆಯೇ ತಿಳಿಯದವರನ್ನೂ ತಲಪುತ್ತಿದ್ದುವು. ಈ ಹಿನ್ನೆಲೆಯಲ್ಲಿ ಅವುಗಳಲ್ಲಿ ವ್ಯಕ್ತವಾಗುವ ಕಾವ್ಯಗುಣವಾಗಲಿ ಸಾಮಾಜಿಕ ವಿಡಂಬನೆಯಾಗಲಿ ಹೆಚ್ಚು ಗಮನಾರ್ಹವಾಗುತ್ತವೆ. ಹತ್ತನೆಯ ಶತಮಾನದ ಶಾಸನವೊಂದರಲ್ಲಿ ಬರುವ (ಪದ್ಯ 32) ಸಮಕಾಲೀನ ('ಈಗಡಿನ') ರಾಜರ. ವಿಡಂಬನೆಯನ್ನು ನೋಡಬಹುದು:

> ಪುಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆ ಮಂತಣಮನ್ಯನಾರಿಗಾ
> ಟಿಸುವುದೆ ಚಿತ್ತಮೀಯದುದೆ ಬಿನ್ನಣಮಾರುಮನೆಯ್ದೆ ಕೂರ್ತು ಬಂ
> ಚಿಸುವುದೆ ಕಲ್ತ ಕಲ್ಪಿಯೆನೆ ಮತ್ತವರಂ ಪೆಸರ್ಗೊಂಡದೆಂತು ಪೋ
> ಲಿಸುವುದೊ ಪೇಟಿಮೀಗಡಿನ ರಾಜತನೂಜರೊಳಿಂದ್ರ ರಾಜನಂ ॥

ಇಲ್ಲಿ ಇಂದ್ರ ರಾಜನನ್ನು ಹೊಗಳುವ ನೆಪದಲ್ಲಿ ಇತರ ರಾಜರನ್ನು ಕವಿ ವ್ಯಂಗ್ಯಕ್ಕೆ ಗುರಿಮಾಡುತ್ತಾನೆ. ಅವರು ಸುಳ್ಳು ಹೇಳುವುದೇ ಅವರಿಗೆ ಸಹಜವಂತೆ. ದಾನ ಕೊಟ್ಟು ಮತ್ತೆ ಹಿಂದಕ್ಕೆ ಕಿತ್ತುಕೊಳ್ಳುವುದೇ ಅವರ ಮಂತ್ರಾಲೋಚನೆ. ಮುಂದುವರಿದು, ವಂಚನೆಯೇ ಅವರು ಕಲಿತ ವಿದ್ಯೆಯೆಂದು ಹೇಳುವಾಗ ಮಾತು ಹರಿತವಾಗುತ್ತದೆ, ಭಾಷೆ ಖಡ್ಗವಾಗುತ್ತದೆ. ಅನಂತಪಾಳನನ್ನು ಹೊಗಳುವ ನೆಪದಲ್ಲಿ ಒಂದು ಶಾಸನ ದಂಡನಾಯಕ ಅಧಿಕಾರಿಗಳನ್ನು ಟೀಕಿಸುತ್ತದೆ (ಪದ್ಯ 358. —"ಅವಸರವಾಗೆ ಪಾರ್ದು ಕಿವಿವಚ್ಚುವ, ಸಂಗರವಾಗೆ ನೋಡಿ ಬೆರ್ಚುವ, ಪತಿಯರ್ಥಮಂ ಕಳಲೊಡರ್ಚುವ ಮುತ್ತಿನ ದಂಡನಾಯಕರ್..."). ಶಾಸನಗಳ ಟೀಕೆಯ ಗದೆಯಿಂದ ಸನ್ಯಾಸಿಗಳೂ ತಪ್ಪಿಸಿಕೊಂಡಿಲ್ಲ. ಭಕ್ತಾದಿಗಳು ಕೊಟ್ಟ ಹಣಕಾಸನ್ನೆಲ್ಲ ತಮ್ಮ ಜಡೆಗಳಲ್ಲಿಟ್ಟುಕೊಂಡು 'ಮಿಂಡಿದೊತ್ತು' (ಮಿಂಡೆ ತೊತ್ತು)ಗಳಿಗೆ ಕೊಡುತ್ತಿದ್ದ 'ತುಡುಗುಣಿ ಗೊರವ'ರನ್ನು ಒಂದು ಶಾಸನ ಕಟುವಾಗಿ ಟೀಕಿಸಿದೆ (ಪದ್ಯ 638). ಇಂತಹ ವಿಡಂಬನೆಗಳಿಗೆ ಮನಸ್ಸನ್ನು ಚುಚ್ಚುವ, ಇತರರನ್ನು ನೋಯಿಸುವ ಉದ್ದೇಶಗಳಿರಲಿಲ್ಲವೆಂದೇನೂ ಹೇಳಬೇಕಾಗಿಲ್ಲ. ಇದರ ಜೊತೆಗೆ ಸಮಾಜವನ್ನು ತಿದ್ದುವ, ರೂಪಿಸುವ, ಸಾಂಪ್ರದಾಯಿಕ ಜೀವನ ಮೌಲ್ಯಗಳಿಗೆ ಚ್ಯುತಿ ಬಾರದಂತೆ ನೋಡಿಕೊಳ್ಳುವ ಒಂದು ಜವಾಬ್ದಾರಿಯನ್ನೂ ಶಾಸನಗಳು ಹೊತ್ತಿವೆ. ಹೇಡಿಗಳು, ಜಿಪುಣರು, ಅರಸಿಕರು,

ಧೂರ್ತರು, ಸುಳ್ಳುಗಾರರು, ಕಪಟಿ ವ್ಯಾಪಾರಿಗಳು, ಕಾಮುಕರು, ಅಧಿಕಾರ ಪಿಪಾಸುಗಳು ಮುಂತಾದ ಎಲ್ಲ ಬಗೆಯ ವ್ಯಕ್ತಿಗಳೂ ಶಾಸನಗಳಲ್ಲಿ ವಿಡಂಬನೆಗೆ, ಕೆಲವು ಸಾರಿ ನೇರ ಕಟುನಿಂದೆಗೆ ಗುರಿಯಾಗಿದ್ದಾರೆ. ಒಂದು ಊರಿನ ಜನತೆಯ ನೀತಿ ನಡಾವಳಿಗಳನ್ನು ನಿಯಂತ್ರಿಸಿ ಅವರಲ್ಲಿ ಹಿತಾಹಿತಗಳ ಪುಣ್ಯಪಾಪಗಳ ಪ್ರಜ್ಞೆಯನ್ನು ಮೂಡಿಸುವುದರಲ್ಲಿ ಅಲ್ಲಿಯ ಕತೆ, ಪುರಾಣ, ಗಾದೆ, ಪಾರಂಪಾರಿಕವಾದ ಸಂಪ್ರದಾಯಗಳು, ನಂಬಿಕೆ ಗಳಂತೆಯೇ ಅಲ್ಲಿಯ ಶಾಸನಗಳದ್ದೂ ಪಾತ್ರವಿದೆಯೆಂಬುದನ್ನು ಮರೆಯಬಾರದು. ಶಾಸನಗಳು ಜನಜೀವನದ ಒಂದು ಭಾಗವಾಗಿದ್ದು ಆ ಜನಜೀವನವನ್ನು ಪ್ರತಿಫಲಿಸಿವೆ ಮತ್ತು ತಿದ್ದಿವೆ. ಕರ್ನಾಟಕದ ಜನಜೀವನವನ್ನರಿಯ ಬಯಸುವವರಿಗೆ ಇಂದಿಗೂ ಅವು ಅತ್ಯುತ್ತಮ ಆಕರಗಳಾಗಿವೆ. ಅವರ ಭೌತಿಕ ಜೀವನದ ವಿವರಗಳನ್ನು ಅವು ತಿಳಿಸಿ ಕೊಡುವುದಲ್ಲದೆ, ಅವರ ಮಾನಸಿಕ ಆಧ್ಯಾತ್ಮಿಕ ಜೀವನದ ಚಿತ್ರವನ್ನೂ ಅವು ಕೊಡು ತ್ತವೆ.

ಶಾಸನಗಳನ್ನು ಸಾಹಿತ್ಯವಾಗಿ ನೋಡುವ ಅಥವಾ ಅವುಗಳಲ್ಲಿ ಸಾಹಿತ್ಯವನ್ನು ಕಾಣುವ ಪ್ರಯತ್ನದ ಔಚಿತ್ಯವನ್ನು ಕೆಲವರು ಪ್ರಶ್ನಿಸಬಹುದು. ಅವು ಸಾಹಿತ್ಯವಾಗಲಿ ಎಂಬ ಉದ್ದೇಶದಿಂದ ಹುಟ್ಟಲಿಲ್ಲವೆಂಬ ಸಂಗತಿಯನ್ನು ನಾವು ನೋಡಿದ್ದೇವೆ. ಅವು ಗಳನ್ನು ಸಾಹಿತ್ಯ ವಿಮರ್ಶೆಯ ಸೂತ್ರಗಳಿಂದ ವಿಮರ್ಶಿಸ ಹೊರಟರೆ ಅಂತಹ ವಿಮರ್ಶೆ ಯನ್ನು ತಡೆದುಕೊಳ್ಳುವುದು ಅವುಗಳಿಗೆ ಕಷ್ಟವಾದೀತು. ಜೀವನದ ಅತ್ಯುತ್ತಮವೂ ಅತ್ಯುನ್ನತವೂ ನಿಗೂಢವೂ ಜಟಿಲವೂ ಆದ ಅನುಭವಗಳನ್ನು ಅವು ಚಿತ್ರಿಸಿವೆಯೇ ಎಂಬ ಪ್ರಶ್ನೆಗೆ ಉತ್ತರವನ್ನು ಕೊಡುವುದು ಕಷ್ಟವಾದೀತು. ಕೆಲವು ಶಾಸನಗಳಲ್ಲಾದರೂ ಅಂತಹ ಅನುಭವಗಳಿಗೆ ಅಭಿವ್ಯಕ್ತಿ ದೊರಕಿದೆಯೆಂಬುದರ ಬಗ್ಗೆ ಅನುಮಾನವಿಲ್ಲ. ಬೊಪ್ಪಣನ ಗೊಮ್ಮಟ ಸ್ತುತಿಯಂಥ ಕೃತಿಗಳು ಶ್ರೇಷ್ಠ ಕಾವ್ಯವಲ್ಲದಿದ್ದರೆ ಇನ್ನಾವುದು ಮತ್ತೆ ಶ್ರೇಷ್ಠ ಕಾವ್ಯವೆಂದು ಕೇಳಬೇಕಾಗುತ್ತದೆ. ಆದರೆ, ಶಾಸನಗಳನ್ನು ಕಾವ್ಯವೆಂದು ಓದಬೇಕೆಂದು ನಾನು ಇಲ್ಲಿ ಸೂಚಿಸುತ್ತಿಲ್ಲ. ಹಾಗೆ ಸೂಚಿಸುವುದೂ ಒಂದೇ, ಪಂಪ ಭಾರತದಂತಹ ಕೃತಿಗಳನ್ನು ಇತಿಹಾಸವೆಂದು ಓದಬೇಕೆಂದು ಸೂಚಿಸುವುದೂ ಒಂದೇ. ಶಾಸನಗಳನ್ನು ಶಾಸನಗಳಾಗಿಯೇ ಅಭ್ಯಾಸ ಮಾಡಬೇಕು, ಪಂಪ ಭಾರತವನ್ನು ಕಾವ್ಯ ವಾಗಿಯೇ ಅಭ್ಯಾಸ ಮಾಡಬೇಕು. ಆದರೆ, ಶಾಸನಗಳನ್ನು ಓದಿದಾಗ ಆಗುವ ಅನುಭವ ವನ್ನೂ, ಅವುಗಳಲ್ಲಿಯ ಕಾವ್ಯತ್ವವನ್ನೂ ಗುರುತಿಸುವ ಅಗತ್ಯದ ಕಡೆ ಗಮನ ಸೆಳೆಯು ವುದು ನನ್ನ ಮುಖ್ಯ ಉದ್ದೇಶ. ಶಾಸನಗಳು ನೀರಸವಾಗಿ ಸಂಗತಿಗಳನ್ನು ಪಟ್ಟಿಮಾಡಿ ಕೊಡುವುದರಲ್ಲೇ ತೃಪ್ತವಾಗಿಲ್ಲ. ಅವು ಓದುಗರ ಹೃದಯಗಳಲ್ಲಿ ಶೌರ್ಯ, ಉತ್ಸಾಹ, ನಿರಾಸೆ, ತೀವ್ರ ವೈರಾಗ್ಯ, ಉತ್ಸಾಹ, ಜೀವನ ಪ್ರೇಮ, ವಿನೋದ ಮುಂತಾದ ನೂರಾರು ಅನುಭವಗಳ ತೆರೆಯೆಬ್ಬಿಸಬಲ್ಲುವು. ಜೀವನಕ್ಕೆ ನೇರವಾಗಿ ಸಂಬಂಧಿಸಿದ ಅವು ಜನಜೀವನ ವನ್ನು ತಿದ್ದುವುದರಲ್ಲಿ ವಹಿಸಿರುವ ಪಾತ್ರ ಮಹತ್ವದ್ದೆಂಬುದನ್ನು ಗುರುತಿಸುವ ಕಾಲ ಬಂದಿದೆ. ಸಾಹಿತ್ಯದ ವಿದ್ಯಾರ್ಥಿಗಳು ಗಂಭೀರವಾಗಿ ಲಕ್ಷಿಸಬೇಕಾದ ಶಾಸನ ಸಂಪತ್ತು ಇನ್ನೂ ಮೂಲೆಗುಂಪಾಗಿ ಉಳಿದಿರುವುದು ನಮ್ಮ ದುರದೃಷ್ಟ. ಶಾಸನಗಳನ್ನು ಅಲಕ್ಷಿ

ಸುವುದೆಂದರೆ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಅಲಕ್ಷಿಸಿದಂತೆಯೇ ಎಂಬುದರ ಬಗ್ಗೆ ಉತ್ಪ್ರೇಕ್ಷೆಯೇನೂ ಇಲ್ಲ.

ಈ ಪುಸ್ತಕದ ಅಚ್ಚಿನ ಪ್ರತಿಯನ್ನು ಸಿದ್ಧಪಡಿಸುವಲ್ಲಿ, ಕರಡುಗಳನ್ನು ತಿದ್ದುವುದರಲ್ಲಿ ಅನೇಕ ಬಗೆಯಾದ ಸಹಾಯವನ್ನು ನೀಡಿರುವ ಎಸ್. ಶಿವಣ್ಣ, ಪಿ. ವಿ. ನಾರಾಯಣ, ಆರ್. ಶೇಷಶಾಸ್ತ್ರಿ ಮತ್ತು ಕೆ. ಪಿ. ಪುರುಷೋತ್ತಮ ಇವರಿಗೆ ನಾನು ಬಹುವಾಗಿ ಕೃತಜ್ಞನಾಗಿದ್ದೇನೆ.

**ಎಂ. ಚಿದಾನಂದಮೂರ್ತಿ**

# ಶಾಸನ ಪದ್ಯ ಮಂಜರಿ

## 1 ಶ್ರವಣಬೆಳ್ಗೊಳ 27 [ಸು. 700]

ಇದರಲ್ಲಿ ಮಾಸೇನರು ನೋಂತು ಸ್ವರ್ಗಕೆ ಹೋದರೆಂದು ಹೇಳಿದೆ.

ಮಾಸೇನರ್ ಪರಮಪ್ರಭಾವಋಷಿಯರ್ ಕಟ್ವಿಪ್ಪಿನಾ ವೆಟ್ಟದುಳ್।
ಶ್ರೀಸಂಘಂಗಳ ಪೇಟ್ದಿ ಸಿದ್ಧಸಮಯಂ ತಪ್ಪಾದೆ ನೋಂತಿಂಬಿನಿನ್॥
ಪ್ರಾಸಾದಾಂತರಮಾನ್ ವಿಚಿತ್ರಕನಕಪ್ರಜ್ವಲ್ಯದಿನ್ ಮಿಕ್ಕುದಾನ್।
ಸಾಸಿರ್ವರ್ ವರಪೂಜೆದಂದುಯೆ ಅವರ್ ಸ್ವರ್ಗಾಗ್ರಮಾನೇಱಿದಾರ್॥1॥

## 2 ಶ್ರವಣಬೆಳ್ಗೊಳ 76 [ಸು. 700]

ಇದರಲ್ಲಿ ಸಸಿಮತಿಗಂತಿಯರು ಬೆಳ್ಗೊಳದಲ್ಲಿ ಮುಡಿಪಿದಂತೆ ಹೇಳಿದೆ.

ನೆಱೆದಾದ ವ್ರತಶೀಲನೋನ್ಪಿಗುಣದಿಂ ಸ್ವಾಧ್ಯಾಯಸಂಪತ್ತಿನಿಂ।
ಕಱೆಯಿಲ್ಲಲ್ತಪಧರ್ಮದಾ ಸಸಿಮತಿಶ್ರೀಗಂತಿಯರ್ ವಂದು ಮೇಲ್॥
ಅಱಿದಾಯುಷ್ಯಮನೆಂತು ನೋಡೆನಗೆ ತಾನಿಂತೆಂದು ಕಟ್ವಿಪ್ಪಿನುಳ್।
ತೊಱೆದಾರಾಧನೆ ನೋಂತು ತೀರ್ಥಗಿರಿಮೇಲ್ ಸ್ವರ್ಗಾಲಯಕ್ಕೇಱಿದಾರ್॥2॥

## 3 ಶ್ರವಣಬೆಳ್ಗೊಳ 88 [ಸು. 700]

ಇದರಲ್ಲಿ ನಂದಿಸೇನಮುನಿ ಮುಡಿಪಿದಂತೆ ಹೇಳಿದೆ.

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜಿವೋಲ್ ಮಂಜುವೋಲ್ ತೋಱಿ ಬೇಗಂ।
ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗಂ॥
ಪರಮಾರ್ಥಂ ಮೆಚ್ಚೆನಾನೀ ಧರಣಿಯುಳಿರವಾನೆಂದು ಸನ್ಯಾಸನಂಗೆ।
ಯ್ದುರುಸತ್ವನ್ ನಂದಿಸೇನಪ್ರವರಮುನಿವರನ್ ದೇವಲೋಕಕ್ಕೆ ಸಂದಾನ್॥3॥

### 4 ಬಾದಾಮಿಯ ಶಾಸನ [ಸು. 700]

(ಇಂಡಿಯನ್ ಆಂಟಿಕ್ವರಿ X, 61)

ಇದರಲ್ಲಿ ಕಲಿಯುಗವಿಪರೀತನ್ ಎಂಬ ಬಿರುದುಳ್ಳ ಕಪ್ಪೆ ಅರಭಟ್ಟನ ಸ್ತುತಿ ಇದೆ.

ಸಾಧುಗೆ ಸಾಧು ಮಾಧುರ್ಯನ್ಗೆ ಮಾಧುರ್ಯಂ। ಬಾಧಿಪ್ಪ ಕಲಿಗೆ ಕಲಿಯುಗ।
ವಿಪರೀತನ್ ಮಾಧವನೀತನ್ ಪೆಱನಲ್ಲ॥4॥

ಒಳ್ಳಿತ್ತ ಕೆಯ್ವೊರಾರ್ ಪೊಲ್ಲದುಮದಱಂತೆ। ಬಲ್ಲಿತ್ತು ಕಲಿಗೆ ವಿಪರೀತಾ।
ಪುರಾಕೃತಮಿಲ್ಲಿ ಸಂಧಿಕ್ಕುಮದು ಬಂದು॥5॥

ಕಟ್ಟಿದ ಸಿಂಘಮನ್ ಕೆಟ್ಟೊದೇನೆಮಗೆಂದು। ಬಿಟ್ಟವೋಲ್ ಕಲಿಗೆ ವಿಪರೀತಂ।
ಗಹಿತರ್ಕ್ಕಳ್ ಕೆಟ್ಟರ್ ಮೇಣ್ ಸತ್ತರವಿಚಾರಂ॥6॥

### 5 ಮುಳಬಾಗಿಲು 38 [ಸು. 900]

ಇದರಲ್ಲಿ ನೊಳಂಬರಾಜನಾದ ವೀರಮಹೇಂದ್ರನ ಪರೋಕ್ಷದಲ್ಲಿ ದೀವಬ್ಬರಸಿ ದೀವಬ್ಬೆಸಮುದ್ರವನ್ನೂ ದೇವಸ್ಥಾನಗಳನ್ನೂ ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ದೀವಬ್ಬೆಸಮುದ್ರ

ವಿದಿತಂ ಲೋಕಕ್ಕೆ ಮುನ್ನಂ ರಘುಕುಳದಹನೋ [ಧವನು?] ಗ್ರೀಷುವಿಂ ಕಾಯ್ದು ತಿಣ್ಣಂ।
ಕುದಿಗೊಂಡಟ್ಕಿತ್ತಗಸ್ತ್ಯಂ ಕುಡಿಯುತುಗುಟ್ದಿನಿಂ ಕಟ್ಟುಪಟ್ಟಿರ್ದ್ದುದಿಂತ॥
ಪ್ಪುದು ಪೆಂಪಂ ತಾಳ್ದಿತೆಂದಂದಱಿಯರೆ ಲವಣಾಂಭೋಧಿಯಂ ಪೋಲಿಸಲ್ವೇ।
ಡಿದುವೆತ್ತಾನೆತ್ತಲೆಂಬಂತತಿಬಹಳಜಳಂ ದೀವಳಬ್ಬಾಸಮುದ್ರಂ॥7॥

ಪದೆದಾಯಾಸಕ್ಕೆ ಪಕ್ಕಾಗಿರೆ ಗಡ ಪಿರಿದುಂ ಭ್ರಾಂತಿನಿಂ ಪೋಪುದೊಂದ।
ಬ್ದದೊಳಿಂತೆಂತಾನುಮೆಯ್ದುತ್ತಿರದಮರನದೀಕಾಂತೆಯುಂ ಕಾಣ್ಬರೀ...॥
...ದೆಸರ್ ಸಯ್ಪಿಂತಿದೇಂ ಸಂಭವಿಸಿತೊ ನಮಗಪ್ಪಟ್ಕಱಿಂ ಗಂಗೆ ತೆಂಕ।
ಣ್ಗೆದಿರಂ ಬಂದಿರ್ದ್ದುದೆಂಬಂತತಿ ಬಹಳಜಳಂ ದೀವಳಬ್ಬಾಸಮುದ್ರಂ॥8॥

### 6 ಕೋಟೂರು ಶಾಸನ [ಸು. 900]

(ಇಂಡಿಯನ್ ಆಂಟಿಕ್ವರಿ XX, 69).

ಇದರಲ್ಲಿ ಶಂಭು ಎಂಬವನು ಚಾಳುಕ್ಯವಂಶದ ಪರಹಿತರಾಜನಿಗೆ ಭಾಷೆ ಕೊಟ್ಟಂತೆ ಅಗ್ನಿಪ್ರವೇಶ ಮಾಡಿ ಸತ್ತು ಸ್ವರ್ಗವನ್ನು ಪಡೆದನೆಂದು ಹೇಳಿದೆ.

ಪೊಗಟಲ್ಕಳುಂಬಮಪ್ಪೊ। ಳ್ಪಗಳನೆ ತನಗವನೆ ಶಾಶ್ವತಂ ಮಾಡಿ ಧಗ।
ದ್ಧಗಿತ ಶಿಖಿ ಸೆಕೆಯು ಕೊಳೆ ನಗೆ। ಮೊಗದಿಂ ಶಂಭುವನೆ ಶಂಭು ನೆನೆಯುತ್ತಿರ್ದಂ॥9॥

ಮುನ್ನೆಗಟ್ಟಿ ವೇಳೆವಡಿಚರು। ಮಿನ್ನಪ್ಪೊರುಮೀಗಡುಳ್ಳೊರುಂ ಬಗೆವೊಡವರ್।
ನಿನ್ನನ್ನರೆ ನಿನ್ನನ್ನರೆ। ನಿನ್ನನ್ನರೆ ನಿನಗೆ ನೀನೆ ದೊರೆಯಯ್ ಶಂಭೂ॥10॥

## 7 ಮುಂಡ್ಯ 41 [949]

ಇದರಲ್ಲಿ ರಾಷ್ಟ್ರಕೂಟರಾಜನಾದ 3ನೆಯ ಕೃಷ್ಣರಾಜನಿಗೂ ಚೋಳರಾಜನಾದ ರಾಜಾದಿತ್ಯನಿಗೂ ನಡೆದ ಯುದ್ಧದಲ್ಲಿ ಚೋಳರಾಜನು ಮಡಿದ ಸಂಗತಿ ಹೇಳಿದೆ. ರಾಷ್ಟ್ರಕೂಟರ ಪಕ್ಷವಾಗಿ ಯುದ್ಧಮಾಡಿದ ಮಣಲೇರನ ಶೌರ್ಯವು ಕೆಳಗಣ ಪದ್ಯಗಳಲ್ಲಿ ವರ್ಣಿಸಿದೆ:

ಉಱದಿದಿರಾಂತ ಚೋೞಚತುರಂಗಬಲಂಗಳನಟ್ಟಿ ಮುಟ್ಟಿ ತ।
ಳ್ತಿಱಿವೆಡೆಗೊರ್ವರಪ್ಪೊಡಮಿದಿರ್ಚುವ ಗಂಡರನಾಂಪೆವೆಂದು ಪೊ॥
ಚ್ಚಱಿಸುವ ಬೀರರಂ ನೆಱೆಯೆ ಕಾಣೆವು ಚೋೞನೆ ಸಕ್ಕಿಯಾಗೆ ತ।
ಳ್ತಿಱಿದುದನಾಮ ಕಂಡೆವೆನೆ ಮೆಚ್ಚದೊರಾರ್ ಸಗರತ್ರಿಣೇತ್ರನಂ॥11॥

ನರಪತಿ ಬೆನ್ನೊಳಿರ್ದೊನಿದಿರಾಂತುದು ವೈರಿಸಮೂಹಮಿಲ್ಲಿ ಮ।
ಚ್ಚರಿಸುವರೆಲ್ಲರುಂ ಸೆರಗುವಾರ್ದಪೊರಿನ್ನಿರೆನೆಂದು ಸಿಂಗದಂ॥
ತಿರೆ ಹರಿ ಬೀರಲಕ್ಷ್ಮಿ ನೆರವಾಗಿರೆ ಚೋೞನ ಕೋೞೆಯೆಂಬ ಸಿಂ।
ಧುರದ ಶಿರೋಗ್ರಮಂ ಬಿರಿಯೆ ಪೊಯ್ದಿಱಿದಂ ಕದನೈಕಶೂದ್ರಕಂ॥12॥

## 8 ಶ್ರವಣಬೆಳ್ಗೊಳ 139 [ಸು. 950]

ಇದರಲ್ಲಿ ಬಾಯಿಕನ ಮಗಳೂ ಲೋಕವಿದ್ಯಾಧರನ ಹೆಂಡತಿಯೂ ಆದ ಸಾವಿಯಬ್ಬೆ ಸತ್ತಳೆಂದು ಹೇಳಿದೆ.

ಬಾಯಿಕ

ಶ್ರೀಯುವತಿಗೆ ನಿಜವಿಜಯ। ಶ್ರೀಯುವತಿಯೆ ಸವತಿಯೆನಿಸೆ ರಣಮೂರ್ಖನೃಪಾ।
ಮ್ನಾಯದೊಳಾಯದ ಮೆಯ್ಗಲಿ। ಬಾಯಿಕನೆಂಬನ್ ನೆಗೞ್ತೆಯಂ ಪ್ರಕಟಿಸಿದನ್ ॥13॥

ಸಾವಿಯಬ್ಬೆ

ಅವರೊಡವುಟ್ಟಿದೊಳಱಿವಿನ। ತವರೆನೆ ಧರ್ಮದದಗುಂತಿಯೆನೆ ನೆಗಟ್ಟಳ್ ಭೂ।
ಭುವನಕ್ಕೆ ಸಾವಿಯಬ್ಬೆಗ। ಮವನಿಜೆಗಂ ದೊರೆಯೆನಲ್ಕೆ ಪೆಂಡಿರುವೊಳರೇ॥14॥

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ।
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್॥
ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ ಜಿನೇಂದ್ರಭಕ್ತಿಸ।
ದ್ಭಾವದೆ ಸಾವಿಯಬ್ಬೆ ಜಿನಶಾಸನದೇವತೆ ತಾನೆ ಕಾಣಿರೇ॥15॥

## 9 ಜೂರದ[1] ಶಾಸನ [ಸು. 950]

(ಎಪಿಗ್ರಾಫಿಯಾ ಇಂಡಿಕ XIX, 287)

ಇದರಲ್ಲಿ, ಅನೆವೆಡೆಂಗ, ಪರಾಂಗನಾಪುತ್ರ ಎಂಬಿವೇ ಮೊದಲಾದ ಬಿರುದುಗಳುಳ್ಳ ರಾಷ್ಟ್ರಕೂಟ ರಾಜನಾದ ಮೂರನೆಯ ಕೃಷ್ಣರಾಜನ, ಅಥವಾ ಕನ್ನರನ ಪ್ರಶಸ್ತಿ ಇದೆ.

ಭಾರತದೊಳಿಱಿದನಿಂದ್ರನೊ।ಳೋರಾಸನ ಜಾಣನೆನಿಪ ಪಾಂಡ್ಯನ ಕುಲಮಂ।
ಬೇರಿಂದೆ ಕಿಟ್ಟಿ ಚೋೞನ। ಬೇರಂ ಬೇರಿಂದೆ ಕಿಟ್ಟಿನಾನೆವೆಡೆಂಗಂ॥16॥

ಸೋಲದೆ ಪರವನಿತೆಗೆ ಕಣ್। ಸೋಲದು ಮೊಲೆವಾಲನೂಡಿ ನಡಪಿದ ತಾಯಿಂ।
ಮೇಲೆನೆ ಬಗೆಗುಂ ನೋಡಿರೆ। ಸೋಲದು ಚಿತ್ತಂ ಪರಾಂಗನಾಪುತ್ರಕನಾ॥17॥

ನೋಡಿರೆ ಪರವಧುಗೆ ಮನಂ। ಕೂಡದು ಸೂೞ್ನುಟಿೞೆತ್ತಿ ನಡಪಿದ ತೋಳುಂ।
ಡಾಡಿದ ಮೊಲೆ ಬಸಿಱೊಳಗಿ।ರ್ದಾಡಿದ ಚಿತ್ತಂ ಪರಾಂಗನಾಪುತ್ರಕನಾ॥18॥

(ಕೊನೆಯಲ್ಲಿ, 'ಚಂದಯ್ಯಂ ಬರೆಯಿಸಿದಂ ಚಿಮ್ಮಯ್ಯಂ ಬರೆದಂ' ಎಂದಿದೆ. ಚಿಮ್ಮಯ್ಯನು ಲೇಖಕನೇ ಹೊರತು ಕವಿಯಲ್ಲ ಎಂದು ತೋರುತ್ತದೆ.)

## 10 ಬೇಲೂರು 123 [952]

ಇದರಲ್ಲಿ ಗಂಗರಾಜನಾದ ಬೂತುಗನ ಆಳಿಕೆಯಲ್ಲಿ ಮೋನಿಭಟಾರರಿಗೆ ಕಿರಿಯ ಮೋನಿಭಟಾರರು ನಿಸಿದಿಗೆಯನ್ನು ನಿಲಿಸಿದರೆಂದು ಹೇಳಿದೆ.

ಮೋನಿಭಟಾರ

ಪೇನಿಗಳಂ ಪೊಗೞದಿರಭಿ। ಮಾನಿಗಳಂ ಗುಣದ ಕಣಿಗಳಂ ವಸುಮತಿಯೊಳ್।
ದಾನಿಗಳನೂನಮಿಲ್ಲದ। ಮೋನಿಗಳಂ ಪೋಗಿ ಪೊಗೞ ಕೆಲ್ಲಂಗೆಱೆಯೊಳ್॥19॥

ತಾಂ ಗಡ ಕೊಳ್ವೊನೆಂದು ಬಲಗರ್ವದ ಬಲ್ಲಪನಲ್ಲಿ ಪೋಗಿ ಕಾ।
ಯ್ವಂಗೆಡೆಯಾಗದಂತು ನುಡಿದಾರ್ಪಿನೆ ಮೆಚ್ಚಿಸಿ ಕೊಂಡರಿಂತು ಕೆ॥
ಲ್ಲಂಗೆಱೆಯಂ ಪಲರ್ ಪೊಗೞೆ ಮೋನಿಭಟಾರರೆನುತ್ತೆ ಲೋಕಮೆ।
ಲ್ಲಂ ಗೆಡೆಗೊಂಡು ಕೊಂಡು ಕೊನೆದಪ್ಪುದು ಸಾಹಸಮೇನನೂನವೋ॥20॥

[1] ಮಧ್ಯಮ ಇಂಡಿಯಾ ಪ್ರಾಂತದಲ್ಲಿರುವ ಮೈಹಾರ್ ಎಂಬ ರಾಷ್ಟ್ರದಲ್ಲಿ, ಜಬ್ಬಲ್‌ಪುರದ ಸಮೀಪದಲ್ಲಿರುವ ಒಂದು ಹಳ್ಳಿ.

## 11 ಶ್ರವಣಬೆಳ್ಗೊಳ 59 [974]

ಇದರಲ್ಲಿ ಗಂಗರಾಜನಾದ ನೊಳಂಬಕುಲಾಂತಕಮಾರಸಿಂಹನು ಸಂನ್ಯಸನವಿಧಿಯಿಂದ ಸ್ವರ್ಗವನ್ನು ಪಡೆದಂತೆ ಹೇಳಿದೆ.

ಮಾರಸಿಂಹ

ಕಾಳನೊ ರಾವಣನೋ ಶಿಶು। ಪಾಳನೊ ತಾನೆನಿಸಿ ನೆಗಟ್ದ ನರಗನ ತಲೆ ತ।
ನ್ನಾಳಾಳ ಕೆಯ್ಗೆವಂದುದು। ಹೇಳಾಸಾಧ್ಯದೊಳೆ ಗಂಗಚೂಡಾಮಣಿಯಾ ॥21॥

ನುಡಿದನೆ ಕಾವುದನೇ ಎರ್ದೆ। ಗಿಡದಿರು ಜವನಿಟ್ಟ ರಕ್ಕೆ ನಿನಗೀವುದನೇಂ।
ನುಡಿದನೆ ಏ ಅದು ಕೆಯ್ಯದು। ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ॥22॥[1]

ತುಂಗ ಪರಾಕ್ರಮಂ ಪಲವುಕಾಲಮುಗುರ್ವಿಸೆ ಸುತ್ತಿ ಮುತ್ತಿ ಬಿ।
ಟ್ಟಂ ಗಡ ಕಾಡುವಟ್ಟಿ ಕೊಳಲಾಱನೆ ಮುನ್ನಮೆನಿಪ್ಪ ಪೆಂಪಿನು॥
ಚ್ಚಂಗಿಯ ಕೋಟೆಯಂ ಜಗಮುಸುಂಗೊಳೆ ಕೊಂಡ ನೆಗಱ್ತೆ ಮೂಱುಲೋ।
ಕಂಗಳೊಳಂ ಪೊಗಱ್ತೆಗೆಡೆಯಾದುದು ಗುತ್ತಿಯ ಗಂಗಭೂಪನಾ॥23॥

ಓಳಿಯೆ ಕೋದು ಪಲ್ಲವರ ಪಂದಲೆಯೆಲ್ಲಮನೆಯ್ದೆ ದಟ್ಟಿ ಕಾ।
ಪಾಳಿಕರೂಱಿ ಸಾಱಿ ಪರಮಂಡಳಿಕರ್ಕಳನಮ್ಮ ನೀವುಮೀ॥
ಯೋಳಿಗೆ ನಿಮ್ಮ ಪಂದಲೆಗಳಂ ಬರಲೀಯದೆ ಕಂಡು ಬಾೞ್ವುದಾ।
ಳೋಳಿಯೊಳೆಂಬಿನಂ ನೆಗೞ್ದದೊಟ್ಟಜಿ ಮಂಡಳಿಕತ್ರಿಣೇತ್ರನಾ ॥24॥

## 12 ತಿರುಮುಕೂಡಲು ನರಸೀಪುರ 69 [ಸು. 980]

ಇದರಲ್ಲಿ ಗಂಗರಾಜನಾದ ಮಾರಸಿಂಹನ ಸಾಮಂತ ಗೋವಿಂದಮಯ್ಯನ ಸಂತತಿ ಹೇಳಿದೆ.

ಪರಮಶ್ರೀಯಂ ತಳೆದೊಗೆ। ದೆಱೆಯೊಂ ಪರಮೋಪಕಾರಿ ಧರ್ಮಜ್ಞಂ ಸುಂ।
ದರತೇಜನೆನಿಸಿ ನೆಗಟ್ದಂ । ಧರೆಯೊಳ್ ಗೋವಿಂದಮಯ್ಯನೆಂಬುರ್ವೀಶಂ॥25॥

ಎನೆ ನೆಗಟ್ದ ಮಾಬಳಯ್ಯಂ। ಗನೇಕ ಗುಣರತ್ನರಾಶಿ ಮನುಮುನಿಚರಿತಂ।
ವಿನಯವಿಭೂಷಣನೊಳ್ಪಿಂ। ಗಿನಿಯಂ ಮೊದಲೆನಿಸಿ ಪುಟ್ಟಿದೊಂ ಚಾವುಂಡಂ॥26॥

## 13 ಶ್ರವಣಬೆಳ್ಗೊಳ 133 [982]

ಇದರಲ್ಲಿ ರಾಷ್ಟ್ರಕೂಟರಾಜನಾದ ಇಂದ್ರರಾಜನು ಸಂನ್ಯಸನವಿಧಿಯಿಂದ ಮುಡಿಪಿದಂತೆ ಹೇಳಿದೆ.

---

[1] ಈ ಪದ್ಯವು ನಾಗವರ್ಮನ ಕಾವ್ಯಾವಲೋಕನದಲ್ಲಿಯೂ (ಪು. 9) ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿಯೂ (ಪು. 68) ಅನುವಾದಮಾಡಲ್ಪಟ್ಟಿದೆ.

## ಇಂದ್ರರಾಜ

ಪರಭೂವಿೂಶ್ವರಭೀಕರಂ ಕರನಿಶಾತೋಗ್ರಾಸಿ ಶತ್ರುಕ್ಷಿತೀ।
ಶ್ವರವಿಧ್ವಂಸಪರಂ ಪರಾಕ್ರಮಗುಣಾಟೋಪಂ ವಿಪಕ್ಷಾವನೀ॥
ಶ್ವರಪಕ್ಷ ಕ್ಷಯಕಾರಣಂ ರಣಜಯೋದ್ಯೋಗಂ ದ್ವಿಷನ್ಮೇದಿನೀ।
ಶ್ವರಸಂಹಾರಹವಿರ್ಭುಜಂ ಭುಜಬಳಂ ಶ್ರೀರಾಜಮಾರ್ತಂಡನಾ॥27॥

ಇಱಿಯಲ್ಕಣ್ಮುವರೀಯುಲಾಜಿರರೆಬರ್ ಪೂರ್ಣ್ದೇವರಾರಾನುಮಾಂ।
ತಿಱಿಯಲ್ಕಣ್ಮರದಾವ ಗಂಡಗುಣಮಾವೌದಾರ್ಯಮೆಂದಳ್ಕದಾಂ॥
ತಿಱಿವಣ್ಮುಂ ಪಿರಿದೀವ ಪೆಂಪುಮೆಸೆದೊಪ್ಪಿರ್ದಪ್ಪುವಾರ್ ಬಣ್ಣಿಸಲ್।
ನೆಱೆವರ್ ಬೀರದ ಚಾಗದುನ್ನತಿಕೆಯುಂ ಶ್ರೀರಾಜಮಾರ್ತಂಡನಾ॥28॥

ಕಿಡದ ಜಸಕ್ಕೆ ತಾನೆ ಗುಱಿಯಾದ ಚಲಂ ನೆಱೆದರ್ಥಿಗರ್ಥಮಂ।
ಕುಡುವ ಚಲಂ ತೊದಳ್ನುಡಿಯದಿರ್ಪ ಚಲಂ ಪರವೆಣ್ಗೊಳೋತೊಡಂ॥
ಬಡದ ಚಲಂ ಶರಣ್ಗೆವರೆ ಕಾವ ಚಲಂ ಪರಸೈನ್ಯಮಂ ಪೆಱಂ।
ಗೆಡೆಗುಡದಟ್ಟಿ ಕೊಲ್ವ ಚಲಮಾಳ್ದ ಚಲಂ ಚಲದಂಕಕಾಱನಾ॥29॥

ಇರು ಪೆಱದೇನನಿಂ ಪೊಗಟುತಿರ್ದಪುದೀವ ನೆಗಟ್ತೆ ಕಲ್ಪಭೂ।
ವಿುರುಹದಿನಗ್ಗಳಂ ನುಡಿ ಸುರಾಚಳದಿಂದಚಳಂ ಪರಾಕ್ರಮಂ॥
ಖರಕರತೇಜದಿಂ ಬಿಸಿದು ಚಾಗದ ನನ್ನಿಯ ಬೀರದಂದಮೀ।
ದೊರೆತೆನೆ ಬಣ್ಣಿಸಲ್ ನೆಱೆವಗಾರಳವಂ ಚಲದಂಕಕಾಱನಾ॥30॥

ದುಸ್ಥಿತಲೋಕಕಲ್ಪತರುವೆಂಬುದು ವೈರಿನರೇಂದ್ರ ಕುಂಭಿಕುಂ।
ಭಸ್ಥಳಪಾಟನಪ್ರವಣಕೇಸರಿಯೆಂಬುದು ಕಾಮಿನೀಜನೋ॥
ರಸ್ಥಳಹಾರಮೆಂಬುದು ಮಹಾಕವಿಚಿತ್ತಸರೋರುಹಾಕರಾ।
ವಸ್ಥಿತಹಂಸನೆಂಬುದು ಸಮಸ್ತಮಹೀಜನಮಿಂದ್ರರಾಜನಾ॥31॥

ಪುಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆ ಮಂತಣಮನ್ಯನಾರಿಗಾ।
ಟಿಸುವುದೆ ಚಿತ್ತಮಿಾಯದುದೆ ಬಿನ್ನಣಮಾರುಮನೆಯ್ದೆ ಕೂರ್ತು ಬಂ॥
ಚಿಸುವುದೆ ಕಲ್ತ ಕಲ್ಪಿಯೆನೆ ಮತ್ತವರಂ ಪೆಸರ್ಗೊಂಡದೆಂತು ಪೋ।
ಲಿಸುವುದೊ ಪೇೞಿವಿಾಗಡಿನ ರಾಜತನೂಜರೊಳಿಂದ್ರರಾಜನಂ॥32॥

ನಿಖಿಳವಿನಮನ್ನರೇಶ್ವರ। ಮುಖಾಬ್ಜನೇತ್ರೋತ್ಪಳಾಳಕಾಳೋಳಶಿಳೀ।
ಮುಖನಿಕರದಿನೆಸೆವುದು ಪದ। ನಖಕಮಳಾಕರವಿಳಾಸಮಹಿತರ ಜವನಾ॥33॥

ಮನ್ನಿಸಿ ಪಿರಿದೀವಂ ತೊದ।ಳನ್ನುಡಿಯುಂ ತೊಡರ್ದು ಮಾಣನಳಱಿಂದವಿುದೇ।
ನುನ್ನತಿವಡೆದುದೊ ಚಾಗದ। ನನಿಯ ಬೀರದ ನೆಗಟ್ತೆ ಚಳದಗ್ಗಳಿಯಾ॥34॥

ಶರದಮೃತಕಿರಣರುಚಿಯಿಂ। ಚರಾಚರವ್ಯಾಪ್ತಿಯಿಂ ಜಗಜ್ಜನನುತಿಯಿಂ।
ಕರಮೆಸೆದಿರ್ದಪುದೇನೀ। ಶ್ವರಮೂರ್ತಿಯ ಕೀರ್ತಿ ಕೀರ್ತಿನಾರಾಯಣನಾ॥35॥

ನುಡಿವರ್ ಬೀರಮನೊಂದುಗಂಡು ಸೆಡೆವರ್ ಚಾಗಕ್ಕೆ ಮುಯ್ವಾಂಪರೀ।
ವೊಡೆ ಪಲ್ಗಿರ್ಚುವರಾಮೆ ಸೋಚಿಗಳೆಮೆಂದಿರ್ಪರ್ ಪರಸ್ತ್ರೀಯರೊಳ್॥
ಗಡಣಂ ನನ್ನಿಗೆ ಬೀಗುವರ್ ನುಡಿ ತೊದಳ್ ದೋಸಕ್ಕೆ ಪಕ್ಕಾದ...।
ಬಡಗಂಡರ್ ಕಲಿಕಾಲದೊಳ್ ಕಲಿಗಳೊಳ್ಗಂಡಂ ಪೆಜಿಂ ಗಂಡನೇ॥36॥

## 14 ಹೂಲಿಯ ಶಾಸನ [ಎ. 985]

(ಎಪಿಗ್ರಾಫಿಯಾ ಇಂಡಿಕ, XVIII, 171)

ಈ ವೀರಗಲ್ಲಿನಲ್ಲಿ ಕೆಂದರ ಕೇತನು ಸೋಭನಯ್ಯನ ಪೆರ್ಗ್ಗಡೆ ದಡ್ಡಪಯ್ಯನೊಡನೆ ಕಾದಿ ಸತ್ತಂತೆ ಹೇಳಿದೆ.

ಧುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರಂತಿರ್ದನೆಯ್ತಂದು ಮ।
ಚ್ಚರದಿಂದಾಂತೊರನಂತಕಂಗಿರದೆ ಕೊಲ್ಚಂದಿಕ್ಕಿ(?) ಮಿಕ್ಕೀ ವಸುಂ॥
ಧರೆಯೊಳ್ ತನ್ನದಟುಂ ಪ್ರತಾಪಮುಮದಾ ರಾಜೋತ್ತಮಂ ಪೆರ್ಚ್ಚೆ ಕೆಂ।
ದರ ಕೇತಂ ವರ ವಾಸವಾಂಗನೆಯರೊಳ್ ಕೂಡಿರ್ದ್ದನಾ ಸ್ವರ್ಗದೊಳ್॥37॥

ತೋಡುಂ ಬೀಡುಮದುಡುಗದೆ। ಪಾಡಱಿದೆಚ್ಚಾಜಿ ರಂಗದೊಳ್ ವಾಜಿಯುನ॥
ಟ್ಟಾಡಿ ಸುರಾಂಗನೆಯರೊಳಂ। ಕೂಡಿದೊನೇಂ ಕಲಿಯೊ ನೆಗಟ್ದ ಕೆಂದರ ಕೇತಂ॥38॥

## 15 ಶ್ರೀರಂಗಪಟ್ಟಣ 140 [1012]

ಇದರಲ್ಲಿ ಚೋಳರಾಜನಾದ ರಾಜರಾಜನ ದಂಡನಾಯಕ ಪಂಚವಮಹಾರಾಯನು ಬಲಮುರಿ ಕ್ಷೇತ್ರದ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಪಂಚವಮಹಾರಾಯ

ಶ್ರೀರಮಣೀಯನೀತಿ ಜಯಮೂರ್ತಿ ಸುಲಕ್ಷಣಲಕ್ಷಿತಾಂಗನ।
ಬ್ಜಾರಿಕರೋಪಮಂ...ರಂ ಮುಳಿದಂದರಾತಿಸಂ॥
ಹಾರಲಯಾಗ್ನಿಯಂತಕನ ಕಾಯ್ಪುಪಮಾ......।
ಮಾರಿಯ ಮೂರಿಯೆಂದಱಿಗೆ ಮುಮ್ಮುಡಿಚೋಟನ ಗಂಧವಾರಣಂ॥39॥

## 16 ಶಿಕಾರಿಪುರ 125 [1019]

ಇದರಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಸಾಮಂತ ಕುಂದಮರಸನು ಬಲಿಪುರದ ನಂದಿಕೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ತ್ರಿಮೂರ್ತಿಗಳು

ಶ್ರೀಪತಿ ಚಕ್ರಧಾರಿ ಗರುಡಾಸನನಂಬುರುಹಾಕ್ಷನದ್ರಿಜಾ।
ತಾಪತಿ ಶೂಲಧಾರಿ ವೃಷಭಾಸನನಭ್ಯಧಿಕೇಕ್ಷಣಂ ವಚ॥
ಶ್ರೀಪತಿ ಪಾಶಧಾರಿ ಕಳಹಂಸಗನಷ್ಟಮಿತಾಕ್ಷನೆಂದಿವರ್।
ತ್ರೈಪುರುಷರ್ ತ್ರಿಲೋಕಜನಪೂಜಿತರೀಗೆಮಗಿಷ್ಟಸಿದ್ಧಿಯಂ॥40॥

ಜಯಸಿಂಹ I

ಪಸರಿಸಿ ಪರ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂ।
ದೊಸೆದಿನನೇಱುವಂತುದಯಪರ್ವತಮಂ ಕಲಿಕಾಲದೇಟಿಗ್ಯಂ॥
ದೆಸೆಗಿಡೆ ತೂಳ್ದಿ ತಾಳ್ದಿ ಕೃತಲಕ್ಷ್ಮಿಯನೊಳ್ಪಿನ ತೆಳ್ಪುಗಳ್ ಜಗ।
ಕ್ಕೆಸೆದಿರೆ ಸಿಂಹವಿಷ್ಟರಮನೇಱಿದನಾ ಜಯಸಿಂಹವಲ್ಲಭಂ॥41॥

## 17 ಬೇಲೂರು ಶಾಸನ [1022]

(ಇಂಡಿಯನ್ ಆಂಟಿಕ್ವರಿ XVIII, 273)

ಇದರಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಆಳಿಕೆಯಲ್ಲಿ ಅವನ ಅಕ್ಕನಾದ ಅಕ್ಕಾದೇವಿ ಪೇರೂರು ಅಗ್ರಹಾರವನ್ನು ಸ್ಥಾಪಿಸಿ ಅಲ್ಲಿ ತ್ರಿಮೂರ್ತಿಗಳ ದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.

ಅಕ್ಕಾದೇವಿ

ಶ್ರೀವನಿತೆಯೆನಿಸಿದಕ್ಕಾ। ದೇವಿಗೆ ವಾಗ್ದೇವಿಗಖಿಳಜನನುತ ಸೀತಾ।
ದೇವಿಗೆ ಮಾದೇವಿಗೆ ಭೂ। ದೇವಿಗೆ ಸಮನೆಂಬ ನೃಪಸುತಾಸಮುದಯಮಂ॥42॥

ಗುಣದ ಬೆಡಂಗಿಯೆನಲ್ ಸ। ದ್ಗುಣಮಂ ನೆಗಟ್ಟೇಕವಾಕ್ಯೆಯೆನೆ ಸೂನೃತಮಂ।
ರಣಭೈರವಿಯೆನೆ ಶೌರ್ಯದ। ಗುಣಮನದೇನೆಂದು ಬಣ್ಣಿಪೆಂ ನೃಪಸುತೆಯಾ॥43॥

ಅವಿನಮ್ರಾರಿನೃಪಾಳಕಪ್ರಳಯಸಂಪಾದಕ್ಷಮೋಚ್ಚಂಡಭೈ।
ರವಿ ತಾನಾಗಿಯುಮೆಯ್ದೆ ಶಾಂತತರರೂಪಾನ್ವಿತೆ ನಿರ್ಭರ್ತ್ಸನಾ॥
ರವಸಿಂಹಾಗ್ರಜೆಯಾಗಿಯುಂ ಮದಗಜೋದ್ಯದ್ಯಾನೆಯೆಂದಂದು ಧಾ?।
ತವಿಚಿತ್ರಂ ನೆಗಟ್ಟೇಕವಾಕ್ಯೆಯ ಚರಿತ್ರಂ ಭೂರಿಭೂಚಕ್ರದೊಳ್॥44॥

## 18 ರೋಣ ಶಾಸನ [1022]

(ಎಪಿಗ್ರಾಫಿಯಾ ಇಂಡಿಕ, XIX, 222)

ಇದರಲ್ಲಿ ಚಾಳುಕ್ಯರಾಜನಾದ 1ನೆಯ ಜಗದೇಕಮಲ್ಲ ಜಯಸಿಂಹನ ಆಳಿಕೆಯಲ್ಲಿ ಸಂಕಿಮಯ್ಯನು ರೋಣದಲ್ಲಿ ಮೂಲಸ್ಥಾನ ದೇವಸ್ಥಾನವನ್ನು ಕಟ್ಟಿಸಿದಂತೆಯೂ ಅವನ ಸಹೋದರನಾದ ಮಾಚಿಮಯ್ಯನು ಸತ್ರವನ್ನು ಕಟ್ಟಿಸಿ ಬಾವಿಯನ್ನು ತೋಡಿಸಿದಂತೆಯೂ ಹೇಳಿದೆ.

ರೋಣ

ಶ್ರೀರಮಣೀಪ್ರಿಯ (ನಿಲಯ)। ದ್ವಾರಾವತಿಗಂ ಸುರೇಂದ್ರನಮರಾವತಿಗಂ॥
ಸಾರಂ ಧರಣೀ ವನಿತೆಯ। ಹಾರಂ ಶ್ರೀ ರೋಣಮೊಪ್ಪುಗುಂ ವಸುಮತಿಯೊಳ್॥45॥

ಆಯ್ತುವರ್ಮನ ಮಗ ಸಂಕಿಮಯ್ಯ

ಆತಂಗೆ ಸುಜನ ಜನ ವಿ। ಖ್ಯಾತಂಗೆ ಜಗಜ್ಜನೈಕ ನುತ ಚರಿತಂ ನಿ॥
ರ್ಧೂತಾಘನಿಚಯನುರ್ವೀ। ಖ್ಯಾತಂ ಶ್ರೀ ಸಂಕಿಮಯ್ಯನಾದಂ ತನಯಂ॥46॥

ಕ್ಷಿತಿವಳಯಂ ಬಣ್ಣಿಸಲು। ನ್ನತಿಯಂ ಮಾಡಿಸಿದನೆಸೆವಿನಂ ರೋಣದೊಳು॥
ನ್ನತಮೆನೆ ಮೂಲಸ್ಥಾನಾ। ಯತನಮನಾ ಸಂಕಿಮಯ್ಯನೆನೆ ಪೊಗಟದರಾರ್॥47॥

ಮಾಚಿಮಯ್ಯ

ಒಡಲಂ ತಾಂ ಸುಚರಿತ್ರದೊಳ್ ಧನಮನುದ್ಯದ್ದಾನದೊಳ್ ನನ್ನಿಯಂ।
ನುಡಿಯೊಳ್ ಭಕ್ತಿಯನೆಯ್ದೆ ತಂದೆಯೊಳುದಗ್ರಂ ಚಿತ್ತಮಂ ಸಂತತಂ॥
ಮೃಡಪಾದಾಬ್ಜದೊಳಾವಗಂ ಬಸನಮಂ ಸದ್ಧರ್ಮದೊಳ್ ತಾಳ್ದಿದಂ।
ಗಡದೇವಣ್ಣೆಪೆನಣ್ಣ ಸಚ್ಚರಿತಮಂ ಶ್ರೀ ಮಾಚಿಮಯ್ಯಾಂಕನಾ॥48॥

ಜಗತೀಜನಹಿತಮಂ ವಿಬು। ಧಗಣಾಗ್ರಣಿ ಮಾಚಿಮಯ್ಯನುರ್ವೀವಳಯಂ॥
ಪೊಗಟಲ್ ರೋಣದ ಮಣಿಯುರ। ನೆಗಟ್ದ್ವಾರಮೆಯೊಳಗೆ ಬಾವಿಯಂ ತೋಡಿಸಿದಂ॥49॥

## 19 ಬೆಳಗಾಮಿ ಶಾಸನ [1024]

(ಮೈಸೂರು ಶಾಸನದ ಇಲಾಖೆಯ 1929ನೆಯ ವರ್ಷದ ವರದಿ: ಶಾಸನ ಸಂಖ್ಯೆ 65, ಪೂರ್ವಭಾಗ)

ಇದರಲ್ಲಿ, ಚಾಳುಕ್ಯರಾಜನಾದ ಜಗದೇಕಮಲ್ಲನು ಕುಂದರಾಜನ ವಿಜ್ಞಾಪನದಿಂದ ಕಲಿದೇವೇಶ್ವರ ಸ್ವಯಂಭು ದೇವರಿಗೋಸ್ಕರ ಶಿವಶಕ್ತಿ ಪಂಡಿತರ ಕಾಲಂ ಕರ್ಚಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಗದೇಕಮಲ್ಲ (ಜಯಸಿಂಹ)

ಉಱದಿದಿರೆತ್ತಿ ಬಂದ ಮಧುರಾಂತಕ ಚೋಳನ ಸೈನ್ಯಮೆಲ್ಲಮಂ।
ಕಿಱುದೊಱೆ ಕಟ್ಟೆಗಟ್ಟುವಿನಮಳ್ಕುಱೆ ಕೂರಸಿಯಿಂದಡುರ್ತು ತ॥
ತ್ತಱದಱದೊಟ್ಟಿ ಕಂಚಿ ಗುಱಿಯಪ್ಪಿನೆಗಂ ಬೆದಱಟ್ಟಿ ಚೋಳನಂ।
ಮೆರೆದನುದಗ್ರ ಬಾಹುಬಳಮಂ ಜಯಸಿಂಹ ಮಹಾ ಮಹೀಭುಜಂ॥50॥

## 20 ಕುಳೇನೂರ್ ಶಾಸನ [1028]

(ಎಪಿಗ್ರಾಫಿಯಾ ಇಂಡಿಕ XV, 329)

ಈ ಶಾಸನದಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಆಳಿಕೆಯಲ್ಲಿ ಕುಂದರಾಜನ ಹೆಂಡತಿ ಕುಂದಲ ದೇವಿ ಕುಳೇನೂರ್ ದೇವಸ್ಥಾನಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಕುಂದರಾಜ

ಮಲೆಪರ ಪೊಂಗಡಂಗಿದುದು ಮನ್ನೆಯರುರ್ಕು ಕಟಿಲ್ದುದನ್ಯಮಂ।
ಡಲಿಕರ ದರ್ಪವೋಗಡಿಸಿತಾಂತು ಬಿಗುರ್ತರಿವರ್ಗವಳ್ಕಿ ಬಾ॥
ಟ್ದಲೆಗಳನಿತ್ತು ಕಂಡು ಬೆಸಗೆಯ್ದುಪರೀ ದೊರೆತುಗ್ರಮಪ್ಪ ತೋ।
ಳ್ವಲದ ಪೊಡರ್ಪುವೊಟ್ಟಜಿಯುಮುನ್ನತಿಯುಂ ಸಲೆ ಕುಂದರಾಜನಾ॥51॥

ಕುಂದಲದೇವಿ

ಸರಸಿರುಹದಲರ ನಡುವಣ। ಸಿರಿಯವೊಲತ್ಯಂತಮಪ್ಪ ತೇಜದಿನಂತಃ।
ಪುರಮನಲಂಕರಿಪುದಱಿಂ। ಧರೆ ಸವತಿತಳಪ್ರಹಾರಿಯೆನೆ ಸಲೆ ನೆಗಟ್ದಳ್॥52॥

ಸರಸತಿಗೆ ರತಿಗೆ ರಂಭೆಗೆ। ಗಿರಿಜೆಗರುಂಧತಿಗೆ ರಘುಕುಲೇಶನ ಸತಿಗಂ।
ದೊರೆ ಪಾಸಟಿ ಮಿಗಿಲೆಂದೀ। ಧರೆ ಪೊಗೞ್ವುದು ನೆಗಟ್ದ ಸವತಿಗಜಕೇಸರಿಯಂ॥53॥

## 21 ಮುಂಜರಾಬಾದ್ 45 [ಸು. 1030]

ಇದರಲ್ಲಿ ವಾಮಶಿವದೇವನ ಮಗ ಚಾಮನ ಸ್ತುತಿರೂಪವಾದ ಪದ್ಯಗಳಿವೆ.

ಶ್ರೀಮಚ್ಛಶಾಂಕಧರಸ। ತ್ಕೋಮಳಪದಪದ್ಮಭೃಂಗನಘರಿಪುಸಿಂಗಂ।
ವಾಮಶಿವದೇವಪುತ್ರಂ। ಚಾಮಂ ಕಾದಂಬರಾಜ್ಯಮೂಳಸ್ತಂಭಂ॥54॥

ಆಳವಱಿವು ನನ್ನಿ ಪೆಂಪ। ಸ್ಖಳಿತಗುಣಂ ಪತಿಹಿತಿಕ್ಕೆಯೆಂಬಿವು ತನ್ನೊಳ್।
ಬಳೆದು ಪುದಿದಿರೆ ಸುಪುತ್ರಃ। ಕುಳದೀಪಕ ಎನಿಸಿ ಚಾವವೆಗ್ಗಡೆ ನೆಗಟ್ದಂ॥55॥

ಶಿಷ್ಟಜನವತ್ಸಳಂ ಧ। ರ್ಮಿಷ್ಟಂ ನಿಜಕುಳಪವಿತ್ರನಮಳಚರಿತ್ರಂ।
ದುಷ್ಟಜನದೂರನೆಂದೀ। ಸೃಷ್ಟಿ ಸಲಲ್ ಪೊಗೞೆ ನೆಗೞೆ ಚಾವನೆ ಬಲ್ಲಂ॥56॥

## 22 ಸೊರಬ 184 [1032]

ಈ ಶಾಸನದಲ್ಲಿ ಚಾಳುಕ್ಯರಾಜನಾದ 1ನೆಯ ಜಯಸಿಂಹನ ಆಳಿಕೆಯಲ್ಲಿ ಮಹಾ ಸಾಮಂತಾಧಿಪತಿ ಆಲಯ್ಯನು ಕುಪ್ಪಗಡ್ಡೆಯಲ್ಲಿ ಮಂಡಲಿಕ ಕುಂದಮನೊಡನೆ ಕಾದಿ ಸಾಯಲು ಅವನ ಮಗ ಜಯಸಿಂಗನು ತಂದೆಯ ಹೆಸರಿನಲ್ಲಿ ಆಲೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಆಲಯ್ಯ

ಬಳವದರಾತಿಸೇನೆ ಕಿಡೆ ವಾಜಿಬಳಂ ಪೆಱಪಿಂಗೆ ಹಸ್ತಿಸಂ।
ಕುಳಮಳಿರ್ವಳ್ಕೆ ಬಳ್ಕೆ ತನಗಾಂತಧಿಕೋಗ್ರ ವಿರೋಧಿಸಾಧನಂ॥
ವಳಿಕೆ (?) ಬಟಲ್ಚಿ ನುರ್ಗಿ ಪಲರಂ ತವೆ ಕೊಂದು ಮಹಾಜಿರಂಗದೊಳ್।
ತೊಲಗದ ಗಂಡನಾಂತಿಱಿಯೆ ಭುಂಭುಕಮದ್ಭುತಮಾದುದೆತ್ತಲುಂ॥57॥

ಜಯಸಿಂಗ

ಮುಳಿಸತ್ಯದ್ಭುತಮಾಯುಮೆಂದುಮಚಳಂ ದಾನಂ ಬುಧಾಹ್ಲಾದಿ ಕೇ।
ವಳಮಲ್ತುನ್ನತಸತ್ಯಶೌಚಮಱಿತಂ ಲೋಕೋತ್ತರಂ ಕೀರ್ತಿ ದಿ॥
ಗ್ವಳಯಾಂತಂ ನುಡಿ ಮೇರುಶೈಲಲಿಖಿತಂ ಧರ್ಮಂ ಜಗನ್ಮುದ್ರೆ ಭೂ।
ತಳವಂದ್ಯಂ ಚರಿತಂ ನಯಂ ಜನನುತಂ ಶ್ರೀಸಿಂಹಭೂಪಾಳನಾ॥58॥

## 23 ಗದಗು ಶಾಸನ [1037]

(ಎಪಿಗ್ರಾಫಿಯಾ ಇಂಡಿಕ, XIX, 217)

ಇದರಲ್ಲಿ ಚಾಳುಕ್ಯರಾಜನಾದ 1ನೆಯ ಜಗದೇಕಮಲ್ಲ ಜಯಸಿಂಹನ ಆಳಿಕೆಯಲ್ಲಿ ದಾಮೋದರ ಸೆಟ್ಟಿ ಊರೊಡೆಯ ಮದ್ದಿಮಯ್ಯನಿಂದ ಭೂಮಿಯನ್ನು ಕೊಂಡು ತ್ರೈಪುರುಷ ದೇವರಿಗೆ ಬಿಟ್ಟಂತೆ ಹೇಳಿದೆ.

ದಾಮೋದರ ಸೆಟ್ಟಿ

ಶ್ರೀಕಾಂತಾ ಕಮನೀಯಮಾದುದು ವಿಶಾಲೋರಸ್ಥಲಂ ತನ್ನ ವಾಕ್।
ಶ್ರೀಕಾಂತಾ ಕಮನೀಯಮಾದುದು ಮುಖಾಂಭೋಜಾತಮುದ್ಯಜ್ಜಯ॥
ಶ್ರೀಕಾಂತಾ ಕಮನೀಯಮಾದುದು ಭುಜಾ ದಂಡಂ ದಿಗಂತಂ ಯಶಃ।
ಶ್ರೀಕಾಂತಾ ಕಮನೀಯಮಾದುದದಱಿಂದೇಂ ದಾಮನುದ್ದಾಮನೋ॥59॥

ಸುರ ರಾಜೇಂದ್ರ ಮದೇಭ ಮಸ್ತಕದೊಳಾ ದಿಗ್ದಂತಿ ದಂತಂಗಳೊಳ್।
ಹರನುಗ್ರಾಸಿಯೊಳಿಂದ್ರಕೀಲತಟದೊಳ್ ನೀರೇಜಪುತ್ರಾಂಡದೊಳ್॥
ವರ ನಾಗಾಲಯದೊಳ್ ಮುರಾರಿಯ ಗೃಹೋದ್ಯದ್ವಾರಬಂಧಂಗಳೊಳ್।
ಬರೆದಲ್ ವಾಗ್ವಧು ದಾವಲಂ ಶುಚಿ ಮಹಾ ದಾನಾಢ್ಯನೆಂಬಂಕಮಂ॥60॥

ಸುರ ರಾಜಾದ್ರೀಂದ್ರ ಹೇಮಾಚಲ ಮಲಯ ನಗೋಪಾಂತವಲ್ಲೀ ವನಾಭ್ಯಂ।
ತರದೊಳ್ ನಾನಾ ವಿನೋದಂಗಳೊಳೆ ನೆಲಸಿ ವಿದ್ಯಾಧರ ಸ್ತ್ರೀಯರುಂ ಮೇಣ್॥
ಸುರಕಾಂತಾನೀಕಮುಂ ಪನ್ನಗ ಯುವತಿಯರುಂ ಪಾಡುವರ್ ಕೂಡೆ ದಾವೋ।
ದರ ಕೀರ್ತಿಶ್ರೀಯನೆಂದಂದದಱ ಮಹಿಮೆಯಂ ಬಣ್ಣಿಸಲ್ಕಾರ್ಪನಾವಂ॥61॥

ಮೊಳೆವೋಯ್ತುರ್ಕಜನಿಂ ಪಸುರ್ಪುವಡೆದತ್ತಾ ವಿಕ್ರಮಾದಿತ್ಯ ಭೂ।
ತಳ ನಾಥಾಗ್ರಣಿಯಿಂದೆ ಮತ್ತೆ ತಳಿರಾಯ್ತೆತ್ತಂ ಹರಿಶ್ಚಂದ್ರನಿಂ॥
ನಳನಿಂ ಪೂತುದು ಚಾರುದತ್ತ ವಿಭುವಿಂದಂ ಕಾತುದೀ ಭೂರಿ ಭೂ।
ತಳದೊಳ್ ದಾಮನಿನಗ್ಗಳಂ ಫಲಿತಮಾಯ್ತಾ ದಾನಕಲ್ಪದ್ರುಮಂ॥62॥

**24 ಸಾಗರ 109 [1042]**

ಇದರಲ್ಲಿ ಚಾಳುಕ್ಯರಾಜನಾದ 1ನೆಯ ಜಯಸಿಂಹನ ದಂಡನಾಯಕ ಗೋನರಸನು ಕೆರೆಗಳನ್ನೂ ದೇವಸ್ಥಾನಗಳನ್ನೂ ಕಟ್ಟಿಸಿ ಒಂದಗ್ರಹಾರವನ್ನು ಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.

ಗೋನರಸ

ಹರನ ನಿಟಿಲಾಕ್ಷಿ ವಹ್ನಿ। ಸ್ಫುರಣಂ ಮುರಹರನ ಚಕ್ರಮಬ್ಜಜಪಾಶಂ॥
ಸುರರಾಜವಜ್ರಮೆನಿಪುದು। ಧುರದೊಳ್ ರಿಪುನೃಪರ್ಗೆ ಗೋನಭೂಪನ ಕರವಾಳ್॥63॥

ಅರಿಭೂಪಾಳೋಗ್ರ ವೀರಪ್ರಮುಖಮನಿಱಿದಾಟಂದಪಂ ಕೊಂದಪಂ ಮ।
ಚ್ಚರದಿಂದೆಟ್ಟಿಟ್ಟಿಪಂ ಮುಟ್ಟಿಪನತಿಭರದಿಂ ನೇರ್ದಪಂ ಸೀಳ್ದಪಂ ಕೋ॥
ವರಚಕ್ರಾಕಾರದಿಂ ತಿಱ್ಱನೆ ತಿರಿಪಿದಪಂ ಸುತ್ತಿಪಂ ಮುತ್ತಿಪಂ ಸಂ।
ಗರದೊಳ್ ಶ್ರೀಗೋನಭೂಪಂ ಪ್ರಳಯಶಿಖಿಶಿಖಾಟೋಪಕೋಪಪ್ರತಾಪಂ॥64॥

ಪಱಿದ ಶಿರಂಗಳಿಂ ಕೆದಱಿ ಬಿಟ್ಟ ಗಜಂಗಳಿನಾಡುವಟ್ಟೆಯಿಂ।
ಸುಱಿದರುಣಾಂಬುವಂ ನಲಿವ ರಾಮೆಯರಿಂ ಪೆಣದತ್ತ ಸಾರ್ವ ಪೆಂ॥
ತೆಱೆಯರಿನಲ್ಲಿ ಮಾಂಸರಸಮುಂ ಸವಿದಾಡುವ ರಕ್ಕಸರ್ಗೆ ಪ।
ಲ್ದೆಱೆವ ಮರುಳ್ಗಳಿಂ ಸಮರಮಾಸುರಮಾದುದು ಗೋನಭೂಪನಿಂ॥65॥

ಅರಿಭೂಭೃದ್ಬಳಕಾಳದಂಡನೊಹೊಹೋ ಕೊಂದಿಕ್ಕಿಪಂ ಮುಕ್ಕಿಪಂ।
ನಿರುತಂ ಪೋರ್ದಪನೀಟ್ಟು ಪೀರ್ದಪನೆಲೇ ಮದ್ರಕ್ತಮುಂ ಕೂಡೆ ಕಿಂ॥
ಕರರಪ್ಪಂ ಶರಣೆಂಬಮಾತನನಿಳಾವಿಖ್ಯಾತನಂ ನಿಚ್ಚಮೆಂ।
ದರಿವರ್ಗಂ ಕುದಿಯುತ್ತುಮಿರ್ದಪುದಿದಕ್ಕುಂ ಗೋನನಾಡಂಬರಂ॥66॥

ರಣದೊಳರಾತಿಭೂಭುಜಬಲಂಗಳನುಗ್ರಭುಜಾಸಿಯೊಳ್ ಖಣಿಲ್।
ಖಣಿಲೆನೆ ತಳ್ತು ಪೊಯ್ದು ಪಡಲಿಟ್ಟವೊಲಾಗಿರೆ ಮಾಡಿ ಸಂದ ಬ॥
ಲ್ಕಣೆಗಳ ನೆತ್ತರಿಂ ನೆಣದಿನಳ್ಗರುಳಿಂದಮೆ ಭೂತಕೋಟಿಯಿಂ।
ತಣಿಪಿ ನೆಗಟ್ತಿಯಿಂ ಪಡೆದನೀ ಧರೆಯೊಳ್ ಸಲೆ ಗೋನಭೂಮಿಪಂ॥67॥

ಧುರದೊಳ್ ಗೋನುಗಭೂಪ ನಿನ್ನ ನಿಶಿತಾಸ್ತ್ರಾಘಾತದಿಂ ಸತ್ತ ಭೂ।
ಪರ ಪೆಂಡಿರ್ ಬಿಸುಸುಯ್ಯೆ ನೀಳ್ವ ಶಿಖಿ ತನ್ನಂ ಮುಟ್ಟೆ ನೊಂದಿಂದು ನಿ॥
ತ್ತರಿಸಲ್ ತಾನಣಮಾಱದೀಶ್ವರ ಜಟಾಜೂಟಾಟವೀಸಿಂಧುಸೀ।
ವರಮುಂ ಸೇವಿಸಲಿರ್ದನುಂತು ಶಶಿಗಂ ದೇವಂಗಮೇ ಸಮ್ಮದಂ॥68॥

ತೊಡರ್ವ ವಿರೋಧಿಗೆಂಟೆರ್ದೆಯೆ ಮೀಱುವ ವೈರಿಗೆ ಮೂಱು ಕಣ್ಣೆ ಮಾ।
ರ್ನುಡಿವವನೇಂ ಚತುರ್ಭುಜನೆ ಮಚ್ಚರಿಪಣ್ಣಲೆ ಬರ್ಪನೊಳ್ ಬರಂ॥
ಬಿಡಿದನೆ ಮೀಱಿ ಬಾಟಿಸ್ವುಡವನೇಂ ಜವನೇ ಕಡಿಕೆಯ್ದು ಕಾದಲೆಂ।
ದೊಡರಿಸುವಾತನೇಂ ಭುಜಗಮರ್ದನನೇ ಕಲಿಗೋನಭೂಪನೊಳ್॥69॥

ಎಲೆ ಕೇಳ್ ಗೋನಮಹೀಪ ನಿನ್ನ ಯಶಮಂ ಶ್ರೀಕಾಂತೆಯಾಶಾಂತದೊಳ್।
ನೆಲಸಿರ್ದುನ್ಮದದಂತಿದಂತಯುಗದೊಳ್ ತನ್ನಟ್ತಿಯಿಂ ಕಟ್ಟಿದು॥
ಯ್ಯಲನಾನಂದದೊಳೇಱಿ ದಿಗ್ವನಿತೆಯರ್ ತೂಗಲ್ಕೆ ನಿನ್ನೊಳ್ಗುಣಂ।
ಗಳನಾಲೋಳಮದಾಳಿಮಂದ್ರಮಧುರಪ್ರಧ್ವಾನದಿಂ ಪಾಡಿದಳ್॥70॥

## 25 ಹೂಲಿಯ ಶಾಸನ ಬಿ. [1043]

(ಎಪಿಗ್ರಾಫಿಯಾ ಇಂಡಿಕ, XVIII, 174)

ಈ ಶಾಸನದಲ್ಲಿ ಚಾಳುಕ್ಯ ರಾಜನಾದ ಆಹವಮಲ್ಲನ (2ನೆಯ ಸೋಮೇಶ್ವರನ) ಆಳಿಕೆಯಲ್ಲಿ ಅವನ ಸಾಮಂತ ಕಾಲಡಿಯ ಬೋಳಗಡಿಯ ಮಗ ಸಾಯಿಮ್ಮನ ಮಗಳು ಲಚ್ಚಿಯಬ್ಬೆ ಪೂಲಿಯೊಳಗೆ 1043ರಲ್ಲಿ ಒಂದು ಬಸದಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಕಾಲಡಿಯ ಬೋಳಗಡಿ

ಮೇಲೆಟ್ಟಿ ಪಗೆವರಂ ನಿ। ರ್ಮೂಲಿಸಿ ಜಸಮಂ ನಿಮಿರ್ಚಿ ದಿಗ್ಭಿತ್ತಿವರಂ॥
ಕಾಲಡಿಯ ಬೋಳಗಡಿ ಸಲೆ। ಪಾಲಿಸಿದಂ ತೊಂಬತಾಱುಮಂ ಭುಜಬಳದಿಂ॥71॥

ಲಚ್ಚಿಯಬ್ಬೆ

ಇಷ್ಟಜನಕ್ಕೆ ಚಟ್ಟಸಮಯಕ್ಕೆ ಮಹಾಜನಭೋಜನಕ್ಕೆಯುಂ।
ತ್ಕೃಷ್ಟ ತಪೋಧನಗ್ಗೆಯುಳಿದಾಯುವನಕ್ಕೆ ಸಕನ್ಯ ಕಾಳಿಕಾ॥
ಗಿಷ್ಟಗೆಗೆಯ್ದೆ ನಾಲ್ಕು ಸಮಯಕ್ಕನುರಾಗದೆ ಬೇಗವಿಂತು ಸಂ।
ತುಷ್ಟತೆ ಲಚ್ಚಿಯಬ್ಬರಸಿಗಾರ್ ಸರಿಯೊ ಸಚರಾಚರೋರ್ವಿಯೊಳ್॥72॥

ಸಕಲ ಧರಿತ್ರಿಯೊಳ್ ನೆಗಟ್ದ ವಂದಿಜನಂ ಸಲೆ ರೂಪಿನೇಟ್ಗಿಯಂ।
ಪ್ರಕಟತೆವೆತ್ತ ಗಾನ ಗುಣಮಂ ಕುಲದುನ್ನತಿಯಂ ಜನಾಂಘ್ರಿಗ॥
ಳ್ಗಕುಟಿಲ ಚಿತ್ತಮಂ ಪೊಗೞುತಿರ್ಪ್ಪದು ಕೊಂಡಿಯ ಬಿಂಕದಂಕ ಪಾ।
ಲಕನ ಕುಲೋತ್ತಮಾಂಗನೆಯನರ್ಥಿಯೆ ಲಚ್ಚಲದೇವಿಯಂ ಜಗಂ॥73॥

ಪೂಲಿ

ಶರನಿಧಿ ಮೇಖಲಾವೃತ ವಸುಂಧರೆಯೆಂಬ ವಿಲಾಸಿನೀ ಮುಖಾಂ।
ಬುರುಹದವೋಲ್ ವಿರಾಜಿಸುವ ಬೆಳ್ವಲನಾಟ್ಕೆ ಪೊದಟ್ದ ಶೋಭೆಗಾ॥
ಗರಮೆನಿಸಿರ್ಪ್ಪ ಪೂಲಿ ತಿಲಕಾಕೃತಿಯಿಂದೆಸೆದಿರ್ಪ್ಪುದಾ ಪುರಂ।
ಸುರಪುರಮಂ ಕುಬೇರನಳಕಾಪುರಮಂ ನಗುಗುಂ ವಿಳಾಸದಿಂ॥74॥

ಪೂಲಿಯ ಸಾಸಿರ್ವರ್

ಸಕಲ ವ್ಯಾಕರಣಾರ್ಥಶಾಸ್ತ್ರ ಚಯದೊಳ್ ಕಾವ್ಯಂಗಳೊಳ್ ಸಂದ ನಾ।
ಟಕದೊಳ್ ವರ್ಣ ಕವಿತ್ವದೊಳ್ ನೆಗಟ್ದ ವೇದಾಂತಂಗಳೊಳ್ ಪಾರಮಾ॥
ರ್ಥಿಕದೊಳ್ ಲೌಕಿಕದೊಳ್ ಸಮಸ್ತ ಕಳೆಯೊಳ್ ವಾಗೀಶನಿಂದಂ ಯಶೋ।
ಧಿಕರಾದರ್ ಪೊಗಟ್ವಲ್ಲಿಗಾರಳವೊ ಪೇೞ್ ಸಾಸಿರ್ವರ ಖ್ಯಾತಿಯಂ॥75॥

## 26 ಶಿಕಾರಿಪುರ 151 [1047]

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಾಮಂತ ಚಾಮುಂಡರಾಯನು ಬಳ್ಳಿಗಾವೆಯ ಗಂಡಭೇರುಂಡ ಸ್ತಂಭವನ್ನು ನಿಲ್ಲಿಸಿ ಭೇರುಂಡೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಚಾಮುಂಡರಾಯ

ಇನಜನೆ ದಾನಿ ದಾನಿಗಳೊಳಾತನುಮುಂತೆ ಹಿರಣ್ಯದಾನಿ ವ।
ರ್ಣನೆಗೆ ಹಿರಣ್ಯದಾನಗುಣಮೊಂದುಮದೇಗುವುದೆಂದು ಮೆಚ್ಚದೊ॥
ರ್ಬನನೆ ಹಿರಣ್ಯದಾನಿ ಗಜದಾನಿ ತುರಂಗಮದಾನಿ ದಿವ್ಯವ।
ಸ್ತ್ರನಿಕರದಾನಿಯೆಂದು ಮಹಿ ಬಣ್ಣಿಪುದೀ ಜಗದೇಕದಾನಿಯಂ॥76॥

ನೆಗಟ್ದ ವನೀಪಕವ್ರಜಕೆ ರಾಯನ ಕೊಟ್ಟ ಪೊದಟ್ದ ಪೊನ್ನ ರಾ।
ಶಿಗಳುಮನುನ್ನ ದೇಭನಿವಹಂಗಳುಮಂ ಬಹುವರ್ಣವಾಜಿರಾ॥
ಜಿಗಳುಮನೆಯ್ದೆ ನೋಡಿ ಮನಮಿಕ್ಕಿ ಗಟಿಲ್ಲನೆ ಸತ್ತು ಮಾಯ್ದು ಲೋ।
ಭಿಗಳ ಪವಣ್ಗೊಳಲ್ ಮನುಜರಿರ್ಕಜನಾದೊಡಮೇಂ ಸಮರ್ಥನೇ॥77॥

ಅರಿಯುಂಗುರ್ಕಿಂಡಿ ಬಲ್ಲಿದಂಗೆ ಘಟಸರ್ಪಂ ಗಂಡುದೋರ್ಪಂಗೆ ಮಾ।
ರಿ ರಣಾರಂಭಿಗೆ ಕಾಳಚಕ್ರಮುಱದಾಟರ್ಪಂಗಗುರ್ವಪ್ಪ ದ॥
ಳ್ಳುರಿ ಮಾರ್ಕೊಳ್ವ ಭಟಂಗೆ ತಾಂ ಬಱಸಿಡಿಲ್ ದೋರ್ದರ್ಪದಿಂದುರ್ಕಿ ಮ।
ಚ್ಚರಿಪಂಗಚ್ಚರಿಯಿಂ ಕೊಲಲ್ಕೆಬಲ್ದ ಸಿಂಹಂ ಗಂಡಕಾಲಾನಲಂ॥78॥

ಎಳೆಯೊಳ್ ಬಳೆದಡರ್ದು ದಿಶಾ। ವಳಿಯಂ ದಾಂಗುಡಿಮರಲ್ದು ಪಲ್ಲವಿಸೀ ನಭ।
ಸ್ಥಳದಿಂ ಮತ್ತತ್ತಲಿದೇಂ। ಬಳೆದುದೊ ಕೀರ್ತಿಲತೆ ಗಂಡಕಾಲಾನಲನಾ॥79॥

## 27 ಮುಳ್ಗುಂದದ ಶಾಸನ [1053]

(ಎಪಿಗ್ರಾಫಿಯಾ ಇಂಡಿಕ, XVI, 54)

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಂಧಿವಿಗ್ರಹಿ ಬೆಳ್ದೇವನ ಪ್ರಾರ್ಥನೆಯಿಂದ ಸಿಂದವಂಶದ ಕಂಚರಸನು ಮುಳ್ಗುಂದದ ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಬೆಳ್ದೇವ

ವಿನಯಕ್ಕಾಧಾರಭೂತಂ ಪತಿಹಿತಚರಿತಕ್ಕಾಶ್ರಯಂ ಸದ್ವಿವೇಕ।
ಕ್ಕೆ ನಿವಾಸಂ ಶೌಚಸಂಪತ್ತಿಗೆ ಕುಳಭವನಂ ಸಂತತಾನೂನದಾನ॥
ಕ್ಕೆ ನಿಧಾನಂ ಮಾಂತನಕ್ಕಾಗರಮೆನೆ ನೆಗಳ್ದಂ ಸದ್ವಚೋಭೂಷಣಂ ಭೂ।
ವಿನುತಂ ಬೆಳ್ದೇವನುದ್ಯದ್ವಿಧುವಿಶದಯಶೋವ್ಯಾಪ್ತದಿಕ್ಚಕ್ರವಾಳಂ॥80॥

ಕಂಚರಸ

ಸಿಂದಕುಳತಿಳಕನಬಳಾ। ನಂದನಕರರೂಪನಸಮಸಾಹಸನಿಳಯಂ।
ಸಿಂದನೃಪನಂದನಂ ಲಸ। ದಿಂದುಕರಪ್ರತಿಮಕೀರ್ತಿಕಾಂತಾಕಾಂತಂ॥81॥

ನರೇಂದ್ರಸೇನ

ಚಾಂದ್ರಂ ಕಾತಂತ್ರಂ ಜೈ। ನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮ।
ತ್ತೈಂದ್ರಂ ನರೇಂದ್ರಸೇನಮು। ನೀಂದ್ರಂಗೇಕಾಕ್ಷರಂ ಪೆಱಂಗಿವು ಮೊಗ್ಗೆ॥82॥

## 28 ಶಿಕಾರಿಪುರ 118 [1054]

ಇದರಲ್ಲಿ ಚಾಳುಕ್ಯರಾಜನಾದ ಆಹವಮಲ್ಲನ (ತ್ರೈಲೋಕ್ಯಮಲ್ಲ) ಆಳಿಕೆಯಲ್ಲಿ ವಡ್ಡ ವ್ಯವಹಾರಿ ಸೋವಿಸೆಟ್ಟಿ ಬಳ್ಳಿಗಾವೆಯಲ್ಲಿ ಅಭಿನವಸೋಮೇಶ್ವರಲಿಂಗವನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ತ್ರಿಮೂರ್ತಿಗಳು

ಶ್ರೀವಾಣೀಗಿರಿಜಾಧಿಪರ್ ಗರುಡಹಂಸೋಕ್ಷಾಸನರ್ ವಾರ್ಧಿರಾ।
ಜೀವಾದ್ರೀಂದ್ರ ನಿವಾಸಿಗಳ್ ಮಧುಪರಕ್ತಾಂಭೋರುಹೇಂದುಪ್ರಭರ್॥
ದೇವರ್ ಸತ್ವರಜಸ್ತಮೋಗುಣಯುತರ್ ದ್ವ್ಯಷ್ಟತ್ರಿನೇತ್ರೋತ್ಪಲರ್।
ಗೋವಿಂದಾಬ್ಜಜಶಂಕರತ್ರಿಪುರುಷರ್ ಪಾಲಿಕ್ಕೆ ನಿಮ್ಮಂ ಚಿರಂ॥83॥

### ಆಹವಮಲ್ಲ

ಮೇರುಗಿರೀಂದ್ರದಂತೆ ವಿಬುಧಾಶ್ರಯನೀಶ್ವರನಂತುಮೇಶನಾ।
ಶಾರದನೀಂದ್ರನಂತಧಿಕದಾನನಹೀಶ್ವರನಂತೆ ವಿಶ್ವಭೂ॥
ಭಾರಭರಕ್ಷಮಂ ವಿಧುವಿನಂತೆ ಕಲಾಸ್ಪದನಬ್ಧಿಯಂತೆ ಲ।
ಕ್ಷ್ಮೀರಮಣೀಯಜನ್ಮನಿಲಯಂ ನೆಗಟ್ದಾಹವಮಲ್ಲ ವಲ್ಲಭಂ॥84॥

ಪ್ರವಿಮಳಕೀರ್ತಿಯೊಳ್ ವಿಭವದೊಳ್ ಸುಚರಿತ್ರದೊಳಾರ್ಪಿನೊಳ್ ಮಹಾ।
ಹವಜಯದೊಳ್ ಗುಣೋನ್ನತಿಯೊಳಾಹವಮಲ್ಲನೊಳಾಂ ಸಮಾನಮೆಂ॥
ಬವನಿಪನೇಂ ಯಯಾತಿಯೊ ಭಗೀರಥನೋ ಪುರುಕುತ್ಸನೋ ಪುರೂ।
ರವನೊ ದಿಲೀಪನೋ ಭರತನೋ ನಳನೋ ನಹುಷಾವನೀಶನೋ॥85॥

ಎಱಗದ ವೀರರಂಜದದಟರ್ ಶರಣೆನ್ನದ ರಾಯರೆಂದುದಂ।
ತಿಱಿದಟವೀಶ್ವರರ್ ಜವನ ಬಾರಿಗೆ ಪೋಗದ ಯುದ್ಧಲಾಲಸರ್॥
ಮಱಿವುಗದಂಕಚೇಯರಿಱಿದೋಡದ ದುರ್ಗದ ಗಂಡರಳ್ಕಿ ಬೆ।
ಳ್ಕುಱದ ಮದಾಂಧರಿಲ್ಲಿದು ಪರಾಕ್ರಮುಮಾಹವಮಲ್ಲದೇವನಾ॥86॥

ಕ್ಷಣದಿಂ ಮಾಳವಮೇಱುಮೆಯ್ದೆ ವಿಳಯಕ್ಕೆಯ್ದಿತ್ತು ಸಂದಿರ್ದ ಕೊಂ।
ಕಣಮೇಱುಂ ಮಲೆಯೇಱುಮಂಜಿ ಬೆಸಕೆಯ್ದತ್ತೋವದಾಂತಾಹವಾಂ॥
ಗಣದೊಳ್ ಚೋಳಿಕನಣ್ಮಿ ಸತ್ತನಖಿಳದ್ವೀಪಾವನೀಪಾಳಕಾ।
ಗ್ರಣಿಗಳ್ ಕಪ್ಪಮನಿತ್ತರೇನದಟನೋ ತ್ರೈಳೋಕ್ಯಮಲ್ಲಾಧಿಪಂ॥87॥

## 29 ಬಂಕಾಪುರದ ಶಾಸನ [1055]

(ಎಪಿಗ್ರಾಫಿಯಾ ಇಂಡಿಕ XIII, 170)

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಾಮಂತ ಕಾದಂಬ ಹರಿಕೇಸರಿ ಕೇತಿಸೆಟ್ಟಿಯ ಪ್ರಾರ್ಥನೆಯಿಂದ ಕದಂಬೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಹರಿಕೇಸರಿಯ ಹೆಂಡತಿ ಲಚ್ಚಲದೇವಿ

ಭೂವನಿತಾವರಂ ಹರಿಗನಾ ನೃಪವೀರನುರಸ್ಥಳಕ್ಕೆ ಲ।
ಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್॥
ಶ್ರೀವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ಧಕೀರ್ತಿಲೀ।
ಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀ ಜಗಜ್ಜನಂ॥88॥

ವಿನಯದ ಮೇರೆ ಧರ್ಮದ ತವರ್ಮನೆ ಸತ್ಯದ ಜನ್ಮಭೂಮಿ ಮಾಂ।
ತನದದಗುಂತಿ·ಚಾಗದ ಮಹಾನಿಧಿ ಪೆಂಪಿನ ರತ್ನರಾಶಿ ಸ॥
ಜ್ಜನಿಕೆಯ ರಮ್ಯಹರ್ಮ್ಯಮಜಿಿವಿಂಗೆಜಿವಟ್ಟು ವಿದಗ್ಧಮುಗ್ಧೆ ಸ।
ಜ್ಜನನುತೆಯೆಂದು ಬಣ್ಣಿಪುದು ಲಚ್ಚಲದೇವಿಯನೀ ಜಗಜ್ಜನಂ॥89॥

## 30 ನಾಗಾಯಿ ಶಾಸನ ಬಿ [1058]

(ಹೈದರಾಬಾದ್ ಆರ್ಕಿಯೊಲಾಜಿಕಲ್ ಸೀರೀಸ್ 8. ಪುಟ 5)

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ದಂಡನಾಯಕ ಮಧುಸೂದನನು ನಾಗವಾವಿಯಲ್ಲಿ ತ್ರೈಪುರುಷ, ಮಧುಸೂದನ, ರಾಮೇಶ್ವರ ಎಂಬ ದೇವಸ್ಥಾನಗಳನ್ನು ಕಟ್ಟಿಸಿ ಒಂದು ಪಾಠಶಾಲೆಯನ್ನೂ ಸ್ಥಾಪಿಸಿ ಅದರಲ್ಲಿ 200 ವಿದ್ಯಾರ್ಥಿಗಳು ವೇದವನ್ನು ಕಲಿವಂತೆಯೂ, 52 ವಿದ್ಯಾರ್ಥಿಗಳು ಶಾಸ್ತ್ರವನ್ನು ಎಂದರೆ, ಭಾಟ್ಟದರ್ಶನ, ನ್ಯಾಯ, ಪ್ರಾಭಾಕರ ಇವುಗಳನ್ನು ಕಲಿವಂತೆಯೂ, 6 ಉಪಾಧ್ಯಾಯರುಗಳನ್ನೂ, ಒಬ್ಬ ಸರಸ್ವತೀ ಭಾಂಡಾರಿಕ (Librarian) ರನ್ನೂ ಏರ್ಪಡಿಸಿ ಇವೆಲ್ಲಕ್ಕೂ ತಕ್ಕಷ್ಟು ಭೂಮಿಯನ್ನು ಬಿಟ್ಟಂತೆ ಹೇಳಿದೆ.

ತ್ರಿಮೂರ್ತಿಗಳು

ಶ್ರೀರಮಣೀ ಮನೋರಮಣ ವಾಗ್ರಮಣೀ ರಮಣಾದ್ರಿ ರಾಜಪು।
ತ್ರೀರಮಣೀ ಮನೋರಮಣ ರೂಪದೆ ಸತ್ವರಜಸ್ತಮೋಗುಣಾ॥
ಧಾರತೆಯಿಂ ಜಗತ್ಸ್ಥಿತಿ ಸಮುದ್ಭವ ಸಂಹೃತಿ ಹೇತುವಾದ ನೀ।
ರೇರುಹನಾಭ ನೀರಜಸಮುದ್ಭವ ಶಂಕರರೀಗಭೀಷ್ಟಮಂ॥90॥

ಬ್ರಹ್ಮ

ಅವರೊಳಗೆ ಸಕಳ ಭುವನೋ।ದ್ಭವ ಕಾರಣಮೆನಿಸಿ ನೆಗಟ್ದನಾದಿ ಬ್ರಹ್ಮಂ॥
ದಿವಿಜ ಮುನಿ ಜನ ವಿನುತ ಪ। ದ್ಮವಿಷ್ಟರಂ ತರುಣ ತರಣಿ ಕಿರಣಚ್ಛಾಯಂ॥91॥

ಚಾಳುಕ್ಯವಂಶ

ಕಮನೀಯಮದು ಸದಾನಂ। ದಮನಂದಂ ಸತ್ಕದಂಬಮುಕದಂಬಂ ಸ॥
ರ್ವ ಮಹೀಗುಪ್ತಮಗುಪ್ತಂ। ಸಮಸ್ತ ವಂಶಾವತಂಸಮಂತಾ ವಂಶಂ॥92॥

## ಚಾಳುಕ್ಯ ರಾಜರು

ಪಲರಾ ವಂಶಜರವನೀ। ತಲಮಂ ಪಾಲಿಸಿದರಳವಿನದಟಿನ ಬಾಹಾ॥
ಬಲದ ಕಲಿತನದ ಚಾಗದ। ನೆಲೆಯೆನಿಸಿದುದಾರ ವೀರ ಗುಣಗಣ ನಿಳಯರ್॥93॥

## ಕುಂತಳ ದೇಶ

ಅನುಪಮರವನಿಪರನ್ಯಾ। ವನಿಪ ಶ್ರೀ ಕುಂತಳಕ್ಕೆ ಕೆಯ್ಸೆಾಡಿ ನಿಜಾ॥
ವನಿಗೆ ತೆಗೆಯಲ್ ತದೀಯಾ। ವನಿ ಕುಂತಳ ವಿಷಯಮೆನಿಸಿ ಪೆಸರ್ವೆತ್ತೆಸೆಗುಂ॥94॥

## ಜಯಸಿಂಹ

ವನಧಿ ಪರಿವೃತ ಸಮಸ್ತಾ। ವನಿ ತಳದೊಳ್ ದಂಡಸಾಧ್ಯಮಲ್ಲದೆ ತಾನಾಂ॥
ಪನಿತುವರಮರಿಯರಿಲ್ಲೆಂ। ಬಿನೆಗಂ ಜಯಸಿಂಹದೇವನಾಳ್ದಂ ನೆಲನಂ॥95॥

## ರಾಯನಾರಾಯಣ (ತ್ರೈಲೋಕ್ಯಮಲ್ಲ)

ಪುಸಿಯಱಿಯದ ನುಡಿ ಲೋಭದ। ದೆಸೆಯಱಿಯದ ಚಾಗಮನ್ಯವನಿತಾಜನದೊಳ್॥
ಸುಸಿಲಱಿಯದ ಶೌಚಂ ಭಯ। ರಸಮಱಿಯದ ಗಂಡು ರಾಯನಾರಾಯಣನಾ॥96॥

ಅದಟನಳುರ್ಕೆಯುಂ ನೃಪನ ಸಾಹಸಮುಂ ಧರೆಗಾನದಿಂತುಟೆ।
ನ್ನದೊಡವೆ ತಾವೆ ಪೇೞವೆ ವಿರೋಧಿಯ ಪೆಂಡಿರ ಕಂಕಣಂಗಳಿ॥
ಲ್ಲದ ಕರಮಾರಮಿಲ್ಲದುರಮಂಜನಮಿಲ್ಲದ ಕಣ್ಗಳೋಲೆಯಿ।
ಲ್ಲದ ಕಿವಿ ಕಾಂಚಿಯಿಲ್ಲದುಡೆ ನೂಪುರಮಿಲ್ಲದ ಪಾದ ಪಲ್ಲವಂ॥97॥

## ಕಾಳಿದಾಸ ದಂಡನಾಯಕ

ಸಲೆ ಸತ್ಯಕ್ಕೆ ಮೊದಲ್ ಚಲಕ್ಕೆ ನೆಲೆ ಧರ್ಮಕ್ಕಾರ್ಮಮಾಯಕ್ಕಗುಂ।
ದಲೆ ಬೀರಕ್ಕೆ ತವರ್ ಗುಣಕ್ಕೆ ಕಣಿ ಪೆಂಪಿಂಗಿರ್ಕೆ ಚಾಗಕ್ಕೆ ತಾ॥
ಯ್ವೊಲನಣ್ಮಂಗೆಡೆ ಮಾಂತನಕ್ಕೆ ಗುಱಿ ಚಾತುರ್ಯಕ್ಕೆ ಬೀಡಿಕ್ಕೆ ಕೀ।
ರ್ತಿಲತಾವಲ್ಲಿಗಡರ್ಪು ತಾನೆನಿಸಿದಂ ಸಂಗ್ರಾಮ ಕಂಠೀರವಂ॥98॥

ತೆರೆಯಿಂ ಕುಂಬುವ ಭೈತ್ರಮಂ ಭರದೆ ಬಿಣ್ಗುಂಡಿಕ್ಕಿ ಬಲ್ಪಿಂದೆ ಸಂ।
ವರಿಪಂತುರ್ವಿನೆ ಸಿಂಹಭೂಪತಿಗೆ ಮಾಸಾಮಂತರುಂ ಮಂಡಳೇ॥
ಶ್ವರರುಂ ತಪ್ಪೆ ಕಟಿಲ್ಪ ರಾಜ್ಯಭರಮಂ ಕೆಯ್ಕೊಂಡು ಬಲ್ಲಿಂ ಸಮು।
ದ್ಧರಿಸಿರ್ದುನ್ನತಿ ಕಾಳಿದಾಸ ವಿಭುವಿಂಗಕ್ಕುಂ ಪೆಱಂಗಕ್ಕುಮೇ॥99॥

ಅದಿರದ ರಾಜಕಂ ತಿಱಿದ ಮಂಡಲಮೇಱಿದ ಕೋಂಟೆ ಸಾಧ್ಯಮಾ।
ಗದ ದೆಸೆ ಕಪ್ಪವೀಯದಿದಿರೆಂದುದನೆನ್ನದ ಭೂಪರಾಟ್ದ್ವಿಡಂ॥
ಗದ ಪಗೆ ಕೆಯ್ಯನಾನದಭಿಮಾನಿ ಶರಣ್ಬುಗದನ್ಯರಿತ್ತು ಕಾ।
ಣದ ನೃಪರಿಲ್ಲದೇನೆಸಕಮಚ್ಚರಿಯಾದುದೊ ಕಾಲಿದಾಸನಾ॥100॥

ಮಧುಸೂದನ

ನೆಗಟ್ದೀಟುಂ ಕುಳಶೈಲದೊಳ್ ಸುರಗಿರೀಂದ್ರಂ ಪೆಂಪನಾಳ್ದಂತೆ ಭೂ।
ರಿ ಗಭೀರಾಬ್ಧಿಗಳೇೞಱೊಳ್ ಮಹಿಮೆಯಿಂ ದುಗ್ಧಾಬ್ಧಿ ಪೆತ್ತಂತೆ ತ॥
ನ್ನ ಗುಣಂ ಧಾತ್ರಿಗೆ ಭೂಷಣಂಗಳೆನೆ ತಮ್ಮುತ್ತೇೞ್ವರೊಳ್ ತಾನೆ ದಲ್।
ಮಿಗಿಲೆಂಬಂತಿರೆ ಮ್ಯೆಮೆಯಂ ಮಧುವ ದಂಡಾಧೀಶ್ವರಂ ತಾಳ್ದಿದಂ॥101॥

ಅವನೀನಾಥರ್ಕಳೊಳ್ ಸಂದವನಿ ವಲಯಮುಂ ಸಾರ್ವಭೌಮತ್ವದಿಂದಾ।
ಳ್ದವರಾರಾರೆಂಬ ಪೇೞ್ವಿಂ ಹರಿ ರಘುತನಯಂ ಕೌರವಂ ರಾಯ ಕಂಠೀ॥
ರವನೆಂಬೀ ನಾಲ್ವರಿಂತೀ ನೆಗಟ್ದವನಿಪರೊಳ್ ಸ್ವಾಮಿ ಸಂಪತ್ತಿಯಂ ಪೆ।
ತ್ತವರುಂ ನಾಲ್ವರ್ ಗರುತ್ವಂ ಪವನಜನಿನಜಂ ದಂಡನಾಥ ತ್ರಿನೇತ್ರಂ। ॥102॥

ಪೊಡವಿಯೊಳಗೆಲ್ಲಿ ನೋೞ್ಪೊಡ। ಮಿಡದಾರಮೆ ಕುಡದ ದಾನಮಿಕ್ಕದ ಸತ್ರಂ॥
ಪಡಿ ಸಲಿಸದ ದೇವಾಲಯ। ಮಿಡದಱವಂಟಗೆ ಪೊಗಟಲಳವೆ ಮಧುಸೂದನನಂ ॥103॥

## 31 ಅರಸಿಯಕೆರೆ 186 [ಸು. 1060]

ಇದರಲ್ಲಿ ಹೊಯ್ಸಳರಾಜನಾದ ವಿನಯಾದಿತ್ಯನ ಆಳಿಕೆಯಲ್ಲಿ ಧರ್ಮರಾಶಿಪ್ರತಿ ದೇಸವಣಿಯು ಶಿವದೇವಸ್ಥಾನವನ್ನು ಜೀರ್ಣೋದ್ಧಾರಮಾಡಿದಂತೆ ಹೇಳಿದೆ.

ವಿನಯಾದಿತ್ಯ

ಪರಮಶ್ರೀಸರ್ವಧರ್ಮಂ ನೆಗೞೆ ಪರಮಹೀಪಾಳಕರ್ ತನ್ನ ತೇಜ।
ಸ್ಫುರಿತಕ್ಕಳ್ಕಂಜೆ ತನ್ನುಜ್ವಳಯಶಮವನೀಚಕ್ರಮಂ ಪರ್ವಿ ದಿಕ್ಕುಂ॥
ಜರದಂತಾಘಾಟದಿಂ ಬಳ್ವಳನೆ ಬಳೆದಿರಲ್ ವೀರಲಕ್ಷ್ಮೀನಿವಾಸಂ॥
ಧರಣೀಸಂಕೀರ್ತಿಯಂ ಪ್ರಜ್ವಳಿಸಿದ ವಿನಯಾದಿತ್ಯನಾದಿತ್ಯತೇಜಂ॥104॥

ಧರ್ಮರಾಶಿ

ನೆಱೆ ತಪದೊಂದು ಪೆಂಪು ಗುಣದಾಗರಮಂಬುದಿದೊಂದು ಪೆಂಪು ಪೇ।
ರಱಿಕೆಯ ಕೀರ್ತಿಯಿಂ ಕೆಱೆಯ ಕಟ್ಟಿದ ಪೆಂಪು ಸುರೇಶಭಕ್ತಿಯಿಂ॥
ತಱಿಸಲವಿಂದೆ ದೇಗುಲಮನೆತ್ತಿದ ಪೆಂಪು ಸಮಸ್ತಧಾತ್ರಿಯೊಳ್।
ಪೆಱರನದೇಕೆ ಪೇೞ್ ಪೊಗೞ್ವೆ ಪೊಗೞಿಂ ಸಲೆ ಧರ್ಮರಾಶಿಯಂ॥105॥

ಬರ್ಮಗವುಂಡ

ಶ್ರೀಗಂ ವಿಶ್ರುತವಾಣಿ। ಶ್ರೀಗಂ ಹರಹಾಸಭಾಸಮೆನಿಸುವ ಕೀರ್ತಿ।
ಶ್ರೀಗಂ ವಿನೂತವಿಜಯ। ಶ್ರೀಗಂ ನೆಲೆಯೆನಿಸಿ ನೆಗಟ್ದಿ ಬರ್ಮಗವುಂಡಂ॥106॥

## 32 ಸೂಡಿಯ ಶಾಸನ [1060]

(ಎಪಿಗ್ರಾಫಿಯಾ ಇಂಡಿಕ XV, 87 )

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ದಂಡನಾಯಕ ನಾಗದೇವನು ನಾಗೇಶ್ವರದೇವ ಸ್ಥಾನಕ್ಕಾಗಿ ಸೋಮೇಶ್ವರಪಂಡಿತನಿಗೆ ಗ್ರಾಮವನ್ನು ಕೊಟ್ಟಂತೆ ಹೇಳಿದೆ.

ನಾಗದೇವ

ಜಳರಾಶಿಶ್ರೇಣಿಯೊಳ್ ಪಾಲ್ಗಡಲಮರಕುಜಶ್ರೇಣಿಯೊಳ್ ಪಾರಿಜಾತಂ।
ಕುಳಶೈಳಶ್ರೇಣಿಯೊಳ್ ಮಂದರಮಖಿಳನದೀಶ್ರೇಣಿಯೊಳ್ ಗಂಗೆಯೆಂತ॥
ಗ್ಗಳಮೆಂತಾರಾಧ್ಯಮಂತೀ ಚತುರುದಧಿತಟೀಸ್ಥೂಲಕಲ್ಲೋಲಮಾಲಾ।
ವಿಳಭಾಸ್ವದ್ಭೂರಿಭೂಗೋಳಕಜನಿತವಿಭುಶ್ರೇಣಿಯೊಳ್ ನಾಗದೇವಂ॥107॥

ನಾಡಾಡಿಯಲ್ಲದಂತಿರೆ। ಮಾಡಿಸಿದಂ ದೇವನಿಲಯದೆರಡುಂ ಕೆಲದೊಳ್।
ಕೂಡೆ ಧವಳಾರಮಂ ಸುರ। ನೀಡಮಿವೆನೆ ಸೂಳೆಗೇರಿಯಂ ಬುಧನಿಳಯಂ॥108॥

ಸೋಮೇಶ್ವರಪಂಡಿತ

ಕ್ಷಿತಿಯೊಳ್ ದಿವ್ಯವ್ರತೀಂದ್ರರ್ ಪಲರೊಳರವರ್ಗೊಂದುಳ್ಳೊಡೊಂದಿಲ್ಲಿದೇನಂ।
ಬ ತಪೋವಿಖ್ಯಾತಿಯೇನೆಂಬಮಳಿನಚರಿತಖ್ಯಾತಿಯೇನೆಂಬ ವಿದ್ಯಾ॥
ಚತುರತ್ವಖ್ಯಾತಿಯೇನೆಂಬಖಿಳಗುಣಗಣಖ್ಯಾತಿಯೆಂಬೊಂದು ಪೆಂಪೂ।
ರ್ಜಿತಮಾಯ್ತೆಂದಂದೆ ಸೋಮೇಶ್ವರಯತಿಪತಿಯಂ ಬಣ್ಣಿಸಲ್ ಬಲ್ಲನಾವೊಂ॥109॥

ಶಂಕ

ಕಣಿ ವಿದ್ಯಾವಿಭವಕ್ಕುದಾಹರಣೆಯರ್ಥೋಪಾರ್ಜನಕ್ಕೆಕ್ಕಲಾ।
ವಣಮುದ್ಯದ್ಗುಣರತ್ನರಾಜಿಗೆಜಿೇವಟ್ಟೌದಾರ್ಯಸಂಪತ್ತಿಗೇ॥
ಗಣಜೆಂದೀ ಗುಣಿ ಶಂಕನಂ ಪೊಗಟುಗುಂ ಝುಾತ್ಕಾರಿಝುಂಝುಾಸಮೀ।
ರಣಸಂಭೂತತರಂಗಸಂಭೃತಪಯೋಧಿಪ್ರಾವೃತೋರ್ವೀತಳಂ॥110॥

## 33 ಹಳೆಯಬೀಡು ಶಾಸನ [1062]

(ಮೈಸೂರು ಶಾಸನದ ಇಲಾಖೆಯ 1929ನೆಯ ವರ್ಷದ ವರದಿ; ಶಾಸನ ಸಂಖ್ಯೆ 12)

ಇದರಲ್ಲಿ, ಹೊಯ್ಸಳರಾಜನಾದ ನೃಪಕಾಮನ ಮಗ ವಿನಯಾದಿತ್ಯನು ದೋರಸಮುದ್ರದ ಕೆರೆಗೆ ತೂಬನಿಕ್ಕಿಸಿ ಬಿತ್ತುವಟ್ಟವನ್ನು ಬಿಟ್ಟಂತೆ ಹೇಳಿದೆ.

ಅನುಪಮನೆನಿಸಿದ ನೃಪಕಾ। ಮನಾಮಪೊಯ್ಸಳನ ನಂದನಂ ಜಗದಧಿಕಂ।
ವಿನಯಾದಿತ್ಯಂ ಪೊಯ್ಸಳ। ನೆನಿಸಿ ಚಿರಂ ಗಂಗವಾಡಿಯಂ ಪಾಳಿಸುತುಂ॥111॥

ಅದಟಂ ದೋರಸಮುದ್ರದೊಳ್ ಸಮುದಿತೋದ್ಯಚ್ಛ್ರೀ ಸಮಾಲಿಂಗಿತಾ।
ಭ್ಯುದಯಂ ಸತ್ಸುಖ ಸಂಕಥಾ ಬಿನದದಿಂ ರಾಜ್ಯಂಗೆಯುತ್ತಿರ್ದು ಜೀ।
ವದಯೋಪೇತನುದಗ್ರ ವೈರಿ ಬಳ ನಿರ್ಘಾತಂ ವಿಶೇಷ ಪ್ರಭಾ।
ಸ್ಪದನೀ ತೂಂಬನುದಾತ್ತನಿಕ್ಕಿಸಿದನಾಚಂದ್ರಾರ್ಕ ತಾರಂಬರಂ॥112॥

ರಕ್ಕಸಪೊಯ್ಸಳನುಗ್ರ ಚ।ಳಕ್ಕಂ ಯಾದವ ಕುಳಾಂಬುಜಾರ್ಕಂ ಮುದದಿಂ।
ದಿಕ್ಕಿಸಿದನೆಸೆವಿನಂ ಮೇ।ಲಕ್ಕಮನೀ ಕೆಱೆಗೆ ರಾಜಮಾಂಧಾತ ನೃಪಂ॥113॥

## 34 ನಗರ 47 [1062]

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ವೀರಸಾಂತರನು ನೊಕ್ಕಿಯಬ್ಬೆಯ ಬಸ್ತಿಯನ್ನು ಮಾಡಿಸಲು ಅವನ ಹೆಂಡತಿ ಚಾಗಲದೇವಿಗೆ ಬಸ್ತಿಯ ಮುಂದಣ ಮಕರತೋರಣ ವನ್ನು ಮಾಡಿಸಿದಳೆಂದು ಹೇಳಿದೆ.

ಚಾಗಲದೇವಿ

ಗುಣದೊಳ್ ರೂಪಿನೊಳೊಳ್ಪಿನೊಳ್ ಸೊಬಗಿನೊಳ್ ಶೃಂಗಾರದೊಳ್ ಸೌಮ್ಯಲ।
ಕ್ಷಣದೊಳ್ ಪೈಮೆಯೊಳೋಜೆಯೋಳ್ ವಿಭವದೊಳ್ ಶೀಲಂಗಳೊಳ್ ಭೃತ್ಯಪೋ॥
ಷಣದೊಳ್ ಭೋಗದೊಳಾರ್ಪಿನೊಳ್ ವಿಭುತೆಯೊಳ್ ಕಾರುಣ್ಯದೊಳ್ ಪೋಲಿಸ।
ಲ್ಕೆಣೆಯಾರ್ ಗೆಲ್ಪಬೆಡಂಗಿಗೆಂದನುದಿನಂ ವಿದ್ವಜ್ಜನಂ ಬಣ್ಣಿಕುಂ॥114॥

ಸಲುಗೆಗೆ ಸಾಮ್ಯಕ್ಕೆಕ್ಕೆಗೆ। ಪಲರಕ್ಕೆಮ ಸತಿಯುರಹಿತರಂ ಗೆಲ್ವೆಡೆಯೊಳ್।
ಗೆಲುವ ಬೆಡಂಗಿಯೆ ಬೀರನ। ಬಲದ ಭುಜಾದಂಡದಲ್ಲಿ ಕೆಲದೊಳ್ ನಿಲ್ವಳ್॥115॥

ಪತಿಯುಂ ವಂಚಿಸಿ ಸಲೆ ನಿಜ। ಕೃತಕದಿನರ್ಧಾವಳೋಕನಾಕ್ಷಿಗಳಿಂ ಭ್ರೂ।
ಲತೆಯೊಳವೊಳಪೊಯ್ಸಿ ದು।ರ್ವೃತೆಯರ್ ಪೋಲ್ತಪರೆ ಚಾಗಿಯಬ್ಬರಸಿಯರಂ॥116॥

ಅತಿಶಯಮಪ್ಪ ರೂಪಿನೊಳುದಾರತೆಯೊಳ್ ವಿನಯೋಪಚಾರದೊಳ್।
ಪತಿಗತಿಭಕ್ತಿಯೊಳ್ ವಿಪ್ರುಳಭೋಗದೊಳಿಂ ಪೆಱತೇನನೆಂಬೆ ಮಾಣ್॥
ರತಿಗನುಸಾರಿ ಪಾರ್ವತಿಗೆ ತೋಡು ಕುಜಾತೆಗೆ ಪಾಟಿ ನೋಡರುಂ।
ಧತಿಗೆಣೆ ವಾಸವಾಂಗನೆಗೆ ಪಾಸಟಿ ಚಾಗಲದೇವಿ ಧಾತ್ರಿಯೊಳ್॥117॥

## 35 ಚಿಕ್ಕಮಗಳೂರು ತಾಲ್ಲೂಕು ಗೌತಮೇಶ್ವರ ಗ್ರಾಮದ ಶಾಸನ [1065]

(ಮೈಸೂರು ಶಾಸನದ ಇಲಾಖೆಯ 1927ನೆಯ ವರ್ಷದ ವರದಿ, ಶಾಸನ ಸಂಖ್ಯೆ 34)

ಇದರಲ್ಲಿ ವಾಮನಭಟ್ಟನು ತನ್ನ ಗದ್ದೆಯಲ್ಲಿ ಮೇದ ಎತ್ತನ್ನು ಹೊಡೆದು ಕೊಂದ ಪಾಪ ನಿವಾರಣೆಗೋಸ್ಕರ ಸ್ವಯಂಭುದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಂಬೂದ್ವೀಪದೊಳದು ತಾಂ। ಗಂಭೀರತೆವೆರಸು ನೆಗಟ್ಟಿ ಕೈಕೇಶ್ವರದೊಳ್॥
ಶಂಭು ನೆಲಸಿರ್ಪನದಱಿಂ। ದಿಂಬಾಗಿರೆ ಕೂರ್ದವಳ್ಳಿಯೆಸೆವುದು ಗ್ರಾಮಂ॥118॥

ಶಿವನಿಳಯದಿಂದೆ ಪೊಱಮ। ಟ್ಟು ವೇಗದಿಂ ಪೋಗಿ ವಾಮನಯ್ಯನ ಕೆಯ್ಯಂ॥
ಕ್ರಮದಿಂದೆ ಮೇವ ವೃಷಭನ। ನವಯುವದಿ ಪೋಗಿ ಕಂಡು ಕಡುಮೂರ್ಖತೆಯಿಂ॥119॥

ಮೆಱೆಕೋಲ ಕಳೆದುಕೊಳ್ಳುತೆ। ಬಱಿಸಿಡಿಲೆಱಿಪಂತೆ ಬಂದು ವಾಮನಭಟ್ಟಂ॥
ಕಱುಪಿಂದಮೆಯ್ದಿ ಪೊಯ್ಯಲ್। ಕಱಿಕಂಠ ಶರಣ್ಯ ಎಂದು ಬಿಟ್ಟುದು ವೃಷಭಂ॥120॥

ಅತ್ತಲ್ ವೃಷಭನ ಪ್ರಾಣಂ। ಮತ್ತೆನಿಸದೆ ಪೋದುದಮರ ವಾಸಮನೆಯ್ದಲ್॥
ಇತ್ತಲ್ ದೇಹಂ ಬಿಱಿದ್ದಿಡೆ। ಯೆತ್ತಿನ ಮಣ್ಣೆಂಬುದಾದುದಂದಿಂದಿತ್ತಲ್॥121॥

ಪಱಿಕಿಸದಾ ಪಾರ್ವ ನಡೆದು। ಪರಮಾರ್ಥಂ ಕೊಂದಳಿಂತು ಮುಂಗುರೆಯಂ ತಾ॥
ನೆರಡಿಲ್ಲದೆಂಬ ನಾಟ್ನುಡಿ। ಪೊರೆದುದಿದರ್ಕೆಂದೊಡಂದು ಮಱುಗುತೆ ಮನದೊಳ್॥122॥

ಊರ ಮಹಾಜನಮೆಲ್ಲಮ। ನೋರಂತಿರೆ ನೆರಹಿ ತಂದು ವಾಮನಭಟ್ಟಂ॥
ಪಾರದೆ ಸ್ವಯಂಭು ದೇವರ್ಗೆ। ಧಾರೆಯನೆಱೆದಿತ್ತನೆರಡುವಡ್ಡದ ಕೆಯ್ಯಂ॥123॥

## 36 ಶಿಕಾರಿಪುರ 19 [1066]

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಸರ್ವನ್ಯಾಂಕನು ಬೇಹೂರಲ್ಲಿ ಕೆರೆಗಳನ್ನು ಕಟ್ಟಿಸಿ ಮಲ್ಲಿಕಾರ್ಜುನದೇವರ ಮಠದ ವಿದ್ಯಾರ್ಥಿಗಳಾಹಾರದಾನದ ಸತ್ರಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಸರ್ವನ್ಯಾಂಕನ ಪಿತಾಮಹ ಕೊಂತದ ಬೀರ

ಕರಿಘಟೆಗಳೊಡ್ಡನೊಡೆಯಿಱಿ। ದರಿಬಳವಮಂ ಗೆಲ್ದು ಚಕ್ರಿತೈಲಪನಂ ಸಂ।
ಗರದೊಳ್ ಮೆಚ್ಚಿಸಿದದಟಂ। ಪರಬಳಮಲ್ಲಂ ಪ್ರತಾಪಿ ಕೊಂತದ ಬೀರಂ॥124॥

ಸರ್ವನ್ಯಾಂಕ

ಹರಚರಣಕಮಳಭೃಂಗಂ। ಧುರದೊಳ್ ಪೆಱಪಿಂಗನನ್ಯವನಿತಾಪುತ್ರಂ।
ಸ್ಥಿರವಾಕ್ಯಂ ಬುಧಮಿತ್ರಂ। ಸುರತರುವೆರೆದವರ್ಗೆ ಬಿರುದ ಸರ್ವನ್ಯಾಂಕಂ॥125॥

## 37 ಶಿಕಾರಿಪುರ 13 [1068]

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಪಸಾಯಿತ ಲಕ್ಷ್ಮರಸನು ಬಳ್ಳಿಗಾವೆಯ ಮಲ್ಲಿಕಾ-ಮೋದಶಾಂತಿನಾಥದೇವರ ಬಸದಿಗೆ ಶಿಲಾಕರ್ಮವನ್ನು ಮಾಡಿಸಿದಂತೆ ಹೇಳಿದೆ.

ಭುವನೈಕಮಲ್ಲ (ಸೋಮೇಶ್ವರ II)

ಜಯಮಂ ಧರ್ಮಕ್ಕೆ ಧರ್ಮಾನ್ವಯಮನಸದಳಂ ಸಾಧುವರ್ಗಕ್ಕೆ ವರ್ಗ।
ತ್ರಯಮಂ ತನ್ನಂತರಂಗಕ್ಕೊಡರಿಸಿ ಧರೆಯಂ ಕೂಡೆ ಸನ್ಮಾನದಾನ॥
ವ್ಯಯದಿಂ ಸಂತೈಸೆ ಕಾಲಂ ಕೃತಯುಗಮಯಮಾಯ್ತೆಂಬಿನಂ ತನ್ನ ರಾಜ್ಯೋ।
ದಯದೊಳ್ ಲೋಕಕ್ಕೆ ರಾಗೋದಯಮೊದವಿದುದೇಂ ಧನ್ಯನೋ ಸಾರ್ವಭೌಮಂ॥
॥126॥

ಪೆಸರಂ ಕೇಳ್ದಳ್ಕಿ ಬೆಳ್ಕುತ್ತುದು ಪರಧರಣೀಮಂಡಲಂ ಗಂಡುಗೆಟ್ಟಾ।
ಳ್ವೆಸನಂ ಪೂಣ್ದತ್ತು ಶೌರ್ಯೋನ್ನತಿಗಗಿದಸುಹೃನ್ಮಂಡಲಂ ಮೆಲ್ಪನಾವ॥
ರ್ಜಿಸಿದೊಂದಾಜ್ಞಾವಿಶೇಷಕ್ಕೆಳಸಿದುದು ಸುಹೃನ್ಮಂಡಲಂ ಸಂತಮಿಂತಾ।
ದೆಸಕಂ ಕೆಯ್ಗಣ್ಮೆ ಸೋಮೇಶ್ವರನೃಪತಿ ಮಹೀಚಕ್ರಮಂ ನೆಟ್ಟನಾಳ್ದಂ॥127॥

ಲಕ್ಷ್ಮರಸ

ಭುವನೈಕಮಲ್ಲದೇವನ। ಭವನದೊಳಂ ತಾನೆ ಮಾನಸಂ ತಾನೆ ಮಹಾ।
ವ್ಯವಸಾಯಿ ತಾನೆ ವಿಜಯ। ಪ್ರವರ್ಧಕಂ ತಾನೆ ಪಸಯಿತಂ ಲಕ್ಷ್ಮನೃಪಂ॥128॥

ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಚಾಳುಕ್ಯರಾಜ್ಯಕ್ಕೆ ಕಾ।
ರಣಮಾದಾಳ್ ತುಟಿಲಾಳ್ತನಕ್ಕೆ ನೆಱೆದಾಳ್ ಕಟ್ಟಾಯದಾಳ್ ಮಿಕ್ಕ ಮ॥
ನ್ನಣೆಯಾಳ್ ಮಾಂತನದಾಳ್ ನೆಗೞ್ತೆವಡೆದಾಳ್ ವಿಕ್ರಾಂತದಾಳ್ ಮೇಳದಾಳ್।
ರಣದಾಳಾಳ್ದನ ನಚ್ಚುವಾವೆಡೆಯೊಳಂ ವಿಶ್ವಾಸದಾಳ್ ಲಕ್ಷ್ಮಣಂ॥129॥

ಬಲಿವಲಿವ ಮಲೆವ ಕೆಲೆವವ। ಟಲಿವ ಪಳಂಚಲಿವ ಮಲೆಪರೆಲ್ಲಂ ಮುಱಿದಂ।
ಮಲೆಯದ ಕೆಲೆಯದ ಬಲಿಯದ। ಮಲೆಪರನಿಸುವೆಸಕೆ ಬೆಸಸಿದಂ ಲಕ್ಷ್ಮನೃಪಂ॥130॥

ಆಳ್ವಲಮುಳ್ಳೊಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳೊಡಂ।
ತೋಳ್ವಲಮಿಲ್ಲ ಭೃತ್ಯಹಯದೋರ್ಬಲಮುಳ್ಳೊಡಮೋರ್ವಲಂಗಳಿ॥
ಲ್ಲಾಳ್ವೆಸಗೆಯ್ಯದೇಕೆ ಬಲಿವರ್ ಮಲೆಪರ್ ಮಲೆಯೆಂಬುದೇನದಂ।
ಬೇಳ್ವೊಲಮಾಗೆ ಮುಂ ತುೞಿದನಲ್ಲನೆ ಲಕ್ಷ್ಮಣನೆಂಬ ರಾವಣಂ॥131॥

ಕವಿ ದುರ್ಗಂ ಚಾತುರಂಗಂ ಬವಸೆ ದಳವುಳಂ ದಾಟಿ ಸೂೞೇಱಿನಿಪ್ಪಾ।
ಹವದೊಳ್ ಚಾಳುಕ್ಯರಾಮಂ ಬೆಸಸೆ ರಿಪುಬಳಕ್ಕೆನ್ನನಿಂದ್ರಾರಿಯನ್ನಂ॥
ಭವನನ್ನಂ ಭದ್ರನನ್ನಂ ಸಿಡಿಲ ಬಳಗದನ್ನಂ ಜ್ವಲಜ್ಜ್ವಾಲಿಯನ್ನಂ।
ಜವನನ್ನಂ ಮಾರಿಯನ್ನಂ ಸಮರಸಮಯದೊಳ್ ಲಕ್ಷ್ಮಣಂ ರಾಮನನ್ನಂ॥132॥

ಕುದುರೆಯ ಮೇಲೆ ಬಿಲ್ ಪರಶು ಶೂಲಿಗೆ ತೀರಿಕೆ ಭಿಂಡಿವಾಳಮು।
ತ್ರಿದ ಕರವಾಳಮಾಟಿಡುವ ಕರ್ಕಡೆ ಪಾಱುವ ಚಕ್ರಮೆಂದೊಡೆಂ॥
ತೊದಱುವರೆಂತು ಪಾಯಿಸುವರೆಂತು ತಱುಂಬುವರೆಂತು ನಿಲ್ವರೆಂ।
ತೊದವುವರೆಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ಯಭೂಭುಜರ್॥133॥

ಈಯಲ್ ಬಂದೊಡೆ ಕಲ್ಪವೃಕ್ಷಮಿದಿರಂ ಬಂದಾಂತ ವಿದ್ವಿಷ್ಟರಂ।
ಸೋಯಲ್ ಬಂದೊಡಕಾಲಮೃತ್ಯು ಶರಣಾಯಾತಾವನೀಪಾಲರಂ॥
ಕಾಯಲ್ ಬಂದೊಡೆ ವಜ್ರಶೈಲಕೃತದುರ್ಗಂ ಲೌಲ್ಯಭಾವಂ ಪರ।
ಸ್ತ್ರೀಯೊಳ್ ಬಂದೊಡೆ ರಾವಣಾತ್ಮಜಚಮೂವಿದ್ರಾವಣಂ ಲಕ್ಷ್ಮಣಂ॥134॥

ಬಿಸುಪೞಿದರ್ಕನುರ್ಕುಡಿಗುಮಿಂದುವ ಕಾಂತಿ ಕಟಿಲ್ಗುಮಾಗಸಂ।
ಕುಸಿಗುಮಿಳಾತಳಂ ತಳರ್ಗುಮಂಬುಧಿ ಬತ್ತುಗುಮಿಲ್ಲಿ ಲಕ್ಷ್ಮಣಂ॥
ಪುಸಿದೊಡಮಾರ್ಗೆ ಟೆಪ್ಪರಮನೊಡ್ಡಿದೊಡಂ ಮನವೊಲ್ದು ಕೂಡಿ ಥಿ।
ದ್ರಿಸಿದೊಡಮನ್ಯನಾರಿಗೆ ಮರುಳ್ದೊಡಮಾಹವದೊಳ್ ಮರಲ್ದೊಡಂ॥135॥

ಶತ್ರುಘ್ನಂ ಹರಿಶೌರ್ಯನಂಗದಭುಜಂ ಸುಗ್ರೀವನಾತ್ಮೇಶಸೌ।
ಮಿತ್ರಂ ರಾಮನಪಾಮರಂ ನರವರಂ ದುರ್ಯೋಧನಂ ಭೀಮಗಾ॥
ತ್ರತ್ರಂ ಭೀಷ್ಮಯುಧಿಷ್ಠಿರಂ ಗುರುಕೃಪಂ ಸತ್ಕರ್ಣನೆಂದಂದೆ ದಲ್।
ಚಿತ್ರಂ ಭಾವಿಸೆ ಲಕ್ಷ್ಮಭೂಪಚರಿತಂ ರಾಮಾಯಣಂ ಭಾರತಂ॥136॥

ಕಲಿತನಮಿಲ್ಲ ಚಾಗಿಗೆ ವದಾನ್ಯತೆ ಪೆಂಯ್ಗಲಿಗಿಲ್ಲ ಚಾಗಿ ಪೆ।
ಯ್ಗಲಿಯೆನಿಪಂಗೆ ಶೌಚಗುಣಮಿಲ್ಲ ಕರಂ ಕಲಿ ಚಾಗಿ ಶೌಚಿಗಂ॥
ನಿಲೆ ನುಡಿವೋಜೆಯಿಲ್ಲ ಕಲಿ ಚಾಗಿ ಮಹಾಶುಚಿ ಸತ್ಯವಾದಿ ಮಂ।
ಡಲಿಕರೊಳೀತನೆಂದು ಪೊಗೞ್ಗುಂ ಬುಧಮಂಡಲಿ ಲಕ್ಷ್ಮಭೂಪನಂ॥137॥

## 38 ಶಿಕಾರಿಪುರ 110 [ಸು. 1070]

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಸಾಮಂತ ಉದಯಾದಿತ್ಯನು ದತ್ತಿಯನ್ನು ಬಿಟ್ಟಂತೆ ತೋರುತ್ತದೆ.

### ತ್ರೈಲೋಕ್ಯಮಲ್ಲ

ಶರಣೆಂದುಂ ಭೀತಿಯಿಂ ಕೆಯ್ಮುಗಿದುಮಿರದೊಡಮ್ಮಮ್ಮ ದೋರ್ವಿಕ್ರಮಾಡಂ।
ಬರದಿಂ ತ್ರೈಲೋಕ್ಯಮಲ್ಲಂ ಮಸಗಿ ಮುಳಿದು ಮೇಲೆತ್ತಿದಂ ದಾಟಿಯಿಟ್ಟಂ॥
ಪರಿಯಿಟ್ಟಂ ಮುತ್ತಿದಂ ತೊಟ್ಟುಟಿದುಟಿದನಡಂಗೊತ್ತಿದಂ ತುತ್ತಿದಂ ಬೇ।
ವರ್ಗರಸಂತಂತೆತ್ತಿ ಕಿಟ್ತಿತ್ತಿದನಹಿತರನೆಂಬಿಂತಿದಂ ಕೇಳಲಕ್ಕುಂ॥138॥

### ಭುವನೈಕಮಲ್ಲ

ಕವಿವ ನೆಣಂ ಪೊದಟ್ವ ಬಿಸುನೆತ್ತರ ಧಾರೆ ಸಿಡಿಲ್ವ ಮುತ್ತು ಪಾ।
ಱುವ ರದನಾಳಿ ಸೋರ್ವ ಕರುಳುಣ್ಮುವ ಖಂಡಮೆಟಲ್ವ ಮಸ್ತಕಂ॥
ತವುವ ಬಲಂ ಕಟಲ್ವ ನಖಮೋಱುವ ಸುಯ್ ಸುರಿವೇಱು ತೋಱಿ ನು।
ರ್ಗವೆ ರಿಪುದಂತಿಗಳ್ ಪರಿಯೆ ಗಂಧಗಜಂ ಭುವನೈಕಮಲ್ಲನಾ॥139॥

## 39 ಗಾವರವಾಡದ ಶಾಸನ [1071]

(ಎಪಿಗ್ರಾಫಿಯಾ ಇಂಡಿಕ XV, 337)

ಇದರಲ್ಲಿ ಚಾಳುಕ್ಯರಾಜನಾದ 2ನೆಯ ಸೋಮೇಶ್ವರನ (ಭುವನೈಕಮಲ್ಲ) ಆಳಿಕೆಯಲ್ಲಿ ಲಕ್ಷ್ಮರಸನು ದೊರೆಯ ಆಜ್ಞಾನುಸಾರವಾಗಿ ಅಣ್ಣಿಗೆರೆಯ ಗಂಗ ಪೆರ್ಮಾನಡಿ ಬಸದಿಯನ್ನು ಜೀರ್ಣೋದ್ಧಾರ ಮಾಡಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಲಕ್ಷ್ಮರಸ

ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಚಾಳುಕ್ಯರಾಜ್ಯಕ್ಕೆ ಕಾ।
ರಣಮಾದಾಳ್ ತುಟಿಲಾಳ್ತನಕ್ಕೆ ನೆಱಿದಾಳ್ ಕಟ್ಟಾಯದಾಳ್ ಮಿಕ್ಕು ಮ॥
ನ್ನಣೆಯಾಳ್ ಮಾಂತನದಾಳ್ ನೆಗಟ್ವೆವಡೆದಾಳ್ ವಿಕ್ರಾಂತದಾಳ್ ಮೇಳದಾಳ್।
ರಣದಾಳಾಳ್ದನ ನಚ್ಚುವಾವೆಡೆಯೊಳಂ ವಿಶ್ವಾಸದಾಳ್ ಲಕ್ಷ್ಮಣಂ॥140॥

ಕಲಿತನಮಿಲ್ಲ ಚಾಗಿಗೆ ವದಾನ್ಯತೆ ಮೆಯ್ಗಲಿಗಿಲ್ಲ ಚಾಗಿ ಮೆ।
ಯ್ಗಲಿಯೆನಿಪಂಗೆ ಶೌಚಗುಣಮಿಲ್ಲ ಕರಂ ಕಲಿ ಚಾಗಿ ಶೌಚಿಗಂ॥
ನಿಲೆ ನುಡಿವೋಜೆಯಿಲ್ಲ ಕಲಿ ಚಾಗಿ ಮಹಾ ಶುಚಿ ಸತ್ಯವಾದಿ ಮಂ।
ಡಲಿಕರೊಳೀತನೆಂದು ಪೊಗಟ್ಗುಂ ಬುಧಮಂಡಲಿ ಲಕ್ಷ್ಮಭೂಪನಂ॥141॥

ಕಾಟರಸ

ಜಗಮೆಲ್ಲಂ ದೇಸೆಗೆ ಕ। ಯ್ಮುಗಿಗೆಮು ಕೊಟ್ಟಱಿಯನೊಂದು ಕಾಗಿಣಿಯುಮನಾ॥
ಗಗನದೊಳಿರ್ಪಾದಿತ್ಯಂ। ಬಗೆದುದನಿತ್ತಪನೆ ಬೆಳ್ವಲಾದಿತ್ಯನವೋಲ್॥142॥

ಫಲಸ್ತುತಿ

ಅರಸರ್ಗ್ಗೆ ಸೇಸೆಯೆಂದರ। ಸರ ಕಾಣಿಕೆಯೆಂದು ದಾಯಧರ್ಮದ ತೆಱಯೆಂ॥
ದಱುವಣದಿಂದಗ್ಗಳಮೆಂ। ದರೆ ವೀಸಮನಿಟ್ಟು ಕೊಂಡವರ್ ಚಂಡಾಳರ್॥143॥

ಗಂಗಾ ಸಾಗರ ಯಮುನಾ। ಸಂಗಮದೊಳ್ ಬಾಣರಾಸಿ ಗಯೆಯೆಂಬೀ ತೀ॥
ರ್ಥಂಗಳೊಳಾತ್ಮ ಕುಳ ದ್ವಿಜ। ಪುಂಗವ ಗೋಕುಲಮನಟಿದನಿಂತಿದನಟಿದರ್॥144॥

## 40 ಶಿಕಾರಿಪುರ 129 [1071]

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನು ದಂಡನಾಯಕ ಉದಯಾದಿತ್ಯನ ಬಿನ್ನಪದಿಂದ ಬಳ್ಳಿಗಾವೆಯ ಹರಿಹರಾದಿತ್ಯದೇವರಿಗೆ ಬಿದಿರಿಂಗೆರೆಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಗುಣಗಳ್ಳಮುನಿ

ಶ್ರೀಮನ್ಮುಕ್ತಿವಧೂಲೀ। ಲಾಮಂಗಳತಿಳಕನೆಸೆದನದ್ವಯಮಹಿಮೋ।
ದ್ದಾಮಂ ಸಂಪೂರ್ಣಂ ವಿ। ದ್ಯಾಮೂರ್ತಿ ಜಿತಾತ್ಮನಕ್ಷರಂ ಗುಣಗಳ್ಳಂ॥145॥

ಅಚಳನ ದೆಸೆಯಿಂದುದಯಿಸು। ವ ಚರಾಚರಮಚಳನಿಂದೆ ಪೊಱಗಣಮಲ್ತೆಂ।
ದಚಳಿತಚಿತ್ತದಿನಿರ್ಪಂ। ಪ್ರಚಂಡನದ್ವೈತಿ ನಿರುಪಮಂ ಗುಣಗಳ್ಳಂ॥146॥

ಜ್ಞಾನಮೆ ನಾಂ ನಿನಗೊಡಲೆಸೆ। ವಾನಂದಂ ತೋರ್ಪುವೆಲ್ಲಮೆನ್ನ ನೆಟಲ್ ಮ।
ತ್ತೇನುಂ ಬೇಱಿಲ್ಲೆಂಬನಿ। ಳಾನುತನದ್ವೈತಶೇಖರಂ ಗುಣಗಳ್ಳಂ॥147॥

ಮುಕ್ತಿಶ್ರೀಸತಿಗನು। ರಕ್ತಂ ಸಂಸಾರವಿ।
ರಕ್ತಂ ನಿರ್ವಿಷಯನಿರಪೇಕ್ಷಂ ಶುಚಿ ಜೀವ।
ನ್ಮುಕ್ತಂ ನಿರ್ವಾಣಿ ಗುಣಗಳ್ಳಂ॥148॥

ಅಱಿವಣ್ಮು ವೈರಾಗ್ಯಂ। ತಱಿಸಲವಭ್ಯಾಸಂ।
ನೆಱೆ ಭಕ್ತಿ ಶಾಂತಿ ಧೃತಿ ತುಷ್ಟಿಯೆಂಬಿವ।
ಕೆಱಿವಟ್ಟಾಗಿರ್ದಂ ಗುಣಗಳ್ಳಂ॥149॥

ದೊರೆಕೊಂಡೀ ದೇಹದೊಳ್ ಮೋಹಮನೆಲೆ ಗುಣಗಳ್ಳಾರ್ಯ ನೀಂ ಮಾಣ್ಬು ಬೆಂಕೊಂ।
ಡರಿಷಡ್ವರ್ಗಂಗಳಂ ಭೇದಮನಿಱಿದಳಿಪಂ ಬಿಟ್ಟು ಕರ್ಮಂಗಳೆಲ್ಲಂ॥
ಬೆರಸಾನೆಂದಿರ್ಪಹಂಕಾರಮನವಯುವದಿಂ ಸುಟ್ಟು ಸಾನಂದದಿಂದಂ।
ಪರಿಪೂರ್ಣಜ್ಯೋತಿ ನೀನಾಗಿರೆ ಬಿಡುವಳೆ ಪೇಟಿ್ ಮುಕ್ತಿ ನಿನ್ನಂ ಮುನೀಂದ್ರಾ॥150॥

## 41 ಸೊರಬ 299 [1073]

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಮಹಾಪ್ರಧಾನ ಉದಯಾದಿತ್ಯ ದಂಡನಾಯಕನ ಆಜ್ಞಾನುಸಾರವಾಗಿ ದಾಸಗಾವುಂಡನು ಗಂಗೇಶ್ವರದ ಸ್ವಯಂಭು ದೇವರ್ಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಉದಯಾದಿತ್ಯ

ಜಗಮೇಕಚ್ಛತ್ರಮಾಯ್ತುರ್ಕಿದ ಧರಣಿಧರದ್ರೋಹರಟ್ಕಾಡಿದರ್ ಭೂ।
ನಗರಂ ಸಿಂದೂರಮುದ್ರಾಂಕಿತಮೆನಿಸಿದುದನ್ಯಾವನೀಪಾಳಕರ್ ಕೆ॥
ಯ್ಮುಗಿದಿತ್ತುಂ ತೆತ್ತುಮಾಜ್ಞಾವಶಗತರೆನಿಸಿರ್ದರ್ ಸಮಂತೆತ್ತಲುಂ ಚ।
ಕ್ರಿಗೆ ತನ್ನಿಂದೆಂದೊಡೇಂ ವೀರನೊ ನೆಗಟ್ದುದಯಾದಿತ್ಯದಂಡಾಧಿನಾಥಂ॥151॥

ಇದಿರೊಳ್ ರಾವಣಿ ನಿಂದು ಮಾರ್ಮಲೆದೊಡಂ ಗೆಲ್ಗುಂ ಜಗಂ ಬೇಡಿ ಬಂ।
ದಿದಿರೊಳ್ ನಿಂದೊಡಮೀಗುಮಿಂತಿವೆರಡರ್ಕಂದಿನ್ನಮಿತ್ತಂ(?) ಕಱು॥
ತ್ತಿದಿರಾಗಿಂ ಕವಿತಂದು ಬೇಡಿಮಿಱಿಗುಂ ಪೂಣ್ದೀಗುಮೆಂದಂದು ಬಾ।
ಪ್ಪುದಯಾದಿತ್ಯನೊಳಣ್ಮನಾರ್ಪಿನೆಸಕಂ ಮೆಯ್ವೆತ್ತು ಕಣ್ಗೊಪ್ಪುಗುಂ॥152॥

## 42 ಲಕ್ಷ್ಮೇಶ್ವರದ ಶಾಸನ [1074]

ಇದರಲ್ಲಿ, ಚಾಳುಕ್ಯರಾಜನಾದ ಭುವನೈಕಮಲ್ಲನ ( 1068–1076 ) ಮಹಾಸಾಮಂತ ಜಯಕೇಶಿ ಲಕ್ಷ್ಮೇಶ್ವರದ ಪೆರ್ಮಾಡಿ ಬಸದಿಗೆ ಕೆಲವು ತೆರೆಗಳನ್ನು ಬಿಟ್ಟಂತೆ ಹೇಳಿದೆ.

ಪುಲಿಗೆರೆ (ಪುರಿಕರ)

ನಾನಾ ದ್ವೀಪದೊಳಗ್ರಿಮಂ ನೆಗಟ್ದ ಜಂಬೂದ್ವೀಪಮಾ ದ್ವೀಪದೊಳ್।
ನಾನಾ ಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ ಕುಂತಲಂ॥
ತಾನತ್ಯೂರ್ಜಿತಮಲ್ಲಿ ಭೋಗಿ ಜನ ರಮ್ಯಂ ಬೆಳ್ವೊಲಂ ತನ್ಮುಖ।
ಸ್ಥಾನಂ ಶೋಭಿಕುಮಾಗಡುಂ ಪುರಿಕರ ಶ್ರೀರಾಜಧಾನ್ಯಾಹ್ವಯಂ॥153॥

ಜಯಕೇಶಿಯ ತಂದೆ ಇಂದ್ರಕೇಶಿ

ಪುರಿಕರ ಪುರವರ ಪರಮೇ।ಶ್ವರನುಜ್ವಳ ಕೀರ್ತಿ ಸಗರ ಮಾರ್ತಾಂಡಂ ಕೇ।
ಸರಿ ಕೇತು ರಾಷ್ಟ್ರಕೂಟಕ। ವರನಾ ತ್ರಿಶತಕ್ಕಮಿಂದ್ರಕೇಶಿ ನರೇಂದ್ರಂ॥154॥

ಇವನ ಹೆಂಡತಿ ಚಂದಿಕಬ್ಬೆ

ಆತನ ಪಿರಿಯರಸಿ ಗುಣಾ।ನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಾ।
ಖ್ಯಾತವತಿ ಸತ್ಯವತಿ ಧಾ।ತ್ರೀತಳದೊಳ್ ಚಂದಿಕಬ್ಬೆಯುಂ ಪೊಗಟಿದರಾರ್॥155॥

ಜಯಕೇಶಿ

ಶ್ರೀರಮಣಿಗೆ ಸಮರ ಜಯ। ಶ್ರೀರಮಣಿಗೆ ತಾರ ಹಾರ ಶಶಿ ವಿಶದ ಯಶಃ।
ಶ್ರೀ ರಮಣಿಗೆ ಸಕಲ ವಚಃ। ಶ್ರೀ ರಮಣಿಗೆ ರಮಣನಲ್ತೆ ಜಯಕೇಶಿ ನೃಪಂ॥156॥

ಅಂತೆನಿಸಿದ ಜಯಲಕ್ಷ್ಮೀ। ಕಾಂತಂ ದುಷ್ಟಾಶ್ವ ಚಯಕಿದಾನೀಂತನ ರೇ।
ವಂತಂ ವಿದ್ವಿಣ್ಣೃಪತಿ ಕೃ।ತಾಂತಂ ಸುಖದಿಂದಮಿಟ್ಟು ಜಯಕೇಶಿ ನೃಪಂ॥157॥
(ಪೆರ್ಮಾಡಿ ಬಸದಿಗೆ ತೆರೆಗಳಂ ಬಿಟ್ಟಂ)

ಫಲಶ್ರುತಿ

ತಿಳಿದಿನಿತು ತೆಱೆಯುಮಂ ಕಾ।ದಳಿಪಿಲ್ಲದೆ ನೆಗಟ್ದಿರೆಯ್ದುವರ್ ಸುರಪುರಮಂ।
ಪೞೆಗಳ್ಕದೞಿವ ಪಾತಕ।ರಿೞಿವರ್ ಗೞಗೞನೆ ನರಕ ಗತಿಗನವರತಂ॥158॥

## 43 ನೀರಲ್ಗಿಯ ಶಾಸನ [1074–75]

(ಎಪಿಗ್ರಾಫಿಯಾ ಇಂಡಿಕ XVI, 70)

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಆಳಿಕೆಯಲ್ಲಿ ಕಾದಂಬಶಾಂತಿವರ್ಮನು ಪೊಂಬಳ್ಳಿಯ ರಾಮೇಶ್ವರದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟನೆಂದು ಹೇಳಿದೆ.

ಕಾದಂಬಶಾಂತಿವರ್ಮ

ಬಳವದ್ವಿದ್ವಿಷ್ಟಭೂಪಾಳಕರೆಱಗಿ ಶರಣ್ಬೊಕ್ಕು ದುರ್ವಾರಬಾಹಾ।
ಬಳಮಂ ಮಾಣ್ದೆಂದುದಂ ಕೊಟ್ಟಳುಕಿ ಬಳುಕಿ ಭೃತ್ಯತ್ವಮಂ ಪೂಣ್ದರೆಂದಂ॥
ದೆಲೆಲೇ ಮೀಱಿಲ್ ಕಡಂಗಲ್ ತೊಡರಲೆಡಱಲೊಟ್ಟಯ್ಸಲುಕ್ಕಲ್ ಪಳಂಚಲ್।
ಪೊಳೆಪಿಂ ಮಾಱಾಂತು ಕಾದಲ್ ನೆಱೆವರೆ ಧುರದೊಳ್ ದೇವ ಕಾದಂಬರುದ್ರಾ॥159॥

ಬಳವತ್ಕೋಪಾಗ್ನಿಯಿಂದಾಂತಹಿತರನೆಲೆಲೇ ಕೊಲ್ವುದಂತಿರ್ಕೆ ಬಾಹಾ।
ಬಳದಿಂದಮ್ಮಮ್ಮ ದಿಕ್ಪಾಳರನಳುಕಿಸಲದ್ರೀಂದ್ರಮಂ ಚಾಳಿಸಲ್ ಭೂ॥
ತಳಮಂತುಂ ಕಂಪಿಸಲ್ ದಿಗ್ಗಜಮನಳಱಿಸಲ್ ವಾರ್ಧಿಯಂ ಶೋಷಿಸಲ್ಕೇಂ।
ಚಳವೋ ಪೇೞ್ ಸಾಲನೇ ತತ್‌ಕ್ಷಣದೊಳೆ ಮುಳಿದಂದೋಹೊ ಕಾದಂಬರುದ್ರಂ॥160॥

ಕಡುಪಿಂದಂ ದೇವ ನಿನ್ನೊಳ್ ಬಿಡದೆಡೞುವವಂಗುಂಟೆ ಶೂಲಂ ಕಪಾಲಂ।
ಕೊಡೆ ಖಟ್ವಾಂಗಂ ಪಿನಾಕಂ ಪೊಳೆವ ನೊಸಲ ಕಣ್ ಹಸ್ತಿಚರ್ಮಂ ಶಿರೋದ್ಯ॥
......ಭೀಳಭೂತಾವಳಿ ಕಱೆಗೊರಲರ್ಧಾಂಗದೊಳ್ ಗೌರಿ ಪೆಂಪಂ।
ಪಡೆದರ್ಧೇಂದು ಪ್ರಭಾಭಾಸುರ ವಿಕಟ ಜಟಾಜೂಟಕೋಟೀವಿಟಂಕಂ॥161॥

## 44 ನಗರ 35 [1077]

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ನನ್ನಿಸಾಂತರದೇವನು ಪಂಚಕೂಟ ಬಸ್ತಿಗೆ ಗ್ರಾಮಗಳನ್ನು ಬಿಟ್ಟಂತೆ ಹೇಳಿದೆ.

ನನ್ನಿಸಾಂತರ (ಗೋವಿಂದರ)

ಚರಣವಿನಮ್ರನಾಗೆ ತೊದಳೇಂ ಬಿದಿ ಮುನ್ನೆ ಲಲಾಟಪಟ್ಟದೊಳ್।
ಬರೆದ ದುರಕ್ಷರಾವಳಿಗಳಂ ತೊಳೆದಪ್ಪುವು ತಾಮೆ ನಿನ್ನ ಸ॥
ಚ್ಚರಣರಜಂಗಳೆಂದೊಡುಱಿದರ್ ನಿನಗಾರ್ ದೊರೆ ದೇವ ಮಂಡಳೇ।
ಶ್ವರಕಳಭೈಕಕೇಸರಿ ನರೇಂದ್ರ ಶಿಖಾಮಣಿ ನನ್ನಿಸಾಂತರಾ॥162॥

ಪ್ರತಿಬಿಂಬಂ ರೂಪಿನೊಳ್ ಪೋಲ್ಕೆಮ ಗುಣದೊಳದಾರ್ ಪೋಲ್ತಪರ್ ನಿನ್ನನೆಂಬೀ।
ಸ್ತುತಿಯಂ ನಿಶ್ಚೈಸಿ ಗೋವಿಂದರ ಬೆಸೆಯದಿರೆಂತೆಂಬ ನಿನ್ನಂತೆ ನೋಡು॥
ನ್ನತಿಯೊಳ್ ಹೇಮಾಚಳಂ ಕ್ಷಾಂತಿಯೊಳವನಿತಳಂ ಮೇರೆಯೊಳ್ ವಾರ್ಧಿ ಶೌಚ।
ವ್ರತದೊಳ್ ಸಿಂಧೂದ್ಭವಂ ಸತ್ಯದೊಳಿನತನಯಂ ಶೌರ್ಯದೊಳ್ ಭೀಮಸೇನಂ॥163॥

ದೇವಸಮುದ್ರಮುದ್ರಿತ ವಸುಂಧರೆಯೊಳ್ ನೃಪರಾದರೆಲ್ಲರಂ।
ಭಾವಿಸಿ ಕಂಡೆನಾಂತ ರಿಪುಸಂತತಿಯಂ ನೆಲೆಗೆಟ್ಟು ಪೋಪಿನಂ॥
ಸೋವ ಬುಧಾಳಿಗಾರ್ತು ಪಿರಿದೀವ ಶರಣ್ಬುಗೆ ಕಾವ ಸದ್ಗುಣ।
ಕ್ಕಾವನೊ ನಿನ್ನವೊಲ್ ನೆಱೆದ ಮಂಡಳಿಕಂ ಕಲಿ ನನ್ನಿಸಾಂತರಾ॥164॥

ಪಿರಿದೆತ್ತಂ ಮೇರುಗಂ ಸಾಗರಮೆ ಜಗದೊಳಾಮೇರುಗಂ ಸಾಗರಕ್ಕಂ।
ಧರಣೀಚಕ್ರಂ ಕರಂ ಭಾವಿಸುವೊಡೆ ಪಿರಿದಾ ಮೇರುಗಂ ಸಾಗರಕ್ಕಂ॥
ಧರಣೀಚಕ್ರಕ್ಕಮಾಶಾಳಿಯೆ ಕಡುಪಿರಿದಾ ಮೇರುಗಂ ಸಾಗರಕ್ಕಂ।
ಧರಣೀಚಕ್ರಕ್ಕಮಾಶಾಳಿಗಮೆಲೆ ಪಿರಿಯಂ ಸಾಂತರಾದಿತ್ಯದೇವಂ॥165॥

ಬೀರಸಾಂತರ

ಧುರದೊಳಸಿಲತೆಯನುರ್ಚಿದೊ। ಡರಿನೃಪಯುವತಿಯರ ಮುಗುಳ ಕಂಕಣದಾ ಕೀಲ್।
ತರತರದಿನುರ್ಚಿದುವು ನಿಜ। ಕರಖಡ್ಗಮವರ್ಕೆ ಕೀಲೆ ಸಾಂತರನೃಪತೀ॥166॥

ಭುಜಬಳಸಾಂತರ

ಭುಜಬಳಸಾಂತರನೃಪತಿಯ। ಭುಜಬಳದಳವುಂ ಪ್ರತಾಪಮುಂ ಶೂರತೆಯುಂ।
ವಿಜಿಗೀಷುವೃತ್ತಿಯುಂ ನಿಜ। ವಿಜಯಮುಮೀ ಲೋಕದೊಳಗೆ ಭುಂಭುಕಮೆನಿಕುಂ॥167॥

ಮಾಧವ

ಮಾಧವನ ಜಯಶ್ರೀರಾ। ಮಾಧವನ ಭುಜಾವಲೇಪಮಂ ಬಣ್ಣಿಸಲಾ।
ಮಾಧವನುಂ ತ್ರಿಭುವನದೊಳು। ಮಾಧವನುಂ ನೆಱೆಯರುಱೆದವರ್ ನೆಱೆದಪರೇ
॥168॥

**45 ಶಿಕಾರಿಪುರ 124 [1077]**

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನು ದಂಡನಾಯಕ ಬರ್ಮದೇವನ ಪ್ರಾರ್ಥನಾನುಸಾರವಾಗಿ ಬಳ್ಳಿಗಾವೆಯ ಪೆರ್ಮಾಡಿ ಬಸದಿಗೆ ಮನೆವನೆಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ವಿಕ್ರಮಾದಿತ್ಯ

ಅಲಗಂ ಚೋಳಾವನೀಶಂಗಣಸನಣೆಯುರಂ ಲಾಳಭೂಪಂಗೆ ಬಾಹಾ।
ಬಲದಿಂದಂ ತೋಱಿ ಮೀಱುತ್ತಡಸಿದುಭಯಚಕ್ರೇಶ ಸಾಮಂತಭೂಭೃ॥
ತ್ಕುಲಮಂ ತನ್ನೇಱಿದುಗ್ರೇಭದಿನುಱಿದುಱೆ ಬೆಂಕೊಂಡು ಚಾಳುಕ್ಯರಾಜ್ಯೋ।
ಜ್ವಲಲಕ್ಷ್ಮೀನಾಥನಾಳ್ದಂ ಭುವನಜನನುತಂ ವಿಕ್ರಮಾದಿತ್ಯದೇವಂ॥169॥

ನರಸಿಂಹಾಕಾರದಿಂ ದಾನವಪತಿಯುರಮಂ ಸೀಳ್ದನಣ್ಮಾಣ್ಮ ರುದ್ರಂ।
ಬೆರಸಾ ಕೈಲಾಸಮಂ ತೂಗಿದನಳವಳವಾರ್ತರ್ತಿಯಿಂ ಚರ್ಮಮಂ ನೆ॥
ಟ್ಟೆರೆದಿಂದ್ರಂಗಿತ್ತನಾರ್ಪಾರ್ಪಖಿಳಧರೆ ಗತಕ್ಷತ್ರಮಪ್ಪಂತೆ ಧಾತ್ರೀ।
ಶರನಿರ್ಪತ್ತೊಂದು ಸೂೞ್ ಕೊಂದನ ಚಲಮ ಚಲಂ ವಿಕ್ರಮಾದಿತ್ಯ ನಿನ್ನಾ॥170॥

ಪುದುವೇಕನ್ಯರ್ಗರ್ಮಾನೊರ್ಬನೆ ತಳೆಯಲಿದಂ ಸಾಲ್ವೆನೆಂದಾ ಮಹಾಕೂ।
ರ್ಮದ ಬೆನ್ನಿಂದಾ ಭುಜಂಗಾಧಿಪನ ಪೆಡೆಗಳಿಂದಾ ದಿಶಾಕುಂಜರಸ್ಕಂ॥
ಧದಿನಾ ಭೂಭೃದ್ಧರೀಮೂಲದಿನಖಿಲಧರಾಭಾರಮಂ ತಂದು ವಿಕ್ರಾಂ।
ತದ ಬಲ್ಪಿಂ ತನ್ನ ತೋಳೊಳ್ ಪದುಳಮಿರಿಸಿದಂ ವಿಕ್ರಮಾದಿತ್ಯದೇವಂ॥171॥

ಬರ್ಮದೇವ

ಧರೆಗೆಲ್ಲಂ ತನ್ನ ಬಾಹಾಬಲದ ನೆಱವು ತನ್ನಣ್ಮು ತನ್ನುಗ್ರತೇಜ।
ಸ್ಫುರಿತಂ ತನ್ನಾರ್ಪು ತನ್ನೊರ್ನುಡಿಯ ನಿಲವು ತನ್ನೂರ್ಜಿತಖ್ಯಾತಿಯೊಳ್ಪ॥
ಚ್ಚರಿಯಾಗುತ್ತಿರ್ಪಿನಂ ರಂಜಿಸಿ ಸಕಲಗುಣಾನರ್ಘ್ಯರತ್ನಕ್ಕೆ ರತ್ನಾ।
ಕರನಾದಂ ದಂಡನಾಥಾಗ್ರಣಿ ಸಕಲಜಗನ್ಮಂಡನಂ ಬರ್ಮದೇವಂ॥172॥

ಜನಕೆಲ್ಲಂ ತಾನೆ ಕಣ್ಣುಂ ಗತಿಯುಮೆಸಿಸಿ ತನ್ನಿಂ ರಿಪುಕ್ಷತ್ರನಕ್ಷ।
ತ್ರನಿಕಾಯಂ ನಿಲ್ಲದೆಲ್ಲಂ ಮಸುಳೆ ಕಲಿಮಿಳದ್ಧ್ವಾಂತಮಟ್ಟಾಡೆ ವಿಶ್ವಾ।
ವನಿಯಂ ಮಿಕ್ಕೇಱೆಗ್ಗಿಯಿಂದಂ ಬೆಳಪೆಸಕಮನಾಂತಿರ್ದಪಂ ವಿಕ್ರಮಾದಿ।
ತ್ಯನ ತೇಜಶ್ಚಕ್ರಮಿರ್ಪಂತೆವೊಲಸವಧಿಸತ್ಪ್ರೋದಯಂ ಬರ್ಮದೇವಂ॥173॥

ಹರಿಯಿಂ ಚಾಳಿತಮಾದುದಂಕದಚಳೇಂದ್ರಂ ದೈತ್ಯನಿಂ ಸಾರ್ದುದು।
ರ್ವಿ ರಸಾಗರ್ಭಮನಾಲಯಾನಿಲನ ಪೊಯ್ಲಿಂ ಪಾಱಿತಾಶಾಗಜೋ॥
ತ್ಕರಮೆಂದಂದಿವರಲ್ಲಿ ಧೀರಗುಣಮೆಲ್ಲಿತ್ತೆಂದಿವಂ ನಕ್ಕು ಧಿ।
ಕ್ಕರಿಪಂ ನಿಶ್ಚಲಮಾದ ಧೈರ್ಯಗುಣದೊಳ್ಪಿಂ ಬರ್ಮದಂಡಾಧಿಪಂ॥174॥

ಕುಡುವೆಡೆಗಾದುದೇಂ ಮಡಗಲಾದುದೆ ವಿತ್ತಮರಾತಿಯಂ ಪಡ।
ಲ್ವಡಿಪೆಡೆಗಾದುದೇಂ ಬಱಿದೆ ಪೊತ್ತಿರಲಾದುದೆ ಕೆಯ್ದು ಸತ್ಯಮಂ॥
ನುಡಿವೆಡೆಗಾದುದೇಂ ಪುಸಿಯಲಾದುದೆ ನಾಲಗೆಯೆಂದು ಕೀರ್ತಿ ದಾಂ।
ಗುಡಿವಿಡೆ ಬರ್ಮದೇವನನಿತುಂ ಕ್ಷಣದುನ್ನತಿಯಂ ನೆಗಳ್ಚಿದಂ॥175॥

ಸಿಂಗ

ವಿನಯದ ಸೀಮೆ ಧರ್ಮದ ತವರ್ಮನೆ ಸತ್ಯದ ಜನ್ಮಭೂಮಿ ಮಾಂ।
ತನದೆಱೆವಟ್ಟು ಪೆಂಪಿನದಗುಂತಿ ವಿವೇಕದ ಬೀಡುದಾಣಮಾ॥
ರ್ಪಿನ ಕಣಿಯೆಂದು ಬಣ್ಣಿಪುದು ಭೂವಳಯಂ ಪ್ರತಿಕಂಠಸಿಂಗನಂ।
ಜಿನಪತಿಪಾದಪಂಕರುಹಭೃಂಗನನುದ್ಘಗುಣಪ್ರಸಂಗನಂ॥176॥

ಬರೆಪದ ಬಲ್ಮೆ ಬಾಜನೆಯ ಬಿನ್ನಣವೊಪ್ಪುವ ಲೆಕ್ಕದೋಜೆ ಶಂ।
ಕರಸುತನೊಳ್ ಸರಸ್ವತಿಯೊಳಂಬುರುಹಾಸನನೊಳ್ ವಿಚಾರಿಸಲ್॥
ದೊರೆ ಸರಿ ಪಾಟಿಯೆಂದು ನಿಖಿಳೋರ್ವರೆ ಬಣ್ಣಿಸುತಿರ್ಪುದೆಂದೊಡೇಂ॥
ಪಿರಿಯನೊ ಸಿಂಗನುಜ್ವಲಯಶೋವಿಭವಂ ಪ್ರತಿಪನ್ನಮಂದರಂ॥177॥

ಶುಚಿ ಸುರಸಿಂಧುಜಂ ಸುರಸರಿದ್ಭವನಿಂದನಿಲಪ್ರಿಯಾತ್ಮಜಂ।
ಶುಚಿ ಗಗನಾಪಗಾತನಯನಿಂ ಪವಮಾನತನೂಜನಿಂ ಶುಕಂ॥
ಶುಚಿ ನೆಗಳ್ದಾ ನದೀಸುತನಿನಾಕಪಿರಾಜನಿನಾ ಶುಕರ್ಷಿಯಿಂ।
ಶುಚಿಯೆನೆ ಸಂದನೇ ದೊರೆತೊ ಶೌಚಗುಣಂ ಪ್ರತಿಕಂಠಸಿಂಗನಾ॥178॥

ಪರಹಿತಮಂ ಕಡಂಗಿ ನೆಱೆ ಮಾಡಲೆ ಕಲ್ತನಶೇಷಸದ್ಬುಧೋ।
ತ್ಕರಮನೊಱಲ್ದು ಮನ್ನಿಸಲೆ ಕಲ್ತನೆಡರ್ ಪಿರಿದೆಂಬ ಶಿಷ್ಟರಂ॥
ಪೊರೆಯಲೆ ಕಲ್ತನುತ್ತಮಗುಣಾಧಿಕರೊಳ್ ದೊರೆಯಪ್ಪೆನೆಂದು ಮ।
ಚ್ಚರಿಸಲೆ ಕಲ್ತನಿಂತುಟಿದು ಕಲ್ತ ಗುಣಂ ಪ್ರತಿಕಂಠಸಿಂಗನಾ॥179॥

## 46 ಷಿಕಾರಿಪುರ 107 [ಸು. 1078]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಬಳ್ಳಿಗಾವೆಯ ಕೇದಾರೇಶ್ವರ ದೇವರಿಗೆ ಒಬ್ಬ ದಂಡನಾಯಕನು ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಕ್ರಮಾದಿತ್ಯ

ಬಳವದ್ವಿದ್ವಿಷ್ಟಭೂಪಾಳಕತಿಮಿರಚಯಂ ಪಿಂಗೆ ಚಾಳುಕ್ಯಭೂಭೃ।
ತ್ಕುಳಪಂಕೇಜಾತಷಂಡಕ್ಕಮರ್ದೆಸೆಯೆ ವಿಕಾಸಂ ತ್ರಿಲೋಕಂಗಳೆಲ್ಲಂ॥
ಬೆಳಗಲ್ ತ್ರೈಲೋಕ್ಯಮಲ್ಲ ಪ್ರಿಯಸುತನಧಿಕಂ ವಿಕ್ರಮಾದಿತ್ಯದೇವಂ।
ವಿಳಸದ್ವಸ್ತು ಪ್ರಶಸ್ತೋದಯಗಿರಿನಿಭಸಿಂಹಾಸನಾಸೀನನಾದಂ॥180॥

ಚತುರಂತಾಖಂಡಭೂಮಂಡಲಪತಿ ಚತುರಾಶಾಂತಸಂಕ್ರಾಂತತೇಜಂ।
ಚತುರಾಶಾಪಾಲಶೀಲಪ್ರತಿನಿಧಿ ಚತುರಂಭೋಧಿಗಾಂಭೀರ್ಯಧುರ್ಯಂ॥
ಚತುರಾಸ್ಯೋದ್ಯತ್ಕಳಾಳೀನಿಧಿ ಚತುರುಪಧಾಶುದ್ಧ ಬುದ್ಧಿ ಪ್ರಭಾವಂ।
ಚತುರಂಗಾನೀಕಭಾರಪ್ರಚಳಿತದಿಗಿಭಂ ವಿಕ್ರಮಾದಿತ್ಯದೇವಂ॥181॥

### 47 ಅರಕಲ್ಗೂಡು 99 [1079]

ಇದರಲ್ಲಿ ಕೊಂಗಾಳ್ವರಾಜನಾದ ಅದಟರಾದಿತ್ಯನು ಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಗದಾಶ್ಚರ್ಯಮಿದತ್ಯಪೂರ್ವಮಿದಱಿಂದಕ್ಕಬ್ಜಜಂ ಕೂಡ ಬ।
ಟ್ಟಿಗೆಯಂ ತಿಟ್ಟಮಿಡಲ್ಕಿದೇಂ ನೆಱೆದನೇ ಪೇೞೆಂಬ ಕೊಂಗಾಳ್ವ ಜೈ॥
ನಗೃಹಂ ನಾಡೆ ಬೆಡಂಗುವೆತ್ತದಟರಾದಿತ್ಯಾವನೀನಾಥಕೀ।
ರ್ತಿಗಡರ್ಪಿರ್ಪವೊಲಿಂತುಃ ತೋರ್ಪುದೆನೆ ಮತ್ತೇವಣ್ಣಿಪಂ ಬಣ್ಣಿಪಂ॥182॥

ಜಗದೊಳ್ ತಾನೀವ ದಾನಂ ನೆಗೞಲದಟರಾದಿತ್ಯಚೈತ್ಯಾಲಯಕ್ಕೆ।
ಯ್ದೆ ಗುಣಾಂಭೋರಾಶಿ ವೀರಾಗ್ರಣಿ ವಿಜಯಭುಜೋದ್ಭಾಸಿ ದಿವ್ಯಾರ್ಚನಕ್ಕಂ॥
ದು ಗಡಂ ಸದ್ಭಕ್ತಿಯಿಂದಂ ತಱಿಗೞನಿಯ ಮಣ್ಣಲ್ಲಿ ನಾಲ್ವತ್ತೆರಟ್ಟಿಂ।
ಡುಗ ಬೀಜಕ್ಕಿತ್ತನತ್ಯುತ್ಸವದಿನದಟರಾದಿತ್ಯನಾದಿತ್ಯತೇಜಂ॥183॥

ಇನಿತಂ ಸಿದ್ಧಾಂತದೇವರ್ಗನುನಯದೞಿದಾಚಂದ್ರತಾರಂ ಸಲುತ್ತೆಂ?।
ತೆನೆ ಧಾರಾಪೂರ್ವಕಂ ಕೊಟ್ಟುದನುದಧಿಜಳಸ್ಫೂಳಕಲ್ಲೋಳಲೀಳಾ॥
ವನಿಚಕ್ರಕ್ಕೆಯ್ದೆ ಪರ್ಬಿತ್ತದನಿದನುದನೇನೆಂದಪ್ಪೆ ದಾನದೊಳ್ಪಾ।
ವನುಮಂ ಮಿಕ್ಕಿರ್ಪಿನಂ ಮಾಡಿಸಿದನೆಸೆಯೆ ಸದ್ಧರ್ಮಿ ಕೊಂಗಾಳ್ವಭೂಪಂ॥184॥

### 48 ಶಿಕಾರಿಪುರ 297 [1080]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ತಮ್ಮ ವೀರನೊಳಂಬಜಯಸಿಂಹನ ದಂಡನಾಯಕ ಬಲದೇವನು ಕೆಲವು ಸುಂಕಗಳನ್ನು ಬಿಟ್ಟುಕೊಟ್ಟಂತೆ ಹೇಳಿದೆ.

ವೀರನೊಳಂಬ ಜಯಸಿಂಹ

ಪೊಗೆಯುತ್ತಿರ್ದಪ್ಪುದಿನ್ನುಂ ದಹಳೆ ಹಿಮನಗಾರಣ್ಯಮಂ ಲಾಳನಿನ್ನುಂ।
ಪುಗಲೆಂದಿರ್ದಪ್ಪನಿನ್ನುಂ ನೆಲಸದೆ ತಿವುಳಂ ಲಂಕೆಯಿಂ ತೆಂಕಲೋಡಲ್॥
ಬಗೆಯುತ್ತಿರ್ದಪ್ಪನಿನ್ನುಂ ಮುಳಿದಪನೆನುತುಂ ಕೊಂಕಣಂ ಸಂಕೆಯಿಂ ಗುಂ।
ದುಗೊಳುತ್ತಿರ್ದಪ್ಪನೇಂ ಬಲ್ಲಿದನೊ ಚಕಿತವಿದ್ವಿಟ್ಕದಂಬಂ ನೊಳಂಬಂ॥185॥

ಬಲದೇವ

ಅರಿದಾಗೇಂ ಬಲ್ಲಿತೆಂಬಲ್ಲಿಗಮುಸದಳಮೀಕಾರ್ಯಮೆಂಬಲ್ಲಿಗಂ ಸಂ।
ಗರಮಣ್ಮುಟ್ಟೆಂದುದೆಂಬಲ್ಲಿಗಮೆರ್ದೆಗದರುಂ ಬೀಡಿಗೆಂಬಲ್ಲಿಗಂ ಬೇ॥
ಟ್ಟರ ತಂಡಕ್ಕೀವೆನೆಂಬಲ್ಲಿಗಮುತಿಶುಚಿಯೆಂಬಲ್ಲಿಗಂ ಬಲ್ಲಿಗಂ ಬಾ।
ಪ್ಪುಱೆ ಪಾರ್ಥೇಂದ್ರೇಜ್ಯಭೀಮಾಂತಕಬಲಿಮನು ತಾನೆಂದೊಡಿಂ ಧನ್ಯನಾವಂ॥186॥

ಒಡವುಟ್ಟಿರ್ದುದು ಕರಮಾ। ರ್ಪೊಡವಳೆದುದು ಜೈನಧರ್ಮಮೊಡನಾಡಿದುದೊ।
ಳ್ಪೊಡನೆ ಸಲೆ ಪೊಕ್ಕುವುಂತೇ। ನೆಡೆಯೊಳ್ ಕಲ್ತನೆ ಗುಣಂಗಳಂ ಬಲದೇವಂ॥187॥

ಆರಯ್ವೊಡೆ ಕಲಿಕಾಲದೊ। ಳಾರುಂ ಬಲದೇವನೊರೆಗೆ ವಂದಪರೆ ಗುಣೋ
ದಾರತೆಯೊಳಱಿವಿನೊಳ್ ವಾ।ಕ್ಸಾರತೆಯೊಳ್ ದಾನಧರ್ಮದೊಳ್
ಪರಹಿತದೊಳ್ ॥188॥

## 49. ಬಿಜಾಪುರದ ಶಾಸನ [ಸು. 1080]

(ಇಂಡಿಯನ್ ಆಂಟಿಕ್ವರಿ X, 127)

ಇದರಲ್ಲಿ ಚಾಳುಕ್ಯ ರಾಜನಾದ ವಿಕ್ರಮಾದಿತ್ಯನ ಆಶ್ರಿತನಾದ ತ್ರ್ಯಂಬಕನ ಸ್ತುತಿಯಿದೆ.

ತಮದೊಡ್ಡಿಂದಂ ಕಱಂಗಿರ್ದಿರುಳನಮೃತಧಾಮಂ ಕರಸ್ತೋಮದಿಂದ।
ತ್ಯಮಳಂ ಮಾಳ್ಪಂತಿರೀಗಳ್ ಕೃತಯುಗಚರಿತಂ ತ್ರ್ಯಂಬಕಂ ಸತ್ಯಸೌಜ॥
ನ್ಯಮಹಾಂಭೋರಾಶಿ ದೋಷಾಕರಕಲಿಯುಗಮಂ ನಿರ್ಮಳಂ ಮಾಡಿದಂ ಧಾ।
ತ್ರಿ ಮನಂಗೊಳ್ವಂತು ಗಂಗಾಸಲಿಲಶುಚಿಯಶೋರಾಶಿಷೀಯೂಷದಿಂದಂ॥189॥

ಅರಿದಪ್ಪೀ ಕಲಿಕಾಲದೊಂದು ಬಿಸುಪಿಂದಂ ನೋಡ ಸೌಜನ್ಯವ।
ಲ್ಲರಿ ಮುಂ ಬಂಬಣಬಾಡಿ ಪಾಡಟಿಯಲೆಂದಿರ್ದೀಗಳೀಗಳ್ ನಯಂ॥
ಬೊರೆದೆತ್ತಂ ತಳಿರ್ವೋಗಿ ಚೈತ್ರಲತೆವೋಲ್ ಚೆಲ್ವಾಗೆ ತಾಳ್ದಿತ್ತು ಬಿ।
ತ್ತರಮಂ ತ್ರ್ಯಂಬಕಸದ್ಗುಣಾಮೃತಪಯಸ್ಸಂಸೇಕದಿಂ ಲೋಕದೊಳ್॥190॥

ಸರದೊಳ್ ಸರದೀನಿಗಳಂ। ಬರದೊಳ್ ನಕ್ಷತ್ರಪಙ್ಕ್ತಿಗಳ್ ಪೂರ್ಣಕಳಾ।
ಧರನೊಳ್ ಕಳೆಗಳ್ ಬೆಳೆಪಂ।ತಿರೆ ಬೆಳಗಿದುವಖಿಳವಿದ್ಯೆಗಳ್ ತ್ರ್ಯಂಬಕನೊಳ್॥191॥

## 50 ಲಕ್ಷ್ಮೇಶ್ವರದ ಶಾಸನ [1081]

(ಎಪಿಗ್ರಾಫಿಯಾ ಇಂಡಿಕ, XVI, 59)

ಇದರಲ್ಲಿ ಚಾಳುಕ್ಯ ರಾಜನಾದ ವಿಕ್ರಮಾದಿತ್ಯನ ಸಾಮಂತ ದೋಣನು ಪುರಿಗೆರೆಯ (ಲಕ್ಷ್ಮೇಶ್ವರ) ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿಕ್ರಮಾದಿತ್ಯ

ಧರೆಯಂ ವಾರಾಶಿಪರ್ಯಂತಮನವಯುವದಿಂ ದುರ್ವಿನೀತಾವನೀಪಾ।
ಳರ ಬೇರಂ ಕಿಟ್ಟು ನೀರೊಳ್ ಗಲಗಲನಲೆದೀಡಾಡಿ ಮುನ್ನಿಂತು ಚಕ್ರೇ।
ಶ್ವರರಾರ್ ನಿಷ್ಕಂಟಕಂ ಮಾಡಿದರೆನೆ ಮಹಿ ನಿಷ್ಕಂಟಕಂಮಾಡಿ ಚಕ್ರೇ।
ಶ್ವರರತ್ನಂ ಸಂತತಂ ಪಾಳಿಸಿದನತಿಬಳಂ ವಿಕ್ರಮಾದಿತ್ಯದೇವಂ॥192॥

ಎರೆಗವಿಭು

ಎಳೆಯೊಳ್ ಸಾದೃಶ್ಯಮಪ್ಪಂದೆಱೆಗವಿಭುಗೆ ಬಿಣ್ಪಂಗೆ ಗುಣ್ಪಂಗೆ ತಿಣ್ಪಂ।
ಗೆಳೆ ಪಾರಾವಾರಮಿಂದ್ರಾಚಳಮವಸುರನಿಂ ರಾಮನಿಂ ಕೃಷ್ಣನಿಂ ಸಂ॥
ಚಳಮುಂ ವಿಶ್ಲಿಷ್ಟಗಂಭೀರಮುಮಗುರುವುಮಾಗಿರ್ದುವಾರಯ್ಯೆ ಬೇಱೊಂ।
ದೆಳೆ ಬೇಱೊಂದಬ್ಧಿ ಬೇಱೊಂದನಿಮಿಷನಗಮೆತ್ತಾನುಮುಂಟಪ್ಪೊಡಕ್ಕುಂ॥193॥

ಪರಿಕಿಪೊಡೆ ಹಸ್ತಿಮಶಕಾಂ। ತರಮೆನಿಪುದು ತನ್ನ ಗುಣದ ನೆಗಟ್ದರ ಗುಣದಂ।
ತರಮೆನೆ ಗುಣೇಷು ಕೋ ವಾ।ತ್ಸರ ಎಂಬ ಬುಧೋಕ್ತಮೆಱೆಗವಿಭುಗೆ ಸದುಕ್ತಂ॥194॥

ಸದಮಲಕೀರ್ತಿವಲ್ಲರಿ ದಿಶಾಂತರಮಂ ತೆಱಪಿಲ್ಲದಂತು ಪ।
ರ್ವಿದುದು ಪರಾಕ್ರಮಂ ಕಳಸಮಿಟ್ಟುದು ಬಿಣ್ಪುಪಮಾನಬಾಹ್ಯಮಾ॥
ದುದು ಚರಿತಂ ಶಿಖಾಪದಮನೆಯ್ದಿದುದಾರ್ಜಿನಸೂನು ಮತ್ತೆ ಪು।
ಟ್ಟಿದನೆನಿಪಂತುಟಾಯ್ತೆಱೆಗನುನ್ನತಿಯಂ ಪೊಗಟಲ್ ಸಮರ್ಥರಾರ್॥195॥

ಎರೆಗನ ತಮ್ಮ ದೋಣ

ಕಲಿತನದೊಳ್ ಕುರುಕುಲಸಂ। ಕುಲಮಥನನ ತಮ್ಮನನುಪಮಾನಾಕೃತಿಯೊಳ್।
ಬಲದೇವನ ತಮ್ಮಂ ಭುಜ ।ಬಲದೊಳ್ ಯಮಸುತನ ತಮ್ಮನೆಱೆಗನ ತಮ್ಮಂ॥
ಎಱೆಗನಡಿವೊದಲೊಳರಿನೃಪ। ರೆಱಗಿದೊಡದನಱಿಯೆನೆಱೆಗದಿರ... ಬೂಡಾ।
ಗೆಱಗಿಸುಗುಂ ಗೃಧ್ರಾದಿಗ। ಳೆಱಗಲ್ ಪತಿಕಾರ್ಯಭರಧುರೀಣಂ ದೋಣಂ॥196॥

ಕೇಣಮುದಾರದೊಳ್ ಕೊಱತೆ ಸಜ್ಜನವೃತ್ತಿಯೊಳೆಗ್ಗು ಶೀಲದೊಳ್।
ಕಾಣಲೆ ಬಾರದೆಂದೊಡೆ ಪೆಱರ್ ಸಮನಪ್ಪರೆ ಮರ್ತ್ಯಲೋಕದೊಳ್॥
ದೋಣನೊಳಂಗನಾಕುಸುಮಬಾಣನೊಳಿಷ್ಟ ವಿಶಿಷ್ಟ ಸಂಕುಲ।
ತ್ರಾಣನೊಳಬ್ಜಸಂಭವಸಮಾನಸಮಸ್ತ ಕಲಾಪ್ರವೀಣನೊಳ್॥197॥

ನಯಸೇನಸೂರಿ

ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ವನಾ।
ನಿರೆನವಳಿರ್ಕೆ ಚೀಃ ಸವತಿಯೊಳ್ ಪುದುವಾಳ್ವುದು ಕಷ್ಟಮೆಂದು ನಿ॥
ಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಱಿ ಕೀರ್ತಿ ತಾಂ।
ಪುರುಡಿಸಿ ದೂಱಿಪಳ್ ವರತಪೋನಿಧಿಯಂ ನಯಸೇನಸೂರಿಯಂ॥198॥

ರಾಜ

ಮನುಮುನಿಮಾರ್ಗನೆಂದು ಜಿನಪೂಜೆಯೊಳಟ್ಟಿಗನೆಂದು ದಾನಿಯೆಂ।
ದನುಪಮತೇಜನೆಂದು ಶುಚಿಯೆಂದು ದಯಾಪರನೆಂದು ನಿಚ್ಚಲುಂ॥
ಮನವೊಸೆದಟ್ಟಿಱಿಂ ಬಿಡದೆ ಬಣ್ಣಿಸುಗುಂ ಜಗಮೆಯ್ದೆ ಕೂಡೆ ರಾ।
ಜನನಿನತೇಜನಂ ಪಸುಗೆಗೋಜನನಾಶ್ರಿತಕಲ್ಪಭೂಜನಂ॥199॥

## 51 ಬೆಳಗಾಮಿ ಶಾಸನ, [1081]

(ಮೈಸೂರು ಶಾಸನದ ಇಲಾಖೆಯ 1929ನೆಯ ವರ್ಷದ ವರದಿ; ಶಾಸನ ಸಂಖ್ಯೆ 65, ಉತ್ತರ ಭಾಗ)

ಇದರಲ್ಲಿ, ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಅವನ ತಮ್ಮ ಪಲ್ಲವ ಪೆರ್ಮಾನಡಿ ಜಯಸಿಂಹನ ಮಹಾಪ್ರಧಾನ ತಂಬರಸನು ಕಲಿದೇವೇಶ್ವರ ಸ್ವಯಂಭುದೇವರಿಗಾಗಿ ಶಿವಶಕ್ತಿ ಪಂಡಿತರ ಶಿಷ್ಯ ರುದ್ರಶಕ್ತಿ ಪಂಡಿತರಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.

ತ್ರೈಲೋಕ್ಯಮಲ್ಲ

ಕಂ॥ ಎನಿಸಿದ ಜಯಸಿಂಹ ಮಹೀ।ಶನ ತನಯಂ ನಿಜ ಭುಜೋಗ್ರ ಕೌಕ್ಷೇಯಕ ವಾ।
ರಿ ನಿಮಜ್ಜದಖಿಳ ಸಮದಾ। ರಿ ನೃಪಂ ತ್ರೈಲೋಕ್ಯಮಲ್ಲನಾಹವಮಲ್ಲಂ॥200॥

ತ್ರಿಭುವನಮಲ್ಲ

ಕಂ॥ ಅವರೊಳ್ ನೆಗಟ್ಟಿಂ ಹರಿಮೂ।ರ್ತಿ ವಿಧೂಜ್ವಳ ಕೀರ್ತಿ ಚಂಡದೋರ್ವಿಕ್ರಮಶಾ।
ಳಿ ವಿರೋಧಿ ಶೈಳ ದಂಭೋ।ಳಿ ವಿಕ್ರಮಾದಿತ್ಯದೇವನದಟರ ದೇವಂ॥ 201॥

ಮ॥ ಕದಪಂ ಪೊಯ್ವಂದುದರ್ಕೇಗೊಳಿಸಿ ತಿವುಳನಂ ಗಂಡುದೊಟ್ಟಾಳ್ದನೊತ್ತಂ।
ಬದೆ ಮೂಗಿಟ್ಟೇಱಿದಂ ಮಾಳವನನಿರದೆ ಸಱ್ಚಿಂಬಿನಂ ಮೆಟ್ಟಿ ಸೀಳ್ದಿ।
ಕ್ಕಿದನಂಗಾಧೀಶನಂ ರಾಯರನೆ ಬದಿವೊಲಂಗೊಂಡು ತಂದಟ್ಟಿಯಿಂ ದೀ।
ವದ ರಾಯರ್ಮಾಡಿ ಕಾರಾಗೃಹದೊಳಿರಿಸಿದಂ ವಿಕ್ರಮಾದಿತ್ಯದೇವಂ॥202॥

ಶಾ॥ ಧಾರಾ ನಾಥ ಮಹಾ ಭಯ ಜ್ವರಕರಂ ಚೋಳೋಗ್ರ ಕಾಳಾಂತಕಂ।
ಸೌರಾಷ್ಟ್ರಾಂಗ ಕಳಿಂಗ ವಂಗ ಮಗಧಾಂಧ್ರಾವಂತಿ ಪಾಂಚಾಳ ನಾ।
ನಾ ರಾಜಾವಳಿ ಮೌಳಿ ಲಾಳಿತ ಪದಂ ಪೂರ್ವಾಪರಾಂಭೋಧಿ ವೇ।
ಳಾರಾಮಾಂತರ ಶೈಳ ಕೇಳಿ ವಿಭವಂ ಚಾಳುಕ್ಯ ದಿಕ್ಕುಂಜರಂ॥203॥

ಕಂ॥ ಕರಿಯರೆನಿಪ ಪರ ಮಹಿ।ಪರ ಬಿರುದಿನ ಗರಿಮಮುರಗು ಕರಗುವ ತೆಱದಿಂ।
ದಿರದೆ ಕರಗುವಿನಮುರಿವರಿ। ವರಿದುದು ತೇಜಂ ಪ್ರತಾಪ ಕಾಳಾನಳನಾ॥204॥

ಅಣೆಯರ ಬಿರುದಂ ಚೋಳಂ। ಗಣಿಕಾ ಸಂದೋಹದಂತೆ ಮುಡಿಯಂ ಪೊತ್ತಂ।
ಕಣಯುಮನಿಕ್ಕುವನೆಂದೊಡೆ। ಪೊಣರ್ವದಟರುಮೊಳರೆ ರಾಯ ಕೋಳಾಹಳ
ನೊಳ್॥205॥

ಇವನ ತಮ್ಮ ಜಯಸಿಂಹ

ಮ॥ ವಿನಯಕ್ಕಾಸ್ಪದಮಾದ ವಿಕ್ರಮ ನೊಳಂಬಂ ವಿಕ್ರಮಾದಿತ್ಯದೇ।
ವನ ಚಿತ್ತಕ್ಕವಳಂಬಮಾದ ಕೆಳೆಯಂ ಚಾಳುಕ್ಯ ರಾಮ ಕ್ಷಿತೀ।
ಶನ ಕೊಂಡಾಟದ ಕೂರ್ಮೆವೆತ್ತಣುಗದಮ್ಮಂ ರಾಯಕಂದರ್ಪ ದೇ।
ವನ ಸಮ್ಮೋಹನ ಪುಷ್ಪ ಬಾಣಮೆನಲಿನ್ನೇವಣ್ಣಿಪಂ ಬಣ್ಣಿಪಂ॥206॥

ತಂಬರಸ

ಮ॥ ಸ್ರ॥ ಧುರದೊಳ್ ಮಾಱಾಂತ ಚೋಳಾವನಿಪನನದಟಿಂ ಗೆಲ್ದವಂ ಸಂದ ಕಾಂಚೀ।
ಪುರಮಂ ಕೋಪಾಗ್ನಿಯಿಂ ಸುಟ್ಟವನತುಳ ಬಳೋಪೇತ ವೀರಾರಿ ಧಾತ್ರೀ।
ಶ್ವರರಂ ದೋರ್ಗರ್ವದಿಂ ಬಂಧನ ಪದವಿಯೊಳುಯ್ಯಿಟ್ಟವಂ ಮಾಳವಾಧೀ।
ಶ್ವರನಂ ಬೆಂಕೊಂಡವಂ ಕೇರಳನನಲೆದವಂ ತಂಬ ದಂಡಾಧಿನಾಥಂ॥ 207॥

ಮಲೆಯೇಱುಂ ಕೊಂಬು ಕೊಂಬೇಱ್ಮಲೆಗಳನಲೆದುದ್ವೃತ್ತ ವಿದ್ವಿಷ್ಟ ಭೂಭೃ।
ತ್ಕುಳಮಂ ಶೌರ್ಯಾವಳಂಬಂ ವಿಜಿತ ರಿಪು ಬಳಂ ತಂಬ ದಂಡಾಧಿನಾಥಂ।
ತಲೆಯಂ ಸೆಂಡಾಡುವಂ ಕಂಡಮನಿರದೆ ಮರುಳ್ಗಳ್ಗೆ ಕೊಚ್ಚಿಕ್ಕುಂ ದೋ।
ರ್ವಳದಿಂದಾಟಂದು ಮಾಱಾಂಪದಟರೊಳರೆ ಪೇೞ್ವೀಳವಂಗಂ ಜವಂಗಂ ॥208॥

ಉದಧಿ ವ್ಯಾವೇಷ್ಟಿತೋರ್ವೀತಳಮನೆಮಗೆ ನಿಷ್ಕಂಟಕಂ ಮಾಡಿ ಮತ್ತಂ।
ಕದನ ಕ್ರೀಡಾರ್ಥಿಯಂ ಸೇವುಣನನವನತಂ ಮಾಡಿ ಚೋಳೇಶ ರಾಜ್ಯಾ।
ಸ್ಪದಮಂ ದೋರ್ಗರ್ವದಿಂ ಸಾಧಿಸಿ ಪಡೆಯಲೊಡರ್ಚಿಟ್ಟಪಂ ಧಾತ್ರಿಗೆಲ್ಲಂ।
ಪದಪಿಂದೊತ್ತಿತ್ತಪಂ ಕೇವಳಮೆ ಜನ ನುತಂ ತಂಬನೆಂಬಂ ನೊಳಂಬಂ॥209॥

ಖಸ ಕರ್ಣಾಟಾಂಧ್ರ ವಂಗ ದ್ರವಿಳ ಮಗಧ ನೇಪಾಳ ಕಾಳಿಂಗ ಪಾಂಚಾ।
ಳ ಸುರಾಷ್ಟ್ರಾನೇಕ ದೇಶಾವನಿಪರನಲೆದಾಟಂದು ಬೆಂಕೊಂಡು ಕೀರ್ತಿ।
ಪ್ರಸರಂ ದಿಕ್ಚಕ್ರದೊಳ್ ವರ್ತಿಸೆ ರಿಪು ಗಜ ವಾರಾಂಗನಾಸ್ಪಂಗಳೊಳ್ ನಿ।
ಷ್ಟ್ರಾಸವಂ ತಂದಿತ್ತಸಾಳ್ದಂಗಖಿಳ ಜನ ನುತಂ ತಂಬ ದಂಡಾಧಿನಾಥಂ॥210॥

ಕಂ॥ ತಂಬಂ ನಿರ್ಜಿತ ವೈರಿ ಕ।ದಂಬಂ ಕವಿ ಗಮಕ ವಾದಿ ನಳಿನೀ ದಿನಕೃ।
ದ್ಬಿಂಬಂ ತರ್ಪಿತ ಬುಧ ನಿಕು।ರುಂಬಂ ಚಾಳುಕ್ಯ ರಾಜ್ಯ ಮೂಳ ಸ್ತಂಭಂ ॥210 ಅ॥

ಫಲಸ್ತುತಿ

ಕಂ॥ ಈ ದತ್ತಿಯನನುನಯದಿಂ। ಕಾದ ಮಹಾ ಪುರುಷನಮಳ ಗಂಗಾ ನದಿಯೊಳ್।
ವೇದ ವಿದುಗಳ್ಗೆ ಸಾಸಿರ। ಗೋದಾನಮನಿತ್ತುದೊಂದು ಪದಮಂ ಪಡೆಗುಂ॥211॥

**52 ಹೂಲಿಯ ಶಾಸನ ಸಿ. [1082]**

(ಎಪಿಗ್ರಾಫಿಯಾ ಇಂಡಿಕ, XVIII, 179)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ರವಿಯಣಗೇರಿಯ ರವಿಕಿಮಯ್ಯ ನಾಯಕನು ಹೂಲಿಯಲ್ಲಿ ಒಂದು ವಿಷ್ಣು ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಪೂಲಿ ಗ್ರಾಮ

ಅಂಬುಧಿ ವೃತ ಧರಣಿಗೆ ವದ। ನಂ ಬೆಳ್ವಲ ನಾಡದಕ್ಕೆ ತಿಲಕದವೋಲ್ ಚೆ॥
ಲ್ವಂ ಬೀಱುವ ಪೂಲಿ ಗ್ರಾ। ಮಂ ಬುಧಜನ ನಿಲಯಮೆನಿಪುದಾ ಪುರವರದೊಳ್॥212॥

ಪೂಲಿಯ ಸಾಸಿರ್ವರ್

ಅಮಿತಗುಣಾನ್ವಿತ ವಿಪ್ರೋ। ತ್ತಮರಿಷ್ಟಾಪೂರ್ತ ವರ್ತನರ್ ಸಾಸಿರ್ವರ್॥
ಯಮ ನಿಯಮ ಸ್ವಾಧ್ಯಾಯ। ಪ್ರಮುಖಾಚಾರರ್ ಸಮಸ್ತ ದೋಷ ವಿದೂರರ್ ॥213॥

ರವಿಯಣಗೇರಿಯ ನೂರ್ವರ್

ಅವರೊಳಗೆ ವೇದಶಾಸ್ತ್ರ। ಪ್ರವರರ್ ಷಟ್ಕರ್ಮ ನಿರತರೆನಿಪ್ಪನ್ನತಿಯಿಂ॥
ರವಿಯಣಗೇರಿಯ ನೂರ್ವರ್।ಭುವನದೊಳತಿ ವಿಶದ ಕೀರ್ತಿಯಂ ಪ್ರಕಟಿಸಿದರ್॥214॥

ರವಿಕಿಮಯ್ಯ

ತತ್ತನುಜಾತಂ ಶ್ರೀ ಪುರು। ಷೋತ್ತಮ ಪದ ಕಮಲ ಯುಗಳ ಭೃಂಗಂ ಧರ್ಮೋ॥
ದಾತ್ತ ಮನಂ ವಿಭು ಸಕಲ ಜ। ಗತ್ತಿಲಕಂ ರವಿಕಿಮಯ್ಯನಮಲ ಚರಿತ್ರಂ॥215॥

ಫಲಸ್ತುತಿ

ಇವನೀಯಂದದಿನೆಯ್ದೆ ಪಾಲಿಸಿದವಂಗಿಷ್ಟಾರ್ಥ ಸಂಸಿದ್ಧಿ ಸಂ।
ಭವಿಕುಂ ಕೊಂಡಟಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮೆಂ॥
ಬಿವಱೊಳ್ ಪೇಸದೆ ಪಾರ್ವರಂ ಗೊರವರಂ ಗೋಬೃಂದಮಂ ಪೆಂಡಿರಂ।
ತವೆ ಕೊಂದಿಕ್ಕಿದ ಪಾಪಮೆಯ್ದುಗುಮವಂ ಬೀೞ್ಗಂ ನಿಗೋದಂಗಳೊಳ್॥216॥

ವನಧಿಗಳುಂ ಚಂದ್ರಾರ್ಕರು। ಮನಿಮಿಷ ನಾಗೇಂದ್ರ ಲೋಕಮುಂ ವಸುಮತಿಯುಂ॥
ಕನಕಾಚಲಮುಂ ತಾನು। ಳ್ಳಿನೆಗಂ ಸಲೆ ನಿಲ್ಗೆ ರವಿಕಿಮಯ್ಯನ ಧರ್ಮಂ॥217॥

## 53 ನಾಗಾಯಿ ಶಾಸನ ಸಿ, [1085]

(ಹೈದರಾಬಾದ್ ಆರ್ಕಿಯೊಲಾಜಿಕಲ್ ಸೀರೀಸ್ 8, ಪುಟ 24)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ದಂಡನಾಯಕ ಕಾಳಿದಾಸನು ನಾಗವಾವಿಯ ಮಧುಸೂದನ ದೇವಸ್ಥಾನಕ್ಕೂ ಅಲ್ಲಿಯ ಕೆಲಸದವರಿಗೂ ದೊರೆಯಿಂದಲೂ ಅಹಿಹಯ ವಂಶದ ಲೋಕರಸನಿಂದಲೂ ಭೂಮಿಯನ್ನು ಪಡೆದು ಬಿಟ್ಟಂತೆ ಹೇಳಿದೆ.

### ಮಧುಸೂದನನ ಮಗ ಕಾಳಿದಾಸ

ವಿಧುಕೀರ್ತಿ ದಂಡನಾಯಕ। ಮಧುಸೂದನನಗ್ರಸೂನು ಸಾಹಿತ್ಯ ಕಳಾ॥
ನಿಧಿ ವಿಕ್ರಮ ತ್ರಿವಿಕ್ರಮ। ನಧರೀಕೃತ ಮನುಚರಿತ್ರನಾಹವ ಮಲ್ಲಂ॥218॥

ಸಾಧಿಸಿದಂ ನೆಲನಂ ಹಿಮ। ಭೂಧರದಿಂ ಸೇತುವರೆಗಮುದಯದಿನಪರಾಂ॥
ಭೋಧಿವರಂ ನಿಜಪತಿಗೆ ಯ। ಶೋಧವಳಂ ಕಾಳಿದಾಸ ದಂಡಾಧೀಶಂ॥219॥

ಕೇವಣದೊಳ್ ನಾಯಕ ಮಣಿ। ಶೀವಿರ್ಪವೊಲುಭಯ ರಾಯ ಬೆಂಕೊಳ್ವ ಧರಿ॥
ಶ್ರೀ ವಲ್ಲಭನರಮನೆಯೊಳ್। ಶೀವಿರ್ದಂ ಕಾಳಿದಾಸ ದಂಡಾಧೀಶಂ॥220॥

### ಅಹಿಹಯ ವಂಶದ ಲೋಕನೃಪ

ಶ್ರೀಮದಹಿಹಯ ಕುಳಾಂಬರ। ಸೋಮಂ ಸಂಗ್ರಾಮ ರಾಮನುದ್ಧತ ಭೀಮಂ॥
ಭೀಮಭುಜಂ ಜಯಲಕ್ಷ್ಮೀ। ಧಾಮಂ ವಿನಮಿತ ಸಮಸ್ತ ಲೋಕಂ ಲೋಕಂ॥221॥

ಅವನವನತ ಭೂಭುವನಂ। ಭವ ಭವ ವಿಕ್ರಮನತುಲ್ಯ ಸಾಹಸನಮೃತಾ॥
ರ್ಣವ ತಾರ ಹಾರ ಹರ ಹಾ। ಸ ವಿಶುದ್ಧ ಸ್ಫಟಿಕ ಕೀರ್ತಿ ಕೀರ್ತಿ ವಿಳಾಸಂ॥222॥

## 54 ನಗರ 40 [1087]

ಇದರಲ್ಲಿ ವಿಕ್ರಮಸಾಂತರನು ತನ್ನ ತಾಯಿ ಚಟ್ಟಲದೇವಿ ಮಾಡಿಸಿದ ಪಂಚಕೂಟಬಸ್ತಿಗೆ ಗ್ರಾಮಗಳನ್ನು ಬಿಟ್ಟನೆಂದು ಹೇಳಿದೆ.

### ಚಟ್ಟಲದೇವಿ

ಬೇರಿನಹೀಂದ್ರನಂ ನಡುವಿನಾಗಸಮಂ ಕುಡಿಯಿಂ ದಿವಾಗ್ರಮಂ।
ತಾರನಗಂಗಳಂ ಕವಲಿನೊಳ್ಪೆಲೆಯಿಂ ದೆಸೆಯುಂ ಮುಗುಳ್ಗಳಿಂ॥
ತಾರಕೆಯುಂ ಸಿತಾಬ್ಜಮನೆ ಪುಷ್ಪದೆ ಪೋಲ್ಪುದು ಪಣ್ಣಿನಿಂದುವಂ।
ನೀರೆಜೆಿದಂತೆ ದುಗ್ಧಮನೆ ಚಟ್ಟಲದೇವಿಯ ಸದ್ಯಶೋದ್ರುಮಂ॥223॥

ವಿಕ್ರಮಸಾಂತರ (ಒಡ್ಡುಗ)

ಅದಿರದೆ ಬರ್ಪ ಚಪ್ಪರಿಪ ಕಪ್ಪರಿಪಾರ್ದಲಗೊತ್ತಿ ಶಸ್ತ್ರಮಂ।
ಬಿದಿರ್ದು ಮರಲ್ ಮರಲ್ಚೆನುತೆ ಕುತ್ತುವ ಕುತ್ತಿದೊಡಾಂತು ಕಟ್ಟಿದಾ॥
ಪದದೊಳೆ ಸುತ್ತಿ ಮುತ್ತಿದವೊಲೇಱನೆ ತೋಱುವ ಗೇಣ ಬಿನ್ನಣ।
ಕ್ಕೊದವುವ ಬಿನ್ನಣಂ ನೆಗಟಿಲೊಡ್ಡುಗ ನೀನರಸಂಕಕಾಱನೈ॥224॥

ಪರಿದುದರಾಗ್ನಿಯುಂ ಮಱಿದು ತಿಂದ ಪೆಣಂಗಳಿನಾದಜೀರ್ಣದಿಂ।
ಮರುಳಬಳಾಳಿ ವೈದ್ಯಮರುಳಂ ಬೆಸಗೊಂಡೊಡೆ ದಂತಿ ಮರ್ದಿನಲ್॥
ಕರಿಯುನೆ ನುಂಗಿ ಸೂಡುಕೊಳೆ ವೈದ್ಯಮರುಳ್ ನಗೆ ವೀರಲಕ್ಷ್ಮಿ ನೋ।
ಡರಿಹರ ನಿನ್ನಿನಾಯ್ತಿದೆನೆ ವಿಕ್ರಮಸಾಂತರನಾದನೊಡ್ಡುಗಂ॥225॥

ಫಲಸ್ತುತಿ

ಇದನಾಚಂದ್ರಾರ್ಕಂಬರ। ಮುದಿತೋದಿತಮಾಗೆ ಕಾದವಂ ಪರಮಸುಖಾ।
ಸ್ಪದನಕ್ಕುಂ ಪಾಪದಿನಟಿ। ದ ದುರಾತ್ಮಂ ನರಕಗತಿಗೆ ಗಳಗಳನಿೞಿಗುಂ॥226॥

## 55 ಚೆನ್ನರಾಯಪಟ್ಟಣ 148 [1093]

ಇದರಲ್ಲಿ ಹೊಯ್ಸಳರಾಜನಾದ ಎರೆಯಂಗನು ಗೋಪನಂದಿ ಪಂಡಿತನಿಗೆ ಕೆಲವು ಗ್ರಾಮಗಳನ್ನು ಕೊಟ್ಟಂತೆ ಹೇಳಿದೆ.

ವಿನಯಾದಿತ್ಯ

ಎರೆದ ಮನುಜಂಗೆ ಸುರಭೂ। ಮಿರುಪಂ ಶರಣೆಂದವಂಗೆ ಕುಳಿಶಾಗಾರಂ।
ಪರವನಿತೆಗನಿಳತನಯಂ। ಧುರದೊಳ್ ಪೊಣರ್ದಂಗೆ ಮೃತ್ಯು ವಿನಯಾದಿತ್ಯಂ॥227॥

ರಕ್ಕಸಪೊಯ್ಸಳನೆಂಬಾ। ಅಕ್ಕರಮಂ ಬರೆದು ಪಟಮನೆತ್ತಿದೊಡಿದಿರೊಳ್।
ಲಕ್ಕದ ಸಮಲೆಕ್ಕದೆ ಮಱು। ವಕ್ಕಂ ನಿಂದಪುವೆ ಸಮರಸಂಘಟ್ಟನದೊಳ್॥228॥

ಎರೆಯಂಗ

ಅನುಪಮಕೀರ್ತಿ ಮೂಱನೆಯ ಮಾರುತಿ ನಾಲ್ಕನೆಯುಗ್ರವಹ್ನಿಯು।
ಯ್ದನೆಯ ಸಮುದ್ರಮಾಱನೆಯ ಪೂಗಣೆಯೇೞನೆಯುರ್ವರೇಶನೆಂ॥
ಟನೆಯ ಕುಳಾದ್ರಿಯೊಂಬತನೆಯುದ್ಧಸಮೇತ... ಹಸ್ತಿ ಪ।
ತ್ತನೆಯ ನಿಧಾನಮೂರ್ತಿಯೆನೆ ಪೋಲ್ವವರಾರೆಱೆಯಂಗದೇವನಂ॥229॥

ಮುರರಿಪುವ ಪಿಡಿವ ಚಕ್ರದ। ಪರಿಗಂ ಕೇಸರಿಗಮಾಫಣಿಧ್ವಂಸಿಯ ವಿ।
ಸ್ಫುರಿತನಖಹತಿಗಮೆಱೆಗನ। ಕರವಾಳ್ಗಮಿದಿರ್಄ ಬರ್ದುಕಲಾರ್ಪರುಮೊಳರೇ
॥229 ಅ॥

ಇರ್ಮಡಿ ದಧೀಚಿಮುನಿಗೆ ಪ। ದಿರ್ಮಡಿ ಗುತ್ತಂಗೆ ಚಾರುದತ್ತಂಗತ್ತಲ್।
ನೂರ್ಮಡಿ ರವಿಸೂನುಗೆ ಸಾ।ಸಿರ್ಮಡಿ ಮೇಲ್ ದಾನಗುಣದಿನೆಱೆಯಂಗನೃಪಂ॥230॥

ಗೋಪನಂದಿಪಂಡಿತ

ಮಲೆಯದೆ ಸಾಂಖ್ಯ ಮಟ್ಟಮಿರು ಭೌತಿಕ ಪೊಂಗಿ ಕಡಂಗಿ ಬಾಗದಿರ್।
ತೊಲತೊಲಗತ್ತ ಬೌದ್ಧ ತಲೆದೋಱದೆ ವೈಷ್ಣವ ನೀನಡಂಗು ವಾ॥
ಗ್ಬಲದ ಪೊಡರ್ಪು ಬೇಡ ಗಡ ಚಾರ್ವಾಕ ಚಾರ್ವಾಕ ನಿಮ್ಮ ದರ್ಪಮಂ।
ಸಲಿಪನೆ ಗೋಪನಂದಿಮುನಿಪುಂಗವನೆಂಬ ಮದಾಂಧಸಿಂಧುರಂ॥231॥

ತಗೆಯಲ್ ಜೈಮಿನಿ ತಿಪ್ಪಿಕೊಂಡು ಪರಿಯಲ್ ವೈಶೇಷಿಕಂ ಪೋಗದುಂ।
ಡಿಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ಕಕ್ಷಪಾದಂ ಬಿಡ॥
ಲ್ಬುಗೆ ಲೋಕಾಯತನೆಯ್ದೆ ಸಾಂಖ್ಯನಡಸಲ್ಕಮ್ಮಮ್ಮ ಷಟ್ತರ್ಕವೀ।
ಧಿಗಳೊಳ್ ತೂಳ್ದಿತು ಗೋಪನಂದಿದಿಗಿಭಪ್ರೋದ್ಭಾಸಿಗಂಧದ್ವಿಪಂ॥232॥

ಏನನೇನನೆಲೆ ಪೇೞ್ವೆನಣ್ಣ ಸ। ನ್ಮಾನದಾನಿಯ ಗುಣವ್ರತಂಗಳಂ।
ದಾನಶಕ್ತಿಯಭಿಮಾನಶಕ್ತಿ ವಿ। ಜ್ಞಾನಶಕ್ತಿ ಸಲೆ ಗೋಪನಂದಿಯಾ॥233॥

## 56 ಮಂಜರಾಬಾದ್ 18 [1095]

ಇದರಲ್ಲಿ ಕದಂಬರಾಜನಾದ ದಯಸಿಂಹನ ತಾಯಿ ಮೋಚಲದೇವಿ ಪಾರುವಬೆಲುಹೂರಲ್ಲಿ ಕೆರೆಯನ್ನು ಕಟ್ಟಿಸಿ ದೇವಸ್ಥಾನವನ್ನು ಮಾಡಿಸಿ ಭೂಮಿಯನ್ನು ಬಿಟ್ಟಳೆಂದು ಹೇಳಿದೆ.

ದಯಸಿಂಹ

ಶ್ರೀಮತ್ಕದಂಬವಂಶಶಿ। ಖಾಮಣಿ ದಯಸಿಂಹದೇವನನುಪಮಗುಣದು।
ದ್ದಾಮತೆಯಂ ನೆಱೆ ಪೊಗೞ। ಲ್ಕೇಮಾತಜನಜಿಯನೆಂದೊಡುಂಟೆದವರಳವೇ॥234॥

ಧುರದೊಳ್ ಬಂದುಱದೊಡ್ಡಿದಂದರಿಬಳವ್ರಾತಕ್ಕೆ ಕೆಯ್ಯಾಂತು ನಿಂ।
ದೆರೆದರ್ಥಿಪ್ರಕರಕ್ಕೆ ವಾರವನಿತಾನೀಕಕ್ಕೆ ಗಂಭೀರಸಾ॥
ಗರನಪ್ಪೀದಯಸಿಂಹನಾಂತಿಱಿಯಲೀಯಲ್ ಸಾರಿಸಲ್ ಬಲ್ಲನಾ।
ಹರಿಪುತ್ರಂ ಹರಿಪುತ್ರನಾಹರಿಸುತಂ ತಾನೆಂದೊಡೇವಣ್ಣಿಪೆಂ॥235॥

ಮಿಸುಗುವ ತಾರಕಾದ್ರಿರುಚಿಯಿಂ ದುಗುಧಾರ್ಣವಫೇನರೋಚಿಯಿಂ।
ದೆಸೆಗಳನಾವಗಂ ಬೆಳಗುತಿರ್ಪ ಹಿಮಾಕರಬಿಂಬದಿಂ ವಿರಾ॥
ಜಿಸುವಮರೇಂದ್ರದಂತಿಯ ತನುಚ್ಛವಿಯಿಂ ಮಿಗಿಲಾಗಿ ಪರ್ವಿ ರಂ।
ಜಿಸುವುದು ಕೀರ್ತಿ ಧಾತ್ರಿಯೊಳಗುಜ್ಜ್ವಳದಿಂ ದಯಸಿಂಹಭೂಪನಾ ॥236॥

ಮೋಚಲದೇವಿ

ಅತಿಚತುರೋಕ್ತಿಯೊಳೆ ಸರ। ಸ್ವತಿಗಂ ಮಿಗಿಲೆನಿಸಿ ಭುವನದೊಳ್ ಧರ್ಮಗುಣ।
ಪ್ರತತಿಗೆ ನೆಲೆಯಾಗಿ ಮಹಾ। ಸತಿ ಮೋಚಲದೇವಿ ಸಂತತಂ ಸೊಗಯಿಸುಗುಂ॥237॥

## 57 ಶಿಕಾರಿಪುರ 114 [1096]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಯಕ ಸರ್ವದೇವನು ಬಳ್ಳಿಗಾವೆಯಲ್ಲಿ ಸರ್ವೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಸರ್ವದೇವನ ಸಹೋದರ ಚಾಮುಂಡರಾಯ

ಹರಿಯಿಂದಂ ಮಂದರಂ ಮಂದರಮಥನದಿನಂಭೋಧಿಯಂಭೋಧಿಯಿಂದಂ।
ಧರೆ ಬನ್ನಂಬೆತ್ತುವಾಮಂದರಗಿರಿ ಸರಿಯೇ ತಿಣ್ಪಿನೊಳ್ ವಾರ್ಧಿಯೆತ್ತಂ॥
ದೊರೆಯೇ ಪೇಟ್ ಗುಣ್ಪಿನೊಳ್ ಧಾರಿಣಿ ಸರಿಸಮೆನಲ್ ಬರ್ಪುದೇ ಬಿಣ್ಪಿನೊಳ್ ಮಂ।
ದರಶೈಲಕ್ಕರ್ಣವಕ್ಕುರ್ವರೆಗಧಿಕಗುಣಂ ನೋಡೆ ಚಾವುಂಡರಾಯಂ॥237 ಅ॥

ಸರ್ವದೇವ

ಧರೆ ಕಂಪಂಗೊಳ್ಗುಮಾಶಾಕರಿ ಪೆಡಱುಗುಮಂಭೋಜಜಂ ಬೆರ್ಚುಗುಂ ಸಾ।
ಗರಮೆತ್ತಂ ಮೇರೆಯಂ ದಾಂಟುಗುಮನುಪಮದೋಸ್ಸಾಹಸಂ ಸರ್ವದೇವಂ॥
ಧುರದೊಳ್ ಪಿಂಮೆಟ್ಟಿದಂದುಂ ಪರವನಿತೆಗೆ ಸೋಲ್ತಂದುಮಿತ್ತರ್ಥಿಗಿಲ್ಲೆಂ।
ದೆರಡಂ ಮಾತಾಡಿದಂದುಂ ಭಯವಶದೆ ಶರಣ್ಬೊಕ್ಕರಂ ಕಾಯದಂದುಂ॥238॥

ನುಡಿ ಕನಕಾದ್ರಿಯೊಳ್ ಕಡಸಿದಕ್ಕರಮಣ್ಮು ಮದೇಭವೈರಿಯೊಳ್।
ಮಡಗಿದ ಬಯ್ಕೆ ದಾನಮುಮರಾವನಿಜಾತದ ಜೌವನಂ ಧನಂ॥
ಬಡವನ ಬಯ್ತ ವಸ್ತು ಕಲುಷಂ ಪ್ರಳಯಾನಳನೇೞ್ಗೆಯಿಂದಮೆಂ।
ದೊಡೆ ಬಱಿಕೇನನೆಂದಪೆ ಮಹೋನ್ನತಿಯಂ ವಿಭುಸರ್ವದೇವನಾ॥239॥

ಸರ್ವೇಶ್ವರ ದೇವಾಲಯ

ಇದು ಲೋಕೋತ್ತರಮೆಂಬಿನಂ ನೆಗಟ್ದ ವಲ್ಲಿಗ್ರಾಮದೊಳ್ ಮೇರು ತಾ।
ನಿದು ಕೈಲಾಸಮಿದೆಂಬಿನಂ ಧರೆಗಮಾಕಾಶಕ್ಕಮೂಡಿಟ್ಟನಿಂ॥
ತಿದನಂಭೋಜಜನೆಂಬಿನಂ ಜನನುತಂ ಶ್ರೀಸರ್ವದೇವಂ ಮನೋ।
ಮುದದಿಂ ಮಾಡಿಸಿದಂ ವಿಚಿತ್ರತರಮಂ ಸರ್ವೇಶ್ವರಾವಾಸಮಂ॥240॥

## 58 ಬೇಲೂರು ತಾಲ್ಲೂಕು ರನ್ನಘಟ್ಟದ ಶಾಸನ, [ಸು. 1096]

(ಮೈಸೂರು ಶಾಸನ ಇಲಾಖೆಯ ರಿಪೋರ್ಟು, 1926, 7ನೆಯ ಶಾಸನ)

ಇದರಲ್ಲಿ ಹೊಯ್ಸಳ ರಾಜನಾದ ವಿನಯಾದಿತ್ಯನ ಸಾಮಂತ ಭಾಸನು ರಣಕಿಯಕಟ್ಟದಲ್ಲಿ ಬೂಚೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಕಂ॥ ಸ್ವಸ್ತಿ ಸಮಸ್ತ ಧರಾಧಿಪ।ಮಸ್ತಕ ವಿನ್ಯಸ್ತ ಹಸ್ತನುದಿತ ಜಯಶ್ರೀ॥
ವಿಸ್ತಾರಿ ಸ್ತನ ಹಾರಂ। ಪ್ರಸ್ತುತ್ಯಂ ಪುಣ್ಯಮೂರ್ತಿ ವಿನಯಾದಿತ್ಯಂ॥241॥

ಭಾಸ

ನೆಟ್ಟನೆಱಿಗಂಗೆ ಚಲದಿಂ। ದೊಟ್ಟೈಸುವ ವೈರಿ ಭೂಪರಂ ನೋಡ ಪೊದ॥
ಲ್ಗಟ್ಟದ ಭಾಸಂ ಪರಿಯಿಂ। ದೊಟ್ಟಜೆಯಿಂ ಗೆಲ್ದುಮುಂಗ್ರ ಸಮರಾಂಗಣದೊಳ್ ॥242॥
ಎಱಿಗಂಗೆ ಮಲೆದು ಚಲದಿಂ। ದೆಱಿಗದ ರಿಪುಬಳಕೆ ಕಾಳಸರ್ಪಂ ತನ್ನಂ॥
ನೆಱೆ ಪೊರೆವ ಪತಿಗೆ ಸನ್ನಣ। ಮೆಱೆಯಂಗನ ಹನುಮನಲ್ತೆ ಪೊನೆಯೊಳ್ ಭಾಸಂ ॥243॥

**59 ಸಾಗರ 80** [1096]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ತ್ರಿಭುವನಮಲ್ಲ ಸಾಂತರನ ಪಡೆವಳ ಸಿಂಗಣನು ಕೆರೆಯನ್ನೂ ದೇವಸ್ಥಾನವನ್ನೂ ಕಟ್ಟಿಸಿದಂತೆ ಹೇಳಿದೆ.

ಸಿಂಗಗೌಡ

ವಿದಿತಗುಣಾಢ್ಯನೆಂಬುದು ಬುಧಸ್ತುತನೆಂಬುದು • ಸತ್ಯವಾಕ್ಯನೆಂ।
ಬುದು ಸುಚರಿತ್ರನೆಂಬುದು ಯಶೋಂಚಿತನೆಂಬುದು ಸುಂದರಾಂಗನೆಂ॥
ಬುದು ಮನುಮಾರ್ಗನೆಂಬುದು ದಯಾಪರನೆಂಬುದು ಶಿಷ್ಟರತ್ನನೆಂ।
ಬುದು ಪೆಱತೆಂಬುದೇಂ ನೆಗೞ್ದ ಧಾರಿಣಿಯೊಳ್ ಸಲೆ ಸಿಂಗಗೌಂಡನಂ॥244॥

ಅರ್ಜುನಗೌಡ

ವಿನಯದ ಜನ್ಮಭೂಮಿಯಭಿಮಾನದ ಮಂದಿರಮಾರ್ಪಿನಬ್ಧಿ ಪೆಂ।
ಪಿನ ಕಣಿ ಶಿಷ್ಟವರ್ಗದ ತವರ್ಮನೆಯಾಶ್ರಿತಕಲ್ಪಭೂಜಮೊ॥
ಳ್ಪಿನ ಮೊದಲೂರ್ಜಿತಾಮಳಯಶೋನಿಧಿಯಿಷ್ಟ ನಿಧಾನಮೆಂದು ಕೂ।
ರ್ತನುನಯದಿಂದೆ ಬಣ್ಣಿಸುವುದರ್ಜುನಗೌಂಡನನೀಧರಾತಳಂ॥245॥

ಎರೆಗ

ಅರಿನರಪರರುಣಜಳದಿಂ। ದರಿಭಟಕರಕಮಳಮುಕುಳಿತಾಂಜಳಿಪುಟದಿಂ।
ದರಿನರರಾನಮ್ರುತೆಯಿಂ। ಕರಮೆಸೆದುದು ಪಡೆವಳೆಱೆಗನಾಹವರಂಗಂ॥246॥

**60 ಹೂಲಿಯ ಶಾಸನ ಡಿ** [1097]

(ಎಪಿಗ್ರಾಫಿಯಾ ಇಂಡಿಕ, XVIII, 183)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಸೋಭನನಾಯಕನ ಮಗ
ನಾಕಿಮಯ್ಯನು ಹೂಲಿಯಲ್ಲಿ ಒಂದು ವಿಷ್ಣುದೇವಸ್ಥಾನವನ್ನು ಜೀರ್ಣೋದ್ಧಾರಮಾಡಿ ಭೂಮಿ
ಯನ್ನು ಬಿಟ್ಟಂತೆ ಹೇಳಿದೆ.

ಪೂಲಿ

ವಸುಧಾ ವಿಶ್ರುತಮಪ್ಪ ಕುಂತಲ ವಧೂ ಸೌಮ್ಯಾನನಂ ತಾನೆನಲ್।
ಪಸರಂಬೆತ್ತ ಮಹಾಗ್ರಹಾರ ನಗರ ಶ್ರೀ ಪಟ್ಟಣಾಕೀರ್ಣದಿಂ॥
ರಸವದ್ಧಾನ್ಯ ಸಮಸ್ತ ವಸ್ತು ಚಯದಿಂ ಶ್ರೀಬೆಳ್ವೊಲಂ ಶೋಭಿಸ।
ಲ್ಕೆಸೆವಾ ಪೂಲಿ ಮಹಾಗ್ರಹಾರ ತಿಲಕಂ ತದ್ದೇಶದೊಳ್ ರಾಜಿಕುಂ॥247॥

ಅಲರ್ದಂಭೋರುಹ ರಾಜಿಯಿಂ ಪರಿಮಳ ಶ್ರೀ ಮಲ್ಲಿಕಾರಾಮದಿಂ।
ಸಲೆ ಸಂದಿರ್ದ ತಟಾಕ ಕೂಪ ವಿಭವ ಪ್ರಾಕೀರ್ಣದಿಂ ಸುತ್ತುಗೊಂ॥
ಡೆಳಸುತ್ತಿರ್ಪ ಸಹಸ್ರ ರಮ್ಯ ಶಿವಕೂಟಾನೇಕ ಕೋಟಿ ಪ್ರಭೋ।
ಜ್ವಲಿತಂ ತದ್ಬಹಿರಂಗ ಸೇವ್ಯ ವಿಭವಂ ಶ್ರೀ ಪೂಲಿಯಿಂತೊಪ್ಪುಗುಂ॥248॥

ಪೂಲಿಯ ಸಾಸಿರ್ವರ್

ಮುದದಿಂ ಶ್ರೀ ಕೇಶವಾದಿತ್ಯರ ಪದ ವಿನತರ್ ವೇದ ವೇದಾಂತ ವಿದ್ಯಾ।
ವಿದಿತರ್ ಷಟ್ತರ್ಕ ಸತ್ಪ್ರೌಢಿಯೊಳತಿಶಯದುದ್ಗ್ರಾಹಕರ್ ನಿತ್ಯಯಜ್ಞರ್॥
ಮದ ಮಾತ್ಸರ್ಯಾದಿ ದೂರರ್ ಸಕಲ ವಿಬುಧ ಸಂರಕ್ಷಕರ್ ಪೂಜ್ಯರೆಂದುಂ।
ಸದಯರ್ ಸಾಸಿರ್ವರುರ್ವೀವಿನುತರಖಿಲ ಶಾಸ್ತ್ರಾರ್ಥ ಕಾವ್ಯ ಪ್ರವೀಣರ್॥249॥

ದಿನಪಂ ತನ್ನ ಕರಂಗಳ। ನನುಪಮದಿಂ ಪೂಲಿಯಲ್ಲಿ ಪುಂಜಿಸಿ ನಿರತಂ॥
ಜನವಿನುತರ್ ಸಾಸಿರ್ವರ। ನನವರತಂ ಪಡೆದನಂತದೇಂ ಕೃತಕೃತ್ಯರ್॥250॥

ಕಳಶವಳ್ಳಿಗೇರಿಯ ನೂರ್ವರ್

ಪಲವಗ್ರಹಾರಕೆಲ್ಲಂ। ಸುಲಲಿತದಿಂ ಪೂಲಿ ತಿಲಕಮಲ್ಲಿಗೆ ಕಳಸಂ॥
ಸಲೆ ಕಳಶವಳ್ಳಿಗೇರಿಯೆ। ವಿಲಸಿತಮಾಗೊಪ್ಪಲೆಸೆದರಂತಾ ನೂರ್ವರ್॥251॥

ನಾಕಿಮಯ್ಯ

ಆತ್ರೇಯ ವಂಶನೆಂದುಂ। ಮಿತ್ರ ಪ್ರೋತ್ಸಾಹಿ ದಾನ ತತ್ಪರ ವಿಭವಂ॥
ಪಾತ್ರವಱಿದೀವನುದ್ಯ।ದ್ಗೋತ್ರ ಪವಿತ್ರಂ ಪ್ರಸಿದ್ಧ ವಿಭು ನಾಕರಸಂ॥252॥

## 61 ಗದಗಿನ ಶಾಸನ [1098]

(ಎಪಿಗ್ರಾಫಿಯಾ ಇಂಡಿಕ, XV, 348)

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಮಹಾಪ್ರಧಾನ ಸೋಮೇಶ್ವರ ಭಟ್ಟನು ಲೊಕ್ಕಿಗುಂಡಿಯಲ್ಲಿ ಪ್ರಭಾಕರ ಸಿದ್ಧಾಂತ ಪ್ರವಚನಕ್ಕಾಗಿ ಒಂದು ಪಾಠಶಾಲೆಯನ್ನು ಸ್ಥಾಪಿಸಿದಂತೆ ಹೇಳಿದೆ.

### ಆಹವಮಲ್ಲ

ಅಸದಳವಾಗೆ ಮಾಡದ ಮಹಾಧ್ವರಮಿಕ್ಕದ ಸತ್ರಮೆಯ್ದೆ ಕ।
ಟ್ಟಿಸದ ತಡಾಗಮೆತ್ತಿಸದ ದೇವಗೃಹಂ ಬಿಡದಗ್ರಹಾರಮೊ॥
ಡ್ಡಿಸುವ ವಿರೋಧಿ ಸಾಧಿಸದ ದೇಶಮುಪಾರ್ಜಿಸದರ್ಥಮಿಲ್ಲೆನಲ್।
ವಸುಧೆಯನಾಳ್ದನೇಂ ಪಿರಿಯನೋ ನೆಗೞ್ದಾಹವಮಲ್ಲವಲ್ಲಭಂ॥253॥

### ವಿಕ್ರಮಾದಿತ್ಯ

ಬಲ್ಲಾಳ್ತನದಿಂ ರಿಪುನೃಪ।ರೆಲ್ಲರನೇಕಾಂಗದಿಂದಮೆಱಗಿಸಿ ಧರಣೀ॥
ವಲ್ಲಭನಾದಂ ತ್ರಿಭುವನ। ಮಲ್ಲಂ ಚಾಳುಕ್ಯ ವಿಕ್ರಮಾದಿತ್ಯನೃಪಂ॥254॥

ತ್ರಿಭುವನ ಮಲ್ಲಂ ರಿಪು ರಾ। ಯಭಯಂಕರನುಭಯರಾಯ ಬೆಂಕೊಳ್ವನಿಳಾ॥
ಪ್ರಭುರಾಯ ಜಗದಳಂ ಸಾ। ರ್ವಭೌಮನನವರತ ದಾನಿ ವೀರ ಝಳಪ್ಪಂ॥255॥

ಜನಮೆಲ್ಲಂ ರಾಗದಿಂ ಕೆಯ್ಮುಗಿಯೆ ದಶ ದಿಶಾ ಚಕ್ರಮುಂ ಧಾತ್ರಿಯುಂ ಪ।
ರ್ವೆ ನಿಜಾಶ್ಚರ್ಯ ಪ್ರತಾಪೋದಯಮಹಿತ ಮಹೀಪಾಲ ಶುದ್ಧಾಂತ ಕಾಂತಾ॥
ಜನ ಭಾಸ್ವದ್ವಕ್ತ್ರ ಚಂದ್ರದ್ಯುತಿ ಮಸುಳೆ ಭುಜಾ ಗರ್ವದಿಂ ವೀರ ಸಿಂಹಾ।
ಸನಮೆಂಬುತ್ತುಂಗ ಪೂರ್ವಾದ್ರಿಯೊಳುದಯಿಸಿದಂ ವಿಕ್ರಮಾದಿತ್ಯ ದೇವಂ॥256॥

ಅರಿಭೂಪಾಳಕರರ್ಥಮಂ ಕವರ್ದುಕೋಡಂದರ್ಥದಿಂದಂ ತುಲಾ।
ಪುರುಷಾರೋಹಣಮುದ್ಧತ ಕ್ಷಿತಿಪರಂ ಬೆಂಕೊಂಡು ಕೊಂಡಾನೆಯಿಂ॥
ದ್ವಿರದಾರೋಹಣಮಾತ್ಮ ಬಾಹುಬಲದಿಂ ಸಿಂಹಾಸನಾರೋಹಣಂ।
ದೊರೆವೆತ್ತಿರ್ಪ ನೃಪೇಂದ್ರರಾರ್ ಭುವನದೊಳ್ ಚಾಳುಕ್ಯದಾಮಂಬರಂ॥257॥

### ಸೋಮೇಶ್ವರ ಭಟ್ಟ

ಧರೆಯೊಳ್ ಮುನ್ನುಳ್ಳ ವಿಪ್ರೋತ್ತಮರ ಚರಿತದೊಳ್ ತನ್ನ ಚಾರಿತ್ರಮೆತ್ತಂ।
ಪರಭಾಗಂ ಬೆತ್ತಿರಲ್ ವೇದದ ಪರಿಣತಿಯುಂ ಶಾಸ್ತ್ರ ವಿಜ್ಞಾನದೊಂದೆ॥
ಚ್ಚರವುಂ ತನ್ನಿಂದೆ ಲೋಕೋತ್ತರಮೆನೆ ಗುರುವಾದಂ ಜಗಕ್ಕೆಯ್ದೆ ಸೋಮೇ।
ಶ್ವರಭಟ್ಟಂ ವಿಪ್ರವಂಶೋತ್ತಮನನಭಿಜನ ಸಂಸ್ತೋತ್ರ ಪಾತ್ರಂ ಪವಿತ್ರಂ॥258॥

ವಿಶ್ವಜಗಜ್ಜನಂ ಬಯಸಿ ಬಣ್ಣಿಸುವಂತುಟೆ ಮೂರ್ತಿ ಕುಂತಳೋ।
ರ್ವೀಶ್ವರನಂ ಮನಂಗೊಳಿಸುವಂತುಟೆ ಪೆಂಪು ವಿಶುದ್ಧ ಕೀರ್ತಿಯುಂ॥
ಶಾಶ್ವತಮಾಗಿ ಬಿತ್ತರಿಸುವಂತುಟೆ ದಾನಮೆನಲ್ಕೆ ಬಾಪ್ಪು ಸೋ।
ಮೇಶ್ವರಭಟ್ಟ ನಿನ್ನೊರೆಗೆ ವರ್ಪರೆ ಮತ್ತಿನ ವೇಷಧಾರಿಗಳ್॥259॥

ಕಾಮಹರಂ ದ್ವಿಜಪತಿ ಜೂ।ಡಾಮಣಿ ವೃಷ ಸಂಶ್ರಿತಂ ಜಯಾನುಗತಂ ಶ್ರೀ॥
ಸೋಮೇಶ್ವರನೀಶ್ವರನಭಿ।ರಾಮತೆಯುಂ ತಾಳ್ದಿ ವಿಬುಧರಂ ಪಾಲಿಸಿದಂ॥260॥

ಕ್ಷ್ಮಾಮರ ನಿಕರ ಶಿಖಾಮಣಿ। ಸೋಮೇಶ್ವರ ದಂಡನಾಥನಾಶ್ರಿತಜನಚಿಂ॥
ತಾಮಣಿ ಶರಣಾಗತ ರ।ಕ್ಷಾಮಣಿಯೆನೆ ಕೀರ್ತಿ ಪರ್ವಿತುರ್ವೀತಳಮಂ॥261॥

ಕರೆದು ಬುಧ ನಿಕರಮಂ ಕುಡೆ।ಪಿರಿದಂ ತತ್ಕಾಂಕ್ಷಿತಾರ್ಥದಿಂದಂ ಸೋಮೇ॥
ಶ್ವರ ವಿಸ್ಮಯದಿಂ ಕಲ್ಲುಂ।ಮರನಾದುವು ಕಲ್ಪವಿಟಪಿ ಚಿಂತಾಮಣಿಗಳ್॥262॥

ಲೊಕ್ಕಿಗುಂಡಿ

ಪಲತೆಱದ ಧಾನ್ಯ ವರ್ಗದ। ಬೆಳಸಿಂಗೊಳ್ವೊಲನೆನಿಪ್ಪ ಬೆಳ್ವೊಲಮೆಂಬಾ॥
ಲಲನೆಯ ಲಲಾಟ ಚಂದನ। ತಿಲಕಮಿದೆನಿಸುವುದು ಲೊಕ್ಕಿಗುಂಡಿ ಗ್ರಾಮಂ॥263॥

ಸರಸಿಜಯೋನಿ ಬಿಣ್ಪನಱಿಯಲ್ಕಮರಾವತಿ ಲೊಕ್ಕಿಗುಂಡಿಯೆಂ।
ಬೆರಡುಮನೆಯ್ದೆ ತೂಗಲಮರಾವತಿ ಮುಟ್ಟಿದುದೂರ್ಧ್ವ ಲೋಕಮಂ॥
ಧರೆಯೊಳ್ ಲೊಕ್ಕಿಗುಂಡಿ ನೆಲಸಿತ್ತೆನೆ ಬಣ್ಣಿಪರಾರ್ ಜಗಕ್ಕಲಂ।
ಕರಿಸುವ ಲೊಕ್ಕಿಗುಂಡಿಯ ಮಹತ್ವಮುಮಂ ದೊರೆವೆತ್ತ ಬಿಣ್ಪುಮಂ॥264॥

ವರುಣನ ದೊರೆಯೆನಿಸುವ ಪರ। ದರಿಂದಮುಂಗಡಿಯ ಪಂಚರತ್ನದ ದಿವ್ಯಾ॥
ಭರಣದ ಪಸರದಿನಿಂಬಾ।ಗಿರೆ ಪೋಲ್ಕುಂ ಲೊಕ್ಕಿಗುಂಡಿ ರತ್ನಾಕರಮಂ॥265॥

ಸಾರಂಸಮಸ್ತವಿಬುಧಾ।ಧಾರಂ ಚಾಳುಕ್ಯ ಚಕ್ರಿಗಕ್ಷಯ ನಿಧಿ ಭಂ॥
ಡಾರದ ಮನೆ ಪಟ್ಟಿಸ ಭಂ।ಡಾರಮಿದೆನಿಸುವುದು ಲೊಕ್ಕಿಗುಂಡಿ ಗ್ರಾಮಂ॥266॥

**62 ಬೇಲೂರು 200 [1099]**

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಕೈಯ ಕೆಳಗೆ ಹೊಯ್ಸಳರಾಜನಾದ ತ್ರಿಭುವನ ಮಲ್ಲ ಹೊಯ್ಸಳದೇವನು ಗಂಗವಾಡಿಯನ್ನು ಆಳುತ್ತಿರಲು ಕೋಬಿಗೌಡನು ಕೋಬೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಮನವೊಸೆದು ಕೋಬಿಗಾಂಕಂ ।ಗನುನಯದಿಂ ಮಾಟ್ಕೆ ಮಹಿಮೆಯುಂ ಮದನ ಘನಾ।
ಘನಪಟಳಪವನನಗಜಾ। ನನವೀಕ್ಷಣಲಂಪಟೋತ್ಕರಂ ನಿಟಿಲಾಕ್ಷಂ॥267॥

**63 ಶಿಕಾರಿಪುರ 311 [ಸು. 1100]**

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಸೋಮನೃಪನ ಕುಮಾರಿಯರು ಒಂದು ಜಿನಾಲಯವನ್ನು ಕಟ್ಟಿಸಿದಂತೆ ಹೇಳಿದೆ.

ಜೂಜ

ತೊಡರೆ ತೊಡಂಕು ಮಚ್ಚರಿಸೆ ಗಂಟಲ ಸಿಲ್ಕಿದ ಗಾಳಮುರ್ಕಿ ಮಾ।
ರ್ನುಡಿದೊಡೆ ಜಿಹ್ವಮಂ ಪಿಡಿದು ಕೀಲ್ವ ತೊಡರ್ಪಿನ ಪಾಶಮೆಂದೊಡೆಂ॥
ತೆಡಱುವರೆಂತು ಮಚ್ಚರಿಪರೆಂತು ಕರಂ ಕಡುಕೆಯ್ದು ದರ್ಪಮಂ।
ನುಡಿದಪರಣ್ಣ ಬಾಪ್ಪು ಮುಳಿದಂಬದ ಜೂಜನೊಳನ್ಯಭೂಭುಜರ್॥268॥

ಬಿಡದೆಡಱಿ ಸೇಣಿಸಿ ಚುನ್ನಂ। ನುಡಿವೀ ಮನ್ನೆಯರ ಬೆನ್ನ ಬಾರಂ ಮಿಡಿಯಿಂ।
ಪೆಡತಲೆವರಮಾಳ್ಪೊತ್ತುವ ।ಕಡುಗಲಿ ಶಶಿವಿಶದಕೀರ್ತಿ ಜೂಜಕುಮಾರಂ॥269॥

## 64 ಅರಸಿಯಕೆರೆ 102 ಎ [ಸು. 1100]

ಇದರಲ್ಲಿ ಹೊಯ್ಸಳರಾಜನಾದ ಎರೆಯಂಗನ ಮಹಿಷಿ ಮಹಾದೇವಿ ಮುತ್ತನಪೊಸವೂರ ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ.

ವಿನಯಾದಿತ್ಯ

ಸ್ವಸ್ತಿ ಸಮಸ್ತಮಂಡಳಿಕಮಂಡನನಾನತಭೂಪಮೌಳಿವಿ।
ನ್ಯಸ್ತಪದಂ ಶರತ್ತುಹಿನದೀಧಿತಿಬಿಂಬವಿಡಂಬಕೀರ್ತಿ ಕಾಂ॥
ತಿಸ್ತಬಕಾವಳಂಬಿತಯಶಂ ಮನುಮಾರ್ಗನನೂನದಾನಿ ಲೋ।
ಕಸ್ತುತನೆಂಬಿನಂ ನೆಗಟ್ದನೀ ಧರೆಯೊಳ್ ವಿನಯಾಯ್ತ್ಯಪೊಯ್ಸಳಂ॥270॥

ಎರೆಯಂಗ

ತತ್ತನಯಂ ಸಕಳಮಹೀ। ಪೋತ್ತಮನನವರತದಾನಿ ವೈರಿನೃಪಾಳೋ।
ನ್ಮತ್ತಗಜಸಿಂಹನಬಳಾ। ಜತ್ತಕನೆಱೆಯಂಗಪೊಯ್ಸಳಂ ಭೂವಿಸುತಂ॥271॥

ಅಣ್ಣಮೊಱೆಗೊಳಿಸಿ ಚೋಳಿಕ।ರಣ್ಣಲೆಯಂ ತಳಿರನುಡಿಸಿ ನನ್ನುಗೆಯಂ ಮೂ।
ವಣ್ಣಂಬರಿಸಿದನುರ್ವರೆ। ಬಣ್ಣಿಸಲೆಱೆಯಂಗನೃಪತಿ ಚಕ್ರಿಯ ಬೆಸದಿಂ॥272॥

ಆಳಾಪಮೇನೊ ಹಿಮಕು। ತ್ಕೀಳದ ಸೇತುವಿನ ನಡುವಣವನಿಪಚಯಮಂ।
ಕೀೞಿಟ್ಟೇಱಿದನೆಱೆಗನೃ। ಪಾಳಂ ಚಾಳುಕ್ಯಚಕ್ರವರ್ತಿಯ ಬೆಸದಿಂ॥273॥

ಭೋರೆನೆ ನನ್ನುಗೆಯೆರ್ದೆಯೊಳ।ಗೋರಂತುರಿವಗ್ನಿಸಾಕ್ಷಿಯೊಳ್ ಕೆಯ್ಕೊಂಡಂ।
ಧಾರಾಪೂರ್ವಕಮಾಗಿರೆ। ವೀರಶ್ರೀಯಂ ಪ್ರತಾಪಿ ಪೊಯ್ಸಳಭೂಪಂ॥274॥

ಎರೆಯಂಗನ ಮಹಿಷಿ ಮಹಾದೇವಿ

ಆತನ ವಧು ಪತಿಹಿತಗುಣ। ಸೀತೆ ಬುಧವ್ರಾತಕಲ್ಪವಲ್ಲರಿ ಭುವನ।
ಖ್ಯಾತೆ ಜನವಿನುತವಿನಯಾ। ನ್ವಿತೆ ಮಹಾದೇವಿ ಲಕ್ಷ್ಮಿದೇವಿಯೆ ಜಗದೊಳ್॥275॥

ಮಹಾದೇವಿಯ ಪಿತಾಮಹ ತೇಜರಾಯ

ಓಡದವರಿಲ್ಲ ಭೂಪರ್। ಬೇಡದ ಜನಮಿಲ್ಲ ಪೊಗೞದವರಿಲ್ಲಣಮು।
ಟ್ಟಾಡದ ಪರಧರೆಯಿಲ್ಲೆನೆ। ಲಾಡಂಬರಮಾಯ್ತು ತೇಜರಾಯನ ತೇಜಂ॥276॥

ತೇಜರಾಯನ ಮಗ ಪಾಂಡ್ಯ

ತತ್ಪುತ್ರನಖಿಳಗುಣಸಂ। ಪತ್ಪದನರಿರಾಜವಿಜಯಹರಣಂ ನಿಜವಂ।
ಶೋತ್ಪಲಚಂದ್ರಂ ರಿಪುಕುಳ। ಹೃತ್ಪುಟವಿಘಟನಪಟುಪ್ರಚಂಡಂ ಪಾಂಡ್ಯಂ॥277॥

ಭುವನೈಕಮಲ್ಲನಂ ಭೂ। ಭುವನಮುಸುಂಗೊಳೆ ಮುರಳ್ಚಿ ರಾಜ್ಯಮನಧಿಕೋ।
ತ್ಸವದಿಂ ತ್ರಿಭುವನಮಲ್ಲಂ।ಗವಯುವದಿಂ ಕೊಂಡು ಕೊಟ್ಟ ಗಂಡಂ ಪಾಂಡ್ಯಂ॥278॥

ನೆಣದ ಬಳಂಬೆ ಕೋಳ್ಮಿದುಳ ತಿಂತಿಣಿ ಮೂಳೆಯು ತೋರವೆಟ್ಟು ಬ।
ಲ್ವೆಣಗಳಗುಂತಿ ನೆತ್ತರ ಕಡಲ್ ಪರಿವಟ್ಟೆ ಕರೋಟಿಮಾಲೆ ಸಂ॥
ದಣಿಸುವ ಭೂತಕೋಟಿಗಳಿನೊಪ್ಪಿರೆ ಪೆರ್ಚಿದರೀಂದ್ರಸಂಗರಾಂ।
ಗಣಮದು ತಾನೆ ಪೇಳದೆ ವಿರಾಜಿಪ ಪಾಂಡ್ಯನ ಗಂಡಗರ್ವಮಂ॥279॥

ಮಹಾದೇವಿಯು ಮಾತಾಮಹ ಕರ್ಕಡರಾಯ

ಸೊರ್ಕಿದ ಮದಾಂಧಭೂಪರ। ನಟ್ಟಾಡಿಸಿ ತನ್ನ ಕೀರ್ತಿಯಂ ದಿಗ್ವಧುಗಳ್।
ತಟ್ಟಿಕೈಸುವಿನೆಗಮೆಸೆದಂ। ಕರ್ಕಡಮಾರಾಯನುದಿತವಿಜಯಾದೇಯಂ॥280॥

ತೊಂಡಿನೊಳೆ ಮಲೆಮಹೀಪರ। ಮಂಡಳಮಂ ಸೂರೆಗೊಂಡು ಮಾರ್ಕೊಂಡವರಂ।
ಖಂಡಿಸಿದನಮಮ ದುಟ್ಟರ। ಗಂಡನ ಗಂಡಂಗೆ ಮಲೆವ ಮಂಡಳವೊಳವೇ॥281॥

## 65 ಶ್ರವಣಬೆಳ್ಗೊಳ 69 [ಸು. 1100]

ಇದರಲ್ಲಿ ಕೊಂಡಕುಂದನಿಂದ ಬಾಲಚಂದ್ರನವರೆಗೆ ಕೆಲವರು ಜೈನಗುರುಗಳ ಪರಂಪರೆ ಹೇಳಿದೆ

ಗೌಳದೇವ

ಧಾರಿಣಿಯೊಳ್ ಮನಸಿಜಸಂ। ಹಾರಿಗಳಂ ನೆನೆಯಲುಗ್ರಪಾಪಂ ಕಿಡುಗುಂ।
ಸೂರಿಗಳನಮಳಗುಣಸಂ। ಧಾರಿಗಳಂ ಗೌಳದೇವಮಳಧಾರಿಗಳಂ॥282॥

## 66 ಬನವಾಸಿ ಶಾಸನ [ಸು. 1100]

(ಎಪಿಗ್ರಾಫಿಯಾ ಇಂಡಿಕಾ, XVI, 355)

ಈ ಅಸಮಗ್ರ ಶಾಸನವು ಚಾಳುಕ್ಯರಾಜನಾದ ತ್ರಿಭುವನಮಲ್ಲನ ಸಾಮಂತ ಕಾದಂಬರಾಜನಾದ ಕೀರ್ತಿದೇವನ ಸೇನಾನಾಯಕ ಕೀರ್ತಿಗನ ಸ್ತುತಿಯಲ್ಲಿ ಮುಗಿದಿದೆ.

ಶಿವಸ್ತುತಿ

ಸುರರಾಜಾರ್ಚಿತ ಪಾದಪದ್ಮಯುಗಳಂ ಗಂಗಾ ಸಮುತ್ತುಂಗ ಭಂ।
ಗುರ ಕಲ್ಲೋಲ ವಿಲೋಲ ಬಾಲ ಹರಿಣಾಂಕಾಲಂಕೃತೋದ್ಯಜ್ಜಟಾ॥
ಭರನುರ್ವೀಧರ ಪುತ್ರಿಕಾ ಕಲಿತ ದೇಹಾರ್ಧಂ ಮೃಡಂ ಕೀರ್ತಿ ಶಂ।
ಕರದೇವಂ ನಿನಗೀಗೆ ಕೀರ್ತಿಗ ಯಶಃಜಯಶ್ರೀಯುಮಂ॥283॥

## ಬ್ರಹ್ಮನ ಮಾನಸ ಪುತ್ರರು

ಶ್ರೀವರನೆಸೆವುದರದ ಪೊಂ।ದಾವರೆಯುರಲೊಳಗೆ ಕಮಲ ವನಮುಲರ್ದುದಿದೇಂ॥
ಭಾವಿಸೆ ಚೋದ್ಯಮೊ ತಾನೆನೆ।ಲಾವನ ಮುಖ ಕಮಲಮಲರ್ದು ರಂಜಿಸುತಿರ್ಕುಂ॥284॥
ಆ ದೇವನ ಮನದೊಳ್ ಮು।ನ್ನಾ ದೇವಂ ಪಿಂಗೆ ಮಂಗಳಾವಹರೊಗೆದರ್॥
ದೇದೀಪ್ಯಮಾನ ದೀಪ್ತ್ಯಾ।ಚ್ಛಾದಿತ ದಿಕ್ಚಕ್ರರಮಲ ಗುಣಗಣ ನಿಲಯರ್॥285॥

## ತ್ರಿಭುವನಮಲ್ಲ ವಿಕ್ರಮಾದಿತ್ಯ

ಅನತಕ್ಷ್ಮಾ ಪಾಲರಂ ತರ್ಜಿಸಿ ಕವರ್ದುಕೊಳಲ್ಕೊಟ್ಟ ಬೆಟ್ಟಾದ ಪೊನ್ ಬೆ।
ಟ್ಟನೆ ವರ್ಕುಂ ನೋಡ ಪೊಂಬೆಟ್ಟದೊಳೆನೆ ಬಳಿಕಂ ಕಾಂಚನ ದ್ವೀಪಮಾಯ್ತು॥
ಲ್ಲೆನೆ ಜಂಬೂದ್ವೀಪಮರ್ಥಾರ್ಥಿಗಮನಭಿಮತಾರ್ಥಾರ್ಥಿಗಂ ಸೂಸಿ ವಿದ್ವ।
ಜ್ಜನ ಸಂಸ್ತುತ್ಯಂ ಯಶೋರಾಶಿಯನೊದವಿಸಿದಂ ವಿಕ್ರಮಾದಿತ್ಯದೇವಂ॥286॥

## ಕಾದಂಬ ಜಯಸಿಂಹ

ಆ ನೃಪ ಮೇರುಗೆ ಮೇರುವ। ಸಾನುವಿನೊಳ್ ಸಿಂಹವೊಗೆದ ತೆಱದಿಂದೊಗೆದಂ॥
ಪೀನ ಭುಜಂ ಜಯಸಿಂಹ ಮ।ಹೀ ನಾಥಂ ವೈರಿ ಗಜಘಟಾ ನಿರ್ದಳನಂ॥287॥

## ಕಾದಂಬ ತೈಲಪ

ಹಿಮಕೃಚ್ಛೇಖರ ವಂಶ ಸಂಭವರೊಳೆಲ್ಲಂ ಸಂದ ತನ್ನಾರ್ಪು ತ।
ನ್ನ ಮಹತ್ತ್ವಂ ಬಗೆಗೊಂಡ ತನ್ನದಟು ತನ್ನಾಜ್ಞಾಫಲಂ ತನ್ನ ದು॥
ರ್ದಮ ಬಾಹಾ ಬಲದೇಟ್ಗೆ ತನ್ನಱಿವು ತನ್ನೊಂದುದ್ಯಮಂ ತನ್ನ ಕೀ।
ರ್ತಿ ಮಹೀಚಕ್ರದೊಳೊಪ್ಪೆ ತೈಲಪ ನೃಪಂ ಪೆತ್ತಂ ಮಹೈಶ್ವರ್ಯಮಂ॥288॥

## ಕೀರ್ತಿದೇವ

ಮದನಂ ನೋಡಿ ಕದಂಬ ಮನ್ಮಥನ ರೂಪಂ ಲಜ್ಜೆಯಿಂ ರೂಪುದೋ।
ಱದೆ ದಲ್ ಮೆಯ್ಗರೆದಂ ಬೆಳರ್ತು ನೃಪ ಚಂದ್ರಾಲೋಕದಿಂ ಕಂದಿ ಕುಂ॥
ದಿದನಲ್ತೇ ಹಿಮರಶ್ಮಿ ಮಂಡಲಿಕದೇವೇಂದ್ರ ಗಡೆನ್ನಿಂ ಗುಣಾ।
ಸ್ಪದನೆಂದೀಕ್ಷಿಸಲಾದನಲ್ಲನೆ ಸಹಸ್ರಾಕ್ಷಂ ಸಹಸ್ರೇಕ್ಷಣಂ॥289॥

## ಕೀರ್ತಿಗ

ಧುರದೊಳಿದಿರ್ಚಿ ನಿಲ್ವ ಕನಸನ್ನೆಗಮಿರ್ಕೆಮ ಕಾಲ ತಕ್ಕು ಬೆ।
ಳ್ಪೆರಳೆಯು ಪಿಂಡನೆಡಲೆಯೆ ಮುಳ್ಗಿಡು ಲೊಂಚುಗೊಳಲ್ಕೆ ಚುರ್ಚುತಾ॥
ವರಿಸಿದ ಶಂಕೆ ಭೋಂಕೆನೆ ನೆಟಿಳ್ಗಗಿದುಟ್ಟುದನಿಕ್ಕಿ ಬೆಚ್ಚರಂ।
ಸರಿಯುದೆ ಕೀರ್ತಿಗಂಗಿದಿರನಾಂಪಸುಹೃದ್ಬಲಮುಂಟೆ ಯುದ್ಧದೊಳ್॥290॥

ಇಂದೆತ್ತಲ್ ಪರಿಯಿಟ್ಟು ಸುಟ್ಟನೊದಗಿಲ್ಲೆಂದಳ್ಪೆ ಕೋಪಾಗ್ನಿ ಕಾ।
ಯ್ದಿಂದಾರಂ ಗಡ ತೂಂತಿದಂ ಜವನ ಬಾಯೊಳ್ ಸೂಸೆ ಕರ್ನೆತ್ತರಾ॥
ರ್ಪಿಂದಾರಂ ಬಿಡೆ ಬೀಸಿ ಕೊಂದನಱಿಯೊಳ್ ಪೇಟಿಂದಸುಂಗೊಂಡು ನಿ।
ಚ್ಚಂ ದಲ್ ಕೀರ್ತಿಗನೇಟಿಗ್ಗಳ್ಕಿ ಸುಗಿಗುಂ ವಿದ್ವಿಷ್ಟ ಭೂಮಂಡಳಂ॥291॥

**67 ಅರಸಿಯಕೆರೆ 87 (ಅನುಬಂಧ) [ಸು. 1100]**

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಹೊಯ್ಸಳರಾಜನಾದ ಎರೆಯಂಗನ ಸಾಮಂತ ಕಚ್ಚವೆರ್ಗಡೆ ಅರಸಿಯ ಕೆರೆಯಲ್ಲಿ ಕನ್ನೆಗೆರೆಯನ್ನು ಕಟ್ಟಿಸಿ ತೂಬನಿಕ್ಕಿಸಿದಂತೆ ಹೇಳಿದೆ.

ಕಚ್ಚವೆರ್ಗಡೆ

ಕಡಿತಲೆಗೊಂಡೊಡೆ ರಾವಣ। ನೆಡಱಿದರಂ ಗೆಲಲೆವೇಡಿ ಬಿಲ್ಗೊಂಡೊಡೆ.॥
ಘಡ ಮಾತರ್ಜುನನಹಿತರ। ಪಡೆಯಂ ಕೊಲ್ವೆಡೆಗೆ ಕಚ್ಚವೆರ್ಗಡೆ ಭೀಮಂ॥292॥

ಧರ್ಮದೊಳಂ ದಾನದೊಳಂ। ಪೆರ್ಮೆಯೊಳಂ ಶೌಚ ಗುಣದೊಳಂ ಸತ್ಯದೊಳಂ॥
ನೂರ್ಮಡಿಯಯ್ನೂರ್ಮಡಿ ಸಾ।ಸಿರ್ಮಡಿ ಜಗದೊಳಗೆ ಕಚ್ಚವೆರ್ಗಡೆಯಾರ್ಗಂ॥293॥

ಚೆನ್ನಾಳ್ವರಸಿಯ ಕೆಱಿಯೊಳೆ। ಮುನ್ನಾರ್ಗಂ ಕರಮಸಾಧ್ಯಮೆನಿಸಿದ ಕೆಱಿಯಂ॥
ಕನ್ನೆಗೆಱಿಯಾಗೆ ಕಟ್ಟಿಸಿ। ಸನ್ನುತನೀ ಧರೆಗೆ ಕಚ್ಚವೆರ್ಗಡೆ ನೆಗಟ್ದಂ॥294॥

ಉಱಿ ತಾನಗಟಿಸೆ ತೀವಿದ। ಕೆಱಿಗಾದರದಿಂದೆ ತೂಂಬನಿಕ್ಕಿಸಿದಂ ಪೊ॥
ನ್ನಱು ನೂಱು ಸಮೆಯೆ ಧರ್ಮ।ಕ್ಕೆಱಿವಟ್ಟನೆನಿಪ್ಪ ಕಚ್ಚವೆರ್ಗಡೆ ಮುದದಿಂ॥295॥

**68 ಲಕ್ಷ್ಮೇಶ್ವರದ ಶಾಸನ [1102]**

(ಎಪಿಗ್ರಾಫಿಯಾ ಇಂಡಿಕ, XVI, 31.)

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ (VI) ಆಳಿಕೆಯಲ್ಲಿ ಮಾಧವದಣ್ಣಾಯಕನು ಪುರಿಗೆರೆಯ ಸೋಮೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಮಾಧವ

ಅಭಿಮಾನಮೇರು ವಿತರಣ। ವಿಭೂಷಣಂ ಧರ್ಮಧರ್ಮರಾಜತನೂಜಂ।
ವಿಭವೈಕದಿವಿಜರಾಜಂ। ಪ್ರಭುಮಂತ್ರೋತ್ಸಾಹ ಶಕ್ತಿಗುಣ ಸಂಪನ್ನಂ॥296॥

ಕದನದೊಳಾಂತರಂ ತುಟಿದು ಕೊಲ್ವೆಡೆಯೊಳ್ ಲಯಕಾಲಕಾಲನೆಂ।
ಬುದು ಬಡಪಟ್ಟು ಬೇಡಿದವರ್ಗೀವೊಡೆ ಜಂಗಮಕಲ್ಪವೃಕ್ಷಮೆಂ॥

ಬುದು ಶರಣೆಂದು ಬಂದೆಳಸೆ ಕಾವೆಡೆಯೊಳ್ ದೃಢವಜ್ರಗೇಹವೆಂ।
ಬುದು ಮನದಟ್ಟಿಜಿಂ ವಿಬುಧಮಂಡಲಿ ಮಾಧವದಂಡನಾಥನಂ॥297॥

ಮತ್ತಿನ ನಿರಸ್ತಗುಣರನ। ನುತ್ತಮರಂ ಪಡೆದುದರ್ಕೆ ಧಾತ್ರಂ ಪ್ರಾಯು।
ಕ್ಷಿತ್ತಂಗೆಯ್ದಂ ಪಡೆದು ಬು। ಧೋತ್ತಮನಂ ಮನುಚರಿತ್ರನಂ ಮಾಧವನಂ॥298॥

ಫಲಸ್ತುತಿ

ಇದನಾಚಂದ್ರಾರ್ಕಂಬರ। ಮುದಿತೋದಿತಮಾಗೆ ಕಾದವರ್ ಪರಮಸುಖಾ॥
ಸ್ಪದರಪ್ಪರ್ ಪಾಪದಿನಟಿ। ದ ದುರಾತ್ಮರ್ ನರಕ ಗತಿಗೆ ಗಳಗಳನಿಟಿವರ್॥299॥

## 69 ತೀರ್ಥಹಳ್ಳಿ 192 [1103]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ತ್ರಿಭುವನಮಲ್ಲ ಸಾಂತರನು ಆನಂದೂರಲ್ಲಿ ಬಸ್ತಿಯನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ತ್ರಿಭುವನಮಲ್ಲಸಾಂತರ (ತೈಲ)

ಕನಕಾದ್ರೀಂದ್ರಕ್ಕಮಂಭೋನಿಧಿಗಮವನಿಗಂ ಪೆಂಪಿನೊಳ್ ಗುಣ್ಪಿನೊಳ್ ತಿ।
ಣ್ಪಿನೊಳೆಂತುಂ ತಾನೆ ಪೋ ಪಾಸಟಿ ಸರಿ ಸಮನೆಂದಂದದಾವಂ ಸಮಸ್ಕಂ॥
ಧನದಾವಂ ಪೋಲ್ವನಾವಂ ಪಡಿಯೆನಿಸುವವಂ ರಾಜಸರ್ವಜ್ಞನೊಳ್ ತೈ।
ಲನೊಳರ್ಥಿಸ್ತೋಮಚಿಂತಾಮಣಿಯೊಳಖಿಳಭೂಭಾಗದೊಳ್ ನೋಟಿಪ್ಪೊಡೆಂತುಂ॥
॥300॥

ಅದಟನಿದಿರಾಂತ ಭೂಪರ। ನದಟಲೆದೆರೆದರ್ಥಿನಿಕರಮಂ ತಣಿಪಿ ಜಗ।
ದ್ವಿದಿತಯಶಂ ನೆಗಟ್ದಂ ಭೂ। ಪದಿಳೀಪಂ ವೈರಿವೀರಕಾಳಂ ತೈಳಂ॥301॥

ಚಾಗದದಗುಂತಿ ಯಾಚಕ। ರಾಗಿಸಿದುದು ಪಲಬರರಸರಂ ಬೀರದದೊಂ।
ದೋಗಡಿಸದೇಟಿಗೆ ವನಚರ। ರಾಗಿಸಿದುದು ಪಲಬರಹಿತರಂ ತೈಲುಗನಾ॥302॥

## 70 ಶಿಕಾರಿಪುರ 131 [1104]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಈಶ್ವರಯ್ಯನು ಬಳ್ಳಿಗಾವೆಯ ನಾರಸಿಂಹದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಕ್ರಮಾದಿತ್ಯ

ಸ್ವಸ್ತಿಶ್ರೀವನಿತಾರ್ಪಿತ। ವಿಸ್ತೀರ್ಣೋರಸ್ಥಳಂ ರಿಪುವ್ರಜಮಸ್ತ।
ನ್ಯಸ್ತಚರಣಂ ಸಮಸ್ತಜ। ನಸ್ತುತಸಿತಕೀರ್ತಿ ವಿಕ್ರಮಾದಿತ್ಯನೃಪಂ॥303॥

ಅರಿರಾಯಜಗದಳಂ ದಿ। ಕ್ಕರಿದಂತವಿಲಗ್ನಕೀರ್ತಿ ಮೂರ್ತೀಭೂತ।
ಸ್ಮರನೇಕಚ್ಛತ್ರೀಕೃತ। ಧರಾತಳಂ ಸೋಮವಂಶಚೂಡಾರತ್ನಂ॥304॥

ಗೋವಿಂದರಾಜ

ಶ್ರೀವನಿತಾಕುಚಸಂಶ್ರಿತ। ಪೀವರವಕ್ಷಸ್ಥಳಂ ಲಸದ್ಗುಣಮಣಿವಾ।
ಲಾವಿಲಸಿತನೇನೆಸೆದನೊ। ಗೋವಿಂದಂ ಮದವದಹಿತದನುಜಮುಕುಂದಂ॥305॥

ಶರಣೆಮಗೆಂದು ಬಂದೊಡಱಿಯೆಂ ಮಱಿದಾಂತೊಡೆ ಭಾಳದೊಳ್ ಪೊದ।
ಳ್ದುರಿವುರಿಗಣ್ಣನುಗ್ರಫಣಿಕುಂಡಲಮಂ ಕಿವಿಯೊಳ್ ಕರಾಬ್ಜದೊಳ್॥
ಸುರುಚಿರಶೂಲಮಂ ಮಿಱುಪ ದಾಡೆಗಳಂ ನಿಜವಕ್ತ್ರದೊಳ್ ವಿಭೀ।
ಕರಮೆನೆ ತೋಱುಗುಂ ಸಮರರಂಗದೊಳೀ ರಣರಂಗಭೈರವಂ॥306॥

ಈಶ್ವರಯ್ಯ

ವಾರಾಶಿಪರಿವೃತಾಖಿಳ। ಧಾರಿಣಿಯೊಳ್ ಪೋಲ್ವೊಡಮ್ಮ ಪೋಲ್ಕೆಮ ಪುರುಷಾ।
ಕಾರದೊಳೆ ಪುರುಷಕಾರದೊ। ಳಾರುಂ ನೆಗಟ್ದೀಶ್ವರಾರ್ಯನಂ ಪೋಲ್ತಪರೇ॥307॥

### 71 ಹೂಲಿಯ ಶಾಸನ ಐ. [ಸು. 1104]

(ಎಪಿಗ್ರಾಫಿಯಾ ಇಂಡಿಕ, XVIII, 205)

ಇದರಲ್ಲಿ ಜ್ಞಾನಶಕ್ತಿಯ ಶಿಷ್ಯ ನಾಗರಾಶಿ ಪಂಚಲಿಂಗ ದೇವಸ್ಥಾನದಲ್ಲಿ ಒಂದು ಕಂಬವನ್ನು ಮಾಡಿಸಿಕೊಟ್ಟಂತೆ ಹೇಳಿದೆ.

ಎಳವೆಳ್ದಿಂಗಳ ಕಾಂತಿಯ। ಬಳಗಮನೊಳಕೊಂಡ ನಿಜಯಶೋರುಚಿಯಿಂ ಭೂ॥
ವಳಯಕ್ಕನುರಕ್ತತೆಯಂ। ತಳೆದಂ ಶ್ರೀ ನಾಗರಾಶಿಯೆನಗಿದು ಚಿತ್ರಂ॥308॥

### 72 ಹೂಲಿಯ ಶಾಸನ ಜೆ. [ಸು. 1104]

(ಎಪಿಗ್ರಾಫಿಯಾ ಇಂಡಿಕ, XVIII, 206)

ಇದರಲ್ಲಿ ನಾಗರಾಶಿಯ ಗುಡ್ಡ ಮಾದಿಗೌಡನು ಪಂಚಲಿಂಗ ದೇವಸ್ಥಾನದಲ್ಲಿ ಮತ್ತೊಂದು ಕಂಬವನ್ನು ಮಾಡಿಸಿಕೊಟ್ಟಂತೆ ಹೇಳಿದೆ.

ಸುವಿದಿತ ಭೋಗ ಭೋಗಿನಿಗೆ ಭಾಗಲೆ ನಾರಿಗೆ ಬಾಚಿಸೆಟ್ಟಿಗು।
ದ್ಭವಿಸಿದ ಸೂನು ದಾನ ರವಿಸೂನು ವಚೋಂಬುಜ ಸೂನು ಸದ್ಗುಣ॥
ಪ್ರವರನ ನಾಗರಾಶಿ ಮುನಿರಾಜನ ಶಿಕ್ಷೆಯ ಸೂನು ಲೋಕದೊಳ್।
ಕವದಿಯ ಮಾದಿಗೌಡನೆಸೆವಂ ಮಹಿಮಸ್ತಕ ವಸ್ತು ನಾಯಕಂ॥309॥

## 73 ಹೂಲಿಯ ಶಾಸನ ಕೆ. [ಸು. 1104]

(ಎಪಿಗ್ರಾಫಿಯಾ ಇಂಡಿಕ, XVIII, 207)

ಇದರಲ್ಲಿ ಭೀಮೇಶ್ವರ ದೇವಸ್ಥಾನದೊಳಗೆ ಜ್ಞಾನಶಕ್ತಿಯ ಆಜ್ಞಾನುಸಾರವಾಗಿ ಮಾರ್ತಾಂಡನು ಒಂದು ಮಕರ ತೋರಣವನ್ನು ಮಾಡಿಸಿದಂತೆ ಹೇಳಿದೆ.

ಇದನತ್ಯಾನಂದದಿಂದಂ ಸಮೆದನೊ ಕಮಲಪ್ರೋದ್ಭವಂ ವಿಶ್ವಕರ್ಮಂ।
ಮುದದಿಂ ಮೇಣಿಂತಿದಂ ತೀರ್ಚಿದನೊ ಮಕರ ಯುಗ್ಮಾನ್ವಿತಂ ತೋರಣಂಗ॥
ಟ್ಟಿದನೋ ಮೇಣ್ ಪ್ರತ್ಯಗಾಶಾಪತಿಯಿದನೆನೆ ಸರ್ವೋರ್ವಿ ಶೋಭಾ ವಿಭೂತ್ಯಾ।
ಸ್ಪದಮಿಂತೀ ಜ್ಞಾನಶಕ್ತಿವ್ರತಿ ಸಮೆಯಿಸಿದಂ ......ಳ್ಪದೆಂತುಂ॥310॥

ಅನೂನತರ ಪದ್ಮಸಂಭವ ಭವಾಬ್ಜನಾಭಾರ್ಚಿಗಳ್।
ಮನೋಹರತರಂಗಳಾಗಿ ಮಕರದ್ವಯಂ ಶೋಭೆಯಿಂ॥
ಮನಂಗೊಳಿಸೆ ಮಾಡಿದೀ ಮಕರ ತೋರಣಂ ಧಾತ್ರಿಯೊಳ್।
ವಿನೂತತರಮಿಂತಿದಂ ಪೊಗಳದಿರ್ಪನಾವೊಂ ಗಡಂ॥311॥

## 74 ಹೂಲಿಯ ಶಾಸನ ಎಫ್. [1107]

(ಎಪಿಗ್ರಾಫಿಯಾ ಇಂಡಿಕ, XVIII, 196)

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಕಳಶವಳ್ಳಿಗೇರಿಯ ನೂರ್ವರು ಕೇದಾರೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಹೂಲಿಯ ಸಾಸಿರ್ವರ್

ಭುವನ ಪ್ರಸ್ತುತರೇಕ ವಾಕ್ಯರಚಳರ್ ಶ್ರೀ ಕೇಶವಾದಿತ್ಯ ದೇ।
ವವರಪ್ರಾಪ್ತ ಸಮಸ್ತ ಸಂಪದರಶೇಷಾಶಾಸಮಾಕೀರ್ಣ ವ॥
ರ್ಣವಿಲಾಸರ್ ಚತುರರ್ ಚತುಸ್ಸಮಯಸಂಸೇವ್ಯರ್ ಚತುರ್ವೇದಶಾ।
ಸ್ತ್ರವಿಚಾರಕ್ಷಮರೆಂದೊಡೇವೊಗಟ್ವುದೋ ಸಾಸಿರ್ವರ ಖ್ಯಾತಿಯಂ॥312॥

ಕಳಶವಳ್ಳಿಗೇರಿಯ ನೂರ್ವರ್

ವಿದಿತ ಶ್ರೀ ಪೂಲೀಪುರ। ವದನಾಲೋಕನ ಸುದರ್ಪಣರ್ ತಾವೆನಿಪರ್॥
ಸದಮಳ ಚರಿತರ್ ಗುಣಗಣ। ಸದನರೆನಲ್ ಕಳಶವಳ್ಳಿಗೇರಿಯ ನೂರ್ವರ್॥313॥

ಆಚಾರ್ಯ ಸಿದ್ದೇಶ್ವರ

ಸ್ನಾನ ಜಪ ಹೋಮ ನಿಯಮ। ಧ್ಯಾನಾನುಷ್ಠಾನ ಶೀಲ ತತ್ಪರನಂ ಸದ್॥
ಜ್ಞಾನನಿಧಿ ಮಾನ ನಿಧಿಯೆಂ। ದಾನಂದದೆ ಪೊಗಟ್ಬುದವನಿ ಸಿದ್ಧೇಶ್ವರನಂ॥314॥

ಸೋಮೇಶ್ವರ

ಜಳನಿಧಿ ಪರೀತ ವಸುಧಾ। ತಳದೊಳ್ ನೈಷ್ಠಿಕ ಮುನೀಶ್ವರಾರಾಧ್ಯಂ ಶ್ರೀ॥
ಕಳಶೇಶ ದೇವ ಪಾದ ಕ। ಮಳಾಳಿ ಸೋಮೇಶ್ವರ ವ್ರತೀಶಂ ಸ್ತುತ್ಯಂ॥315॥

## 75 ಹೂಲಿಯ ಶಾಸನ ಜಿ. [1107]

(ಎಪಿಗ್ರಾಫಿಯಾ ಇಂಡಿಕ, XVIII, 199)

ಈ ವೀರಗಲ್ಲಿನಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಬೋಸಿಗ ಮಲ್ಲಿಗ ಎಂಬ ಇಬ್ಬರು ವೀರರು ಪೂಲಿಯ ತುರುಗೋಳಿನಲ್ಲಿ ಕಾದಿ ಸತ್ತಂತೆ ಹೇಳಿದೆ.

ತೊಱೆ ಪರಿದಿರೆತ್ತಿ ಪೂಲಿಯ। ತುಱುವಂ ಕೊಳೆ ಕಂಡು ಬೋಸಿಗಂ ಪಗೆವರನಾಂ॥
ತಿಱಿದು ದಿವಿಜೇಂದ್ರ ಪುರದೊಳ್। ಮೆಱೆದಂ ನಿಜವಿಕ್ರಮ ಪ್ರತಾಪೋನ್ನತಿಯಂ॥316॥

ಒಡನುಂಡ ಕೆಳೆಯುನಂ ಸಂ। ಗಡದಾಳಂ ಮೇಳದಾಳನನುವರದೆಡೆಯೊಳ್॥
ಬಿಡಲಾಗದೆಂದು ಬೋಸಿಗ। ನೊಡನಟಿದಂ ಮಲ್ಲಿಗಂ ಪ್ರತಾಪೋನ್ನತಿಯಂ॥317॥

## 76 ಕರುಗುದುರಿಯ ಶಾಸನ [1108]

(ಇಂಡಿಯನ್ ಆಂಟಿಕ್ವರಿ, X, 251)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಸಾಮಂತ ಕಾದಂಬರಾಜನಾದ 2ನೆಯ ತೈಲಪನು ಕರುಗುದುರಿಯ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ತೈಲಪ

ನುಡಿ ಸತ್ಯಂ ಸಚ್ಚಾರಿತ್ರಂ ನಡೆ ಗುಣಮಖಿಲಾನಂದಮುದ್ಯತ್ಪ್ರತಾಪಂ।
ತೊಡರ್ಬರ್ದಾರಾತಿ ಭೂಪಾಳಕಬಳವಿಜಯಶ್ರೀಸಹಕ್ರೀಡೆ ಚಿತ್ತಂ॥
ಮೃಡಪಾದಾಂಭೋಜಭಕ್ತಿಪ್ರಬಳತೆ ಶರಣಾರ್ಥಿವ್ರಜಾಧೀನಮೆಂತು।
ಪಡೆದರ್ಥಂ ಕೂಡೆ ಲೋಕೋತ್ತರವಿಶದಯಶಂ ತೈಲಭೂಪಾಲದೇವಂ॥318॥

## 77 ಮುತ್ತಗೆಯ ಶಾಸನ [1110]

(ಎಪಿಗ್ರಾಫಿಯಾ ಇಂಡಿಕ, XV, 27)

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಥ ಗೋವಿಂದರಾಜನು ಮುರ್ತಗೆಯಲ್ಲಿ ರಾಮೇಶ್ವರದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ಅವನೂ ಅವನ ಮಗ ವಿಷ್ಣುದೇವನೂ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ತೈಲಪ

ರಾಜಾಧಿರಾಜನಮಳಿನ। ತೇಜಂ ರಾಜವತಿಯೆನಿಸಿದೀ ವಸುಮತಿಯಂ।
ಭ್ರಾಜಿಷ್ಣು ತೈಲರಾಜಂ। ರಾಜನ್ವತಿಯೆನಿಸಿದಂ ಪರಾಕ್ರಮದಿಂದಂ॥319॥

ತನ್ನಾಣೆ ತನ್ನ ಗೋಸಣೆ। ತನ್ನ ಜಸಂ ತನ್ನ ಪೆಸರೆ ನೆಗೞ್ದಿಸೆವಿನೆಗಂ।
ಮುನ್ನೀರೆ ಮೇರೆಯೆನೆ ಶೌ। ರ್ಯೋನ್ನತನಾಳ್ದಂ ಧರಿತ್ರಿಯಂ ತೈಲನೃಪಂ॥320॥

ಗೋವಿಂದ

ರಿಪುಸರ್ಪಗರುಡನಹಿತ। ದ್ವಿಪಕೇಸರಿ ಸುಭಟಜನನುತಂ ವೀರಶ್ರೀ।
ಲಪನಾಬ್ಜದ್ಯುಮಣಿ ಪರಂ। ತಪನಸದೃಶನಸಮಸಾಹಸಂ ಗೋವಿಂದಂ॥321॥

ಫಲಸ್ತುತಿ

ಪರಮಾರ್ಥಮಿದೀ ಧರ್ಮಮ। ನೆರಡಿಲ್ಲದೆ ಪರಮಭಕ್ತಿಯಿಂ ಕಾವ ಮಹಾ।
ಪುರುಷಂ ಕವಿಲೆಗಳಂ ಸಾ। ಸಿರಮಂ ಸಲೆ ದಾನಮಿತ್ತ ಫಲಮಂ ಪಡೆಗುಂ॥322॥

ತಲೆ ಪೋಪೊಡಮೆತ್ತಾನುಂ। ನೆಲವಾೞ್ ಪೋಪೊಡಮೊಡರ್ಚಿದೀಧರ್ಮದೊಳೊಂ।
ದೆಲೆಯನೊಡೆದಡಕೆಯುಂ ಬೇ। ಡಲಾಗದಿದನೞಿದ ಪಾಪಿ ಪಸುಗಳನೞಿದಂ॥323॥

ತೆಱೆಯಂ ಕಿಱುದೆಱೆಯಂ ಪೊಲೆ। ದೆಱೆಯಂ ಮಾನ್ಯಕ್ಕೆ ಬಂದೆ ತೆಱೆಯಂ ದೇವರ್।
ತಿಱಿವೇೞ್ಕುಮೆಂಬ ಪಾತಕ। ನಱುದಿಂಗಳೊಳೞಿಗುಮವನಧೋಗತಿಗೞಿಗುಂ॥324॥

## 78 ಇಟ್ಟಗಿಯ ಶಾಸನ [1112]

(ಎಪಿಗ್ರಾಫಿಯಾ ಇಂಡಿಕ, XIII, 41)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲ ವಿಕ್ರಮಾದಿತ್ಯನ ದಂಡನಾಯಕ ಮಹಾದೇವನು ಇಟ್ಟಗಿಯಲ್ಲಿ ದೇವಸ್ಥಾನಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

## ವಿಷ್ಣುಸ್ತುತಿ

ಶ್ರೀರಾಮಾರಮಣೀಯನೇತ್ರಶಫರಕ್ರೀಡಾಸ್ಪದಂ ಕಾಯಕಾಂ।
ತ್ಯಾರೂಢಪ್ರಚುರಾಂಬು ಕೌಸ್ತುಭಗಭಸ್ತಿವ್ಯಕ್ತಕಿಂಜಲ್ಕವಿ॥
ಸ್ತಾರಂ ಲೋಚನಪುಂಡರೀಕಜಠರಸ್ವರ್ಣಾಬ್ಜರಮ್ಯಂ ಸಮು।
ಸ್ತಾರಾಧ್ಯಂ ಕಮಲಾಕರಂಬೊಲೆಸೆದಂ ಲಕ್ಷ್ಮೀಮನೋವಲ್ಲಭಂ॥325॥

## ಚಾಳುಕ್ಯವಂಶ

ಪರವಂಶೋನ್ನತಿ ಪೋಲಲಾರ್ಕುಮೆ ತದೀಯಶ್ರೀಯನೆಂಬಂತಿರ।
ಚ್ಚರಿಯಂ ತಾಳ್ದಿ ಮನಕ್ಕೆ ವಂದೆಸೆಗುಮಂತಸ್ಸಾರಮುದ್ಭಾವಮುಬಂ॥
ಧುರಶಾಖಂ ದೃಢಮೂಲಮೂರ್ಜಿತಫಲಂ ನಿಷ್ಕಂಪಮುಗ್ರಾಗ್ರಸುಂ।
ದರಮಚ್ಛಿದ್ರಮಕಂಟಕಂ ಭುವನದೊಳ್ ಚಾಳುಕ್ಯವಂಶೋದಯಂ॥326॥

## ವಿಕ್ರಮಾದಿತ್ಯ

ಪೆಣೆದುಗ್ರಾಹಿತವಂಶಮಂ ತಱಿದು ಭೂಭೃದ್ವರ್ಗಮಂ ನುರ್ಗಿ ತತ್।
ಕ್ಷಣದಿಂ ಕಂಟಕಕೋಟಿಯಂ ಕಡಿದು ಸಪ್ತಾಂಭೋಧಿಸಂರುದ್ಧಧಾ॥
ರಿಣಿಯಂ ದೋರ್ಬಲದಿಂದೆ ನೇರ್ಪಡಿಸಿ ಕೀರ್ತಿಶ್ರೀಗೆ ಕೇಳೀಗೃಹಾಂ।
ಗಣಮಪ್ಪಂತಿರೆ ಮಾಡಿದಂ ಸುಭಟರಾರ್ ಚಾಳುಕ್ಯರಾಮಂಬರಂ॥327॥

ಕಮಠಾಧೀಶನ ಬೆನ್ನೊಳಿರ್ದು ಫಣಿರಾಜೋದ್ಯತ್ಫಣಾಗ್ರಕ್ಕೆ ವಂ।
ದು ಮಹೀಕಾಮಿನಿ ದಿಗ್ಗಜವ್ರಜದ ಕುಂಭಾಗ್ರಂಗಳಂ ಮೆಟ್ಟಿ ವಿ॥
ಕ್ರಮಚಕ್ರೇಶನುದಗ್ರಮಪ್ಪ ಭುಜಮಂ ಬಂದೇಱಿದಳ್ ರಾಗದಿಂ।
ದಮಿದೇನುನ್ನತಮಾಯ್ತೊ ದಕ್ಷಿಣಭುಜಂ ಚಾಳುಕ್ಯಚಕ್ರೇಶನಾ॥328॥

ಪೆಸರ ವಿಷೋರಗೇಂದ್ರನ ಫಣಾಗ್ರದೊಳಿರ್ಪ ಭಯಂ ರಸಾತಳ।
ಕ್ಕಸುರನಡುರ್ತು ನೂಂಕಿದ ಪರಾಭವಮಾದಿವರಾಹನೆತ್ತುವಂ॥
ದಸುವಱಿಯಾದ ಸೇದೆ ತನಗಾಱಿದುದೆಂಬಿನಮೀಗಳಿರ್ದಪಳ್।
ವಸುಮತಿ ವಿಕ್ರಮಾಭರಣಭೂಪನ ಭೂರಿಭುಜಪ್ರದೇಶದೊಳ್॥329॥

ಪೆಸರ್ವೆತ್ತಿರ್ದಾದಿರಾಜರ್ಕಳುಮನಿಟಿಸಿದಂ ರಾಜವಿದ್ಯಾಭುಜಂಗಂ।
ವಸುಧಾಲಕ್ಷ್ಮೀಭುಜಂಗಂ ತ್ರಿಭುವನವಿಜಯಶ್ರೀಭುಜಂಗಂ ಮಹಾಸಾ॥
ಹಸದೋರ್ಭಂಗೀಭುಜಂಗಂ ಸಹಜಮಧುರಸಂಗೀತಗೋಷ್ಠೀಭುಜಂಗಂ।
ರಸವದ್ವಾಣೀಭುಜಂಗಂ ನೃಪಗುಣನಿಳಯಂ ರಾಯವೇಶ್ಯಾಭುಜಂಗಂ॥330॥

ಎಱಗದುದಗ್ರರಿಲ್ಲೊಱೆಯ ಬಾಯೊಳೆ ನೇಲದ ರಾಯರಿಲ್ಲ ಕಂ।
ಡುಱುಸೆಱೆಗೊಟ್ಟು ತೋಱುವೆಸಗೆಯ್ಯದ ಮಂಡಳನಾಥರಿಲ್ಲ ತ॥
ನ್ನಱಿಕೆಯ ವಸ್ತುವಾಹನಮನಟ್ಟದರಿಲ್ಲೆನೆ ಬಣ್ಣಿಸಲ್ಕದಾರ್।
ನೆಱೆವರೊ ವೀರವೃತ್ತಿಯನಗುರ್ವಿನ ವಿಕ್ರಮಚಕ್ರವರ್ತಿಯಾ॥331॥

ಪುದಿದು ಪೊದಟ್ಟಿ ವಿಕ್ರಮವಿಜೃಂಭಣಮಂ ತೋಱೆದಾಳ್ವೆಸಕ್ಕೆ ಪೂ।
ಣ್ದೊದವಿದ ಭೀತಿಯಿಂದೆಱಗಲನ್ಯನೃಪಾವಳಿ ಪಾದಪೀಠದೊಳ್॥
ಪದನಖದರ್ಪಣಂಗಳೊಳಗಾ ರಿಪುಭೂಪರ ರೂಪು ಚಂದ್ರಬಿಂ।
ಬದ ಮೃಗದಂತಿರಿರ್ಪುವು ನೆಗೞ್ತೆಯ ವಿಕ್ರಮಚಕ್ರವರ್ತಿಯಾ॥332॥

ಮಹಾದೇವ

ನೆಗೞ್ದಾ ವಿಕ್ರಮಚಕ್ರವರ್ತಿಯ ಪದಾಂಭೋಜಕ್ಕೆ ಭೃಂಗಂ ಭುಜಾ।
ಸಿಗೆ ಕೂರ್ಪಾಜ್ಞೆಗೆ ರಕ್ಕೆ ಭೂವನಿತೆಗೇಱುಂಜವ್ವನಂ ರಾಜ್ಯಲ॥
ಕ್ಷ್ಮಿಗೆ ನಿಟ್ಟೆಯ್ದೆತನಂ ಜಸಕ್ಕೆ ಪಸರಂ ತೇಜಕ್ಕೆ ಕಾಯ್ಪೀತನೆಂ।
ದೆ ಗುಣಂಗೊಳ್ವುದು ಕುಂತಳಾವನಿತಳಂ ಶ್ರೀಮನ್ಮಹಾದೇವನಂ॥333॥

ಕಲಿಕಾಲೋತ್ಥಕಳಂಕಮಂ ತೆರಳೆ ನೂಂಕುತ್ತಿರ್ಪುದತ್ಯಂತನಿ।
ರ್ಮಲಧರ್ಮದ್ರುಮಕಾಲವಾಲಜಲಮಿರ್ಪಂತಿರ್ಪುದಪ್ರಾಕೃತಾ॥
ಖಿಲಮನ್ವಾದಿವಿಶಿಷ್ಟಮಾರ್ಗದೊಳೊಡಂಬಟ್ಟಿರ್ಪುದವ್ಯಾಹತಂ।
ಕಲಿಕಾಲಪ್ರತಿಪಕ್ಷಚಾರುಚರಿತಂ ಶ್ರೀಮನ್ಮಹಾದೇವನಾ॥334॥

ಇಟ್ಟಗಿ

ಇದು ಕನಕಾದ್ರಿಯಂತೆ ವಿಬುಧಾಶ್ರಯಮಿಂತಿದು ನೋಡ ನಾಗಲೋ।
ಕದವೊಲನಂತಭೋಗಿಜನಸೇವಿತಮಿಂತಿದು ದುಗ್ಧವಾರ್ಧಿಯಂ॥
ದದೆ ಪುರುಷೋತ್ತಮಸ್ಥಿತಿಕರಂ ಧನದಾಚಳದಂದದಿಂದಮಿಂ।
ತಿದುವೆ ಮಹೇಶ್ವರಾವಸಥಮೆನ್ನದರಾರೊ ತದಗ್ರಹಾರಮಂ॥335॥

ಆಡುವ ಸೋಗೆ ಪಾಡುವಳಿಗಳ್ ನಡಪಾಡುವ ಹಂಸೆ ಪಂಚಮಂ।
ಬಾಡುವ ಗಂಡುಗೋಗಿಲೆ ಕೆಲರ್ ನುಡಿದಂತುಟನಾಗಳಂತೆ ಮಾ॥
ತಾಡುವ ರಾಜಕೀರಮೊಲವಿಂಕೆಸಲಾಱದಗಲ್ದು ಪೂವಿನಂ।
ಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್॥336॥

ಕಲಿಮಶಕಾರ್ಥಧೂಮಮೆನಿಸಿರ್ದ ನೆಗೞ್ತೆಯ ಹೋಮಧೂಮಮು।
ಗ್ಗಲಿಸಿ ನಭಂಬರಂ ಮಿಳಿರ್ದು ನಾಕನದೀಪ್ರಚುರಪ್ರವಾಹಸಂ॥
ವಲನವಿಲಾಸಯಾಮುನಜಲೋದ್ಗಮಮಂ ಮಿಗೆ ಜನ್ಮವಿರ್ಪ ಭೂ।
ವಲಯವಿನೂತವಿಪ್ರವರರಿಂದೆಸೆದಿರ್ಪುದದೆತ್ತ ನೋೞ್ಪೊಡಂ॥337॥

ಸಕಲವ್ಯಾಕರಣಂಗಳುಂ ವಿವಿಧವೇದಾರ್ಥಂಗಳುಂ ಮೂರ್ತಿಗೊಂ।
ಡು ಕಲಾಶಾಸ್ತ್ರಸಮೇತವೋಲಗಿಸೆ ತಮ್ಮಂ ಬ್ರಹ್ಮವಿದ್ಯಾವಿಶೇ॥
ಷಕರಮ್ಲಾನಚರಿತ್ರಪಾತ್ರರಮಲಜ್ಞಾನರ್ಥಿಸಂಪನ್ನರೀ।
ಸಕಲಕ್ಷೋಣಿಗೆ ಪೂಜ್ಯರಿಟ್ಟಗೆಯ ನಾಲ್ನೂರ್ವರ್ ದ್ವಿಜನ್ಮೋತ್ತಮರ್॥338॥

ಮಹಾದೇವನ ಮುತ್ತಾತ ದೇಚಿರಾಜ

ತತ್ತ್ವನಯುಂ ತ್ರಯೀತ್ರಿಪಥಗಾಹಿಮವದ್ಗಿರಿ ಸಚ್ಚರಿತ್ರಸಂ।
ಪತ್ತಿಯ ಬಿತ್ತು ಧರ್ಮದ ತವರ್ಮನೆ ಕೀರ್ತಿಯ ಜನ್ಮಭೂಮಿ ಲೋ॥
ಕೋತ್ತಮನುತ್ತಮೋತ್ತಮನುದಾತ್ತಶಿಖಾಮಣಿ ದೇಚಿರಾಜವಿ।
ಪ್ರೋತ್ತಮನಾಮಹಾಪುರುಷನಂ ಪುರುಷೋತ್ತಮನೆನ್ನದಿರ್ಪರಾರ್॥339॥

ಮಹಾದೇವನ ತಂದೆ ನಾರಾಯಣ

ಭೃತಗೋತ್ರಂ ಶಂಖಚಕ್ರೋಜ್ವಲಯುಶನಪರಿಮ್ಲಾನಶಾರೀರಪದ್ಮ।
ಸ್ಥಿತಭಾಸ್ವದ್ಬ್ರಹ್ಮತೇಜಂ ವಿಬುಧಗಣನುತಂ ಸತ್ಯಭಾಮಾಭಿರಾಮಂ॥
ಸ್ಥಿತಿಸಾರಂ ಶ್ರೀಯುತಂ ವಿಪ್ರವರಪತಿ ಜಗತ್ಸೇವ್ಯನೆಂದೆಂದು ಲೋಕಂ।
ಸ್ತುತಿಗೆಯ್ಯುತ್ತಿರ್ಪ ನಾರಾಯಣನ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ॥340॥

ಜಗಮೆಲ್ಲಂ ತನಗಾಶ್ರಿತರ್ ಪುರುಷಕಾರಂ ತನ್ನ ಮೆಯ್ ತಾನೆ ಲ।
ಕ್ಷ್ಮಿಗೆ ಮೆಯ್ಯರ್ಚನೊಡರ್ಚುತಿರ್ಪ ಪುರುಷಂ ಪುಣ್ಯಾಧಿಕರ್ ತನ್ನ ಪೋ॥
ಲ್ವೆಗೆ ವರ್ಪರ್ ಪೆಱರಿಲ್ಲ ಸತ್ವದುದಯಂ ಬ್ರಹ್ಮಸ್ವರೂಪಂ ಪ್ರಕಾ।
ಶಗುರುತ್ವಂ ತನಗೆಕ್ಕಲಾವಣಮೆನಿಪ್ಪಂ ಮೂರ್ತಿನಾರಾಯಣಂ॥341॥

ಮಹಾದೇವನ ತಾಯಿ ಚಂದ್ರಿಕಾದೇವಿ

ವಿಮಲಾಚಾರವಿಚಾರಜಾಹ್ನವಿ ಧರಾದೇವಾಂಗನಾಕಾರಧಾ।
ತ್ರಿ ಮಹೀಲೋಕನಿಲಿಂಪನಿರ್ಮಲಕುಲಾವಿರ್ಭಾವಸಾವಿತ್ರಿ ಮೂ॥
ರ್ತಿಮದಾತ್ಮೇಶ್ವರಪುಣ್ಯಲಕ್ಷ್ಮಿ ನವನಾಮಾರುಂಧತೀದೇವಿ ನಿ।
ತ್ಯಮಹತ್ವಾಂಬಿಕೆಯೆಂದು ಬಣ್ಣಿಸದರಾರ್ ಚಂದ್ರಾಂಬಿಕಾದೇವಿಯಂ॥342॥

ಮಹಾದೇವನು ಕಟ್ಟಿಸಿದ ದೇವಸ್ಥಾನ

ಧರೆ ರಂಗಂ ಕುಲಪರ್ವತಾಳಿ ತಳಗಂಬಂಗಳ್ ದಿಶಾಭಿತ್ತಿ ಭಿ।
ತ್ತಿ ರಸಾಲಂಕೃತಚಿತ್ರಪುತ್ರಿಕೆಯರಾದಿಗ್ದೇವಿಯರ್ ದೇಗುಲಂ॥
ಗಿರಿರಾಜಂ ಕನಕಾದ್ರಿ ಪೊಂಗಳಸಮಾಗಲ್ಕಾಮಹಾದೇವರಾ।
ದರದಿಂದೆತ್ತಿಸಿದಂತೆ ದೇವಕುಲಮೊಪ್ಪಿರ್ಕುಂ ಮಹಾದೇವನಾ॥343॥

ಉದಯಾದ್ರೀಂದ್ರದೊಳರ್ಕಬಿಂಬಮುದಯಂಗೆಯ್ದಂತದಂ ದಾಂಟಲೊ।
ಲ್ಲದೆ ನಿಂದಲ್ಲಿಯು ಲೋಕಮಂ ಬೆಳಗುತಿರ್ಪಂತಿರ್ಕುಮುತ್ತುಂಗತಾ॥
ಸ್ಪದದೇವಾಯತನಾಗ್ರದೇಮಕಲಶಂ ಶ್ರೀಮನ್ಮಹಾದೇವನ।
ಭ್ಯುದಯಶ್ರೀ ಪಿಡಿದಿರ್ಪ ಪೂರ್ಣಕಲಶಂ ತಾನಿಂತಿದೆಂಬನ್ನೆಗಂ॥344॥

ಇದಪೂರ್ವಂ ಬ್ರಹ್ಮನುಂ ನಿರ್ಮಿಸಲಱಿಯನಿದಂ ಪೋಲಲಾವಿಶ್ವಕರ್ಮ್ಮಂ।
ಗಿದೆ ದಲ್ ಕರ್ಮಾಂತರಪ್ರೌಢಿಗೆ ಗುರುವೆನಿಸಲ್ ಸಾಲ್ವುದೆಂಬಂತುಟಂ ನೋ॥
ಡಿದರಾಶ್ಚರ್ಯಂಬಡಲ್ ಮಾಡಿದನಿದನೆ ವಲಂ ದೇವದೇವಂಗಿರಲ್ ತ।
ಕ್ಕುದೆನಿಪ್ಪುತ್ತುಂಗದೇವಾಲಯಮನೆಸೆದಿರಲ್ ದಂಡನಾಥತ್ರಿಣೇತ್ರಂ॥345॥

ಸಕಲಕಲಾಸರಸ್ವತಿಗೆ ವಾಙ್ಮಯಮೂರ್ತಿಗೆ ವೇದಮೂರ್ತಿಗ।
ಪ್ರಕಟನಮಂತ್ರಮೂರ್ತಿಗಮಲಾಕ್ಷರಮೂರ್ತಿಗಿರಲ್ಕೆ ಭಕ್ತಿಯಿಂ॥
ಸಕಲಕಲಾಸರಸ್ವತಿಯೆ ಮಾಡಿಸಿದಂ ಮಠಮಂ ಸಮಸ್ತಶಾ।
ಬ್ದಿಕಕವಿತಾರ್ಕಿಕಾಗಮಿಕವೈದಿಕಸಾಕ್ಷರಸಜ್ಜನಾಶ್ರಯಂ॥346॥

## 79 ಶಿವಮೊಗ್ಗ 97 [1112]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಭುಜಬಳಗಂಗನ ಹೆಂಡತಿ ಬಾಚಲದೇವಿ ಬನ್ನಿಕೆರೆಯಲ್ಲಿ ಜಿನಗೃಹವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಬಾಚಲದೇವಿ

ಶ್ರೀವಧು ಜಯವಧು ಕೀರ್ತಿ। ಶ್ರೀವಧು ವಾಗ್ವಧುವೆನಿಪ್ಪ ವಧು ಗಂಗನೃಪಂ।
ಗೀವಧುವೆನಿಸಿದ ಬಾಚಲ। ದೇವಿಯೊಳೆಣೆಯೆನ್ನೆನುಟಿದ ನೃಪವನಿತೆಯರಂ॥347॥

### ಫಲಸ್ತುತಿ

ಧರೆ ಪುಸಿವೋಗದೆ ಬೆಳೆಗೀ। ಧರೆಯುಂ ಭುಜಬಳದಿನಾಳ್ಗೆ ಭುಜಬಳಗಂಗಂ।
ಪರೆದಿರ್ಕೆ ಜೈನಧರ್ಮಂ। ಧರೆಯೊಳ್ ಚಂದ್ರಾರ್ಕತಾರಮುಳ್ಳನ್ನೆವರಂ॥348॥

ಸಕಳೋರ್ವೀಸ್ತುತಮಪ್ಪ ಧರ್ಮಮನಿದಂ ಕಾದಂ ಚಿರೈಶ್ವರ್ಯಭುಂ।
ಭುಕನಕ್ಕುಂ ವಿಪರೀತದಿಂ ನಡೆದವಂಗಾಗಂಗೆಯಾವಾರಣಾ॥
ಸಿಕುರುಕ್ಷೇತ್ರದೊಳೆಯ್ದೆ ಗೋದ್ವಿಜಮುನಿಸ್ತ್ರೀಯರ್ಕಳಂ ಕೊಂದ ಪಾ।
ತಕಮಕ್ಕುಂ ಬಿಡದಿರ್ಕುಮಾಪುರುಷನೆಂತುಂ ರೌರವಸ್ಥಾನಮಂ॥349॥

ಶಾಸನಮಿದಾವುದೆಲ್ಲಿಯು। ಶಾಸನಮಾರಿತ್ತರೇಕೆ ಸಲಿಸುವೆನಾನೀ।
ಶಾಸನಮನೆಂಬ ಪಾತಕ। ನಾಸಕಳಂ ರೌರವಕ್ಕೆ ಗಳಗಳನಿೞಿಗುಂ॥350॥

## 80 ಶ್ರವಣಬೆಳ್ಗೊಳ 126 [1113]

ಇದರಲ್ಲಿ ಗಂಗರಾಜನ ಹೆಂಡತಿ ಲಕ್ಷ್ಮಿ ತನ್ನ ಸಹೋದರನಾದ ಬೂಚಣನು ಸಾಯಲು ಅವನಿಗೆ ನಿಸಿದಿಗೆಯನ್ನು ನಿಲ್ಲಿಸಿದಂತೆ ಹೇಳಿದೆ.

ಬೂಚಣ

ವಿನಯದ ಸೀಮೆ ಸತ್ಯದ ತವರ್ಮನೆ ಶೌಚದ ಜನ್ಮಭೂಮಿಯೆಂ।
ದನವರತಂ ಪೊಗಳ್ವುದು ಜನಂ ವಿಬುಧೋತ್ಕರಕೈರವಪ್ರಬೋ॥
ಧನಹಿಮರೋಚಿಯಂ ನೆಗಳ್ದ ಬೂಚಿಯನುದ್ಧಪರಾರ್ಥಸದ್ಗುಣಾ।
ಭಿನವದಧೀಚಿಯಂ ಸುಭಟಭೀಕರವಿಕ್ರಮಸವ್ಯಸಾಚಿಯಂ॥351॥

ಧರೆ ಲಘುವಾಯ್ತು ವಿಶ್ರುತವಿನೇಯನಿಕಾಯಮನಾಥಮಾಯ್ತು ವಾ।
ಕ್ತರುಣಿಯುಮೀಗಳೀಜಗದೊಳಾರ್ಗಮನಾದರಣೀಯೆಯಾದಳೆಂ॥
ದಿರದೆ ವಿಷಾದಮಾದಮೊದವುತ್ತಿರೆ ಭವ್ಯಜನಾಂತರಂಗದೊಳ್।
ನಿರುಪಮನೆಯ್ದಿದಂ ನೆಗಳ್ದ ಬೂಚಿಯಣಂ ದಿವಿಜೇಂದ್ರಲೋಕಮಂ॥352॥

## 81 ಶಿಕಾರಿಪುರ 137 [1114]

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಯಕ ಗೋವಿಂದರಾಜನು ಬಳ್ಳಿಗಾವೆಯಲ್ಲಿ ಅಬ್ಧಿಶಯನಮೂರ್ತಿಯನ್ನು ಮಾಡಿಸಿ ಭೂಮಿಯನು ಬಿಟ್ಟಂತೆಯೂ 25 ಬಾಹ್ಮಣರಿಗೆ ವೃತ್ತಿಗಳನ್ನು ಕೊಟ್ಟಂತೆಯೂ ಹೇಳಿದೆ.

ತೈಲಪ

ವಾರ್ಧಿಯೆ ಸೀಮೆ ತನ್ನ ಭುಜಗರ್ವದಿನಾರ್ಜಿಸಿದುರ್ವಿಗಿಂದುಸಂ।
ಸ್ಪರ್ಧೆಯಿನುರ್ವಿ ಪರ್ವಿದ ಜಸಕ್ಕೆ ದಿಗಂತಮೆ ಸೀಮೆಯೆಂಬಿನಂ॥
ದುರ್ಧರಬಾಹುವೀರ್ಯನೆಳೆಯಂ ಬಗೆಗೊಂಡು ಚಳುಕ್ಯರಾಜ್ಯಸಂ।
ವರ್ಧನನಾಳ್ವನುತ್ಪಲಶಿರಃಕಮಲಾರ್ಚಿತಚಂಡಿಕಾಪದಂ॥353॥

ಹೃತ್ಕೀಲನರಾತಿಗೆ ಕುಲ। ಕುತ್ಕೀಲಂ ಪೆರ್ಮೆಗೆನಿಸಿ ನೆಗಳ್ದಂ ರಾರಾ।
ಜತ್ಕೀರ್ತ್ಯಮರಧುನೀಹಿಮ। ವತ್ಕುತ್ಕೀಲಂ ಪ್ರತಾಪಶೈಲಂ ತೈಲಂ॥354॥

ವಿಕ್ರಮಾದಿತ್ಯ V

ವಿಕ್ರಮನೂರ್ಜಿತನಿಜಭುಜ। ವಿಕ್ರಮನಾಳ್ದಂ ಧರಿತ್ರಿಯಂ ತತ್ತನುಜಂ।
ಶಕ್ರನಿವನೆನಿಸಿ ನತಪರ। ಚಕ್ರಂ ದಿಕ್ಚಕ್ರವರ್ತಿತೇಜಶ್ಚಕ್ರಂ॥355॥

## ವಿಕ್ರಮಾದಿತ್ಯ VI (ತ್ರಿಭುವನಮಲ್ಲ)

ಗತವೇಳಂ ಚೋಳನುತ್ಪಲ್ಲವಕಲಿತಕರಂ ಪಲ್ಲವಂ ಸಂಭ್ರಮಾನ್ವೇ।
ಷಿತಭೂಭೃದ್ರಂಧ್ರನಂಧ್ರಂ ಕ್ಷಥಿತಪೃಥುಳಹೃಜ್ಜಾಂಗಳಂ ಸಿಂಗಳಂ ಲಂ॥
ಘಿತಮಾಳಂ ಮಾಳವಂ ಜರ್ಜರಭುಜಕುಧರಂ ಗುರ್ಜರಂ ಬಟ್ಟನೇ ಸಂ।
ತತಮಾತ್ಮೀಯಪ್ರತಾಪೋನ್ನತಿಯಿನೆನಿಸಿದಂ ವಿಕ್ರಮಾದಿತ್ಯದೇವಂ॥356॥

ಭೂರಿಭುಜೋದ್ಧುರತರತರ।ವಾರಿಯ ವಾರಿಯೊಳೊಜಿಲ್ದು ನೀರ್ಮಾನಸೆವೋಲ್।
ವೀರಶ್ರೀ ನೆಲಸಿರ್ಪಳ। ಸಾರತಮನಪಾಯೆ ರಾಯಕೋಳಾಹಳನಾ॥357॥

## ಅನಂತಪಾಳ ದಂಡನಾಥ

ಅವಸರಮಾಗೆ ಪಾರ್ದು ಕಿವಿವರ್ಚುವ ಸಂಗರಮಾಗೆ ನೋಡಿ ಬೆ।
ರ್ಚುವ ಪತಿಯರ್ಥಮಂ ಕಳಲೊಡರ್ಚುವ ಮತ್ತಿನ ದಂಡನಾಯಕರ್॥
ಸವನೆ ವಿರೋಧಿಯಟ್ಟಿರುಳನುರ್ಚುವ ಲಕ್ಷ್ಮಿಯನಾಳ್ದವಂಗೆ ಸಾ।
ರ್ಚುವ ನೆಲನಂ ಪಯೋಧಿವರಮೆಯ್ದೆ ನಿಮಿರ್ಚುವನಂತಪಾಳನೊಳ್॥358॥

## ಗೋವಿಂದರಾಜ

ಕಮಳಪ್ರೋದ್ಭವವಂಶಸಂಭವರೊಳೆಲ್ಲಂ ಸಂದ ತನ್ನಾರ್ಪು ತ।
ನ್ನ ಮಹತ್ವಂ ನೆಗೞ್ದಿರ್ದ ತನ್ನಱಿವು ತನ್ನಾಜ್ಞಾಫಳಂ ತನ್ನ ಕೀ॥
ರ್ತಿ ಮಹೀಚಕ್ರಮನೆಲ್ಲಮಂ ಬೆಳಗೆ ದಂಡಾಧೀಶರತ್ನಂ ಚಳು।
ಕ್ಯಮಹೀನಾಥಭುಜಾಸಿದಂಡಮೆನಿಪಂ ಗೋಪಿಂದದಂಡಾಧಿಪಂ॥359॥

ಎನಗಿಂ ಸ್ವೇಚ್ಛಾವಿಹಾರವ್ಯತಿಕರಮೊಗೆದತ್ತೇಕೆ ಗೋವಿಂದದಂಡೇ।
ಶನ ಚಿತ್ತಂ ದೃಪ್ತಸಾಪತ್ನಿಕಬಳದಳನೋದ್ರೇಕದೊಳ್ ತಳ್ತುದಿನ್ನಾ॥
ತನೊಳಾಂತುಗ್ರಾರಿವೀರವ್ಯತಿಕರಗತಿ ಮದ್ಬಿಂಬಸಂಭೇದನಂ ಕೆ।
ಮ್ಮನೆ ತಾನಿಂ ಪೋಗದೆಂದುದ್ಭಯದೆ ತಪನನಿಂದಾದನುತ್ತಪ್ತದೇಹಂ॥360॥

ದಿಗ್ದಾಹಂ ವೈರಿನಿರ್ನಾಶನಮೊದವಿದುದಲ್ತಲ್ತುದಗ್ರಕ್ರುಧುಗ್ರಂ।
ದಿಗ್ದಂತಿವ್ರಾತನೇತ್ರಾರುಣರುಚಿ ದೆಸೆಯಂ ಪರ್ವಿತಲ್ತಲ್ತಿದುದ್ಯ॥
ದ್ದಿಗ್ದೇವೀಕುಂಕುಮಸ್ಥಾಸಕಮೆನಲುರಿಗಳ್ ಸುಟ್ಟನುಚ್ಛಿಷ್ಟರೋಷ।
ಪ್ರಾಗ್ದೇಶಂ ಶತ್ರುದೇಶಂಗಳನತುಳಬಳಭ್ರಾಜಿ ಗೋವಿಂದರಾಜಂ॥361॥

ತೊಳಗುವ ರನ್ನದ ಸೊಡರ್ವೊಲ್। ಬೆಳಗಿದಪಂ ವಿಕ್ರಮಾಂಕನೃಪನರಮನೆಯೊಳ್।
ತೊಳೆದಿತರಚಮೂಪತಮೋ। ಮಳಮಂ ಗೋವಿಂದರಾಜದಂಡಾಧೀಶಂ॥362॥

ರಾಯುರ್ಘುಳಪ್ಪನ ಭುಜಕೌ। ಕ್ಷೇಯಕಮೆನಿಪಳವನಾಂತ ಗೋವಿಂದಚಮೂ।
ನಾಯಕನೊಳ್ ಸೆಣಸುವವಂ। ನಾಯಕದೊಳ್ ಸೆಣಸುವೊಡೆದ ಕಾಬಂ ಪೋಲ್ಕುಂ॥363॥

ಎತ್ತಣ ಪರಮಂಡಲಮುಂ। ಮುತ್ತಿಂಗೊಳಗಾಗಿ ದಾರದಂತಿರ್ಪುವು ಕಾ।
ಯ್ದೆತ್ತಲೊಡಮಮಮಿದೇನು। ದ್ವೃತ್ತನೊ ರಣರಂಗಭೈರವಂ ಗೋವಿಂದಂ॥364॥

## 82 ಶ್ರವಣಬೆಳ್ಗೊಳ 127 [1115]

ಇದರಲ್ಲಿ ಮೇಘಚಂದ್ರತ್ರೈವಿದ್ಯನು ಸಾಯಲು ಗಂಗರಾಜನೂ ಅವನ ಹೆಂಡತಿ ಲಕ್ಷ್ಮಿಯೂ ನಿಸಿದಿಗೆಯನ್ನು ನಿಲ್ಲಿಸಿದಂತೆ ಹೇಳಿದೆ.

ಮೇಘಚಂದ್ರ

ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ ದಿವ್ಯಬಾ।
ಣನಿಧಾನಂ ನಿನಗಿಕ್ಷುಚಾಪಮಳಿನೀಜ್ಯಾಸೂತ್ರಮೋರೊಂದೆ ಪೂ॥
ವಿನ ಬಾಣಂಗಳುಮಯ್ದೆ ಹೀನನಧಿಕಂಗಾಕ್ಷೇಪಮಂ ಮಾಳ್ಪುದಾ।
ವ ನಯಂ ದರ್ಪಕ ಮೇಘಚಂದ್ರಮುನಿಯೊಳ್ ಮಾಣ್ ನಿನ್ನ ದೋರ್ದರ್ಪಮಂ ॥365॥[1]

ಶ್ರವಣೀಯಂ ಶಬ್ದ ವಿದ್ಯಾಪರಿಣತಿ ಮಹನೀಯಂ ಮಹಾತರ್ಕವಿದ್ಯಾ।
ಪ್ರವಣತ್ವಂ ಶ್ಲಾಘನೀಯಂ ಜಿನನಿಗದಿತಸಂಶುದ್ಧಸಿದ್ಧಾಂತವಿದ್ಯಾ॥
ಪ್ರವಣಪ್ರಾಗಲ್ಭ್ಯಮೆಂದೆಂದುಪಚಿತಪುಳಕಂ ಕೀರ್ತಿಸಲ್ ಕೂರ್ತು ವಿದ್ವ।
ನ್ನಿವಹಂ ತ್ರೈವಿದ್ಯನಾಮಪ್ರವಿದಿತನೆಸೆದಂ ಮೇಘಚಂದ್ರವ್ರತೀಂದ್ರಂ॥366॥

ಕ್ಷಮೆಗೀಗಳ್ ಜವ್ವನಂ ತೀವಿದುದತುಳತಪಶ್ರೀಗೆ ಲಾವಣ್ಯಮೀಗಳ್।
ಸಮಸಂದಿರ್ದತ್ತು ತನ್ನಿಂ ಶ್ರುತವಧುಗಧಿಕಪ್ರೌಢಿಯಾಯ್ತೀಗಳೆಂದಂ॥
ದೆ ಮಹಾವಿಖ್ಯಾತಿಯಂ ತಾಳ್ದಿದನಮಳಚರಿತ್ರೋತ್ತಮಂ ಭವ್ಯಚೇತೋ।
ರಮಣಂ ತ್ರೈವಿದ್ಯವಿದ್ಯೋದಿತವಿಶದಯಶಂ ಮೇಘಚಂದ್ರವ್ರತೀಂದ್ರಂ॥367॥

ಇದೆ ಹಂಸೀಬೃಂದಮೀಂಟಲ್ ಬಗೆದಪುದು ಚಕೋರೀಚಯಂ ಚಂಚುವಿಂದಂ।
ಕರ್ದುಕಲ್ ಸಾರ್ದಪ್ಪುದೀಶಂ ಮುಡಿಯೊಳಿರಿಸಲೆಂದಿರ್ದಪಂ ಸಜ್ಜೆಗೇಜಿಲ್॥
ಪದೆದಪ್ಪಂ ಕೃಷ್ಣನೆಂಬಂತೆಸೆದು ಬಿಸಲಸತ್ಕಂದಳೀಕಂದಕಾಂತಂ।
ಪುದಿದತ್ತೀಮೇಘಚಂದ್ರವ್ರತಿತಿಳಕಜಗದ್ವರ್ತಿಕೀರ್ತಿಪ್ರಕಾಶಂ॥368॥

---

[1] ಪಂಪರಾಮಾಯಣ I, 20

ಗಂಗರಾಜ

ಮತ್ತಿನ ಮಾತವತ್ತಿರಲಿ ಜೀರ್ಣಜಿನಾಲಯಕೋಟಿಯುಂ ಕ್ರಮಂ।
ಬೆತ್ತಿರೆ ಮುನ್ನಿನಂತಿರನಿತೂರ್ಗಳೊಳಂ ನೆಱೆ ಮಾಡಿಸುತ್ತುಮು॥
ತ್ಯುತ್ತಮಪಾತ್ರದಾನದೊದವಂ ಮೆಱೆಯುತ್ತಿರೆ ಗಂಗವಾಡಿ ತೊಂ।
ಬತ್ತಱುಸಾಸಿರಂ ಕೊಪಣಮಾದುದು ಗಂಗಣದಂಡನಾಥನಿಂ॥369॥

ಲಕ್ಷ್ಮಿ

ಶೋಭೆಯನೇಂ ಕೆಯ್ಕೊಂಡುದೊ।ಸೌಭಾಗ್ಯದ ಕಣಿಯೆನಿಪ್ಪ ಲಕ್ಷ್ಮೀಮತಿಯಿಂ।
ದೀಭುವನತಳದೊಳಾಹಾ। ರಾಭಯಭೈಷಜ್ಯಶಾಸ್ತ್ರದಾನವಿಧಾನಂ॥370॥

**83 ಶಿವಮೊಗ್ಗ 57 [1115]**

ಇದರಲ್ಲಿ ಗಂಗರಾಜನಾದ ನನ್ನಿಯ ಗಂಗ ಪೆರ್ಮಾಡಿಯ ಆಳಿಕೆಯಲ್ಲಿ ಬರ್ಮಿಸೆಟ್ಟಿ ಬಸದಿಗಾಗಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬರ್ಮದೇವ

ಭರದಿಂದಾಂತದಟಂಗಂ। ಶರಣೆಂದ ನೃಪಂಗಮೆರೆದು ಬಂದ ನರಂಗಂ।
ಸುರಗಿರಿ ವಜ್ರಾಗಾರಂ। ಸುರಭೂಜಂ ಬರ್ಮದೇವನದಟರ ದೇವಂ॥371॥

ರಕ್ಕಸಗಂಗ

ಸ್ಥಿರನೇ ಮೇರುಗಿರೀಂದ್ರನೊಳ್ ಸೆಣಸುವಂ ಗಂಭೀರನೇ ವಾರ್ಧಿಯೊಳ್।
ಪುರುಡಿಪ್ಪಂ ಕಲಿಯೇ ಸುರೇಂದ್ರಸುತನಂ ಮೆಚ್ಚಂ ಮಹಾದಾನಿಯೇ॥
ಸುರಭೂಜಕ್ಕೊರೆಗಟ್ಟುವಂ ಚದುರನೇ ಪಾಂಚಾಳನಂ ಗೆಲ್ದನೆಂ।
ದಿರದೀ ಧಾರಿಣಿ ಬಣ್ಣಿಕುಂ ರಣಜಯಪ್ರೋತ್ತುಂಗನಂ ಗಂಗನಂ॥372॥

ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾ।
ರ್ಪಡಿದುದೆ ವಜ್ರಲೇಪಮುಱಿದಿರ್ದುದೆ ಮೃತ್ಯು ಪರೋಪಕಾರದೊಳ್॥
ನಡೆದುದೆ ಬಟ್ಟೆ ಸದ್ಗುಣಮೆ ಮೆಯ್ಯೆನೆ ನಿನ್ನವೊಲಿಂತು ನೀತಿಯೊಳ್।
ನಡೆವ ನೃಪೇಂದ್ರನಾವನಖಿಲಾವನಿಯೊಳ್ ಕಲಿಗಂಗಭೂಪತೀ॥373॥

ಗುಣನಂದಿ

ಗುಣಿಯೆನೆ ಜಿನಮತರಕ್ಷಾ। ಮಣಿಯೆನೆ ಕವಿಗಮಕಿವಾದಿವಾಗ್ಮಿಪ್ರವರಾ।
ಗ್ರಣಿಯೆನೆ ಪಂಡಿತಚೂಡಾ।ಮಣಿಯೆನೆ ಗುಣನಂದಿದೇವರೆಸೆದರ್ ಧರೆಯೊಳ್॥374॥

ಗುಣಚಂದ್ರ

ಅಳವೇ ಪೇೞ್ ನುಡಿಯಲ್ಕೆ ನಿನ್ನ ಬಿರುದಂ ಮಾಣ್ ಮಾಣೆಲೇ ಸಾಂಖ್ಯ ವಾ।
ಗ್ಬಳಮಂ ನಚ್ಚದೆ ನೀನಡಂಗೆಡಱಿದಿರ್ ಚಾರ್ವಾಕ ನೈಯಾಯಿಕಾ॥
ಮಲೆಯಲ್ಬೇಡಿರು ಮಟ್ಟಮೇಕೆ ಚಲದಿಂದೀಬಂದಪಂ ಕೆಮ್ಮನಂ।
ಡಲೆಯಲ್ ಶ್ರೀಗುಣಚಂದ್ರದೇವನಮಳಂ ವಾದೀಭಕಂಠೀರವಂ॥375॥

**84 ಬೇಲೂರು 58 [1117]**

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಬೇಲೂರಲ್ಲಿ ಚನ್ನಕೇಶವದೇವಸ್ಥಾನವನ್ನು ಕಟ್ಟಿಸಿ, ದೇವರನ್ನು ಪ್ರತಿಷ್ಠೆ ಮಾಡಿ ಗ್ರಾಮಗಳನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ಪೊಗೆ ಪೊಕ್ಕಾಶಾಧಿಪರ್ ಕಣ್ಗಳನೊರಸುವಿನಂ ದಿಗ್ಗಜಾಪಾಂಡುದಂತಂ।
ಪೊಗೆ ಸುತ್ತಲ್ ಕಗ್ಗಿಕೊಂಡಿರ್ಪಿನಮುಪಘನಮಾಗಿರ್ದ ರೋದೋಂತರಾಳಂ॥
ಪೊಗೆಯಿಂದಂ ಮೇಘಬೃಂದಾನ್ವಿತಮೆನಿಸುವಿನಂ ತೀವ್ರತೇಜೋನಳಂ ಕೆ।
ಯ್ಮಿಗುವನ್ನಂ ಪೊಯ್ಸಳಂ ಭೋಜನ ಕುಱುಪಿನ ದುರ್ಗಂಗಳಂ ಕೂಡೆ ಸುಟ್ಟಂ॥376॥

ನಿಜಸೇನಾಧೂಳಿಯಿಂ ಚೌಕದ ಕಿಳಿಗಿಳದಾ ಬೆಟ್ಟುಗಳ್ ಕೂಡೆ ಮೇಘ।
ವ್ರಜದಿಂ ಪೂೞ್ದಿರ್ದುವೆಂಬಂತಿರೆ ನಡೆದದಟಿಂ ಕೊಂಡವಂ ಸುಟ್ಟು ಧೂಮ॥
ಧ್ವಜಮಂಭೋಜಪ್ರಣಾಶೋದಯಮನೊದವಿಸಲ್ ಪೊಯ್ಸಳಂ ಚಕ್ರಿ ಚೈತ್ರ।
ಧ್ವಜಮಂ ರಾಗೋತ್ಕಟಂ ಕಟ್ಟಿದನೆನೆ ಪೆಱರಾರ್ ವೀರರಾ ಧೀರನಿಂದಂ॥377॥

ಕರೆವಿಡಿದು ಬಳೆಯುವಟ್ಟಣ। ಮುರಿವುದುಮೆಱೆಗಂಗನೃಪನ ಕೋಪಾನಳನಿಂ॥
ಸ್ಮರಿಯಿಸಿದುದು ರಾಮಶರ। ಸ್ಫುರಿತಾಗ್ನಿಯನಬ್ಧಿವೀಚಿನಿಚಯಾಚಕಿತಂ॥378॥

ಇನನೊರ್ವಂ ಪೊಱಗಾಗೆ ಪೇೞ್ ಪುದುವೆ ತೇಜಂ ಕ್ಷತ್ರಿಯಂಗರ್ಕನಂ।
ದನನೊರ್ವಂ ಪೊಱಗಾಗೆ ಪೇೞ್ ಪುದುವೆ ದಾನಂ ಭೂಭುಜಂಗಬ್ಜಗ॥
ರ್ಭನುಮೊರ್ವಂ ಪೊಱಗಾಗೆ ಪೇೞ್ ಪುದುವೆ ಚಾತುರ್ಯಂ ನೃಪಂಗೆಂದು ಮೆ।
ಚ್ಚನಿವಂ ಮತ್ತಿನ ಭೂಪರಂ ನೃಪವರಂ ಶ್ರೀರೂಪನಾರಾಯಣಂ॥379॥

ಎರೆಯಂಗನ ಹೆಂಡತಿ ಏಚಲೆ

ಆ ನರಪತಿಗಂಭೋಧಿಗ। ನೂನಗಭೀರತೆಯೆ ಸಮನಿಸಿರ್ಪಂತಿರೆ ಸ।
ನ್ಮಾನಿನಿಯೇಚಲದೇವಿ ಮ। ನೋನಯನಪ್ರೀತಿ ಸಮನಿಸಲ್ ಸಮನಿಸಿದಳ್॥380॥

ಮೊಗಸಿರಿ ಲಕ್ಷ್ಮಿಗೆ ವಾಗ್ದೇ। ವಿಗೆ ಬುದ್ಧಿ ನಿಜೇಶ್ವರಂಗೆ ಹಿತಸಿದ್ಧಿಯೆನಲ್।
ಸೊಗಯಿಸಿರೆ ರೂಪು ಮತಿಕಾ। ರ್ಯಗತಿ ಬೆಡಂಗಮರ್ದುದಾ ಮಹಾಸತಿಗೆಂತುಂ॥381॥

ವಿಷ್ಣುವರ್ಧನ

ಪಿಂಗದೆ ತೋಳೊಳ್ ಕೊರ್ವಿ ಮ। ಲಂಗಿರೆ ಜಯಲಕ್ಷ್ಮಿ ಲಕ್ಷ್ಮಿ ವರ್ಧಿಸೆ ಸುಟ್ಟಂ।
ಗಂಗರ ಕುಱುಪಿನ ಪುರಮಂ। ತುಂಗಬಳಂ ವಿಷ್ಣುವೆಂಬ ಭುಜಬಳಗಂಗಂ॥382॥

ಎಲೆ ಕಾವೇರಿಯ ವಾರಿ ಕೂಡೆ ಪೊಲಸಾದತ್ತೆಂದು ಪೇಪ್ಪೆಸುತುಂ।
ಕೆಲದೊಳ್ ಕೂಪಜಳಾಶಿಯುಪ್ಪಿನೆಗಮಾ ರಾಜೇಂದ್ರಚೋಳಂ ಭುಜಾ॥
ಬಲದಿಂ ವಿಷ್ಣು ತದೀಯಸೇನೆಯ ಪೆಣಂಗಳ್ ತನ್ನದೀಪೂರದೊಳ್।
ಕಲಸಲ್ ವಿಕ್ರಮಕೇಳಿಯಿಂ ಮೆಱೆದನತ್ಯುಗ್ರಪ್ರತಾಪೋದಯಂ॥383॥

ಶರಣೆನ್ನೆನ್ನೀಶನಂ ವಾರಿಧಿಯೊಳಕಟ ಮೈನಾಕ ನೀವರ್ಕ್ಕಿವೋಲ್ ಪೊ।
ಕ್ಕಿರವೇಡಾ ವಜ್ರಿಗಿನ್ನಂಜದಿರಧಿಕಬಳಂ ಕಾದಪಂ ನಿನ್ನನೆಂದಾ॥
ದರದಿಂ ಭೀತಾದ್ರಿಯಂ ತನ್ನಯ ವಿಮಳಯಶೋಲಕ್ಷ್ಮಿ ಕಾರುಣ್ಯದಿಂದಂ।
ಕರೆವಂತಂಭೋಧಿಯಂ ಪೊರ್ದಿರೆ ಸೊಗಯಿಸಿದಂ ಜಿಷ್ಣು ವಿಷ್ಣುಕ್ಷಿತೀಶಂ॥384॥

ಶರಣೆಂಗಾ ಚಂದ್ರನಿಂ ಚಂದನದಿನತಿಶಯಂ ಶೀತಳಂ ನಿರ್ಮಳಂ ಮ।
ಚ್ಚರವೆಂಗಾ ರುದ್ರನುದ್ರೇಕದೆ ಕೆದಱಿಪನಂದುಂಡುದಂ ನಂಜನೆಂಬಂ॥
ತಿರೆ ತೋರ್ಕುಂ ತನ್ನ ಕಾಯ್ಪಂ ಮಲೆಯದರಿನೃಪಂ ಕಾಣ್ಗೆ ಮೇಣ್ ಕಾದುಗೆಂತುಂ।
ಪಿರಿಯಂ ಪೇಱ್ ಮಾಣ್ಬನೇ ತೋಱದೆ ನಿಜಗುಣಮಂ ಜಿಷ್ಣು ವಿಷ್ಣು ಕ್ಷಿತೀಶಂ॥385॥

ಇವನೀ ದಕ್ಷಿಣಬಾಹುದಂಡದೊಳೊಡಂಬುಟ್ಟಾಗಿ ತೋಱುರ್ಪ ಮೆ।
ತ್ತವೊಲಾಯ್ತಾದಿವರಾಹನೆತ್ತಿದ ಧರಿತ್ರೀಮಂಡಳಂ ತೇಜದಿಂ॥
ದವರಲ್ದಂಬುಜದಂತಿರಂಬರದೊಳಿರ್ದತ್ತುಷ್ಣರುಙ್ಮಂಡಳಂ।
ಸವನೇ ಸಾಹಸದೊಳ್ ನಳಾದಿನರಪಾಳರ್ ವಿಷ್ಣುಭೂಪಾಳನೊಳ್॥386॥

ದೆಸೆಗಳನೊತ್ತಿಕೊಂಡ ಧನದಿಂದಮಿವಂ ಸಲೆ ಮಾಡುವಧ್ವರ।
ಪ್ರಸರದೊಳಂಜುತುಂ ಹವಿಗೆ ನೀಡುವ ಶಕ್ರನ ಕೆಯ್ಯ ಕಂಪಮುಂ॥
ಪ್ರಸರಿಪ ಧೂಮಸಂಚಯದೆ ಕಾಡಿಗೆಗೊಳ್ವ ಸರೋಜಜಾಂಡಮುಂ।
ಬೆಸಗೊಳವೇಡ ವಿಷ್ಣು ಪುರುಷೋತ್ತಮನೆಂದಿವು ತಾವೆ ಪೇೞವೇ॥387॥

ಪದುಳಂ ನಿಂದಂತುಮಿಂತುಂ ನಿಮಿರ್ವ ನೆಲಕೆ ಬೇರಿರ್ಪವೋಲಿರ್ಪ ತೋಳ್ ಸೊ।
ರ್ಕದ ವೀರಶ್ರೀಗೆ ಸೊರ್ಕೇಱಿಸುವ ಮಸಕಮಂ ಪೆತ್ತ ಬಾಳ್ ದಿಗ್ಗಜಾನೀ॥
ಕದ ಮೆಯ್ಯಂ ಸ್ಮಯ್ಯುಮಂ ಬೆಚ್ಚನಿಪ ಬಿಸಿಯ ತೇಜಂ ಪೊದಟ್ದಿರ್ಪಿನಂ ಕೊ।
ರ್ವಿದ ರಾಜ್ಯಶ್ರೀಯುಮಾಯುಂ ತನಗೆ ದೃಢಮೆನಲ್ ವಿಷ್ಣು ರೋಚಿಷ್ಣುವಾದಂ॥388॥

## 85 ಮಳವಳ್ಳಿ 31 [1117]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಾಪ್ರಧಾನ ಗಂಗರಾಜನು ಚೋಳರನ್ನು ಜಯಿಸಿ ದೊರೆಯಿಂದ ತಿಪ್ಪೂರನ್ನು ಪಡೆದು ಒಬ್ಬ ಜೈನಗುರುವಿಗೆ ಕೊಟ್ಟಂತೆ ಹೇಳಿದೆ.

ವಿನಯಾದಿತ್ಯ

*ಅದಱೊಳ್ ಕೌಸ್ತುಭದೊಂದನರ್ಘ್ಯಗುಣಮಂ ದೇವೇಭದುದ್ದಾಮಸ।
ತ್ವದಗುರ್ವಂ ಹಿಮರಶ್ಮಿಯುಜ್ವಳಕಳಾಸಂಪತ್ತಿಯಂ ಪಾರಿಜಾ॥
ತದುದಾರತ್ವದ ಪೆಂಪನೊರ್ವನೆ ನಿತಾಂತಂ ತಾಳ್ದಿ ತಾನಲ್ತೆ ಪು।
ಟ್ಟಿದನುದ್ವೇಜಿತವೀರವೈರಿ ವಿನಯಾದಿತ್ಯಾವನೀಪಾಲಕಂ॥389॥

ಮದವದ್ಭೂಪಬಲಾಂಧಕಾರಹರಣಂ ತೇಜೋಧಿಕಂ ಸಂತತಾ।
ಭ್ಯುದಯಂ ಸಂಹೃತವಿದ್ವಿಷತ್ಕುವಳಯಶ್ರೀಕಂ ಸುಹೃಚ್ಚಕ್ರಸ॥
ಮ್ಮದಸಂಪಾದನಹೇತು ಸತ್ಪಥಗತಂ ಪದ್ಮೋದ್ಭವೋದ್ಭಾವಕಂ।
ವಿದಿತಾರ್ಥಾನುಗನಾಮನಲ್ತೆ ವಿನಯಾದಿತ್ಯಾವನೀಪಾಲಕಂ॥390॥

ಗಂಗರಾಜನ ಶೌರ್ಯ

ಇತ್ತಣ ಭೂಮಿಭಾಗದೊಳಗನ್ಯರದೇಕೆ ಭವತ್ಪ್ರತಾಪಸಂ।
ಪತ್ತಿಯ ವರ್ಣನಾವಿಧಿಗೆ ಗಂಗಚಮೂಪ ಜಿಗೀಷುವೃತ್ತಿಯಿಂ॥
ದೆತ್ತಿದ ನಿನ್ನ ಕೆಯ್ಯ ನಿಶಿತಾಸಿಯ ತೌಮೊನೆ ಬೆನ್ನ ಬಾರನೆ।
ತ್ತುತ್ತಿರೆ ಪೋಗಿ ಕಂಚಿ ಗುಱಿಯಪ್ಪಿನಮೋಡಿದ ದಾಮನೆಯ್ದನೇ॥391॥

## 86 ಬೇಲೂರು 16 [ಸು. 1117]

ಈ ಶಾಸನವು ಅಸಮಗ್ರವಾಗಿದೆ. ಇದು ಹೊಯ್ಸಳರಾಜನಾದ ವಿಷ್ಣುವರ್ಧನ ಇವನ ಮಹಿಷಿ ಶಾಂತಲೆ ಇವರ ಸ್ತುತಿರೂಪವಾಗಿದೆ.

* ಅದಱೊಳ್=ಹೊಯ್ಸಳವಂಶಾಬ್ಧಿಯಲ್ಲಿ

ವಿನಯಾದಿತ್ಯ

ಕೊಂಕಣೆಗರಿವನ ಖಡ್ಗದ। ಕಂಕಣಮದೆ ನಮ್ಮನೆಲವೊ ಮುಟುಗಿಸುಗೆನುತುಂ।
ಭೋಂಕಲ್ ಕೆದಱುವಿನಂ ನಿ। ಶ್ಯಂಕಂ ಪರಿಯಿಟ್ಟನಲ್ತೆ ವಿನಯಾದಿತ್ಯಂ॥392॥
ಮಲೆಯುರಸುಮಕ್ಕಳಿಲ್ಲಂ। ತಲೆಯುಂ ತಡವುತ್ತುಮೆಯ್ದೆ ಪಾದಾಂಬುಜಮಂ।
ತಲೆಯೊಳ್ ತಳೆವಿನೆಗಂ ಭುಜ। ಬಳಮಂ ತಳೆದಿರ್ಪನಲ್ತೆ ವಿನಯಾದಿತ್ಯಂ॥393॥

ಯುಗಸಾಮರ್ಥ್ಯದೆ ಮುನ್ನಂ। ನೃಗನಹುಷಾದಿಗಳೊಳಾದ ಗುಣಮೇಂ ಗುಣಮೇ।
ವಿಗಿಲಾರ್ತಂ ಗುಣದಿಂ ಕಲಿ। ಯುಗಸಾಮರ್ಥ್ಯಮುಮನಲೆದು ವಿನಯಾದಿತ್ಯಂ॥394॥

ವಿಷ್ಣುವರ್ಧನನ ಮಹಿಷಿ ಶಾಂತಲೆ

ಪತಿಭಕ್ತಿ ಭವದ್ವಯಕಂ। ಹಿತಮೆಂಬುದನಱಿದು ವಿನಯದಿಂ ವಿಷ್ಣುಮಹೀ।
ಪತಿಯುಂ ಮೆಚ್ಚಿಸುತೆ ಮಹಾ।ಸತಿ ಶಾಂತಲದೇವಿ ಪಟ್ಟಮಂ ಧರಿಯಿಸಿದಳ್॥395॥

## 87 ಸೊರಬ 325 [1118]

ಇದರಲ್ಲಿ ಚಾಲುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಚಟ್ಟಗಾವುಂಡನು ಭಾರಂಗಿಯಲ್ಲಿ ಮಲ್ಲಿಕಾರ್ಜುನ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಸಮುದ್ರ

ಮಕರವ್ರಾತಾಭಿಘಾತೋಚ್ಚಲಿತಕಮಠಸಂಘಟ್ಟಸಂಸ್ಪರ್ಧಿ ಮೀನ।
ಪ್ರಕರಪ್ರಕ್ಷೋಭಿತೋದ್ಯತ್ತರಳತರತರಂಗೋತ್ಕರಕ್ಷಿಪ್ತಮುಕ್ತಾ॥
ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದವಿರಳೋತ್ತಾಳಕಲ್ಲೋಳಮಾಳಾ।
ಧಿಕಸ...ರ್ಷಪ್ರಬಳಘನಘನಧ್ವಾನರೌದ್ರಂ ಸಮುದ್ರಂ॥396॥

ಅದು ನಾನಾನಕ್ರಚಕ್ರಕ್ರಮಕರಿಮಕರೋಡ್ಡೀನಪಾಠೀನಪುಚ್ಛ।
ಚ್ಛದವಾತಾಘಾತಭೀತಾಚಳಚಳನಚಳತ್ತುಂಗರಂಗತ್ತರಂಗೌ॥
ಘದುರಂತಪ್ರಾಂತಮುಜ್ಜೃಂಭಿತಬಹಳತಡಿಜ್ಜಾಳಲೀಲಾವಿನೀಳಾಂ।
ಬುದಬಿಂಬಾಡಂಬರಂ ಕಣ್ಗೆಸೆವುದು ಲಹರೀಲೋಳಬಾಳಪ್ರವಾಳಂ॥397॥

ಅನಂತಚಮೂಪ

ಶಾರದನೀರದಂ ಪುದಿದುದೋ ನಭಮಂ ಸುತನಂ ಸುಧಾಂಶುವಂ।
ಕ್ಷೀರಗಭೀರನೀರಧಿ ನಿರೀಕ್ಷಿಸಲೆಂದಿರದೆಯ್ದೆವಂದು ನಿಂ॥

ದೀ ರಸೆಯಿಂ ನಭಕ್ಕೊಗೆಯಲಿರ್ದುದೊ ಪೇಟೆನಿಪುದ್ಧ್ಯಕೀರ್ತಿವಿ।
ಸ್ತಾರನನೆಯ್ದೆ ಬಣ್ಣಿಪುದನಂತಚವಮೂಪನನೀ ಜಗಜ್ಜನಂ॥398॥

ಚಟ್ಟಿ

ಚಟ್ಟಂ ಪರವನಿತೆಯುರಂ। ಮುಟ್ಟಂ ವಿತರಣಮನಮರಭೂರುಹದೊಳ್ ಕೋ।
ಡಿಟ್ಟಂ ಪಾಪದ ಪಥಮಂ। ಮೆಟ್ಟಂ ಶಾಶ್ವತಪದಕ್ಕೆ ಕಳಸಮನಿಟ್ಟಂ॥399॥

## 88 ನಾಗಮಂಗಲ 19 [1118]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಾಪ್ರಧಾನ ಗಂಗರಾಜನು ಬಿಂಡಿಗನವಿಲೆಯ ತೀರ್ಥಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯನಂದಿ

ನಾಡೊಳಗಿದೆಸೆದ ಗೋಸನೆ। ಬಾಡಂಗಳ್ಗಿಱಗಿದಂದೆ ಮುನಿ ವನಿತೆಯರೊಳ್।
ಕೂಡಿದನೆಂಬೀ ನುಡಿಯುದ। ನೇಡಿಪುದೆಲೆ ವಿನಯನಂದಿದೇವರ ಚರಿತಂ॥400॥

ಪಾಲ್ಯಕೀರ್ತಿ

ಅತಿಶಯಮಾಗೆ ದಾನದೊಳೆ ಬೇರ್ವರಿದೊಳ್ಪು ನಯೋಕ್ತಿಯೆಂಬ ಸ।
ನ್ಮತಿಯೊಳೆ ಪುಟ್ಟಿ ಶಾಸ್ತ್ರದೊಳೆ ದಾಂಗುಡಿವೋಗಿ ವಿಶೇಷಮುಪ್ಪ ಸ।
ನ್ನುತಗುಣದೋಳಿಯಿಂದೆ ಮಡಲಾಗಿ ದಿಗಂತಮುನೆಯ್ದಿ ಪಲ್ಲಪಂ।
ಡಿತರ ವಿಳಾಸಕೀರ್ತಿಲತೆ ಪರ್ವಿದುದುರ್ವಿಗೆ ಚೋದ್ಯಮಪ್ಪಿನಂ॥401॥

ಸುರಕರಿಯ ಕಾಮಧೇನುವ। ಶರದಭ್ರದ ಕಾಂತಿಯುಂ ಪುದುಂಗೊಳಿಸುತ್ತುಂ।
ಶರದಮಳಚಂದ್ರಬಿಂಬದ। ದೊರೆಗೆ ಮಿಗಿಲ್ ಪಾಲ್ಯಕೀರ್ತಿದೇವರ ಕೀರ್ತಿ॥402॥

ದಾನಮಪರಿಮಿತದೊಳ್ಪಭಿ। ಮಾನಂ ಸತ್ಕವಿತೆ ಶಾಸ್ತ್ರನಿಪುಣತೆ ಕೀರ್ತಿ।
ಸ್ಥಾನಮೆನೆ ಸಂದರೀಗಳ್। ದಾನಿಗಳಭಿಮಾನದಾನಿಗಳ್ ವಸುಮತಿಯೊಳ್॥403॥

ಏವೊಗಟ್ಟುವದಣ್ಣ ವಿಬುಧಜ। ನಾವಳಿಗಂ ಬೇಡಿದರ್ಥಿಜನಕಂ ನಿಚ್ಚಂ।
ದೇವತರು ಕುಡುವ ತೆಱದಂ। ತೀವರ್ ಸಲೆ ಪಲ್ಲಪಂಡಿತರ್ ವಸುಮತಿಯೊಳ್॥404॥

ಪುಡವಿಯೊಳಗ್ಗಳಂ ನೆಗಟ್ದ ದಾನಿಗಳಿನ್ನಿವರನ್ನರಾರೊ ಪೇಟ್।
ನುಡಿಯುದಿರಾರುಮಂ ಮರುಳೆ ಕಲ್ಪಮಹೀಜದ ಕೋಡಿನಂತೆ ಕೋ॥
ಡುಡುಗದೆ ನಗ್ನಭಗ್ನನಟಗಾಯಕದೀನಜನಕ್ಕೆ ಸಂತೊಸಂ।
ಬಡೆ ಕುಡುತಿರ್ಪ ಪೆಂಪಿನಳವಚ್ಚರಿಯಾಯ್ತಭಿಮಾನದಾನಿಯೊಳ್॥405॥

## 89 ಶ್ರವಣಬೆಳ್ಗೊಳ 73 [1118]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಯಕ ಗಂಗರಾಜನು ದೊರೆಯಿಂದ ಪರಮ ಎಂಬ ಗ್ರಾಮವನ್ನು ಬೇಡಿ ತನ್ನ ತಾಯಿ ಪೋಚಲದೇವಿಯೂ, ಹೆಂಡತಿ ಲಕ್ಷ್ಮೀದೇವಿಯೂ ಬೆಳ್ಗೊಳದಲ್ಲಿ ಮಾಡಿಸಿದ ಬಸದಿಗಳಿಗೆ ಬಿಟ್ಟಂತೆ ಹೇಳಿದೆ.

ಗಂಗರಾಜನ ತಂದೆ ಏಚ

ವಿತ್ರಸ್ತಮಳಂ ಬುಧಜನ। ಮಿತ್ರಂ ದ್ವಿಜಕುಳಪವಿತ್ರನೇಚಂ ಜಗದೊಳ್।
ಪಾತ್ರಂ ರಿಪುಕುಳಕಂದಖ। ನಿತ್ರಂ ಕೌಂಡಿನ್ಯಗೋತ್ರನಮಳಚರಿತ್ರಂ॥406॥

ಇವನ ಹೆಂಡತಿ ಪೋಚಿಕಬ್ಬೆ

ಉತ್ತಮಗುಣತತಿ ವನಿತಾ। ವೃತ್ತಿಯನೊಳಕೊಂಡುದೆಂದು ಜಗಮೆಲ್ಲಂ ಕೆ।
ಯ್ಯೆತ್ತುವಿನಮಮಳಗುಣಸಂ। ಪತ್ತಿಗೆ ಜಗದೊಳಗೆ ಪೋಚಿಕಬ್ಬೆಯೆ ನೋಂತಳ್॥407॥

ಗಂಗರಾಜ

ತೆಗೆ ವಾರುವಮಂ ಹಾರುವ। ಬಗೆಯಂ ತನಗಿರುಳ ಬವರಮೆನುತೆ ಸವಂಗಂ।
ಬುಗುವ ಕಟಕಿಗರನಳಿಜಿಂ। ಪುಗಿಸಿದುದು ಭುಜಾಸಿ ಗಂಗದಂಡಾಧಿಪನಾ॥408॥

ಗಂಗವಾಡಿಯ ಬಸದಿಗಳೆನಿತೊಳವನಿತುಮಂ ತಾನೆಯ್ದೆ ಪೊಸಯಿಸಿದಂ।
ಗಂಗವಾಡಿಯ ಗೊಮ್ಮಟದೇವರ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ॥
ಗಂಗವಾಡಿಯ ತಿಗುಳರಂ ಬೆಂಕೊಂಡು ವೀರಗಂಗಂಗೆ ನಿಮಿರ್ಚಿ ಕೊಟ್ಟಂ।
ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ನೂರ್ಮಡಿ ಧನ್ಯನಲ್ತೇ॥409॥

ಎತ್ತಿದನೆಲ್ಲಿಗಲ್ಲಿ ನೆಲೆವೀಡನೆ ಮಾಡಿದನೆಲ್ಲಿಗಲ್ಲಿ ಕಣ್।
ಪತ್ತಿದುದೆಲ್ಲಿಗಲ್ಲಿ ಮನಮಾವೆಡೆಗೆಯ್ದಿದುದೆಲ್ಲಿಗಲ್ಲಿ ಸಂ॥
ಪತ್ತಿನ ಜೈನಗೇಹಮನೆ ಮಾಡಿಸೆ ದೇಶದೊಳಲ್ಲಿಗಲ್ಲಿಗೆ।
ತ್ತೆತ್ತಲುಮಾವಗಂ ಪಟಿಯ ಮಾಟ್ಕೆವೊಲಾದುದು ಗಂಗರಾಜನಿಂ॥410॥

## 90 ಶ್ರವಣಬೆಳ್ಗೊಳ 351 [1119]

ಇದರಲ್ಲಿ ದಿವಾಕರಣಂದಿಯ ಶಿಷ್ಯೆ ಶ್ರೀಮತಿಗಂತಿ ಸನ್ಯಸನವಿಧಿಯಿಂದ ಮುಡಿಪಿದಳೆಂದು ಹೇಳಿದೆ.

ದಿವಾಕರಣಂದಿ

ಅಂತೆನಲಿಂತೆನಲ್ಕಱಿಯೆನೆಯ್ದೆ ಜಗತ್ತ್ರಯವಂದ್ಯರಪ್ಪ ಪೆಂ।
ಪಂ ತಳೆದಿರ್ದರೆಂಬುದನೆ ಬಲ್ಲೆನದಲ್ಲದೆ ಸಂಯಮಂ ಚರಿ॥
ತ್ರಂ ತಪಮೆಂಬಿವತ್ತಳಗಮಿಂತು ದಿವಾಕರಣಂದಿದೇವಸಿ।
ದ್ಧಾಂತಿಗರ್ಗೆಂದೊಡೊಂದು ರಸನೋಕ್ತಿಯೊಳಾನದನೆಂತು ಬಣ್ಣಿಪೆಂ॥411॥

ಮಳಧಾರಿದೇವ

ನೆಱೆಯೆ ತನುತ್ರಮಿಕ್ಕಿದವೊಲಿರ್ದ ಮಲಂ ತಿಸೆ ಮೆಯ್ಯನೊರ್ಮೆಯುಂ।
ತುಱಿಸುವುದಿಲ್ಲ ನಿದ್ದೆವರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ॥
ಕಿಱುತೆಱೆಯೆಂಬುದಿಲ್ಲುಗುಬ್ಬುದಿಲ್ಲ ಮಲಂಗುವುದಿಲ್ಲಹೀಂದ್ರನುಂ।
ನೆಱವನೆ ಬಣ್ಣಿಸಲ್ ಗುಣಗಣಾವಳಿಯಂ ಮಳಧಾರಿದೇವರಾ॥412॥

ಶ್ರೀಮತಿಗಂತಿ

ಆ ಮುನಿ ದೀಕ್ಷೆಯಂ ಕುಡೆ ಸಮಗ್ರತಪೋನಿಧಿಯಾಗಿ ದಾನಚಿಂ।
ತಾಮಣಿಯಾಗಿ ಸದ್ಗುಣಗಣಾಗ್ರಣಿಯಾಗಿ ದಯಾದಮಕ್ಷಮಾ॥
ಶ್ರೀಮುಖಲಕ್ಷ್ಮಿಯಾಗಿ ವಿನಯಾರ್ಣವಚಂದ್ರಿಕೆಯಾಗಿ ಸಂತತಂ।
ಶ್ರೀಮತಿಗಂತಿಯರ್ ನೆಗಟ್ದರುರ್ವಿಯೊಳುರ್ವರೆ ಕೂರ್ತು ಕೀರ್ತಿಸಲ್॥413॥

## 91 ಕಡೂರು ತಾಲ್ಲೂಕು ಮಚ್ಚೇರಿಯ ಶಾಸನ [ಸು. 1120]

(ಮೈಸೂರು ಶಾಸನ ಇಲಾಖೆಯ ರಿಪೋರ್ಟು, 1925, 30ನೆಯ ಶಾಸನ)

ಇದರಲ್ಲಿ ಹೊಯ್ಸಳ ರಾಜನಾದ ವಿಷ್ಣುವರ್ಧನನ ಮಂತ್ರಿ ಬೊಪ್ಪದೇವ ಮೊದಲಾದವರು ಮಚ್ಚೇರಿಯ ಕಲಿದೇವರ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬೊಪ್ಪದೇವ

ಕಂ॥ ಆ ವಿಷ್ಣು ನೃಪನ ಮಂತ್ರಿ ಮ। ಹೀ ವಳಯಮನಾತ್ಮ ಧವಳ ಕೀರ್ತಿ ಪ್ರಭೆಯಿಂ॥
ತೀವಿ ಜಗಮೆಯ್ದೆ ಬಣ್ಣಿಸೆ। ಜೀವಿಸಿದಂ ಬೊಪ್ಪದೇವ ದಂಡಾಧೀಶಂ॥414॥

ಮ॥ ಸ್ರ॥ ತಿರೆಕಟ್ಟುತ್ತೊಂದನೊಂದಪ್ಪಳಿಸೆ ಪೊಳೆವ ನಾನಾ ವಿಧಾಂಭಶ್ಚರಂಗಳ್।
ಪರಿವಾ ಗಂಭೀರ ನೀರಾಕರಮನನಿತುಮಂ ರಾಮನೊಂದಂಬು ಪೀರ್ವಂ॥
ತಿರೆ ಪಾಂಡ್ಯಕ್ಷೋಣಿಪಾಳ ಪ್ರಬಳ ಬಳ ಪಯೋರಾಶಿಯಂ ತನ್ನ ಖಡ್ಗಂ।
ಭರದಿಂದಂ ಪೀರೆ ಗೆಲ್ದಂ ಜಗ ಬಿರುದ ರಘುಳಪ್ಪಂ ಚಮೂನಾಥ ಬೊಪ್ಪಂ॥415॥

## 92 ಚಿಕ್ಕಮಗಳೂರು 160 [1120]

ಈ ಅಸಮಗ್ರವಾದ ಶಾಸನದಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಪ್ರಧಾನರಾದ ಮರಿಯಾನೆ ದಂಡನಾಯಕ ಭರತದಂಡನಾಯಕರ ಸ್ತುತಿ ಇದೆ.

ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ

ಪರಿಜನಕಂ ಪುರಜನಕಂ। ಪರಮಾರ್ಥಂ ತಾನೆ ಪುಣ್ಯದೇವತೆಯೆನಲೇಂ।
ಧರೆಯೊಳ್ ನೆಗಟ್ದಳೊ ಕೆಳೆಯ। ಬ್ಬರಸಿ ಜನಾರಾಧ್ಯೆ ಭುವನವನಿತಾರತ್ನಂ॥416॥

ಬಲ್ಲಾಳ I

ಎನಿತಿತ್ತೊಡಮೆನಿತಿಱಿದೊಡ। ಮನಿತಾಪ್ಪುಂ ಕೂರ್ಪುಮಪ್ಪುವೇ ಪೆಱರ್ಗದು ಕೆ।
ಮ್ಮನೆ ನೋಡ ದಿಟಕೆ ಬಲ್ಲಾ। ಳನೃಪಾಳನೆ ಚಾಗಿ ಬಲ್ಲುದೇವನೆ ಬೀರಂ॥417॥

ವಿಷ್ಣುವರ್ಧನ

ಇನಿತುಂ ಕೋಪಾವಳೇಪಭ್ರುಕುಟಿ ನಿಟಿಲದೊಳ್ ಪುಟ್ಟೆ ತೆರ್ಪುತ್ತಿವಂ ತೊ।
ಪ್ಪೆನೆ ಮಾರ್ಪೊಯ್ಯುಂ ದಿಶಾಧೀಶರನಿದಿರ ದಿಶಾಧೀಶರೊಳ್ ತಾಗಿಕುಂ ತಿ॥
ಪ್ಪೆನಲಾಶಾದಂತಿಯೂಧಂಗಳನಿದಿರ ದಿಶಾದಂತಿಯೂಧಂಗಳೊಳ್ ಪು।
ಣ್ಮೆನೆ ತಾಳಂಗೊಡುಗುಂ ವ್ಯೋಮಮುಮನೆಳೆಯುಮಂ ವಿಷ್ಣು ಜಿಷ್ಣುಪ್ರಭಾವಂ॥418॥

ಮರಿಯಾನೆದಂಡನಾಯಕ

ಎಱಗಿ ಬುಧಮಧುಕರಂಗಳ್। ಪೆಱಪಿಂಗದೆ ತನ್ನನೆಂದುಮೋಲಗಿಪಿನೆಗಂ।
ಮಱಿಯಾನೆ ದಾನಗುಣಮೆಡೆ।ವಱಿಯದಿರಲ್ ಪತಿಗೆ ಪಟ್ಟದಾನೆಯೆನಿಪ್ಪಂ॥419॥

ಮಱುವಕ್ಕಮನೋಡಿಸಲುಂ। ನೆಱೆ ರಾಜ್ಯಶ್ರೀವಿಳಾಸಮಂ ಮೆಱೆಯಲುಮೀ।
ಮಱಿಯಾನೆ ನೆಱೆಗುಮೆಂದ। ಟ್ಕಱಿನೊಳ್ ಪತಿಮೆಚ್ಚಿ ಪಟ್ಟದಾನೆಯುಮಾದಂ॥420॥

ಉನ್ನತವಂಶನುತ್ಸವಕರೋತ್ತಮಭದ್ರಗುಣಾನ್ವಿತಂ ಜಗ।
ತ್ಸನ್ನುತದಾನಯುಕ್ತವಿಭವಂ ಮಱಿಯಾನೆ ರಿಪುಪ್ರಭೇದನೋ॥
ತ್ಪನ್ನಜಯಾಭಿರಾಮನೆನಗೀತನೆ ನಚ್ಚಿನ ಪಟ್ಟದಾನೆಯೆಂ।
ದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ॥421॥

ಎಱಗುವ ದಿವಿಜರ ಮಕುಟದ। ತುಱುಗಿದ ಮಾಣಿಕದ ತಣ್ಪೆಸಿಲ್ಗಳ ಪೊಳಪಿಂ।
ಮಿಱುಗುವ ಜಿನಪದನಖರುಚಿ। ಮಱಿಯಾನೆಗೆ ಮಾಟ್ಕೆ ಸಕಲಮಹಿಮಾಸ್ಪದಮಂ
॥422॥

ಭರತದಂಡನಾಯಕ

ತೊಳತೊಳಗಿ ಬೆಳಗಿ ಕೀರ್ತಿಯ। ವಳಯದಿನಳವಟ್ಟ ವಿಷ್ಣುಭೂಪನ ರಾಜ್ಯ।
ಸ್ಥಳಕೆ ಮಿಸುಪೆಸೆವ ಹೇಮದ। ಕಳಶಂ ಕೇವಳಮೆ ಭರತದಂಡಾಧೀಶಂ॥423॥

ಸಿರಿ ಪೊಸಮುತ್ತಿನೆಕ್ಕಸರದಂತಿರೆ ನಿನ್ನ ವಿಶಾಲವಕ್ಷದೊಳ್।
ಸರಸತಿ ವಕ್ತ್ರದೊಳ್ ತಿಲಕದಂತಿರೆ ವೀರರ ವೀರಲಕ್ಷ್ಮಿ ತೋ॥
ಳ್ವೆರಗಿನೊಳೊಪ್ಪೆ ರಕ್ಕೆವಣೆಯಂತಿರೆ ನಿರ್ಮಳಮಪ್ಪ ಕೀರ್ತಿಯುಂ।
ಭರತಚಮೂಪ ತಾಳ್ದು ಶಶಿಸೂರ್ಯಕುಳಾದ್ರಿಚಯಂಗಳುಳ್ಳಿನಂ॥424॥

ವಾರಿಧಿವೃತಭೂಲೋಕದೊ। ಳಾರಯಲೀವಿಜಿವ ಗುಣದೊಳಮಮಾ ಭರತಂ।
ಗಾರುಮಣಂ ತೊಣೆಯಲ್ಲರ।ಧೀರರ್ ಕಲಿಯುಗದೊಳೊಗೆದ ದಂಡಾಧೀಶರ್॥425॥

ಲೋಗರ ಮಾತವಂತಿರಲಿ ಮಾಣ್ ಭರತಂ ಮುನಿದೆತ್ತೆ ಮತ್ತೆ ಕೋ।
ಳ್ಪೋಗದ ವೈರಿದುರ್ಗಮುರಿದೇಟದ ವೈರಿಪುರಂಗಳೋಡಿ ಪಾ॥
ೞಾಗದ ವೈರಿದೇಶಮತಿಭೀತಿಯಿನುಳ್ಕುದನಿತ್ತು ತೆತ್ತುಮಾ।
ಳಾಗದ ವೈರಿವೀರರಣಮಿಲ್ಲ ದಲೀ ದೊರೆ ತತ್ಪರಾಕ್ರಮಂ॥426॥

ಮನೆಯೊಳ್ ಚಾಣಕ್ಯನಿಂದಂ ಮಿಗಿಲೆನಿಪ ಮಹಾಮಂತ್ರಿ ನಾನಾ ನಯಜ್ಞಂ।
ಮೊನೆಯೊಳ್ ಸೌಪರ್ಣನಿಂದಗ್ಗಳಮೆನಿಪ ಮಹಾವೀರನಭ್ಯಸ್ತಶಾಸ್ತ್ರಂ॥
ಮನೆಗಂ ಮಾಱಾಂತು ನಿಂದೊಡ್ಡಿದ ಮೊನೆಗಮಿದೇಂ ದಕ್ಷನೆಂದಟ್ಟಿಱಿಂದಾ।
ಳ್ದನೆ ತನ್ನಂ ಬಣ್ಣಿಸಲ್ಕೇಂ ನೆಗಟ್ದನೊ ಭರತಂ ಖಡ್ಗಕಾರ್ಯಾತಿಧುರ್ಯಂ॥427॥

ನಿರಪಾಯಂ ನಿಷ್ಕಳಂಕಂ ನಿಹತರಿಪುಕುಳಂ ನಿರ್ಭರಾಶಾಜಯಶ್ರೀ।
ಪರಿರಂಭಾರಂಭಶುಂಭತ್ಸುಖಮಯಮತಿತೀವ್ರಪ್ರತಾಪಪ್ರಕಾಶ॥
ಸ್ಫುರಿತಂ ಪದ್ಮಾಕರಾಬ್ಜಗ್ರಹಣಕಲಿತನಿತ್ಯೋದಯಂ ಲೋಕದೊಳ್ ಸು।
ಸ್ಥಿರಮಕ್ಕೀದೋರ್ಯಶಶ್ರೀರತ ಭರತ ಭವದ್ಭಾಗ್ಯಚಂಡಾಂಶುಬಿಂಬಂ॥428॥

## 93 ಶ್ರವಣಬೆಳ್ಗೊಳ 128 [1121]

ಇದರಲ್ಲಿ ಗಂಗರಾಜನ ಹೆಂಡತಿ ಲಕ್ಷ್ಮಿ ಸಾಯಲು ಅವಳಿಗೆ ಗಂಗರಾಜನು ನಿಸಿದಿಗೆಯನ್ನು ನಿಲಿಸಿದಂತೆ ಹೇಳಿದೆ.

ಲಕ್ಷ್ಮಿ

ಪರಮಪದಾರ್ಥನಿರ್ಣಯಮನಾಂತ ವಿದಗ್ಧತೆ ದುರ್ನಯಂಗಳೊಳ್।
ಪರಿಚಯಮೆಂದುಮಿಲ್ಲದತಿಮುಗ್ಧತೆ ತನ್ನನಿಯಂಗೆ ಚಿತ್ತದೊಳ್॥
ಪಿರಿದನುರಾಗಮಂ ಪಡೆವ ರೂಪು ವಿನೇಯಜನಾಂತರಂಗದೊಳ್।
ನಿರುಪಮಭಕ್ತಿಯಂ ಪಡೆವ ಪೆಂಪಿವು ಲಕ್ಷ್ಮಲೆಗೆಂದುಮನ್ವಿತಂ॥429॥

ಸೌಭಾಗ್ಯದೊಳಮುರ್ದಾದಂ। ಶೋಭಾಸ್ಪದಮಾದ ರೂಪಿನೊಳ್ಪಿಂ ಪ್ರತ್ಯ।
ಕ್ಷೀಭೂತಲಕ್ಷ್ಮಿಯೆಂದಪ್ರ। ದೀಭೂತಳಮಿನಿತುಮುಯ್ದ್ದೊ ಲಕ್ಷ್ಮೀಮತಿಯಂ॥430॥

ವಿತರಣಗುಣಮುದೆ ವನಿತಾ। ಕೃತಿಯಂ ಕೆಯ್ಕೊಂಡುದೆನಿಪ ಮಹಿಮೆಯ ಲಕ್ಷ್ಮೀ।
ಮತಿಯೆಲವೊ ದೇವತಾಧಿ। ಷ್ಠಿತೆಯಲ್ಲದೆ ಕೇವಳಂ ಮನುಷ್ಯಾಂಗನೆಯೇ॥431॥

## 94 ಶಿವಮೊಗ್ಗ 4 [1122]

ಇದರಲ್ಲಿ ಗಂಗರಾಜನಾದ ನನ್ನಿಯ ಗಂಗಪೆರ್ಮಾಡಿ ತನ್ನ ಅಜ್ಜ ಬರ್ಮದೇವನು ಮಾಡಿಸಿದ ಮಂಡಲಿಯ ಪಟ್ಟದ ತೀರ್ಥದ ಬಸದಿಯನ್ನು ಕಲ್ಲುವೆಸನಾಗಿ ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ರಕ್ಕಸಗಂಗ

ತೆಂಗನುಡಿದಡರ್ದು ಕಿೞ್ತಂ।ಕೌಂಗಂ ಮಿಡುಕದಿರಲೆಡದ ಕೆಯ್ಯೊಳ್ ಮದಮಾ।
ತಂಗಮನೆ ಪಿಡಿದು ನಿಲಿಸಿದ। ಗಂಗಂ ಸಾಮಾನ್ಯನೃಪನೆ ರಕ್ಕಸಗಂಗಂ॥432॥

### ಭುಜಬಳಗಂಗ

ಭುಜಬಳದಿಂ ಶತ್ರುಮಹೀ।ಭುಜಕುಜಮಂ ಕಿೞ್ತು ಮುತ್ತಿ ಕೋಂಟೆಗಳಂ ಕೊಂ।
ಡಜಿತಬಳನೆನಿಸಿ ನೆಗೞ್ದಂ। ಭುಜಬಳಗಂಗಕ್ಷಿತೀಶನವನಿಪತಿಳಕಂ॥433॥

### ನನ್ನಿಯಗಂಗ

ದೆಸೆಗಳನೆಯ್ದೆ ಪರ್ವಿದ ನೆಲಕ್ಕಿದೆ ತಾಂ ನೆಲಗಟ್ಟೆನಿಪ್ಪ ಬ।
ಲ್ಪೆಸೆವುದು ತೋಳೊಳೆಣ್ದೆಸೆಯ ಗಂಡರ ಮೀಸೆಯ ಮೇಲೆ ಮೇಲೆ ವ॥
ರ್ತಿಸುವುದು ಗಂಡಗರ್ವದ ಜಸಂ ಬಡಬಾಗ್ನಿಯ ಬಾಯನೆಯ್ದೆ ಬ।
ತ್ತಿಸುವುದು ತೇಜಮೇನಧಿಕನಾದನೊ ನನ್ನಿಯ ಗಂಗಭೂಭುಜಂ॥434॥

ಪದನಖದೊಳ್ ದಶಾನನತೆ ನಮ್ರನೃಪಾಳಿಮುಖಾಂಕದಿಂ ಜಯಾ।
ಸ್ಪದಭುಜದಲ್ಲಿ ಷಣ್ಮುಖತೆ ದುರ್ಜಯಶಕ್ತಿಧರತ್ವದಿಂ ಚತು॥
ರ್ವದನತೆ ವಕ್ತ್ರದೊಳ್ ಚತುರವಾಣಿಯಿನೊಪ್ಪಿರಲೆಂತು ನೋೞ್ಪೊಡ।
ಭ್ಯುದಯಮನೆಯ್ದಿದತ್ತು ಪಲವುಂ ಮುಖದಿಂ ತವೆ ಕೀರ್ತಿ ಗಂಗನೊಳ್॥435॥

ಮುನಿಸಿಂ ದಿಗ್ದಂತಿದಂತಂಗಳನವಯವದಿಂದೊತ್ತಿ ಬೇಗಂ ಛಳಿಲ್ಲೆಂ।
ಬಿನೆಗಂ ಕಿೞ್ತಿತ್ತನೇ ತಾರಗೆಗಳನದಟಿಂದಾಲಿಕಲ್ಲಂದದಿಂ ಸೂ॥
ಸನೆ ಪಾರ್ಥಿವ್ರಾತಮಂ ಸುಟ್ಟಿನೆ ತವುವಿನೆಗಂ ಪೀರನೇ ಕೋಪದಿಂ ಪೊ।
ಯ್ಯನೆ ಬೆಟ್ಟಂ ಪಿಟ್ಟುಪಿಟ್ಟಾಗಿರೆ ಸಮರದೊಳೀ ವೀರಪೆರ್ಮಾಡಿದೇವಂ॥436॥

ಗುಣನಂದಿ

ಎಳೆಗೆ ಗುಣರುಚಿಯಿನೊಳ್ಪ। ಗ್ಗಳಿಸಿರೆ ಗುಣರುಚಿವಿಕಾಸವಾಗ್ರಶ್ರಿಯಿನು।
ಜ್ಜಳಿಸೆ ವದನೇಂದು ಪೆಂಪಂ। ತಳೆದಂ ಗುಣನಂದಿದೇವಶಬ್ದಬ್ರಹ್ಮಂ॥437॥

ಪ್ರಭಾಚಂದ್ರ

ಚತುರಾಸ್ಯಂ ಚತುರೋಕ್ತಿಯಿಂ ಪ್ರಭುತೆಯಿಂದೀಶಂ ಗುಣವ್ಯಾಪಕ।
ಸ್ಥಿತಿಯಿಂ ವಿಷ್ಣು ಸುಬುದ್ಧಿವಿಸ್ತರತೆಯಿಂ ಬೌದ್ಧಂ ದಲೀ ಜೈನಪ॥
ದ್ಧತಿಯಿಂದಿದಿರ್ದುಮಿದೇಂ ವಿಚಿತ್ರತರಮೋ ಚಾತುರ್ಯಮಾಯ್ತಿಾಸಮು।
ನ್ನತಸಿದ್ಧಾಂತವಿಭೂಷಣಂಗೆನಿಸಿದಂ ಶ್ರೀಮತ್ಪ್ರಭಾಚಂದ್ರಮಂ॥438॥

ಬುಧಚಂದ್ರ

ವಸುಮತಿಗೊಳ್ಪುವೆತ್ತ ಧವಳಾತಪವಾರಣಮಾಗಿ ಕೀರ್ತಿ ನ।
ರ್ತಿಸುವುದು ಪೆಂಪುವೆತ್ತ ಮಹಿಮೋನ್ನತಿ ಮೇರುಗೆ ಮಂಡಪಂ ದಲಾ॥
ಗೆಸೆವುದು ಸದ್ಗುಣಪ್ರತತಿ ಮೌಕ್ತಿಕಮಾಲೆಯ ಲೀಲೆಯಂ ಸಮ।
ರ್ಥಿಸುವುದು ಸಜ್ಜನಕ್ಕೆ ಸಹಜಾತಮೆನಲ್ ಬುಧಚಂದ್ರದೇವರಾ॥439॥

ಕರಮಂ ವಾರುಣಿಗೆಂದು ನೀಡಿ ಪಿರಿದುಂ ನಿಸ್ತೇಜಮೆಯ್ದಿರ್ದ ತ।
ನ್ನಿರವಂ ನೋಡದೆ ಸತ್ಪದಪ್ರಭುತೆಯಂ ತಾಳ್ದಿರ್ಪ ದೋಷಾಕರಂ॥
ದೊರೆಯೇ ಪೇಟೆನುತುಂ ಕಳಂಕರಹಿತಂ ಸದ್ವೃತ್ತದಿಂದಂ ತಿರ।
ಸ್ಕರಿಪಂ ಚಂದ್ರನನೊಳ್ಪುವೆತ್ತ ಬುಧಚಂದ್ರಂ ಸಂತತೋತ್ಸಾಹದಿಂ॥440॥

ನುಡಿಗಳ್ ಸತ್ಯಸುವರ್ಣಭೂಷಣಗಣಂ ಚಿತ್ತಂ ಸುರತ್ನಂಗಳಂ।
ಮಡಗಿಟ್ಟಿರ್ಪ ಕರಂಡಕಂ ತನು ತಪಶ್ರೀಭಾಮಿನೀಭಾಸಿಯೆಂ॥
ದೊಡೆ ದುಷ್ಕೀರ್ತಿಯನಾಂತ ಮತ್ತಿನ ಶಠರ್ ದುರ್ಬೋಧರಸ್ಪೃಶ್ಯರೇಂ।
ಪಡಿಯೇ ಸದ್ಬುಧಸೇವ್ಯನಪ್ಪ ಬುಧಚಂದ್ರಖ್ಯಾತಯೋಗೀಂದ್ರನೊಳ್॥441॥

**95 ಹಾಸನ 116 [1122]**

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ತನ್ನ ಮಹಿಷಿ ಶಾಂತಲದೇವಿಗೆ ಸಲ್ಲುವ ಶಾಂತಿಗ್ರಾಮದ ಧರ್ಮೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ ವಿಷ್ಣುವರ್ಧನೋದಯಾದಿತ್ಯರು

ಶ್ರುತಿಕಥಿತಪಥದೊಳಮರ್ದಿರೆ। ಗತಿಗಳ್ ಶುದ್ಧಾತ್ಮತತ್ವದೊಳ್ ತಿಳಿದಿರೆ ಸ।
ನ್ಮತಿಗಳ್ ಪುಣ್ಯಾತ್ಮರಿವರ್। ಗತಿಗಂ ರಾಜ್ಯಕ್ಕಮೊಪ್ಪೆ ಭಾಜನಮಾದರ್॥442॥

## ಬಲ್ಲಾಳ ವಿಷ್ಣುವರ್ಧನರು

ಮದದಿನಿದಿರಾದ ಪಾಂಡ್ಯನ।ಮದಮಂ ನಿಜಖಡ್ಗಬಳದೆ ಕರ್ಚಿಯೆ ಕಳೆದೋ।
ವದೆ ರಾಜ್ಯಲಕ್ಷ್ಮಿಯಂ ಕೊಂ।ಡದಟರ್ ಕೇವಳಮೆ ವಿಷ್ಣುಬಲ್ಲಾಳನೃಪರ್॥443॥

ದೋರಸಮುದ್ರದಲ್ಲಿ ಜಗದೇವನ ಸೇನೆಯನಿಕ್ಕಿ ತಮ್ಮ ತೋಳ್।
ವೀರಸಮುದ್ರಮಾಗೆ ಜಯಲಕ್ಷ್ಮಿಗೆ ತದ್ಗಜವಕ್ತ್ರರಕ್ತಕಾ॥
ಶ್ಮೀರವಿಲೇಪನಂ ನೆಱಿ ತತ್ಪದಕಂಬೆರಸೆಯ್ದೆ ಕೊಂಡು ಭಂ।
ಡಾರಮನಾನೃಪರ್ ತಳೆದ ವೀರಮನಾರೊ ಗಭೀರಮೆನ್ನದರ್॥444॥

## ಬಲ್ಲಾಳ I

ಪರಮಾರಾಧ್ಯಂ ಮಹೇಶಂ ಕುಲವಧು ವಿಜಯಶ್ರೀ ನೆಲಂ ಪೋಷ್ಯವರ್ಗಂ।
ದೊರೆಗಳ್ ವೈವಾಹಸಂಬಂಧಿಗಳೆನೆ ನೆಗೞ್ದ ರಾಯರಂಭೋಜಜಾಂಡೋ॥
ದರದೊಳ್ ತೆಂಗಾಯ ನೀರಂತಿರೆ ತಿಳಿದ ಜಸಂ ತನ್ನ ಭಂಡಾರಮಾಗು।
ತ್ತಿರೆ ಬಲ್ಲಾಳಾವನೀಶಂ ಪೊಗೞೆ ಜಗಮಶೇಷಂ ಮಹತ್ವಕ್ಕೆ ನೋಂತಂ॥445॥

## ವಿಷ್ಣುವರ್ಧನ

ರವಿ ತೇಜೋಲತೆಯೊಳ್ ಪೊದೞ್ದ ಫಳಮೆಂಬಂತಿರ್ಪಿನಂ ಪೂರ್ಣಬಿಂ।
ಬವನುಳ್ಳಿಂದು ಯಶೋವಿಶಾಲಲತೆಯೊಳ್ ಪೂಗೊಂಚಲಂತಿರ್ಪಿನಂ॥
ಧವಳಚ್ಛತ್ರದ ತಣ್ಪು ಭೂಮಿಗಮರ್ದಿರ್ಪಂತಿರ್ಪಿನಂ ಕ್ಷತ್ರಧ।
ರ್ಮವಿಳಂಬಂ ಪೊಗೞ್ವಂಗಳುಂಬಮೆನಿಸಿತ್ತಾ ವಿಷ್ಣುಭೂಪಾಳನೊಳ್॥446॥

ಧುರದೊಳ್ ಮಾಱಾಂತರಂ ಕೊಂದಪನೆರೆದ ಜನಕ್ಕಿತ್ತಪಂ ಭೀತಿಯಿಂದಂ।
ಶರಣೆಂದಾರ್ ಬಂದೊಡಂ ಕಾದಪನಿದು ಪುಸಿಯೆಂಬುದ್ಧತರ್ ಕಾದಿ ನೋೞ್ಕೆ॥
ಚ್ಚರಿಯಿಂದಂ ಬೇಡಿ ನೋೞ್ಕಲ್ಲದೊಡೆ ಮಱೆಗೆವಂದಿರ್ದು ನೋೞ್ಕಿಟ್ಟಿ ಕೊಲ್ಲ್ಗಂ।
ಕರೆದೀಗುಂ ಕಾಗುಮೆಂತುಂ ಸೆಣಸುವದಟರಾರ್ ಪೊಯ್ಸಳಂಗಂ ಜವಂಗಂ॥447॥

## ಶಾಂತಲದೇವಿ

ಗಿರಿಜೆಯ ಪಾದಪದ್ಮವಿಗಳಜ್ಜಳದಿಂದಮೆ ಕೊರ್ಬಿ ನೀತಿ ವಿ।
ಸ್ತರಿಸಿರೆ ಸೊಂಪುವೆತ್ತು ಪುರುಷವ್ರತದಿಂ ದಳಮೋಱಿ ಭಾಗ್ಯಮಂ॥
ಜರಿಗಳನಾಂತು ರಂಜಿಸುವ ಶಾಂತಲದೇವಿಯ ರೂಪಕಲ್ಪವ।
ಲ್ಲರಿಯುಡರ್ದತ್ತು ವಿಷ್ಣುನೃಪನೆಂಬ ಸಮುನ್ನತಕಲ್ಪವೃಕ್ಷಮಂ॥448॥

ಸತತಂ ನೋೞ್ಪೊಡೆ ಲಕ್ಷ್ಮೀ ದೇವತೆ ರಣವ್ಯಾಪಾರದೊಳ್ ಖಡ್ಗದೇ।
ವತೆ ಬಿಣ್ಪಿಂದಮೆ ಭೂಮಿದೇವತೆ ಜನಕ್ಕೆಲ್ಲಿಂದದಿಂ ಪುಣ್ಯದೇ॥
ವತೆ ವಾಗ್ದೇವತೆ ವಿದ್ಯೆಯೊಳ್ ಸಕಲಕಾರ್ಯೋದ್ಯೋಗದೊಳ್ ಮಂತ್ರದೇ।
ವತೆ ನಾಥಂಗೆನೆ ಶಾಂತಿದೇವಿಯನದಿನ್ನೇವಣ್ಣಿಪಂ ಬಣ್ಣಿಪಂ॥449॥

ಬೆಸನಂ ಪತಿಹಿತದಲ್ಲಿಯೆ। ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗೞ್ದಾ।
ಬೆಸನಂ ನೋಂಪಿಗಳಲ್ಲಿಯೆ। ಬೆಸನಂಗಳ್ ಶಾಂತಿದೇವಿಯೊಳ್ ಪೆಱವೊಳವೇ॥450॥

ಪತಿಯ ಕಳಂಕಮನಾತ್ಮ। ದ್ಯುತಿಯಿಂದಪಹರಿಸಳೆಂದು ಸಲೆ ರೋಹಿಣಿಯುಂ।
ಪತಿಹಿತೆ ಶಾಂತಲದೇವಿಯು। ಸಿತಕೀರ್ತಿಜ್ಯೋತ್ಸ್ನೆಸಂತತಂ ನಗುತಿರ್ಕುಂ॥451॥

## 96 ಶ್ರವಣಬೆಳ್ಗೊಳ 132 [1123]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲದೇವಿ ಬೆಳ್ಗೊಳದಲ್ಲಿ ಸವತಿಗಂಧವಾರಣ ಬಸ್ತಿಯನ್ನು ಕಟ್ಟಿಸಿದಳೆಂದು ಹೇಳಿದೆ.

### ಎರೆಯಂಗ

ಅರಿಪುರದೊಳ್ ಧಗದ್ಧಗಿಲ ದಂಧಗಿಲೆಂಬುದರಾತಿಭೂಮಿಪಾ।
ಳರ ಶಿರದೊಳ್ ಗರಿಲ್ ಗರಿಗರೀಗರಿಲೆಂಬುದು ವೈರಿಭೂತಳೇ॥
ಶರ ಕುರುಳೊಳ್ ಚಿಮಿಲ್ ಚಿಮಿಚಿಮೀಚಿಮಿಲೆಂಬುದು ಕೋಪವಹ್ನಿ ದು।
ರ್ಧರತರಮೆಂದೊಡಳ್ಕುಱದೆ ಕಾದುವರಾರೆಱೆಯಂಗದೇವನೊಳ್॥452॥

### ವಿಷ್ಣುವರ್ಧನ

ಕೆಲರಂ ಕಿೞ್ತಿಕ್ಕಿ ಬೇರಂ ಬಿದಿರ್ದು ಕೆಲರನತ್ಯುಗ್ರಸಂಗ್ರಾಮದೊಳ್ ಬಾ।
ಳ್ದಲೆಗೊಂಡಾಕ್ಷೇಪದಿಂದಂ ಕೆಲರ ತಲೆಗಳಂ ಮೆಟ್ಟಿ ನಿಂದುಗ್ರಕೋಪಂ॥
ಮಲೆವತ್ಯುದ್ವೃತ್ತರಂ ತೊತ್ತುೞದುೞಿದು ನಿಜಪ್ರಾಜ್ಯಸಾಮ್ರಾಜ್ಯಮಂ ತೋ।
ಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ ವಿಷ್ಣು ಜಿಷ್ಣುಪ್ರತಾಪಂ॥453॥

### ಶಾಂತಲೆ

ಆ ನೆಗೞ್ದ ವಿಷ್ಣುನೃಪನ ಮ। ನೋನಯನಪ್ರಿಯೆ ಚಲಾಳಿನೀಲಾಳಕಿ ಚಂ।
ದ್ರಾನನೆ ಕಾಮನ ರತಿಯೊಳ್। ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವೀ॥454॥

ಧುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀ ವಕ್ಷದೊಳ್ ಸಂತತಂ।
ಪರಮಾನಂದದಿನೊತು ನಿಲ್ವ ವಿಪುಳಶ್ರೀ ತೇಜದುದ್ದಾನಿಯುಂ॥
ವರದಿಗ್ಭಿತ್ತಿಯನೆಯ್ದೆ ಪಸಲ್ ನೆಱೆವ ಕೀರ್ತಿಶ್ರೀಯೆನುತ್ತಿರ್ಪುದೀ।
ಧರೆಯೊಳ್ ಶಾಂತಲದೇವಿಯುಂ ನೆಱೆಯೆ ಬಣ್ಣಿಪ್ಪಾತನೇವಣ್ಣಿಪಂ॥455॥

## 97 ಶ್ರವಣಬೆಳ್ಗೊಳ 117 [1123]

ಇದರಲ್ಲಿ ಶುಭಚಂದ್ರದೇವನು ಸತ್ತಂತೆಯೂ, ಅವನ ಗುಡ್ಡ ದಂಡನಾಯಕ ಗಂಗರಾಜನು ನಿಸಿದಿಗೆಯನ್ನು ನಿಲಿಸಿದಂತೆಯೂ ಹೇಳಿದೆ.

ದಿವಾಕರಣಂದಿ

ವರಭವ್ಯಾನನಪದ್ಮಮುಳ್ಳಲರಲಜ್ಞಾನೀಕನೇತ್ರೋತ್ಪಳಂ।
ಕೊರಗಲ್ ಪಾಪತಮಸ್ತಮಂ ಪರೆಯಲೆತ್ತಂ ಜೈನಮಾರ್ಗಾಮಳಾಂ॥
ಬರಮತ್ಯುಜ್ಜ್ವಲಮಾಗಲೇಂ ಬೆಳಗಿತೋ ಭೂಭಾಗಮಂ ಶ್ರೀ ದಿವಾ।
ಕರಣಂದಿವ್ರತಿವಾಕ್‌ದಿವಾಕರಕರಾಕಾರಂಬೊಲುರ್ವೀನುತಂ॥456॥

ಗಂಡವಿಮುಕ್ತಮಳಧಾರಿದೇವ

ಗಂಡವಿಮುಕ್ತದೇವಮಳಧಾರಿಮುನೀಂದ್ರರ ಪಾದಪದ್ಮಮಂ।
ಕಂಡೊಡಸಾಧ್ಯಮೇಂ ನೆನೆದ ಭವ್ಯಜನಕ್ಕೆಮು ಕೊಂಡ ಚಂಡಮೇ॥
ದಂಡವಿರೋಧಿದಂಡನೃಪದಂಡಪತತ್‌ಪೃಥುವಜ್ರದಂಡಕೋ।
ದಂಡಕರಾಳದಂಡಧರದಂಡಭಯಂ ಪೆಱಪಿಂಗಿ ಪೋಗವೇ॥457॥

ಬಳಯುತರಂ ಬೞಲ್ಚುವ ಲತಾಂತಶರಂಗಿದಿರಾಗಿ ತಾಗಿ ಸಂ।
ಚಳಿಸೆ ಪಳಂಚಿ ತೂಳ್ದವನನೋಡಿಸಿ ಮೆಯ್ವಗೆಯಾದ ದೂಸಱಿಂ॥
ಕಳೆಯದೆ ನಿಂದ ಕರ್ಬುನದ ಕರ್ಗಿದ ಸಿಪ್ಪಿನಮರ್ಕೆವೆತ್ತ ಕ।
ತ್ತಳಮೆನಿಸಿತ್ತು ಪುತ್ತಡರ್ದ ಮೆಯ್ಯ ಮಳಂ ಮಳಧಾರಿದೇವರಾ॥458॥

ಶುಭಚಂದ್ರ

ಶುಭಚಂದ್ರಮುನೀಂದ್ರಯಶಃ। ಪ್ರಭೆಯೊಳ್ ಸರಿಯಾಗಲಾಱದಿಂತೀಚಂದ್ರಂ।
ಪ್ರಭೆದೆಗೆದು ಕಂದಿ ಕುಂದಿದ। ನಭವಶಿರೋಮಣಿಗದೇಕೆ ಕಂದುಂ ಕುಂದುಂ॥459॥

## 98 ತೇರ್ದಾಳದ ಶಾಸನ [1123]

(ಇಂಡಿಯನ್ ಆಂಟಿಕ್ವರಿ XIV, 15)

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಸಾಮಂತ ಗೊಂಕದೇವನು ತಾನು ಪ್ರತಿಷ್ಠಿಸಿದ ನೇಮಿನಾಥ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಅಂತ್ಯದಲ್ಲಿ ಅದೇ ದೇವರಿಗೆ ದಂಡನಾಯಕ ಭಾಯಿದೇವನು 1187ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಲೋಕನ ಮಗ ಎರಗ

ಆತನ ನಂದನಂ ಚಲದೊಳಾ ರಘುನಂದನನೇಕವಾಕ್ಯವಿ।
ಖ್ಯಾತಿಯೊಳರ್ಕನಂದನನನಿಂದಿತಶೌರ್ಯದೊಳಿಂದ್ರನಂದನಂ॥
ನೀತಿಯೊಳಬ್ಜನಂದನನೆನಿಪ್ಪ ಮಹತ್ವಮನಪ್ಪುಕೆಯ್ದನು।
ರ್ವೀತಳದೊಳ್ ಬುಧರ್ ಪೊಗಟಲಿಂತೆಱಗೋರ್ವಿವರಂ ನಿರಂತರಂ॥460॥

ಗೊಂಕ

ಅಡಸುವ ಕುತ್ತುವೊತ್ತರಿಪ ಮಿತ್ತು ಕಡಂಗುವ ಮಾರಿ ಕೊಯ್ವಿನಿಂ।
ತೊಡರ್ವ ವಿರೋಧಿ ಪಾಯ್ವ ಪುಲಿ ಪೊಯ್ವ ಸಿಡಿಲ್ ಪಿಡಿವುಗ್ರಪನ್ನಗಂ॥
ಸುಡುವ ದವಾಗ್ನಿಬಾಧೆ ಕಡೆಗಣ್ಬುವುದೆಂದೊಡೆ ತೇರಿದಾಳದೀ।
ಕಡುಗಲಿ ಗೊಂಕಭೂಪತಿಯ ಭವ್ಯತೆ ಕೇವಳಮೇ ನಿರೀಕ್ಷಿಸಲ್॥461॥

ಎತ್ತಿಸಿ ತೇರಿದಾಳದೊಳಗೊಪ್ಪೆ ಜಿನೇಶ್ವರಸದ್ಮಮಂ ಸಮಂ।
ತೆತ್ತಿಸಿದಂ ಜಯಧ್ವಜಮನುರ್ವಿಗೆ ದಿಙ್ಮುಖದಂತಿದಂತದೊಳ್॥
ತೆತ್ತಿಸಿದಂ ನಿಜಾಂಕಮಹಿಮಾಕ್ಷರಮಾಳಿಕೆಯುಂ ಗಡೆಂದೊಡೇ।
ನುತ್ತಮಭವ್ಯನೋ ಜಿನಮತಾಗ್ರಣಿ ಸದ್ಗುಣಿ ಗೊಂಕಭೂಭುಜಂ॥462॥

ಭಾಯಿದೇವನ ತಂದೆ ತೇಜಮ

* ಸಮುದಾರಿಕ್ಷಿತಿಭೃತ್ಕದಂಬಕದೊಳತ್ಯಾಭೀಳವಜ್ರಾಗ್ನಿತೇ।
ಜಮನುನ್ಮತ್ತಮಹೀಶವಂಶವನದೊಳ್ ದುರ್ವಾರದಾವಾಗ್ನಿತೇ।
ಜಮನನ್ಯೋರ್ವಿಪಸೈನ್ಯಸಾಗರದೊಳುದ್ಯದ್ಬಾಡಬೋಗ್ರಾಗ್ನಿತೇ।
ಜಮನೋರಂತಿರೆ ತೋಱಿ ವಿಶ್ವಧರೆಗಿಂತೀಗಂಡಪೆಂಡಾರನ।
ಶ್ರಮದಿಂದಂ ಮೆಱೆವಂ ನಿಜಪ್ರಬಳಬಾಹೂತೇಜಮಂ ತೇಜಮಂ॥463॥

* ಇದು ಪಂಚಪಾದ ವೃತ್ತ

ಭಾಯಿದೇವ

ಪರಭೂಭೃತ್ಕುಳಮಂ ತಗುಳ್ದು ಶರಣಾಯಾತರ್ಕಳಂ ಕಾದು ಪೂ।
ಣ್ದೆರೆದರ್ಗಿತ್ತು ಸಮಸ್ತದೇವಸದನಕ್ಕಂ ವಿಪ್ರಸಂಘಕ್ಕಮಾ।
ದರದಿಂ ಭೂಗೃಹದಾನಮಂ ದಯೆಯಿನಾದಂ ಮಾಡಿ ಕೀರ್ತ್ಯಂಗನಾ।
ವರನಾಗಲ್ ವಿಭು ಭಾಯಿದೇವಸಚಿವಂ ಬಲ್ಲಂ ಪೆಜರ್ ಬಲ್ಲರೇ॥464॥

ಕಡಲನೆಡಗಲಿಸಿ ಶೇಷನ। ಪೆಡೆಯೊಳ್ ದಿಕ್ಕುಂಭಿಕುಂಭದೊಳ್ ಸುರಸಭೆಯೊಳ್।
ಬಿಡದೆ ಕಲಿಭಾಯಿದೇವನ। ತೊಡವೆನಿಸಿದ ಕೀರ್ತಿ ನರ್ತಿಪಳ್ ನಲವಿಂದಂ॥465॥

ಫಲಸ್ತುತಿ

ಇದು ತಾನೈಹಿಕಪಾರಮಾರ್ಥಿಕ ಸುಖಕ್ಕಾವಾಸಮೀ ಧರ್ಮಮಿಂ।
ತಿದನುಲ್ಲಂಘಿಸಿದಾತನುಗ್ರನರಕೋದೀರ್ಣಾಂತಸಂವರ್ತಗ॥
ರ್ತದೊಳಾಟ್ಗುಂ ಪರಿರಕ್ಷೆಗೆಯ್ದವನುಪೇಂದ್ರಾಹೀಂದ್ರದೇವೇಂದ್ರಸಂ।
ಪದದೊಳ್ ಕೂಡುಗುಮಲ್ಲಿಯುಂ ಪಡೆಗುಮಾಕಲ್ಪಾಯುಮಂ ಶ್ರೀಯುಮಂ॥466॥

## 99 ಚೆನ್ನರಾಯಪಟ್ಟಣ 149 [1124]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಶ್ರೀಪಾಲತ್ರೈವಿದ್ಯನಿಗೆ ಬಸದಿಯನ್ನು ಮಾಡಿ ಶಲ್ಯಗ್ರಾಮವನ್ನು ಕೊಟ್ಟಂತೆ ಹೇಳಿದೆ.

ವಿನಯಾದಿತ್ಯ

ಯದುಕುಳಕುಳಾದ್ರಿಶಿಖರದೊ। ಳುದಯಿಸಿದಂ ದುರ್ನಿರೀಕ್ಷತೇಜೋಹೃತಸಂ।
ಪದರಾತಿರಾಜಮಂಡಲ। ನುದಾತ್ತಗುಣರತ್ನವಾರ್ಧಿ ವಿನಯಾದಿತ್ಯಂ॥467॥

ಎರೆಯಂಗ

ಆತನ ತನಯಂ ಸಕಳಮ। ಹೀತಳಸಾಮ್ರಾಜ್ಯಲಕ್ಷ್ಮಿಯುಂ ತನಗೇಕ।
ಶ್ವೇತಾತಪತ್ರಮಾಗೆ ಪು। ರಾತನನೃಪರೆಣೆಗೆ ವಂದನೆಱೆಯಂಗನೃಪಂ॥468॥

ವಿಷ್ಣುವರ್ಧನ

ನೆನೆಯಲ್ ಪಾಪಕ್ಷಯಂ ನೋಡಿದೊಡಭಿಮತಸಂಸಿದ್ಧಿ ಸದ್ಭಕ್ತಿಯಿಂದಂ।
ಮನವೊಲ್ದಾರಾಧಿಸಲ್ಕಾ ಸುಕೃತದೊದವನೇವೇಳ್ವುದೆಂಬನ್ನೆಗಂ ಮು॥
ನ್ನಿನ ಪುಣ್ಯಂ ವೀರರಪ್ಪಾ ನಳನಹುಷರೊಳನ್ಯೂನನಾದಂ ಜಗತ್ಪಾ।
ವನಸತ್ಯತ್ಯಾಗಶೌಚಾಚರಣಪರಿಣತಂ ವೀರವಿಷ್ಣುಕ್ಷಿತೀಶಂ॥469॥

ಅದಿಯುಮನೋಡಿದೋಟಮನೆ ಜಿೋಡಿಸಿ ಕಲ್ತು ನೃಸಿಂಹವರ್ಮನೋ।
ಡಿದನವನೋಟಮಂ ಗುಣಿಸಿ ಚೆಂಗಿರಿ ಚೆಂಗಿರಿಯಲ್ಲಿ ಕಲ್ತು ಕೊಂ॥
ಡದಟಿನ ಕೊಂಗರಾ ನೆಗಟ್ದು ಕೊಂಗರನೀಕ್ಷಿಸಿ ಪಾಂಡ್ಯನೋಡಿದಂ।
ಯದುತಿಳಕಂಗೆ ವಿಷ್ಣುಧರಣೀಪತಿಗೋಡದರಾರ್ ಧರಿತ್ರಿಯೊಳ್॥470॥

ಶ್ರೀಪಾಲತ್ರೈವಿದ್ಯ

ಹೃದ್ಯ ಸ್ಯಾದ್ವಾದಭೂಭೃದ್ಭವನನುಪಮಷಟ್ತರ್ಕಭಾಸ್ವನ್ನಖಂ ಪಾ।
ಯ್ದುದ್ಯದ್ದರ್ಪಾಂಧವಾದಿದ್ವಿರದನಘಟೆಯಂ ವಿಕ್ರಮಪ್ರೌಢಿಯಿಂದಂ॥
ವಿದ್ಯಾಸಿಂಹೀರತಿವ್ಯಾಪ್ತಿಯೊಳೆ ಸುಖಿಯಿಸುತ್ತಿರ್ಪುದುತ್ಸಾಹದಿಂ ತ್ರೈ।
ವಿದ್ಯಶ್ರೀಪಾಲಯೋಗೀಶ್ವರನೆನಿಪ ಮಹಾವಾದಿಮತ್ತೇಭಸಿಂಹಂ॥471॥

ತಮಗಾಜ್ಞಾವಶಮಾದುದುನ್ನತಮಹೀಭೃತ್ಕೋಟಿ ತಮ್ಮಿಂದೆ ಬಿ।
ಣ್ಪಮರ್ದತ್ತೀಧರೆಗೆಯ್ದೆ ತಮ್ಮ ಮುಖದೊಳ್ ಷಟ್ತರ್ಕವಾರಾಶಿವಿ॥
ಭ್ರಮಮಾಪೋಶನಮಾತ್ರಮಾದುದೆನಲಿಂ ಮಾತೇನಗಸ್ತ್ಯಪ್ರಭಾ।
ವಮುಮಂ ಕೀಟ್ಪಡಿಸಿತ್ತು ಪೆಂಪಿನೆಸಕಂ ಶ್ರೀಪಾಲಯೋಗೀಂದ್ರನಾ॥472॥

## 100 ನರೇಂದ್ರದ ಶಾಸನ [1125]

(ಎಪಿಗ್ರಾಫಿಯಾ ಇಂಡಿಕ XIII, 301)

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಕಾದಂಬ ಜಯಕೇಶಿದೇವನೂ ಅವನ ಹೆಂಡತಿ ಮೈಳಲದೇವಿಯೂ ಕುಂದೂರಲ್ಲಿ ದಂಡನಾಯಕ ಸಿಂಗರಸನು ಕಟ್ಟಿಸಿದ ಶಿವದೇವಸ್ಥಾನಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಚಟ್ಟಯದೇವ

ಜಯಲಕ್ಷ್ಮೀನರ್ತಕೀನರ್ತನಪರಿಣತಶೈಲೂಷನುರ್ವೀವಧೂಟೀ।
ಪ್ರಿಯಭಾಸ್ವನ್ನೂತ್ನರತ್ನಂ ಭುವನಭವನದೀಪಾಯಮಾನಪ್ರತಾಪೋ॥
ದಯನುದ್ಯತ್ಪಶ್ಚಿಮಾಂಭೋನಿಧಿಪತಿ ಧರೆಯೊಳ್ ಬಾಪ್ಪು ಸಾಮಾನ್ಯನೇ ಚ।
ಟ್ಟಯದೇವಂ ದೇವರಾಜಪ್ರಕಟಿತವಿಭವಂ ಸ್ವೀಕೃತಾಶ್ಚರ್ಯಶೌರ್ಯಂ॥473॥

ಭವ್ಯರಾಜನ ಹೆಂಡತಿ ಗಂಗಾದೇವಿ

ಸರಸತಿ ಸಹಚರಿ ವಿದ್ಯಾ। ಪರಿಣತಿಯಿಂ ತಂಗೆ ಗಂಗೆ ಶುದ್ಧತೆಯಿಂ ಭಾ।
ಸುರನೀತಿ ತನುಜೆ ತನಗಾ। ಚರಣದಿನೆನೆ ಗಂಗೆಯಂತು ನೋಂತರುಮೊಳರೇ॥474॥

ಸೋಮದಂಡನಾಯಕ

ಪ್ರವಿದಿತಕೌತ್ಸಗೋತ್ರಘನದುಗ್ಧಪಯೋಧಿಯೊಳುದ್ಭಲೀಲನು।
ದ್ಭವಿಸಿ ಕರಾಗ್ರಪೂರ್ಣತೆಗೆ ನಿರ್ಮಳಕಾಂತಿಗೆ ಲೋಕಲೋಚನೋ॥
ತ್ಸವಕೆ ಸುವೃತ್ತವೃತ್ತಿಗೆ ಬುಧಸ್ತುತಿಗಾಶ್ರಯುಮಾಗಿ ಸೋಮನೀ।
ಭುವನಮನಾವಗಂ ನಿಜಯಶಃಪೃಥುಚಂದ್ರಿಕೆಯಿಂದೆ ತೀವಿದಂ॥475॥

ಸಿಂಹಚಮೂಪನ ಹೆಂಡತಿ ಮೈಳಲದೇವಿ

ಇನಿತು ಪೊಗೞ್ತೆಯಂ ತಳೆದ ಸಿಂಹಚಮೂಪನ ಪೆಂಪುವೆತ್ತ ಮಾ।
ನಿನಿ ನಿಜನಾಥನುನ್ನತಭುಜಕ್ಕೆ ಜಯಾಂಗನೆ ವಕ್ತ್ರಪಂಕಜ॥
ಕ್ಕನುಪಮವಾಗ್ವಧೂಟಿ ಸುಭಗತ್ವದೆ ಪೆರ್ಚಿದುರಸ್ಥಲಕ್ಕೆ ಸ।
ಜ್ಜನನುತಲಕ್ಷ್ಮಿ ತಾನೆನೆ ಕೃತಾರ್ಥೆಯೆ ಮೈಳಲದೇವಿ ಧಾತ್ರಿಯೊಳ್॥476॥

ಪರಿಜನಪಾರಿಜಾತಲತೆ ಬಂಧುಜನಾಮರಧೇನು ಧಾರಿಣೀ।
ಸುರರುಚಿರಹೇಮವೃಷ್ಟಿ ಪತಿಭಕ್ತಿಧರಾತ್ಮಜೆ ಧರ್ಮಹರ್ಮ್ಯಭಾ॥
ಸುರನವರತ್ನದೀಪಿಕೆ ದಯಾರಸವಾರ್ಧಿಸುಧಾಂಶುಲೇಖೆಯೆಂ।
ಬರ ನುಡಿಗಳ್ಗಡರ್ಪೆನಿಪ ಮೈಳಲದೇವಿಗೆ ಮಯ್ಮೆಯೊಪ್ಪದೇ॥477॥

## 100 (ಅ) ಡಂಬಳದ ಶಾಸನ [1125]*

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಅವನ ಸಾಮಂತ ಪೆರ್ಮಾಡಿಯರಸನು ಧರ್ಮವೊಳಲಲ್ಲಿ ಅಜ್ಜಯ್ಯ ನಾಯಕನು ಎತ್ತಿಸಿದ ಶಿವಾಲಯಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಪೆರ್ಮಾಡಿಯರಸ

ಬಳವದರಾತಿಯಂ ಕಿಡಿಪುದೇನದು ಚೋದ್ಯಮೆ ಪೆರ್ಮಭೂಭುಜಂ।
ಮುಳಿದೊಡದೇನನೆಂಬೆ... ಸಾಹಸಮಂ ಕುಲಪರ್ವತಂಗಳಂ॥
ಕಳಕುಳಮಾಗೆ ಪೊಯ್ಯನೆ ದಿಶಾಗಜಮಂ ಪಿಡಿದೊತ್ತಿ ದಂತಮಂ।
ಕಿಬನೆ ಸಮುದ್ರಮಂ ಕದಡಿ ಕರ್ದಮಮಂ ನೆಱೆ ಮಾಡಿ ತೋಱನೇ॥477 ಅ॥

ಧರ್ಮವೊಳಲು

ಸರಸಿಜಷಂಡದಿಂ ಬೆಳೆದ ನಂದನದಿಂ ನವಗಂಧಶಾಲಿಯಿಂ।
ಪರಿತರುತಿರ್ಪ ನಿರ್ಝರದಿನಾಡುವ ಹಂಸೆಗಳಿಂ ವಿಲಾಸದಿಂ॥
ಸುರುಚಿರಮಾಗಿ ನರ್ತಿಪ ನವಿಲ್ಗಳಿನೋದುವ ರಾಜಕೀರದಿಂ।
ಕರಮೆ ಮನೋಹರಂ ಪೊಱವೊೞಲ್ ಪರಿಭಾವಿಸೆ ತತ್ಪುರೇಂದ್ರದಾ॥477 ಆ॥

* ಶ್ರೀಮಾನ್ ಹಲಸಂಗಿ ಚೆನ್ನಮಲ್ಲಪ್ಪನವರು ಬರೆದು ಕಳುಹಿಸಿದುದು.

**101 ಸೊರಬ 141 [1127]**

ಈ ವೀರಗಲ್ಲಿನಲ್ಲಿ ಚಾಳುಕ್ಯರಾಜನಾದ ಭೂಲೋಕಮಲ್ಲನ ಆಳಿಕೆಯಲ್ಲಿ ಕದಂಬತೈಲಪನಿಗೂ ಪೆರ್ಮಾಡಿಸಾಂತರನಿಗೂ ಯುದ್ಧವಾದಾಗ ಬಮ್ಮುಸಾಂತನು ಕಾದಿ ಸುರಲೋಕಪ್ರಾಪ್ತನಾದ ನೆಂದು ಹೇಳಿದೆ.

ಕಡುಮುಳಿದು ಬಮ್ಮು ಸಾಂತಂ। ಕಡಿತಲೆ ಪಲಗೆಯುಮ ಕೊಂಡು ಸಾಂತರನಾಳಂ।
ಕಡಿಖಂಡಮಾಡಿ ಪೊಯ್ದೊಡೆ। ಕೆಡೆದುದು ಧಾರಿಣಿಯ ಮೇಲೆ ವೈರಿಸಮೂಹಂ॥478॥

ರಣರಂಗಶೂದ್ರಕಂ ಬ। ಲ್ಕಣಿ ಸುಭಟಂ ಸೆಣಸುವರಿಬಲಂಗಳ ಶಿರಮಂ।
ಖಣಿಲೆನೆ ಪೊಯ್ದಾ ದರ್ಾಗಳೆ। ಪೆಣಮಯಮಾಯ್ತೆಂದು ನೂಂಕಿದರಿಬಲಮನಿತುಂ॥479॥

**102 ಶಿಕಾರಿಪುರ 100 [1129]**

ಇದರಲ್ಲಿ ಚಾಳುಕ್ಯರಾಜನಾದ ಭೂಲೋಕಮಲ್ಲನ (ಸೋಮೇಶ್ವರನ) ಆಳಿಕೆಯಲ್ಲಿ ಕದಂಬ ರಾಜನಾದ ತೈಲನು ದಕ್ಷಿಣಕೇದಾರ ಮಠಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ತೈಲಪ

ರಸೆಯಂ ರಸೆಗುಯ್ದಸುರನ। ನಸಮಭುಜಾಬಳದೆ ಸಮರಸಮಯದೊಳುಜಿ ಮ।
ರ್ದಿಸಿ ತಂದ ಚಕ್ರಿಯಂ ನೆನೆ। ಯಿಸುವಂ ಭುಜಬಳಮಹತ್ವದಿಂ ತೈಲನೃಪಂ॥480॥

ವಿಕ್ರಮಾದಿತ್ಯ

ನಿರುತಂ ಕೀಲ್ಪಿಟ್ಟು ಮುಂ ಮಾನಸಿಕೆಯ ದೆಸೆಯುಂ ಬಿಟ್ಟು ಕೂರ್ಮಾವತಾರಂ।
ಬೆರಸಿಂತೀವಿಶ್ವವಿಶ್ವಂಭರೆಯನಸದಳಂ ತಾಳ್ದಿದಂದಿಂದಮಾದಾ॥
ಪರಿವಾದಕ್ಕಂಜಿ ತಾಂ ಮಾನಸಿಕೆಯನಧಿಕಂ ತಾಳ್ದಿ ಮೇಲಾಗಿ ವಿಶ್ವಂ।
ಭರೆಯಂ ನಿಃಕ್ಲೇಶದಿಂ ತಾಳ್ದಿದ ಹರಿಯೆನಿಪಂ ವಿಕ್ರಮಾದಿತ್ಯದೇವಂ॥481॥

ಕಲಿಕಾಲಾವನಿಪಾಲಜಾಲಚಿರದೋರ್ವಾಸೋಪಜಾತೋದ್ಧತಾ।
ಖಿಲಕಾಲುಷ್ಯಕಲಂಕಪಟಲಪ್ರಕ್ಷಾಳನಂ ಮಾಡಲೆಂ॥
ದೊಲವಿಂ ತೀರ್ಥ ಜಲಾವಗಾಹನಮನಾದಂ ಮಾಡುತಿರ್ಪಂತೆ ನಿ।
ಚ್ಚಲುಮಿರ್ಪಳ್ ಜಯಲಕ್ಷ್ಮಿ ಖಡ್ಗಜಲದೊಳ್ ಚಾಳುಕ್ಯಚಕ್ರೇಶನಾ॥482॥

ಅಳವಟಿದರಾತಿಭೂಪತಿ। ಗಳ ಬಳಗಂ ತಂದು ಕುಡುವ ಗಜಮದಧಾರಾ।
ಜಳದ ಹಯಂಗಳ ಲಾಲಾ।ಜಳದ ಪೊನಲ್ ಬಹುಳಮಾ ನೃಪೇಂದ್ರಾಲಯದೊಳ್
॥483॥

ಮಾಳವಚೋಳಗೌಳಮಗಧಾಂಗತುರುಷ್ಕಕಳಿಂಗವಂಗಭೂ।
ಪಾಳಕರಂಜಿ ಬೆರ್ಚಿ ಬೆಸಕೆಯ್ದೊಸೆದೆಂದುದನೆಂದು ರಾಜ್ಯಸ॥
ಲ್ಲೀಲೆಯೊಳಿರ್ಪರಾನಱಿಯೆನಲ್ಲದೊಡಾಗಳೆ ದೇವರಾಜ್ಯಸ।
ಲ್ಲೀಲೆಯೊಳಾ ನೃಪೋತ್ತಮರನೆಯ್ದಿಪನೋವದೆ ಕುಂತಳೇಶ್ವರಂ॥484॥

## ಸೋಮೇಶ್ವರ III

ಪುಟ್ಟುವುದುಂ ವಿರೋಧಿನೃಪಸಂತತಿಗಾರ್ತತೆ ತೊಟ್ಟೆನಲ್ ಕರಂ।
ಪುಟ್ಟಿದುದೆಲ್ಲಿಯುಂ ನಿಖಿಳಕುಂತಳಭೂತಳರಾಗವರ್ಧನಂ॥
ಪುಟ್ಟಿದುದಾವಗಂ ನೆಗಟ್ದ ಭಾರತಿಗಂದು ಸನಾಥತೋದಯಂ।
ಪುಟ್ಟಿದುದೇಂದೊಡಾರ್ ದೊರೆಗೆವರ್ಪ ನೃಪಾಳಕರಾ ನೃಪಾಳನೊಳ್॥485॥

ಮಣಿಯದರಿನೃಪರ ಚೂಡಾ। ಮಣಿಯುಮನಾನೃಪರ ಕುಂಭಿಕುಂಭೋತ್ಥಲಸ।
ನ್ಮಣಿಯುಮನಣಿಯುರಮವನುಡೆ। ವಣಿಗಟ್ಟಲ್ ಬಗೆವನಾತ್ಮಶೈಶವದಶೆಯೊಳ್॥486॥

ನಡೆಗಲಲೊಡರಿಸಲಾತಂ । ನಡೆಗಲಲೊಡರಿಸಿದರಹಿತರಡವಿಗೆ ಭಯದಿಂ।
ನುಡಿಗಲಲೊಡರಿಸೆ ಬೇಗಂ। ನುಡಿಗಲಲೊಡರಿಸಿದರರಿನೃಪರ್ ವನಚರರೊಳ್॥487॥

ಪೊಡೆಸೆಂಡಾಡುವ ಪದದೊಳ್। ಪೊಡೆಸೆಂಡಂ ಪೊಡೆಯಲೊಲ್ಲದರಿನೃಪಶಿರಮಂ।
ಪೊಡೆಸೆಂಡಾಡುವನಿರದೆಂ। ದೊಡೆ ಭುಜಬಳದಳವನವನೊಳಳೆವವನೊಳನೇ॥488॥

ಸದಮಳರಾಗವಾರ್ಧಿರಸಪೂರ್ಣತೆ ವಿಕ್ರಮಚಕ್ರಿಗಾದುದಾ।
ದುದು ಮುಕುಳೀಕೃತತ್ವಮಸುಹೃತ್ಕರಪಂಕರುಹಕ್ಕೆ ಬೇಗಮಾ॥
ದುದು ನಿಖಿಲೋರ್ವಿಗಾಯತದೃಗುತ್ಪಳಹಾಸಮಿದೆಂಬಿನಂ ಸಮಂ।
ತುದಯಮಹಾಮಹೀಧರಮನೇಱಿದನೊಪ್ಪಿರೆ ಸೋಮವಲ್ಲಭಂ॥489॥

ಧರೆಯಂ ಪೊತ್ತಿರ್ದು ಭಾರಾವ್ಯಪಗಮವಿವಶಂ ಭೋಗಮಂ ಕಾಣನೆಂದುಂ।
ನಿರುತಂ ಭೋಗೀಶನೆಂದುಂ ತಟಿದುದು ಧರೆಯಂ ಪೊತ್ತು ಬೆರ್ಕೂರ್ಮರಾಜಂ॥
ಗಿರದಿನ್ನಾಪ್ರಾಣಿಗಳ್ ವಿಶ್ರಮಿಸುಗೆ ಸುಖದಿಂದೆಂಬವೋಲ್ ವಿಶ್ವವಿಶ್ವಂ।
ಭರೆಯಂ ದೋರ್ದಂಡದೊಳ್ ತಾಳ್ದಿದನತುಳಬಳಂ ಸೋಮಚಾಳುಕ್ಯಭೂಪಂ॥490॥

ಶ್ರೀಕಾಂತಾರಮ್ಯಹರ್ಮ್ಯಂ ನೆಗಟ್ದ ನಿಜಮಹೋರಸ್ಥಳಂ ಚಾರುವೀರ।
ಶ್ರೀಕಾಂತಾಕೇಳಿಶುಂಭನ್ಮಣಿಮಯಭವನಂ ನೈಜತೀವ್ರಾಸಿ ವಿದ್ಯಾ॥
ಶ್ರೀಕಾಂತಾಲಾಸ್ಯರಂಗಂ ನಿಜಮುಖಕಮಳಂ ನಿಚ್ಚಮೆಂಬನ್ನೆಗಂ ಧಾ।
ತ್ರೀಕಾಂತಂ ತಾಳ್ದಿದಂ ಶ್ರೀಗಳನತುಳಬಳೋದ್ಭಾಸಿ ಭೂಲೋಕಮಲ್ಲಂ॥491॥

ವಿನತಾರಾತಿನೃಪಾಳವಮೌಳಿಮಣಿಗಳ್ ನಕ್ಷತ್ರಮಾತ್ಮೀಯಕೀ।
ರ್ತಿ ನವಾಭ್ಯನ್ನತಚಂದ್ರಿಕಾಪ್ರಸರವೋರಂತಸ್ತತಾಪಂ ಜಗ॥
ಜ್ಜನಮೆಲ್ಲಂ ಸುಚಕೋರಕಾವಳಿಯೆನಲ್ ಸೋಮಾಖ್ಯೆ ಭೂಚಕ್ರದೊಳ್।
ತನಗನ್ವರ್ಥಮೆನಲ್ ವಿರಾಜಿಸಿದಪಂ ಸೋಮೇಶ್ವರೋರ್ವೀಶ್ವರಂ॥492॥

ಸ್ವಕಳಾಳೀದಾನದಿಂದಂ ವಿಬುಧತತಿಗತಿಪ್ರೀತಿಯಂ ಮಾಟ್ಪೊಡಂ ಶೀ।
ತಕರಂ ಶ್ರೀಕಂಠಭೂಷಾಮಣಿ ಕುವಳಯಸಂತರ್ಪಣಾಧಾಯಿಯೆಂದಿಂ॥
ತು ಕರಂ ಸಂಸ್ತುತ್ಯನಾಗಿರ್ಪೊಡಮೆಸೆವ ವಿನಿರ್ದೋಷನೊಳ್ ನಿಷ್ಕಳಂಕ।
ಪ್ರಕರಪ್ರಖ್ಯಾತನೊಳ್ ತಾಂ ಸಮನೆನಿಪನೆ ಪೇಟ್ ಸೋಮನೊಳ್ ವ್ಯೋಮಸೋಮಂ
॥493॥

ಅರಿಭೂಪರ ತೇಜದ ದ। ಳ್ಳುರಿ ಮುಟ್ಟುವುದೊರ್ಮೆ ತನ್ನ ಪೆಸರ್ಗೊಳಲೇನ।
ಚ್ಚರಿವಡೆದುದೊ ಜಗದೊಳ್ ಭೀ। ಕರತರತರವಾರಿವಾರಿ ಸೋಮೇಶ್ವರನಾ॥494॥

ಕುಂತಳಮಾತ್ಮವಲ್ಲಭೆಯ ಕುಂತಳಮೊಪ್ಪುವ ಕಾಂಚಿ ಕಾಂಚಿ ಶು।
ದ್ಧಾಂತನಿತಂಬಿನೀಜನದ ಧಾರೆ ನಿಜೋನ್ನತದಾನಧಾರೆಯೆಂ॥
ಬಂತಿರೆ ಸುತ್ತಲುಂ ಸಲೆ ನಿಮಿರ್ಚಿ ನಿಜೋಗ್ರಭುಜಪ್ರತಾಪಮಾ।
ಶಾಂತಮನೆಯ್ದೆ ಪಾಲಿಸಿದನುರ್ವಿಯನೊರ್ವನೆ ಸೋಮವಲ್ಲಭಂ॥495॥

## ತೈಲ

ಶ್ರೀಮತ್ಕದಂಬವಂಶಶಿ। ಖಾಮಣಿ ಮಂಡಳಿಕಮಕುಟವಿಭ್ರಾಜಿತಚೂ।
ಡಾಮಣಿ ವಿದ್ವಜ್ಜನಚಿಂ। ತಾಮಣಿ ಧೈರ್ಯಪ್ರಸಿದ್ಧಶೈಲಂ ತೈಲಂ॥496॥

## ಬಳ್ಳಿಗಾವೆ

ಅದು ವಿಬುಧೈಕವಾಸಮಮರಾವತಿಯಂತತಿಭೋಗಿಸೇವ್ಯಮಂ।
ತದು ಪೆಸರ್ವೆತ್ತು ರಂಜಿಸುವ ಭೋಗವತೀಪುರದಂತೆ ಭಾವಿಸ॥
ಲ್ಕದು ಧನದಪ್ರಸೇವ್ಯಮಳಕಾಪುರದಂತೆನೆ ಬಳ್ಳಿಗಾವೆಗಾ।
ವುದೊ ಪಡಿ ಪಟ್ಟಣಂ ನೆಗಟ್ದ ವಾರ್ಧಿಪರೀತಸಮಸ್ತಧಾತ್ರಿಯೊಳ್॥497॥

## ಬಳ್ಳಿಗಾವೆಯ ವರ್ತಕರು

ಕಿಡುವೊಡಮೆಯುನೊಂದನೆ ಕೊ।ಟ್ಟೆಡೆಮುಡಗದಿಹಂ ಪರಂಗಳೆಂಬೆರಡುಮನಂ।
ಗಡಿಯೊಳ್ ಕಿಡದೊಡಮೆಯುನಡಿ। ಗಡಿಗಾರ್ಜಿಪರಲ್ಲಿ ನೆಗಟ್ದ ನಗರಜನಂಗಳ್॥498॥

ಸುರಪತಿಯಂತೆ ಸರ್ವವಿಬುಧಾಶ್ರಯರಿಂದ್ರಗಜೇಂದ್ರದಂತೆ ಭಾ।
ಸುರತರದಾನಸಂಪದಧಿಕೋನ್ನತರಿಂದುವಿನಂತೆ ಸತ್ಕಲಾ॥
ಧರರಹಿರಾಜನಂತೆ ನಿಖಿಲಕ್ಷಮೆಗಾಸ್ಪದರೆಂದೊಡೀಗಳಾರ್।
ದೊರೆಯರೊ ಬಳ್ಳಿಗಾವೆಯ ಮಹಾನಗರಂಗಳೊಳೀಧರಿತ್ರಿಯೊಳ್॥499॥

ಕರಿಗೆ ರದನಂ ಭಯಂಕರ। ತರದಂಷ್ಟ್ರಾಂಕುರಮಿಭಾರಿಗುನ್ನತಪಕ್ಷಂ।
ಶರಭರಿಪುಗಾದುದೆಂಬಂ। ತಿರಲೆಸೆವರ್ ಪ್ರಭುಗಳಲ್ಲಿ ತತ್ಪತ್ತನದೊಳ್॥500॥

**103 ನೂಡಗೆರೆ 22 [1129]**

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಗಳು ಹರಿಯಬ್ಬೆ ಜಿನಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಪ್ರಕಟಾಟೋಪದ ಚಕ್ರಗೊಟ್ಟದೊಡೆಯಂ ಸೋಮೇಶ್ವರಂ ಬಳ್ಕೆ ತ।
ನ್ನ ಕರಾಳಾಸಿಯ ಕೂರ್ಪನೇಂ ಮೆಱೆದನೋ ಗೌಡಾಂಧಕಾರಪ್ರಚಂ॥
ಡಕರಂ ಮಾಳವಮೇಘಜಾಳಪವನಂ ಚೋಳೋಗ್ರಕಾಳಾನಳಂ।
ತ್ರಿಕಳಿಂಗತ್ರಿಪುರತ್ರಿಣೇತ್ರನದಟಂ ಶ್ರೀವಿಷ್ಣುಭೂಪಾಳಕಂ॥501॥

ವಿಷ್ಣುವರ್ಧನನ ಮಗ ಕುಮಾರಬಲ್ಲಾಳ

ಕಳಕೆ ಬಯಲ್ಗೆಕ್ಕತುಳ। ಕ್ಕೆಳೆಯೊಳ್ ಮಾಱಾಂಪರಿಲ್ಲದಾದಿಗಧಿಪರಂ।
ಸೆಳೆದು ನೆಲಕ್ಕಿಕ್ಕಲ್ಕ। ವ್ವಳಿಪುದು ರಿಪುನೃಪಕುಮಾರಭೈರವನ ಮನಂ॥501ಅ॥

ಆವಂಗಮಾವ ಧನಮುಮ। ನೀವ ಮಹಾದಾನಿ ಯುದ್ಧವಿಜಯಮನಾಮಾ।
ದೇವಂಗಮೀಯದದಟರ। ದೇವಂ ಬಲ್ಲಾಳದೇವನಪ್ರತಿಮಬಳಂ॥502॥

ಹರಿಯಬ್ಬೆ

ಹರಿಕಾಂತೆಯುಮೀ ಕಾಂತೆಯು। ದೊರೆಗೆವರಲ್ಕಾಱಳೆಂಬ ನಿಮ್ಮದದ ಗುಣೋ।
ತ್ಕರಮನೊಳಕೊಂಡು ಹರಿಯಬೆ। ಪರಹಿತದಿಂ ಧರೆಯೊಳೆಯ್ದೆ ಜಸಮುಂ ತಳೆದಳ್ ॥503॥

ಹರಿಯಬ್ಬೆಯ ಗಂಡ ಸಿಂಗ

ಪರಬಳದಾನವಸಂಹಾ। ರಾರುಣಜಳಲಿಪ್ತಖಡ್ಗನುತ್ತತತೇಜಂ।
ವರವಿಬುಧವಿಭವವಿಭವಂ। ಹರಿಕಾಂತಾಕಾಂತನೆಸೆದಪಂ ವಿಭುಸಿಂಗಂ॥504॥

## 104 ಚಿಕ್ಕಮಗಳೂರು 137 [1130]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ವಿಷ್ಣುದಂಡಾಧಿಪನಿಂದ ನಿರ್ಮಿತವಾದ ಕೇಶವದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಅಣೆವುದು ಚೋಳನಂ ಖಸನನಂಜಿಸುತಿರ್ಪುದು ಮಾಳವೇಶನೊಳ್।
ಸೆಣಸುವುದಂಗರಾಜನನದಿರ್ಪುವುದಂತೆ ಕಳಿಂಗರಾಜನಂ॥
ನೊಣೆವುದು ಕೇರಳೇಶ್ವರನನಂಡಲೆವುಗ್ರಸಮುಗ್ರದರ್ಪದಿಂ।
ಕುಣಿವುದು ತೇಜದೇಟ್ಗಿ ಪರಿದೆಲ್ಲಿಯುಮುಯ್ದಿರೆ ವಿಷ್ಣುಭೂಪನಾ॥505॥

ಬೋವರ್ಕಳ್

ಪಿರಿಯಂ ಪೆಂಪಿನ ತಿಣ್ಪಿನೊಳ್ ಪಿರಿಯನತ್ಯಾಶ್ಚರ್ಯಕಾರ್ಯಂಗಳೊಳ್।
ಪಿರಿಯಂ ಬ್ರಾಹ್ಮಣಭಕ್ತಿಯೊಳ್ ಪಿರಿಯನಾದಂ ಧರ್ಮಕರ್ಮಂಗಳೊಳ್॥
ಪಿರಿಯಂ ಸಜ್ಜನಸೇವೆಯೊಳ್ ಪಿರಿಯನಾ ಸೌಜನ್ಯಸಂಪತ್ತಿಯೊಳ್।
ಪಿರಿಯಂ ತಾನೆನೆ ಮಾದಿಬೋವನವೊಲಾವಂ ಧನ್ಯನೀ ಧಾತ್ರಿಯೊಳ್॥506॥

ಪರಿಕಿಸೆ ಕರ್ಣನಿಂ ಖಚರನಾಯಕನಿಂ ದಿವಿಜೇಂದ್ರಪುತ್ರನಿಂ।
ಪಿರಿಯನೆನಿಪ್ಪನುದ್ಧತರದಾನದೊಳಾರ್ಪಿನೊಳೆಯ್ದೆ ಗಂಡಿನೊಳ್॥
ಧರೆ ಪೊಗಟ್ವಂತು ಬೇಡಿದವರ್ಗಿತ್ತು ಶರಣ್ಬುಗೆ ಕಾದು ಶತ್ರುವಂ।
ಧುರಧರೆಯೊಳ್ ತಗುಳ್ದು ಯದುವಂಶನೃಪಾಳನ ಬೋವ ಬಾಸೆಯಂ॥507॥

ನಯದಿಂ ಸ್ವಾಮಿಯ ಚಿತ್ತಮಂ ವಿನಯದಿಂ ದೇವದ್ವಿಜಶ್ರೇಣಿಯಂ।
ಭಯದಿಂ ಬಂಧುಗಳಂ ಸಮಂತಭಯದಿಂ ಸದ್ಭೃತ್ಯರಂ ಮೆಚ್ಚಿಪಂ॥
ಸುಯಶೋಭೂಷಣನತ್ಯುದಾರಚರಿತಪ್ರಸ್ತುತ್ಯನಿತ್ಯೋದಯಾ।
ಶ್ರಯನೀ ಪೊನ್ನೆಯನಾಯಕಂ ಬುಧಮನಸ್ಸಂತೋಷಸಂದಾಯಕಂ॥508॥

ಶ್ರೀ ವಿನಯಂ ವಿವೇಕಮುಳವುನ್ನತಿ ಕೀರ್ತಿ ಚಲಂ ಪ್ರಭುತ್ವಮಾ।
ರ್ತೀವಳವಣ್ಮು ಸತ್ಯಮೆಸಕಂ ದಯೆ ನೀತಿಗಳೆಂತುಮಾವಗಂ॥
ಭಾವಿಪೊಡೊಂದುಗುಂದದಿವಸೊಳ್ ನೆಲಸಿರ್ದಪುವೆಂದೊಡಣ್ಣ ಪೇ।
ಟೀವೊಗಟ್ದಪ್ಪುದೀ ಹರಿಯಬೋವನನುದ್ಧತವೈರಿದಾವನಂ॥509॥

ವಿನಯವಿಲಾಸಿಯೆನ್ನ ಗುಣಿಯೆನ್ನ ದಯಾಪರನೆನ್ನ ಶೌಚಿಯೆ।
ನ್ನ ನಿರುತಮೆಲ್ಲರಿಂ ಸುಜನನೆನ್ನ ಕರಂ ಕಲಿಯೆನ್ನ ಸತ್ಯದೊ॥
ಳ್ಪಿನ ನೆಲೆಯೆನ್ನ ನೀಂ ಪೊಗಟಿಪ್ಪೊಡೆಂತುಟಲೇ ಬುಧ ಚಿಕ್ಕಮಾದಿಬೋ।
ವನನೊಲೆದಾರ್ಗಮೀವನನೆಲೇ ಮಱೆವೊಕ್ಕರನೊಲ್ದು ಕಾವನಂ॥510॥

ಗುಣೆಯೆಂಬುದು ಬುಧಚಿಂತಾ। ಮಣಿಯೆಂಬುದು ಧರ್ಮಕಾರ್ಯತಾತ್ಪರ್ಯದೊಳ।
ಗ್ರಣಿಯೆಂಬುದು ಗೋತ್ರಶಿಖಾ। ಮಣಿಯೆಂಬುದು ಮಾಚಬೋವನಂ ಭೂಭುವನಂ ॥511॥

## 105 ಶ್ರವಣಬೆಳ್ಗೊಳ 143 [1131]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲದೇವಿ ಶಿವಗಂಗೆಯಲ್ಲಿ ಸತ್ತಳೆಂದು ಹೇಳಿದೆ.

ವಿನಯಾದಿತ್ಯ

ಇಟ್ಟಿಗೆಗೆಂದಗಲ್ದ ಕುಟಿಗಳ್ ಕೆಱೆಯಾದುವು ಕಲ್ಗೆಗೊಂಡ ಪೆ।
ರ್ವೆಟ್ಟು ಧರಾತಳಕ್ಕೆ ಸರಿಯಾದುವು ಸುಣ್ಣದ ಭಂಡಿ ಬಂದ ಪೆ॥
ರ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ।
ನೆಟ್ಟನೆ ಪೊಯ್ಸಳೇಶನೆನೆ ಬಣ್ಣಿಪರಾರ್ ಮಲೆರಾಜರಾಜನಂ॥512॥

ವಿಷ್ಣುವರ್ಧನ

ಎಳೆಯೊಳ್ ದುಷ್ಕರನುದ್ಧತಾರಿಗಳನಾಟಂದೊತ್ತಿ ಬೆಂಕೊಂಡು ದೋ।
ರ್ಬಳದಿಂ ದೇಶಮನಾವಗಂ ತನಗೆ ಸಾಧ್ಯಂಮಾಡಿರಲ್ ಗಂಗಮಂ॥
ಡಳಮೆಂದೋಲೆಗೆ ತೆತ್ತುಮಿತ್ತು ಬೆಸನಂ ಪೂಣ್ದಿರ್ಪಿನಂ ವಿಷ್ಣುಪೊ।
ಯ್ಸಳನಿರ್ದಂ ಸುಖದಿಂದೆ ರಾಜ್ಯದೊದವಿಂದಂ ಸಂತತೋತ್ಸಾಹದಿಂ॥513॥

ಎತ್ತಿದನೆತ್ತಲತ್ತಲಿದಿರಾದ ನೃಪಾಳಕರಳ್ಕಿ ಬಳ್ಕಿ ಕಂ।
ಡಿತ್ತು ಸಮಸ್ತ ವಸ್ತುಗಳನಾಳ್ತನಮಂ ಸಲೆ ಪೂಣ್ದು ಸಂತತಂ॥
ಸುತ್ತಲುವೋಲಗಿಪ್ಪರೆನೆ ಮುನ್ನಿನವರ್ಗಮನೇಕರಾದವ।
ರ್ಗತ್ತಳಗಂ ಪೊಗೞ್ತೆಗೆನೆ ಬಣ್ಣಿಪನಾವನೊ ವಿಷ್ಣುಭೂಪನಂ॥514॥

ಶಾಂತಲದೇವಿಯ ತಾಯಿ ಮಾಚಿಕಬ್ಬೆ

ದಾನಮನನೂನಮಂ ಕಃ। ಕೇನಾರ್ಥೀ ಎಂದು ಕೊಟ್ಟು ಜಿನನಂ ಮನದೊಳ್।
ಧ್ಯಾನಿಸುತುಂ ಮುಡಿಪಿದಳೆ। ನ್ನೇನೆಂಬುದೊ ಮಾಚಿಕಬ್ಬೆಯೊಂದುನ್ನತಿಯಂ॥515॥

## 106 ಚೆನ್ನರಾಯಪಟ್ಟಣ 248 [1133]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಯಕ ಗಂಗರಾಜನ ಮಗ ಬೊಪ್ಪದೇವ ಮುಂತಾದವರು ಬೆಳ್ಗಲಿಯ ಗಂಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಗಂಗರಾಜ

ಅದಟಾಪುರ್ಣನ್ನತಿ ಸತ್ಯಮಂತಚಲಧೈರ್ಯಂ ಶೌಚಮೌದಾರ್ಯಮು।
ಣ್ಮು ದಿಟಂ ತನ್ನೊಳೆ ನಿಂದುವೆಂಬ ಗುಣಸಂಘಾತಂಗಳಂ ತಾಳ್ದಿ ಲೋ॥
ಕದ ವಂದಿಪ್ರಕರಂಗಳಂ ತಣಿಪಿ ಕಃ ಕೇನಾರ್ಥಿಯೆಂದಿತ್ತು ಚಾ।
ಗದ ಪೆಂಪಿಂದಮೆ ಗಂಗರಾಜನೆಸೆದಂ ವಿಶ್ವಂಭರಾಭಾಗದೊಳ್॥516॥

ಬೊಪ್ಪದಂಡಾಧಿಪ

ಮಲೆವತ್ಯುದ್ಧತದೇಶಕಂಟಕರನಾಟಂದೊತ್ತಿ ಬೆಂಕೊಂಡು ದೋ।
ರ್ಬಲದಿಂ ಕೊಂಗರನೊತ್ತಿ ವೈರಿನೃಪರಂ ಬೆನ್ನಟ್ಟಿ ತೂಳ್ದನ್ಯಮಂ॥
ಡಲಮಂ ತತ್ಪತಿಗೆಯ್ದೆ ಮಾಡಿ ಜಗದೊಳ್ ಬೀರಕ್ಕೆ ತಾನಿಂತಗುಂ।
ದಲೆಯಾದಂ ಕಲಿಗಂಗನಗ್ರತನಯಂ ಶ್ರೀಬೊಪ್ಪದಂಡಾಧಿಪಂ॥517॥

**107 ಬೇಲೂರು 124 [1133]**

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ತನ್ನ ದಂಡನಾಥ ಗಂಗರಾಜನ ಮಗ ಬೊಪ್ಪನು ದೋರಸಮುದ್ರದಲ್ಲಿ ಕಟ್ಟಿಸಿದ ಪಾರ್ಶ್ವನಾಥಬಸ್ತಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಸತ್ಕುಳದೊಳಗಿಂದು ಮಹೀ। ಭೃತ್ಕುಳದೊಳಗಚಳನಾಥನೆಸೆವಂತೆಸೆದಂ।
ತತ್ಕುಳದೊಳ್ ವಿಜಿತಾರಿಕು। ಭೃತ್ಕುಳನಾದಿತ್ಯಮೂರ್ತಿ ವಿನಯಾದಿತ್ಯಂ॥518॥

ಎಱೆಯಂಗ

ತದಪತ್ಯಂ ರಿಪುನೃಪಭುಜ। ಮದಮರ್ದನನಖಿಳವಿಬುಧಜನತಾಸೌಖ್ಯ।
ಪ್ರದನುದಿತೋದಿತಮಹಿಮಾ। ಸ್ಪದನೆನಿಪೆಱೆಯಂಗಭೂಪನಂಗಜರೂಪಂ॥519॥

ಎಱೆಯಂಗನ ಕೂರಸಿ ತಲೆ। ಗೆಱಗದ ಮುನ್ನಱಿದು ಬಂದು ಪದಕೆಱಗದವರ್।
ಪಱಿಯೆ ತಲೆ ಮುಱಿಯೆ ನಿಟ್ಟೆ। ಲ್ವೊಱೆದುಗೆ ಬಿಸುನೆತ್ತರೆಱಗದಿರ್ಪರೆ ಧುರದೊಳ್
॥520॥

ವಿಷ್ಣುವರ್ಧನ

ಅಂತವರೊಳ್ ವಿಷ್ಣುಮಹೀ। ಕಾಂತಂ ನಿಮಿರ್ದೆಸೆಯೆ ಕೂರ್ಪುಮಾರ್ಪುಂ ಜಸಮಾ।
ದಂ ತೊಳಗಿ ಬೆಳಗೆ ಪೆರ್ಮೆಯ। ನಾಂತಂ ನಳನಹುಷ ಭರತಚರಿತಪ್ರತಿಮಂ॥521॥

ಸ್ಥಿರಮಾಗಿ ವಿಷ್ಣುವರ್ಧನ। ಧರಣೀಪಾಲಂಗೆ ಪಟ್ಟಮಾಗಲೊಡಂ ಸಾ।
ಗರದಂತನಹಿತಧರಣೀ। ಶ್ವರರೊಡಸೆಯ್ದಿತ್ತು ವಿಶದಕೀರ್ತಿಪ್ರಸರಂ॥522॥

ಪೊಡರದೆ ಸಾಧ್ಯಮಾಯ್ತು ಮಲೆಯೆಲ್ಲಮುಮಾ ತುಳುದೇಶಮೆಲ್ಲಮುಂ।
ನಡೆಯೆ ಕುಮಾರನಾಡು ತಳಕಾಡುಗಳೆಂಬಿವು ಕೆಯ್ಗೆ ಸಾರ್ದುವ॥
ತ್ತಡಿಯಿಡೆ ಮುಂಚಿ ಕಂಚಿ ಬೆಸಕೆಯ್ದುದು ವಿಷ್ಣುನೃಪಂ ಕೃಪಾಣಮಂ।
ಜಡಿಯದ ಮುನ್ನೆ ಕೊಂಗನೃಪರಿತ್ತರಿಭಂಗಳನೇಂ ಪ್ರತಾಪಿಯೋ॥523॥

ಚೋಳನೃಪಾಳಪಾಂಡ್ಯನೃಪಕೇರಳಭೂಪಭುಜಾವಲೇಪವಿ।
ಸ್ಫಾಳನನಾಂಧ್ರಗಂಧಗಜಕೇಸರಿ ಲಾಟವರಾಟಧಾರಿಣೀ॥
ಪಾಳಘನಾನಿಳಂ ಕದನಶೂರಕದಂಬವನಾಗ್ನಿ ವಿಷ್ಣುಭೂ।
ಪಾಳನವಾರ್ಯಶೌರ್ಯನಿಧಿಯಾತನ ಶೌರ್ಯಮನಾರೊ ಕೀರ್ತಿಪರ್॥524॥

ನಿರುಪಮಿತಾಂಗಿಯಂ ರುಚಿರಕುಂತಳೆಯಂ ನುತಮಧ್ಯೆಯಂ ಮನೋ।
ಹರತರಕಾಂಚಿಯಂ ಧೃತಸರಸ್ವತಿಯಂ ವಿಳಸದ್ವಿನೀತೆಯಂ॥
ಸ್ಫುರದುರುಕೀರ್ತಿಮನ್ಮಧುರೆಯಂ ಸ್ಥಿರಮಾಗಿರೆ ತನ್ನ ತೋಳೊಳೊ।
ಲ್ದಿರಿಸಿದನುರ್ವರಾಂಗನೆಯನಪ್ರತಿಮಂ ವಿಭು ವಿಷ್ಣುಭೂಭುಜಂ॥525॥

## ವಿಷ್ಣುವರ್ಧನನ ದಂಡನಾಥ ಗಂಗರಾಜ

ನುಡಿ ತೊದಳಾದೊಡೊಂದು ಪೊಣರ್ದಂಜಿದೊಡಂತೆರಡನ್ಯನಾರಿಯೊಳ್।
ನುಡಿಗೆಡೆಯಾಗೆ ಮೂಱು ಮಱೆವೊಕ್ಕರನೊಪ್ಪಿಸೆ ನಾಲ್ಕು ಬೇಡಿದಂ॥
ಪಡೆಯದೊಡಯ್ದು ಕೂಡಿದೆಡೆ ಪೋಗದೊಡಾಱಧಿಪಂಗೆ ತಪ್ಪಿ ಬ।
ಟ್ಟೊಡೆಗಡಿವೇೞುಮೇೞು ನರಕಂಗಳಿವೆಂದಪನಲ್ತೆ ಗಂಗಣಂ॥526॥

## ಗಂಗರಾಜನ ಮಗ ಬೊಪ್ಪ

ಪರಮಾರ್ಥಂ ವಿದ್ವದರ್ಥಂ ತವಿಸದನ ಧನಂ ವ್ಯರ್ಥಮೆಂದರ್ಥಿಸಾರ್ಥಂ।
ನಿರವದ್ಯಂ ಜ್ಞಾತವಿದ್ಯಂ ದಳಿತರಿಪುಮನೋದ್ಯಂ ತಿರಸ್ಕಾರಿತಾದ್ಯಂ॥
ಧರೆ ತನ್ನಂ ಕೀರ್ತಿಪನ್ನಂ ವಿಬುಧತತಿಗೆ ಪೊನ್ನಂ ವಿಪಶ್ಚಿತ್ಪ್ರಸನ್ನಂ।
ಕರೆದೀವಂ ಬೊಪ್ಪದೇವಂ ಸಮರಮುಖದಶಗ್ರೀವನುದ್ವೃತ್ತಭಾವಂ॥527॥

ಸಮರಾಯಾತಾಹಿತಕ್ಷೋಣಿಭೃದತುಳಬಳೋದ್ಯಾನದೊಳ್ ಪಾವಕಾನು।
ಕ್ರಮದಿಂದಂ ಕ್ರೀಡಿಸುತ್ತುಂ ರಿಪುನೃಪತಿಶಿರಃಕಂದುಕಕ್ರೀಡಿತಂ ತ॥
ತ್ಸಮಯೋದ್ಭೂತಾರುಣಾಂಭೋಭರಿತಸಮರಧಾತ್ರೀಸರೋಮಧ್ಯದೊಳ್ ವಿ।
ಕ್ರಮಲಕ್ಷ್ಮೀಲೋಲನೋಲಾಡುವನೆರೆದ ಬುಧರ್ಗಪ್ಪ ದಂಡೇಶಬೊಪ್ಪಂ॥528॥

ಲೋಭಿಗಳಂ ಪೋಲಿಪುದೆ ಯ। ಶೋಭಾಜನನಪ್ಪ ಬೊಪ್ಪದಂಡೇಶನೊಳಿ।
ನ್ನೀಭೂಭುವನದೊಳಾಹಾ। ರಾಭಯಭೈಷಜ್ಯಶಾಸ್ತ್ರದಾನೋನ್ನತಿಯಿಂ॥529॥

ಜಳಜಭವಂಗಮಿಂತು ಬರೆಯಲ್ ಕಡೆಯಲ್ ಕರುವಿಟ್ಟು ಗೆಯ್ಯಲ।
ತ್ತಳಗಮೆನಿಪ್ಪುದಂ ತೊಳಪ ಬೆಳ್ಳಿಯ ಬೆಟ್ಟನೆ ಪೋಲ್ವುದಂ ಜಗ॥
ತ್ತಿಳಕಮನೀಜಿನಾಲಯಮನೆತ್ತಿಸಿದಂ ವಿಭು ಬೊಪ್ಪದೇವನ।
ಗ್ಗಳಿಕೆಯ ರಾಜಧಾನಿಗಳೊಳೊಪ್ಪುವ ದೋರಸಮುದ್ರಮಧ್ಯದೊಳ್॥530॥

ನಾರಸಿಂಹ I

ಭೂಭೃತ್ಪತಿ ಮದಕರಿಹರಿ। ಶೋಭಾಸ್ಪದನಚಳತಾಸಮುತ್ತುಂಗಂ ಶ್ರೀ।
ಪ್ರಾಭವನುದಿತಾಖಂಡಳ। ವೈಭವನೇಂ ಗೋತ್ರತಿಳಕನಾದನೊ ಪುತ್ರಂ॥531॥

## 108 ನಾಗಮಂಗಲ 3 [1134]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಬಮ್ಮಲದೇವಿ ನಾಗಮಂಗಲದ ಶಂಕರನಾರಾಯಣ ದೇವಾಲಯವನ್ನು ಜೀರ್ಣೋದ್ಧಾರಮಾಡಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಬಮ್ಮಲದೇವಿ

ಪಲ್ಲವಕುಲಮದೆ ಪಾಲ್ಗಡ। ಲಲ್ಲಿಯ ಸಿರಿಯಾದಳೊಪ್ಪೆ ವಿಷ್ಣುಗೆ ತಾಂ ಸ।
ದ್ವಲ್ಲಭೆ ಬಮ್ಮಲದೇವಿಯೆ। ಪಲ್ಲವಿಸಲ್ ರಾಜ್ಯವಲ್ಲಿ ವಿಶ್ವಂಭರೆಯೊಳ್॥532॥

ಕುಂದದೆ ಸಿರಿಯೆಂದುಂ ತ। ನ್ನಂದಮನೀಕ್ಷಿಸುವ ರತ್ನದರ್ಪಣಮೆನೆ ಚೆ।
ಲ್ವೊಂದಿದ ಬಮ್ಮಲದೇವಿಯೊ। ಳೆಂದುಂ ಶ್ರೀರೂಪಮೆಸೆವುದೊಂದಚ್ಚರಿಯೇ॥533॥

## 109 ಬೇಲೂರು 170 [1135]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ನಾಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ದುರ್ಬಾರಾರಿಧರಾಧರಾಳಿಕುಳಿಶಂ ಶ್ರೀವಿಷ್ಣುಭೂಪಾಳನಾ।
ದೆರ್ಬಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾಬಂದನೀಬಂದನೆಂ॥
ಬುರ್ಬೀಪಾಳರ ಕಣ್ಗೆ ಲೋಕಮನಿತುಂ ತದ್ರೂಪಮಾಗಿರ್ಪುದುಂ।
ಸರ್ಬಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದುದೋ॥534॥

## 110 ಹಾಸನ 89 [1135]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲೆಯೂ ಅವಳ ಮಗಳು ಚಿಕ್ಕಶಾಂತಲೆಯೂ ಸಾಯಲು ಶಾಂತಲೆಯ ತಾಯಿ ಜಕ್ಕಿಯಬ್ಬೆ ಮಗಳ ಮತ್ತು ಮಮ್ಮಗಳ ಜ್ಞಾಪಕಾರ್ಥವಾಗಿ ಎಲೆಗುಂದದಲ್ಲಿ ಶಿವಾಲಯಗಳನ್ನು ಕಟ್ಟಿಸಿದಂತೆಯೂ ಅವಕ್ಕೆ ವಿಷ್ಣುವರ್ಧನನು ಭೂಮಿಯನ್ನು ಬಿಟ್ಟಂತೆಯೂ ಹೇಳಿದೆ.

ಜಕ್ಕಿಯಬ್ಬೆ

ನಿರ್ಮಳಮೆಂತುಂ ಬಗೆ ತಾಂ। ನಿರ್ಮಳಮೆಂತುಂ ಚರಿತ್ರಮಾತ್ಮೀಯಗುಣಂ।
ನಿರ್ಮಳಮೆಂತುಮೆನಲ್ ಸ।ದ್ಧರ್ಮಪದಂ ಜಕ್ಕಿಯಬ್ಬೆಯೊಳ್ ಸೊಗಯಿಸುಗುಂ॥535॥

ಶಾಂತಲೆ

ಕಂತುವ ಚಿಂತಾಮಣಿ ಸೀ। ಮಂತಿನಿಯರ್ಗೀಕೆ ತಾನೆ ಚೂಡಾಮಣಿಯಾ।
ಶಾಂತಲೆ ರಕ್ಷಾಮಣಿ ತಾ। ನಿಂತು ಪಲರ್ಗೆನಿಸಿ ನೆಗಟ್ಟಳವನೀತಳದೊಳ್॥536॥

## 111 ಶ್ರವಣಬೆಳ್ಗೊಳ 384 [1135]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಂತ್ರಿ ಗಂಗರಾಜನ ಅಣ್ಣನಾದ ಬಮ್ಮನ ಮಗ ಏಚಿರಾಜನು ಸಾಯಲು ಗಂಗರಾಜನ ಮಗ ಬೊಪ್ಪನು ನಿಸಿದಿಗೆಯನ್ನು ನಿಲಿಸಿದಂತೆ ಹೇಳಿದೆ.

ಎಱೆಯಂಗ

ಎಱೆಯಂಗಪೊಯ್ಸಳಂ ತ।ಳ್ತೆಱೆಯುಟ್ಟ ವಿರೋಧಿಭೂಪರಂ ಧುರದೆಡೆಯೊಳ್।
ತಱಿಸಂದು ಗೆಲ್ದು ವೀರ। ಕ್ಕೆಱೆವಟ್ಟಾಗಿರ್ದು ಸುಖದೆ ರಾಜ್ಯಂಗೆಯ್ದಂ॥537॥

ವಿಷ್ಣುವರ್ಧನ

ಕೊಂಗೇಱಿಂ ಮಲೆಯೇಱಿಮು। ನಂಗೆಯ್ಗಳವಡಿಸಿ ಲೊಕ್ಕಿಗುಂಡಿವರಂ ದೇ।
ಶಂಗಳನಿಱ್ಕುಳಿಗೊಂಡ ನೃ । ಸಿಂಗಂ ಶ್ರೀವಿಷ್ಣುವರ್ಧನೋರ್ವೀಪಾಳಂ॥538॥

ಬಮ್ಮ

ವ್ಯಾಪಿತದಿಗ್ವಳಯಯಶಃ। ಶ್ರೀಪತಿ ವಿತರಣವಿನೋದಪತಿ ಧನಪತಿ ವಿ।
ದ್ಯಾಪತಿಯೆನಿಪ್ಪ ಬಮ್ಮಚ। ಮೂಪತಿ ಜಿನಪತಿಪದಾಬ್ಜಭೃಂಗನನಿಂದ್ಯಂ॥539॥

## 112 ಅರಸಿಯಕೆರೆ 114 [1136]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಪ್ರಧಾನ ಚಾವುಂಡಯ್ಯನು ಕರಿಗುಂದದ ದೇವಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಚಾವುಂಡಯ್ಯನ ಮಗ ಪಾರ್ಶ್ವ

ವರವಧುನಲ್ಲನನ್ಯವಧುಗಲ್ಲನನೇಕಕುಲಾಗಮಂಗಳಂ।
ಪರಿಕಿಸೆ ತಾನೆ ಬಲ್ಲನಘದೊಳ್ ಸಲೆ ಸಲ್ಲನಕೀರ್ತಿಯತ್ತಲ॥
ಲ್ಲರಿಬಲಮಲ್ಲನಿಷ್ಟಜನಕೆಲ್ಲ ಬುಧಾವಳಿಗೆಲ್ಲಮೀಯಲಾ।
ಸುರಕುಜದನ್ನನೆಂದು ಧರೆ ಬಣ್ಣಿಪುದಾದರದಿಂದೆ ಪಾರ್ಶ್ವನಂ॥540॥

## 113 ಬೇಲೂರು 17 [1136]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಥ ಬಿಟ್ಟಿಯಣ್ಣನು ದೋರ ಸಮುದ್ರ ದಲ್ಲಿ ತಾನು ಕಟ್ಟಿಸಿದ ಜಿನಾಲಯಕ್ಕೆ ಮೈಸನಾಡ ಬೀಜವೊಳಲನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಅತಿದೀರ್ಘಘ್ರಾಣಹಸ್ತಂ ನಿಶಿತದಶನದಂಷ್ಟ್ರಾಂಕುರಂ ಪಕ್ಷರಕ್ಷಾ।
ಯತಪಕ್ಷಂ ತಾರ್ಕ್ಷ್ಯನಂತೋವಗಿಸಿ ತುಟಿಯೆ ತನ್ನಾನೆ ಪಾಂಡ್ಯಾವನೀಭೃ॥
ತ್ಪೃತನಾವಿಧ್ವಂಸನೋಪಾರ್ಜಿತಜಯವಧುವಂ ವಿಷ್ಣು ತುಚ್ಛಾಜಿಲಜ್ಜಾ।
ಸ್ಮಿತನಾಂತಂ ಚೋಟಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ॥541॥

ವಿಷ್ಣುದಂಡಾಧಿಪ (ಬಿಟ್ಟಿಯಣ್ಣ)

ಪುಟ್ಟಿದನಾಪ್ಪುಂ ಕೂರ್ಪುಂ। ನೆಟ್ಟನೆ ತನ್ನೊಡನೆ ಪುಟ್ಟೆ ರಿಪುಗಳ್ಗೆ ಭಯಂ।
ಪುಟ್ಟೆ ನಿಜಪತಿಗೆ ಚಕ್ರಂ। ಪುಟ್ಟಿದುದೆಸೆ ವಿಷ್ಣು ಸುಭಟಚೂಡಾರತ್ನಂ॥542॥

ಕುವಳಯಮೆಯ್ದೆ ತನ್ನುದಯದಿಂ ಪರಿತೋಷಮನೆಯ್ದೆ ವಿಶ್ವಬಾಂ।
ಧವಜನಲೋಲಲೋಚನಚಕೋರಚಯಂ ನಿಜದೇಹಕಾಂತಿಯಿಂ॥
ತವದನುರಾಗಮಂ ತಳೆಯೆ ಕಾಶ್ಯಪಗೋತ್ರಪವಿತ್ರನೇಟಿಗ್ಗೆವಾ।
ಡಿವದೆಳದಿಂಗಳಂತನುದಿನಂ ಬಳೆದಂ ಪಿರಿದುಂ ವಿಭೂತಿಯಿಂ॥543॥

ಅನುಪಮಮಪ್ಪ ದಿಗ್ವಿಜಯದಿಂ ಜಯನೊಳ್ ಪಡಿಯಾಗಿ ಬಲ್ಪಿನಿಂ।
ತನಗಪರಾಜಿತತ್ವಮಳವಟ್ಟಿರೆ ತೇಜದಳುರ್ಕೆಯಿಂ ಜಗ॥
ಜ್ಜನಮನುರಾಗದಿಂದಮಿತತೇಜನೆನಲ್ ಕ್ರಮವಿಕ್ರಮಂಗಳಿಂ।
ನೆನೆಯಿಸುವಂ ಪುರಾತನಮಹಾತ್ಮರನಿಮ್ಮಡಿದಂಡನಾಯಕಂ॥544॥

ಪಸರಂಬೆತ್ತೆತ್ತಲುಂ ಬೇರ್ವರಿದು ಬೆಳೆದು ಶಾಖಾನುಶಾಖಾಳಿ ನೀಳ್ದಿ।
ಕ್ಕ್ದೆಸೆಗಂ ತಳ್ತೊಪ್ಪೆ ಸರ್ವರ್ತುಕಸಕಳಫಳೈಶ್ವರ್ಯದಿಂ ಲೋಕಮಂ ರ॥
ಕ್ಷಿಸುತಿರ್ಕಾಪೂರ್ಣಚೇತೋರಥಯುತಕಮಳಾಕಲ್ಪವಲ್ಲೀವಿಳಾಸಾ।
ವಸಥಂ ಶ್ರೀವಿಷ್ಣುದಂಡಾಧಿಪದ್ವಿಜಕುಜಾತಂ ವಿಪಶ್ಚಿದ್ವಿನೂತಂ॥545॥

ಸಮಸಂದಕ್ಷುಣ್ಣಪುಣ್ಯೋದಯಮುದಯನಗಾರೂಢಭಾನುಪ್ರಭಾವಿ।
ಭ್ರಮದಿಂದಂ ನಿಚ್ಚನಿಚ್ಚಂ ಪೊಸಯಿಸೆ ಕಮಳಾನಂದಮಂ ವಿಶ್ವನೇತ್ರೋ॥
ಪಮನೆಂದುಂ ತೇಜದಿಂದಂ ಬೆಳಗುಗುಮೆಳೆಯಂ ವಿಷ್ಣು ವಿಷ್ಣುಕ್ಷಿತೀಶ।
ಕ್ರಮಪಂಕೇಜಾತಭೃಂಗಂ ಚಪಳರಿಪುಚಮೂನಾಥಮತ್ತೇಭಸಿಂಗಂ॥546॥

ಅಭಿರಾಮಾಕಾರದಿಂದಪ್ರತಿಮಭುಜಬಳಾಟೋಪದಿಂದಪ್ರಮೇಯ।
ಪ್ರಭುಮಂತ್ರೋತ್ಸಾಹಶಕ್ತಿತ್ರಿತಯದಿನಮದುರ್ತ್ಸಾಹದಿಂ ವಿಷ್ಣುಭೂವ॥
ಲ್ಲಭಸಪ್ತಾಂಗಕ್ಕಮಾಳಂಬನಮೆನೆ ನೆಗಟ್ದಕ್ಷುಣ್ಣಪುಣ್ಯಾಢ್ಯನೇಕ।
ಪ್ರಭುವಾದಂ ವಿಷ್ಣುದಂಡಾಧಿಪನಖಿಳಬುಧಪ್ರಾಣರಕ್ಷಾಪ್ರವೀಣಂ॥547॥

ಪರಿಪೂರ್ಣೇಂದುಪ್ರಭಾವಿಭ್ರಮದೊಳಮದುರ್ಗ ಗಂಗಾಪಗಾಸ್ಫಾರರುಗ್ವಿ।
ಸ್ತರಮಂ ತಟಿಕ್ಕೈಸಿ ದುಗ್ಧಾರ್ಣವನವರುಚಿಯಂ ತಾಳ್ದಿ ನೀಳ್ದಪ್ಪುದಾದಂ॥
ಧರೆಯಿಂ ದಿಕ್ಚಕ್ರದಿಂ ಮಂದರಶಿಖರದಿನತ್ತಲ್ ವಿಯನ್ಮಂಡಪಾಗ್ರಂ।
ಬರೆಗಂ ಶ್ರೀವಿಷ್ಣುದಂಡಾಧಿಪವಿಪುಳಯಶಃಕಲ್ಪವಲ್ಲೀವಿಳಾಸಂ॥548॥

ದಿಗಧೀಶರ್ ತಮ್ಮ ತಮ್ಮಿರ್ದೆಡೆಯೊಳಗಿದಡಂಗಿರ್ಪಿನಂ ಚೋಟಿಲಾಟಾ।
ದಿಗಳಾಟಂಗೊಂಡು ದುರ್ಗಾಶ್ರಯದೊಳೆ ಸಕಳತ್ರಂ ಭಯಂಗೊಂಡು ಗೋಳುಂ॥
ಡೆಗೊಳುತ್ತಿರ್ಪನ್ನಮಂಭೋನಿಧಿನಿಕಟಮಹೀಪಾಳರಂ ವಿಷ್ಣು ವಿಕ್ರಾಂ।
ತಗುಣಂ ಕೆಯ್ಗಣ್ಮಿ ಬೆಂಕೊಂಡದಟನವರ ಸರ್ವಸ್ವಮಂ ಸೂಱೆಗೊಂಡಂ॥549॥

ಉರಿದುದು ರಾಯರಾಯಪುರಮಾಪುರವಹ್ನಿಶಿಖಾಕಳಾಪಮಾ।
ಪರಿದುವೆ ಕಾಂಚಿಯುತ್ತಲೆನುತುಂ ನಡೆ ನೋಡುವ ಚೋಟಿಚೇರಪಾಂ॥
ಡ್ಯರ ಬಗೆಯೊಳ್ ಧಿಗಿಲ್ಲೆನೆ ಚಮೂಪಶಿಖಾಮಣಿ ವೀರವಿಷ್ಣುಭೀ।
ಕರತರದೋಃಪ್ರತಾಪಶಿಖಿ ನೀಳ್ದು ಪೊದಟ್ದುದಗುರ್ವು ಪರ್ವಿರಲ್॥550॥

ಬಿಟ್ಟಿಯಣ್ಣನ ಪಿತಾಮಹ ಉದಯಾದಿತ್ಯ

ಪದಮತ್ಯುತ್ತುಂಗಗೋತ್ರಾಚಲಶಿಖರದೊಳೊಪ್ಪುತ್ತಿರಲ್ ತನ್ನ ನಿತ್ಯಾ।
ಭ್ಯುದಯಂ ಭೂಮಂಡಳೋತ್ಸಾಹಮನೊದವಿಸೆ ಸಾನಂದಸಸ್ಮೇರಲಕ್ಷ್ಮೀ॥
ವದನಾಬ್ಜಶ್ರೀಯೊಳೊಪ್ಪಂಬಡೆಯೆ ನಿಜವಿಳಾಸಂ ಜಗದ್ವಂದ್ಯಮಾದ।
ತ್ತುದಯಾದಿತ್ಯಪ್ರಭಾವಂ ಪ್ರಕಟಿತಭುವನಾಭೋಗತೇಜೋವಿಳಾಸಂ॥551॥

ಆತನ ಕುಲವಧು ಭುವನ। ಖ್ಯಾತೆ ಜಗತ್ಪೂತೆ ಭಾಗ್ಯಸೌಭಾಗ್ಯಗುಣೋ।
ಪೇತೆ ಮನೋಭವವಿಭವಸ।ಮೇತೆಯೆನಲ್ ಶಾಂತಿಯಕ್ಕನೊರ್ವಳೆ ನೋಂತಳ್॥552॥

ಇವರ ಮಗ ಚಿಣ್ಣದಂಡನಾಥ

ಪರಮಬ್ರಾಹ್ಮ್ಯಪ್ರಭಾವಂ ಮನುಜಪರಿಬೃಢಾಕಾರಮಂ ತಾಳ್ದಿತೆಂಬಂ।
ತಿರೆ ಧೀರೋದಾತ್ತಸತ್ವೋನ್ನತಿಯೊಳಮದುರ್ಪ ನಾನಾಗುಣಾನರ್ಘರತ್ನೋ॥
ತ್ಕರಮಂ ರತ್ನಾಕರಂ ತಾನೆನೆ ತಳೆದೆಱೆಯಂಗಾವನೀನಾಥಧಾತ್ರೀ।
ಭರಮಂ ತಾಳ್ದಿರ್ದನೇಕಪ್ರಭುವೆನೆ ಭುವನಂ ಚಿಣ್ಣದಂಡಾಧಿನಾಥಂ॥553॥

ಇವನ ಹೆಂಡತಿ ಚಂದಲೆ

ಕುಲದ ಪೊಗೞ್ತೆ ಶೀಲದ ನೆಗೞ್ತೆ ಮನೋಭವರಾಜ್ಯಲಕ್ಷ್ಮಿಯಂ।
ನಿಲಿಸಿದ ಗಾಡಿ ಲೋಕದೊಳಗಾವಗಮಿಾಮಿಗಿಲಂದದಿಂದಮು॥
ಗ್ಗಲಿಸಿದ ರೂಢಿ ತನ್ನೊಳಮದೊರ್ಪ್ಪಿರೆ ಚಿಣ್ಣಚಮೂಪಕಾಂತೆ ಚಂ।
ದಲೆ ನೆಱೆ ತಾಳ್ದಿದಳ್ ಧರೆಗಗುಂದಲೆಯಪ್ಪ ಗುಣಪ್ರಭಾವಮಂ॥554॥

ಫಣಿಪತಿಗಂ ವಚೋವಿಷಯಮಲ್ಲವು ಭಾವಿಸೆ ಚಂದಿಯಕ್ಕನೊ।
ಳ್ಗುಣಮವು ನಿಷ್ಕಳಂಕನಿಜರೂಪದೊಳೊಪ್ಪಿರೆಯುಂ ಪೊಗೞ್ತೆಯೊಳ್॥
ತಣಿಯದೆ ಧಾತ್ರಿ ಲಕ್ಷ್ಮಿ ರತಿ ಭಾರತಿ ರೇವತಿ ಸತ್ಯಭಾಮೆ ರು।
ಕ್ಮಿಣಿ ಭುವನಪ್ರಣೂತೆ ಧರಣೀಸುತೆಯೆಂಬುದು ಲೋಕಮಾತೆಯಂ॥555॥

## 114 ಚಿಕ್ಕಮಗಳೂರು 161 [1137]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಂತ್ರಿಗಳಾದ ಮರಿಯಾನೆದಂಡನಾಯಕ ಭರತದಂಡನಾಯಕರು ದೊರೆಯಿಂದ ಭೂಮಿಯನ್ನು ಪಡೆದು ಸಿಂದಗೆರೆಯ ಬಸ್ತಿಗೆ ಬಿಟ್ಟಂತೆ ಹೇಳಿದೆ.

ಭರತದಂಡನಾಯಕ

ಜಯಜಾಯಾಶರಣಂ ರಣಕ್ಷಿತಿಹತಕ್ಷತ್ರಂ ಹತಕ್ಷತ್ರನಿ।
ರ್ದಯನಿರ್ದಾರಿತದೇಹಲೋಹಿತಪಯಶ್ಶಾತಾಸಿ ಶಾತಾಸಿದು॥
ರ್ಜಯಧಾರಾಚಕಿತಾರಿರಕ್ಷಣಭುಜಾದಂಡಂ ಭುಜಾದಂಡಕೋ।
ಟಿಯುಂವದ್ವೀರವಧೂಪ್ರಮೋದಿ ಭರತಶ್ರೀಮಚ್ಚಮೂವಲ್ಲಭಂ॥556॥

ನಯಯುಕ್ತಕ್ರಮವಿಕ್ರಮಂ ಕ್ರಮನಮದ್ಭೂಮಂಡಲಂ ಮಂಡಲ।
ಪ್ರಿಯವೃತ್ತಂ ಪ್ರಿಯವೃತ್ತಸಂಗತಗುಣಗ್ರಾಮಂ ಗುಣಗ್ರಾಮಣೀ॥
ನಯನಾನಂದಕರಂ ಕರಾರ್ಪಿತಧನುರ್ಜ್ಯಾರಾವದೂರೀಕೃತಾ।
ರಿಯಶೋರಾಜಿ ಜಿತೋದ್ಧತಾಜಿ ಭರತಶ್ರೀಮಚ್ಚಮೂವಲ್ಲಭಂ॥557॥

ಅವನೀನೂತಯಶಂ ಯಶೋಧವಳಿತಾಶಾಮಂಡಲಂ ಮಂಡಲಾ।
ಗ್ರವಿಲೂನಾರಿಬಲಂ ಬಲಪ್ರಭುನಮಚ್ಚಂಚಚ್ಛಿಖಾಶೇಖರೀ॥
ಭವದಾತ್ಮಾಂಘ್ರಿನಖೋತ್ಕರು ಕರಗತಾರಿಶ್ರೀವಿಲಾಸಂ ವಿಲಾ।
ಸವತೀಮಾನಿತಮೀನಕೇತು ಭರತಶ್ರೀಮಚ್ಚಮೂವಲ್ಲಭಂ॥558॥

ಸ್ಮರಲೀಲಂ ಸ್ಮರಲೀಲಲೋಲಲಲಿತಭ್ರೂ ಭ್ರೂಧನುರ್ವಿಭ್ರಮೋ।
ತ್ಕರಲೀಲಾಯತದೃಷ್ಟಿ ದೃಷ್ಟಿವಿಲಸತ್ಪುಷ್ಪೇಷು ಪುಷ್ಪೇಷುಜ॥
ರ್ಜರಿತೋನ್ಮತ್ತವಿಲಾಸಿನೀಜನಮನೋಮಾನಂ ಮನೋಮಾನಖೇ।
ದರತೋತ್ಕಂಠವಧೂಕದಂಬಿ ಭರತಶ್ರೀಮಚ್ಚಮೂವಲ್ಲಭಂ॥559॥

ಜಿತಮಂತ್ರಂ ಜಿತಮಂತ್ರನೂತಮಹಿಮಸ್ತೋಮಂ ಹಿಮಸ್ತೋಮಶು।
ಭ್ರತಮಾತ್ಮೀಯಯಶಂ ಯಶೋಲಹರಿಕಾಮಜ್ಜಜ್ಜಗತ್ತರ್ಪಿತ॥
ರ್ಪಿತಲೋಕಸ್ತುತಕೀರ್ತಿ ಕೀರ್ತಿತಭುಜಸ್ತಂಭಂ ಭುಜಸ್ತಂಭಸಂ॥
ಭೃತವಿಕ್ರಾಂತವಧೂಕರೇಣು ಭರತಶ್ರೀಮಚ್ಚಮೂವಲ್ಲಭಂ॥560॥

ಜಿತವಿದ್ವಿಷ್ಟಚಮೂ ಚಮೂಪವಿಲಸನ್ಮಂತ್ರಂ ಲಸನ್ಮಂತ್ರಸಾ।
ಧಿತದುರ್ವೃತ್ತಮಹೋಮಹೋರ್ಜಿತಮಹೀಚಕ್ರಂ ಮಹೀಚಕ್ರಸಂ॥
ಸ್ತುತದೋರ್ಮಂಡಲಮಂಡಲಾಗ್ರದಮಿತಾನಮ್ರಾರಿ ನಮ್ರಾರಿಕೀ।
ರ್ತಿತದಿಗ್ವರ್ತಿತಜೈತ್ರಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭಂ॥561॥

ಪ್ರತಿಪಕ್ಷಕ್ಷಿತಿಕೇತು ಕೇತುಜನಿತದ್ವಿಡ್ಭೀತಿ ಭೀತಿದ್ರುತಾ।
ಶ್ರಿತರಕ್ಷಾನಿಲಯಂ ಲಯಾನಲಲುಠತ್ತಾಪಾಗ್ನಿ ಕೋಪಾಗ್ನಿಶೋ॥
ಷಿತಯುದ್ಧೋದ್ಧತಜೀವನಂ ವನಶಿಖಿಪ್ರೋದ್ಯತ್ಪ್ರತಾಪಂ ಪ್ರತಾ।
ಪತತಶ್ರೀಪರಿಲಬ್ಧಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭಂ॥562॥

ಕರವಾಳಾಹತವಿದ್ವಿಷಂ ದ್ವಿಷದಸೃಕ್ಪೂರಪ್ಲುತೇಭಂ ಪ್ಲುತೇ।
ಭರಥಾಲಂಬಿತಖಡ್ಗಿ ಖಡ್ಗಿನಿಹತಾಶ್ವೌಘಂ ಹತಾಶ್ವೌಘಜ॥
ರ್ಜರಿತಾಂತೌಘವಿಕರ್ಷಿಘೇರವರವವ್ಯಾಜೃಂಭಿತಂ ಜೃಂಭಿತೋ।
ದ್ಧುರದೋರ್ದಂಡಭವಜ್ಜಿತಾಜಿ ಭರತಶ್ರೀಮಚ್ಚಮೂವಲ್ಲಭಂ॥563॥

ಲಲನಾನೀಕಮನೋಮನೋಭವ ಭವಸ್ಫಾರಾಳಿಕಾಖ್ಯಾನಳೋ।
ಜ್ವಲತೇಜೋನಿಜಬಾಹು ಬಾಹುನಿಹತದ್ವಿಡ್ದ್ವಿಟ್ಟಿರೋದೇವಕೀ॥
ರ್ತಿಲತಾವೇಲ್ಲಿತವಾರ್ಧಿ ವಾರ್ಧಿವಲಯಕ್ಷೋಣೀತಲಸ್ತುತ್ಯ ನಿ।
ನ್ನ ಲಸದ್ವಕ್ಷದೊಳಿರ್ಕೆ ಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭ॥564॥

ಅನತಾರಿಶ್ರೀಸಮಾಕರ್ಷಣಮಭಿಜನದಾರಿದ್ರ್ಯತೀವ್ರಗ್ರಹೋಚ್ಚಾ।
ಟನಮತ್ಯುಗ್ರದ್ವಿಷನ್ಮಾರಣಮತುಳಭಯಾರ್ತಾವನೀಪಾಳಕಸ್ತಂ॥
ಭನಮುರ್ವೀವಶ್ಯಮಾತ್ಮಾವನಿಪರಿವೃಢಶಾಂತ್ಯರ್ಥಮಂತ್ರಂ ಜಗನ್ಮಂ।
ಡನಕೀರ್ತಿಶ್ರೀಶ ವಿದ್ವನ್ನಿಧಿ ಭರತಚಮೂನಾಥ ನಿನ್ನೊಂದೆ ಮಂತ್ರಂ॥565॥

ಹರಿ ಭರದಿಂದೆ ಕಿಟ್ಟಿಟಿದು ತಾರದ ಕಲ್ಲೆಡೆಯಲ್ಲದಾಗ್ರಹಂ।
ಬೆರಸು ಬುಧೋತ್ಕರಂ ತಿರಿಯದುರ್ವಿಗೆ ಮಧ್ಯಮಮೆಂಬ ನಿಂದೆಯೊಳ್॥
ಪೊರೆಯದ ಮೇರುವೆಂದಪುದು ಧಾರಿಣಿ ವಿಪ್ರಕುಳಪ್ರದೀಪನಂ।
ಭರತಚಮೂಪನಂ ಮದನರೂಪನನಪ್ರತಿಮಪ್ರತಾಪನಂ॥566॥

ಹೃದಯಂ ಕಾರುಣ್ಯಪೀಯೂಷದ ಪುದಿದೊದವಾಳೋಕನಂ ಚಾರುದಾಕ್ಷಿ।
ಣ್ಯದ ಕೇಳೀಗೇಹಮಾಸ್ಯಾಂಬುಜಮಖಿಳಕಳಾಗರ್ಭಸಂದರ್ಭಮಿಷ್ಟ॥
ಪ್ರದಮುದ್ಯದ್ಭ್ರೂಲತಾಸ್ಪಂದನಮಮರಸರಿತ್ಪೂತಮಾಚಾರಮಾಯ್ತೆಂ।
ಬುದನೆಂದಂದನ್ಯಸಾಮಾನ್ಯನೆ ಭರತಚಮೂಪಂ ಮನೋಜಾತರೂಪಂ॥567॥

ಭುಜದರ್ಪಂ ಶೌರ್ಯಗರ್ಭಂ ವಿತರಣಮಧಿಕಪ್ರೀತಿಗರ್ಭಂ ಸುನೇತ್ರಾಂ।
ಬುಜಮುಂ ದಾಕ್ಷಿಣ್ಯಗರ್ಭಂ ವದನ ಶಶಿಕಲಾಗರ್ಭಮಾಚಾರಸಾರಂ॥
ತ್ರಿಜಗತ್ಸಂಸ್ತೋತ್ರಗರ್ಭಂ ನಿರುಪಮವಿಲಸನ್ಮೂರ್ತಿ ಶೃಂಗಾರಗರ್ಭಂ।
ನಿಜಮೆಂದಂದನ್ಯಸಾಮಾನ್ಯನೆ ಭರತಚಮೂಪಂ ಮನೋಜಾತರೂಪಂ॥568॥

ಮತ್ತೆ ಕೃತಯುಗಮೆ ಬಂದಂ । ದುತ್ತಮಪುರುಷರನೆ ಪಡೆವೊಡೆನಗೆ ದಲೀತಂ।
ಬಿತ್ತೆಂದು ಕಾದಪಂ ಬಿದಿ। ಬಿತ್ತರದಿಂ ಭರತರಾಜದಂಡಾಧಿಪನಂ॥569॥

## 115 ಬೇಲೂರು 335 (ಅನುಬಂಧ), [1138]

ಇದರಲ್ಲಿ (ಹೊಯ್ಸಳ ರಾಜನಾದ ವಿಷ್ಣುವರ್ಧನನ ಆಳಿಕೆಯಲ್ಲಿ) ಹೆಗ್ಗಡೆ ಮಲ್ಲಿಮಯ್ಯನು ಜಿನಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಿನ ಸ್ತುತಿ

ಶ್ರೀದೇವೇಂದ್ರ ನತಶ್ರೀ। ಪಾದಂ ಶ್ರೀಪದ ವಿನಮ್ರ ಶಿಷ್ಯ ಜನಂಗ॥
ಳ್ಗಾದರದಿಂದಂ ಗೆಯ್ಗಿ ಶು। ಭೋದಯಮಂ ಮುಕ್ತಿವಲ್ಲಭಂ ಮಲ್ಲಿಜಿನಂ॥570॥

ಕೊಂಡಕುಂದಾನ್ವಯದ ಮಲ್ಲಿಮಯ್ಯ

ಮುನಿ ಜನದೋದಿಸಿದೋಜೆಯೊ। ಳನುವದಿಪ್ಪುದಿದೊಂದೆ ಕೊಂಡಕುಂದಾನ್ವಯ ನಂ॥
ದನ ವನ ಶುಕಮೆಂದೆನಗಿನಿ। ತನುಗ್ರಹಂಗೆಯ್ಗೆ ಕರುಣದಿಂ ಮುನಿ ನಿವಹಂ॥
॥571॥

ಗಂಗರಾಜ

ಶ್ರೀಮಜ್ಜಿನ ಧರ್ಮಶ್ರೀ। ಧಾಮಂ ಶಕ್ತಿತ್ರಯ ಪ್ರವರ್ಧಿತ ವಿಷ್ಣು॥
ಶ್ರೀಮುಖ್ಯಂ ರತ್ನತ್ರಯ। ಭೂಮಿ ಮಹಾಮಾನ ಮೇರು ಶೃಂಗಂ ಗಂಗಂ॥572॥

**116 ಬೇಲೂರು 202 [1138]**

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಹಾನುಗಲ್ಲು ಕೋಟೆಯನ್ನು ಮುತ್ತಿ ಕಾದುವಾಗ ಕಲಿರಾಯನು ದೊರೆಯ ಅಪ್ಪಣೆಯನ್ನು ಪಡೆದು ಯುದ್ಧದಲ್ಲಿ ತನ್ನ ಶೌರ್ಯವನ್ನು ಮೆರೆದು ಸತ್ತನೆಂದು ಹೇಳಿದೆ.

ಕಲಿರಾಯ

ಸುರಿವ ಸರಲ್ಗೆ ಪಾಯ್ವ ಚತುರಂಗದಳಕ್ಕಣೆದಾರ್ದು ನೂಂಕುವಾ।
ಸುರತರಮಪ್ಪ ಸಿಂಧುರಘಟಾವಳಿಗಳ್ಕದೆ ಕಾದಿ ಬೀರರ॥
ಚ್ಚರಿವಡೆ ಮಾಚಗೌಂಡನ ಮಗಂ ಕಲಿರಾಯಂನೆ ಕೀರ್ತಿಯಂ ವಸುಂ।
ಧರೆ ಪೊಗಟ್ವನ್ನೆಗಂ ಪಡೆದನಾಹವದೊಳ್ ರಣರಂಗಶೂದ್ರಕಂ॥572ಅ॥

ಎತ್ತಿದ ಮೊನೆಯೊಳ್ ರಾಯಂ। ಕುತ್ತಲ್ ಕಾಲಾಳುಮಶ್ವಮುಂ ಮೇಲಾಳಂ।
ತೆತ್ತಮುರುಳ್ದೊಡೆ ಪೆಣನಂ। ಬಿತ್ತಿದ ತೆಱನಾಯ್ತು ಸುರಿಯೆ ಪೂಮಳೆ ನಭದಿಂ
॥572ಆ॥

ಕರಿತುರಗವೀರಭಟರಂ। ಧುರದೊಳ್ ತಳ್ತಿಱಿದು ಕೊಂದ ರಾಯನನಾಗಳ್।
ಸುರಗಣಿಕೆಯರುಯ್ದರ್ ವಿ। ಸ್ತರದಿಂ ಪುಷ್ಪಕವಿಮಾನಮೇಱಿಸಿ ನಭದೊಳ್॥572ಇ॥

ಆಳಿಂ ಮುನ್ನಿಱಿವಂ ಪಿರಿ। ದಾಳಂ ತವೆ ಕೊಂದು ಹಾನುಗಲ್ಲಾಹವದೊಳ್।
ಕಾಳಗವುಂಡನ ತಮ್ಮಂ। ಲೀಳೆಯೆ ಸುರಲೋಕಕೆಯ್ದಿದಂ ಕಲಿರಾಯಂ॥573॥

## 117 ಚೆನ್ನರಾಯಪಟ್ಟಣ 145 [1139]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಹುಳ್ಳರಸನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಹುಳ್ಳರಸನ ಪಿತಾಮಹ ಮುದ್ದರಸ

ಚಾಳುಕ್ಯಾನ್ವಯಪದ್ಮಷಂಡವಿಳಸನ್ಮಾರ್ತಂಡನುಗ್ರಾವನೀ।
ಪಾಳಶ್ರೀಮಧುಸೂದನಂ ಹರಿಶಿರಶ್ಚಂದ್ರಾವದಾತೋದ್ಭದಿ॥
ಕ್ಪಾಳವ್ಯಾಪಿವಿನೂತವಿಶ್ರುತಯಶಂ ಶಶ್ವಜ್ಜಯಶ್ರೀವಧೂ।
ಲೀಳಂ ಮುದ್ದರಸಂ ಧರಿತ್ರಿ ಪೆಸರಂ ಜೀಯೆಂಬಿನಂ ತಾಳ್ದಿದಂ॥574॥

ಶರಣೆಂದಂಗಿದಿರಾಗಿ ಬಂದು ರಣದೊಳ್ ನಿಂದಂಗೆ ತನ್ನೊಂದು ದು।
ರ್ಧರದೋರ್ದಂಡಮೆ ವಜ್ರಪಂಜರಮರಿಪ್ರಾಣಾನಿಳಾಹಾರಭೀ॥
ಕರಕಾಳೋರಗಮೆಂದೊಡಾವನೊ ಸಮಂ ಬಂಟಿಂಗೆ ಪೇಟೆಂದು ಮು।
ದ್ದರಸಂ ಬಣ್ಣಿಸೆ ಧಾತ್ರಿ ಸಂದನೆಳೆಯೊಳ್ ಚಾಳುಕ್ಯವಂಶೋದ್ಭವಂ॥575॥

## 118 ಅರಸಿಯಕೆರೆ 18 [1139]

ಇದರಲ್ಲಿ ಹೊಯ್ಸಳ ರಾಜನಾದ ವಿಷ್ಣುವರ್ಧನನ ಆಳಿಕೆಯಲ್ಲಿ ಕೇಸರಿಜೆಟ್ಟಿ ಒಂದು ದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.

ಕೇಸರಿ

ಕೇಸರಿಗೆ ಶೌರ್ಯದೊಳ್ ದೊರೆ। ಕೇಸರಿ ಬಹುಬಂಧಮಲ್ಲವಿದ್ಯಾಬಲದೊಳ್।
ಶಾಸಿತಮುಷ್ಟಿಕಚಾಣೂ। ರಾಸುರನೊಬ್ಬನೆ ಸಮಾನಮಾಶ್ರೀಕೃಷ್ಣಂ॥576॥

ಪೆಸರುಂ ತನ್ನಯ ಕೀರ್ತಿಯುಃ। ಮೆಸೆದಾಚಂದ್ರಾರ್ಕತಾರಮೊಪ್ಪುವಿನಂ ಮಾ।
ಡಿಸಿದಂ ದೇಗುಲಮನಿದಂ। ವಸುಧಾವಧುವಿಂಗೆ ರತ್ನಭೂಷಣಮೆನಿಸಲ್॥577॥

## 119 ಶ್ರವಣಬೆಳ್ಗೊಳ 141 [1139]

ಇದರಲ್ಲಿ ಬಲದೇವದಂಡನಾಯಕನ ಪೌತ್ರನಾದ ಬಲದೇವನು ಸತ್ತಂತೆಯೂ ಅವನ ತಾಯಿಯೂ ಸಹೋದರಿಯೂ ಪರೋಕ್ಷವಿನಯವಾಗಿ ಒಂದು ಪಟ್ಟಸಾಲೆಯನ್ನು ಕಟ್ಟಿಸಿದಂತೆಯೂ ಹೇಳಿದೆ.

ಬಲದೇವದಂಡನಾಯಕ

ಪಲರುಂ ಮುನ್ನಿನ ಪುಣ್ಯದೊಂದೊದವಿನಿಂ ಭಾಗ್ಯಕ್ಕೆ ಪಕ್ಕಾದೊಡಂ।
ಚಲದಿಂ ತೇಜದಿನೊಳ್ಪಿನಿಂ ಗುಣದಿನಾದೌದಾರ್ಯದಿಂ ಧೈರ್ಯದಿಂ॥

ಲಲನಾಚಿತ್ತಹರೋಪಚಾರವಿಧಿಯಿಂ ಗಾಂಭೀರ್ಯದಿಂ ಶೌರ್ಯದಿಂ।
ಬಲದೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರ್॥578॥

ಅವನ ಹೆಂಡತಿ ಬಾಚಿಕಬ್ಬೆ

ಸತಿರೂಪಮಲ್ತು ನೋೞ್ಪೊಡೆ । ಕ್ಷಿತಿಯೊಳ್ ಸೌಭಾಗ್ಯವತಿಯನುನ್ನತಮತಿಯಂ।
ಪತಿಹಿತೆಯಂ ಗುಣವತಿಯಂ । ಸತತಂ ಕೀರ್ತಿಪುದು ಬಾಚೆಯಂ ಭುವನಜನಂ ॥ 579 ॥

## 120 ಶ್ರವಣಬೆಳ್ಗೊಳ 142 [1139]

ಇದರಲ್ಲಿ ಬಲದೇವದಂಡನಾಯಕನ ಮಗ ಸಿಂಗಿಮಯ್ಯನು ಸಮಾಧಿಯಿಂದ ಮುಡಿಪಿದಂತೆಯೂ ಅವನ ಹೆಂಡತಿ ನಿಸಿದಿಗೆಯನ್ನು ನಿಲ್ಲಿಸಿದಂತೆಯೂ ಹೇಳಿದೆ.

ಬಲದೇವ ದಂಡನಾಯಕ

ಸ್ಥಿರನೇ ಬಾಪ್ಪಮರಾದ್ರಿಯಿಂದಮಧಿಕಂ ಗಂಭೀರನೇ ಬಾಪ್ಪು ಸಾ ।
ಗರದಿಂದಗ್ಗಳಮೆಂತು ದಾನಿಯೆ ಸುರೋರ್ವೀಜಕ್ಕೆ ಮೇಲ್ ಭೋಗಿಯೇ ॥
ಸುರರಾಜಂಗೆಣೆಯೆಂದು ಕೀರ್ತಿಪುದು ಕೆಯ್ಕೊಂಡಟ್ಟಿಜಿಿಂ ಸಂತತಂ ।
ಧರೆಯೆಲ್ಲಂ ಬಲದೇವಮಾತ್ಯನನಿಳಾಲೋಕೈಕವಿಖ್ಯಾತನಂ ॥ 580 ॥

## 121 ಹಾವೇರಿಯ (ಧಾರವಾಡ ಜಿಲ್ಲೆ) ಶಾಸನ [ಸು. 1140]*

ಈ ಶಾಸನವು ನರಸಿಂಹ ದೇವಸ್ಥಾನದ ಬಳಿ ಇದೆ. ಇದರ ಸಂಪೂರ್ಣವಾದ ಪ್ರತಿ ದೊರೆತಿಲ್ಲ. ದೊರೆತಿರುವ ಭಾಗದಲ್ಲಿ ಪೆರ್ಮ ಜಗದೇಕಮಲ್ಲನವರೆಗೆ ಚಾಳುಕ್ಯವಂಶವು ವರ್ಣಿತವಾಗಿದೆ. ಇಲ್ಲಿ ಕೊಟ್ಟಿರುವ ರಾಜ ಪರಂಪರೆಗೂ ಇತರ ಗ್ರಂಥಗಳಲ್ಲಿ ಹೇಳಿರುವ ರಾಜ ಪರಂಪರೆಗೂ ಸ್ವಲ್ಪ ವ್ಯತ್ಯಾಸವಿದೆ.

ವಿಕ್ರಮಾದಿತ್ಯ

ಕಲಿಕಾಳಾವನಿಪಾಳ ಜಾಳ ಚಿರ ದೋರ್ವಾಸೋಪಜಾತೋದ್ಧತಾ।
ಖಿಲ ಕಾಲುಷ್ಯ ಕಳಂಕ ಪಂಕ ಪಟಲ ಪ್ರಕ್ಷಾಳನಂ ಮಾಡಲೆಂ॥
ದೊಲವಿಂ ತೀರ್ಥ ಜಳಾವಗಾಹನಮನಾದಂ ಮಾಡುತಿರ್ಪಂತೆ ನಿ।
ಚ್ಚಲುಮಿರ್ಪಳ್ ಜಯಲಕ್ಷ್ಮಿ ಖಡ್ಗ ಜಳದೊಳ್ ಚಾಳುಕ್ಯ ಚಕ್ರೇಶನಾ॥581॥

* ಈ ಶಾಸನದ ಅಸಮಗ್ರ ಪ್ರತಿಯನ್ನು ಹಾವೇರಿ ಮ್ಯುನಿಸಿಪಲ್ ಹೈಸ್ಕೂಲ್ ಹೆಡ್‌ಮಾಸ್ಟರ್ ಶ್ರೀಮಾನ್ ಎಚ್. ಜಿ. ಬೆಂಗೇರಿ ಅವರು ಬರೆದು ಕಳುಹಿಸಿಕೊಟ್ಟಿದ್ದಾರೆ.

### ಸೋಮೇಶ್ವರ

ವಿನತಾರಾತಿ ನೃಪಾಳ ಮೌಳಿ ಮಣಿಗಳ್ ನಕ್ಷತ್ರಮಾತ್ಮೀಯ ಕೀ ।
ರ್ತಿ ನವಾಭ್ಯುನ್ನತ ಚಂದ್ರಿಕಾ ಪ್ರಸರಮೋರಂತಸ್ಸತಾಪಂ ಜಗ ॥
ಜ್ಜನಮೆಲ್ಲಂ ಸುಚಕೋರಕಾವಳಿಯೆನಲ್ ಸೋಮಾಖ್ಯೆ ಭೂಚಕ್ರದೊಳ್ ।
ತನಗನ್ವರ್ಥಮೆನಲ್ ವಿರಾಜಿಸಿದಪಂ ಸೋಮೇಶ್ವರೋರ್ವೀಶ್ವರಂ ॥ 582 ॥

ಅರಿಭೂಪರ ತೇಜದ ದ। ಳ್ಳುರಿ ಮಟ್ಟುಗುವೊರ್ಮೆ ತನ್ನ ಪೆಸರ್ಗೊಳಲೇನ ॥
ಚ್ಚರಿವಡೆದುದೊ ಜಗಕತಿ ಭೀ। ಕರತರ ತರವಾರಿ ವಾರಿ ಸೋಮೇಶ್ವರನಾ॥583॥

### ಜಗದೇಕಮಲ್ಲ

ಹರಿ ದುಗ್ಧಾಂಭೋಧಿಯೊಳ್ ವಿಶ್ರಮಿಸಿ ಸುಖದೊಳಂದಿರ್ದನಾ ಕೂರ್ಮ ರಾಜಂ।
ಪಿರಿದುಂ ಪಾತಾಳ ಪಂಕ ಪ್ರಥಿತ ಪೃಥುಳ ದೇಶಂಗಳಂ ಪೊಕ್ಕು ಲೀಲಾ ॥
ಕರನಾದಂ ಭೋಗಿ ಭೋಗಂಗಳನನವರತಂ ಸೇವಿಸುತ್ತಿರ್ದ ನತ್ಯಾ ।
ದರದಿಂ ಶ್ರೀಮತ್ಪ್ರತಾಪಕ್ಷಿತಿಪತಿ ಧರಣೀಭಾರಮಂ ತಾಳ್ದಿದಾಗಳ್ ॥ 584 ॥

## 122 ಕಡೂರು 96 [1141]

ಇದರಲ್ಲಿ ಹೊಯ್ಸಳ ರಾಜನಾದ ವಿಷ್ಣುವರ್ಧನನ ಪಿರಿಯರಸಿ ರಾಜಲದೇವಿಯ ಸೋದರಮಾವ ಮಂಚಿಯರಸನು ವಿಷ್ಣು ಸಮುದ್ರದಲ್ಲಿ ಮಂಚೀಶ್ವರದೇವರನ್ನು ಪ್ರತಿಷ್ಠಿಸಿ, ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಯಾದವರಾದವರೊಳ್ ಮು। ನ್ನಾದವರಿನ್ನಪ್ಪರಿವನ ಪಡಿಯಿಲ್ಲೆನೆ ಶೌ ।
ರ್ಯೋದಯದಿಂ ಪಸರಿಸಿದಂ। ಮೇದಿನಿಯಂ ವೀರವಿಷ್ಣುವರ್ಧನದೇವಂ ॥ 585 ॥

ವನರುಹನಾಭನ ಪನ್ನೊಂ। ದನೆಯವತಾರಮಿದೆನಲ್ಕೆ ಯದುಕುಲದೊಳ್ ಕೃ।
ಷ್ಣನೆ ತಾನೆ ಬಂದು ಪುಟ್ಟಿದ। ನೆನೆ ನೆಗಟ್ದನುದಾರಿ ವೀರಭುಜಬಳಗಂಗಂ ॥ 586 ॥

ಕಮಠಂಗಿನ್ನೇಕೆ ಸರ್ವೋರ್ವಿಯ ಪೊಱೆ ಫಣಿರಾಜಂಗದಿನ್ನೇಕಿಳಾಭಾ।
ರಮದಿನ್ನೇಕಾದಿಶಾದಂತಿಗೆ ಮಹಿಭರಮಂ ತಾಳ್ದುವಾಯಾಸಮಿನ್ನೇ॥
ಕೆ ಮಹೀಭೃನ್ಮೂಲಮಂ ಪೊರ್ದುವ ಗಸಣಿ ನೆಲಕ್ಕಾನೆ ಪೋ ಸಾಲ್ವೆನೆಂದ।
ಶ್ರಮದಿಂ ಭೂಚಕ್ರಮಂ ವಿಕ್ರಮದೊಳೆ ಭುಜದೊಳ್ ವಿಷ್ಣುಭೂಕಾಂತನಾಂತಂ ॥ 587 ॥

ತರವಾರಿಯೊಂದಱಿಂ ಬಹು। ತರವಾರಿಯನುದ್ಧತಾರಿನಾರೀನೇತ್ರಾಂ ।
ಬುರುಹಂಗಳೊಳಗೆ ತೋರ್ಪಂ। ಧುರದೊಳ್ ಶ್ರೀವಿಷ್ಣುಭೂಪನೆನಗಿದು ಚಿತ್ರಂ ॥588॥

### ವಿಷ್ಣುವರ್ಧನನ ಹೆಂಡತಿ ಬಮ್ಮಲೆ

ಆ ವಿಭುವಿನ ಪಟ್ಟಮಹಾ। ದೇವಿ ಮದದ್ವಿರದಗಮನೆ ಬಿಂಬಾಧರೆ ಲ।
ಜ್ಜಾವತಿ ಬಮ್ಮಲದೇವಿ ಕ । ಲಾವತಿ ಲಾವಣ್ಯಪುಣ್ಯವತಿ ಸೊಗಯಿಸಿದಳ್ ॥589॥

ರತಿಗಮರುಂಧತಿಗಂ ಸರ। ಸತಿಗಂ ರೇವತಿಗಮೆಸೆವ ಪಾರ್ವತಿಗಂ ಶ್ರೀ।
ಸತಿಗಂ ಸಮನೆನಿಸಿ ಮಹಾ। ಸತಿ ಬಮ್ಮಲದೇವಿ ತೊಳಗಿ ಬೆಳಗಿದಳೆಳೆಯಂ ॥ 590 ॥

### ವಿಷ್ಣುವರ್ಧನನ ಪಿರಿಯರಸಿ ರಾಜಲದೇವಿ

ಭೃಂಗವಿನೀಳಕುಂತಳೆಗೆ ರಾಜಮರಾಳವಿಳಾಸಯಾನೆಗು।
ತ್ತುಂಗಪಯೋಧರದ್ವಯೆಗೆ ಪೀನನಿತಂಬೆಗೆ ವಿಷ್ಣುಭೂಪನ ॥
ರ್ಧಾಂಗಿಗೆ ಚಾರುಲೋಚನೆಗೆ ರಾಜಲದೇವಿಗೆ ರೂಢಿವೆತ್ತ ರಾ।
ಜಾಂಗನೆಯರ್ ಪೆಜರ್ ಸಮನೆ ರಾಜಿತರೂಪವಿಳಾಸದೇಟ್ಗೆಯೊಳ್ ॥ 591 ॥

ರಾಜಿತಪಾಣಿಪಲ್ಲವೆಗೆ ಮನ್ಮಥಮತ್ತಗಜೇಂದ್ರಯಾನೆಗಂ।
ಭೋಜದಳಾಕ್ಷಿಗುನ್ನತನಿತಂಬೆಗೆ ಕಾಮುಶರೋಪಮಾನರಾ ॥
ರಾಜಿತಕೋಮಳಾಂಗುಳಿಗೆ ವಿಷ್ಣುನರೇಂದ್ರಮನಸ್ಸರೋಜಿನೀ ।
ರಾಜಮರಾಳಬಾಳಕಿಗೆ ರಾಜಲದೇವಿಗೆ ಪೇಟಿದಾರ್ ಸಮಂ ॥ 592 ॥

### ಫಲಸ್ತುತಿ

ಇಂತೀ ಧರ್ಮಮನಾಪನಾವ ತೆಜದಿಂ ಕಾವಂ ಯಥಾನ್ಯಾಯದಿಂ।
ದಂತಾತಂಗೆ ಹಿತಂಗೆ ಗಂಗೆ ಗಯೆ ಕೇದಾರಂಗಳೊಳ್ ಸಂದ ಮ॥
ತ್ತಂ ತೀರ್ಥಂಗಳೊಳಿಂದ್ವಿನಗ್ರಹಣತತ್ಕಾಲಂಗಳೊಳ್ ಭಕ್ತಿಯಿಂ।
ದಂ ತಾಂ ಕೊಟ್ಟ ಫಲಂ ಮಹಾದ್ವಿಜರ್ಗೆ ಭಾಸ್ವದ್ಗೋಸಹಸ್ರಂಗಳಂ ॥ 593 ॥

ಗಂಗಾಯಮುನೆಗಳೆರಡಜ। ಸಂಗಮದೊಳಗಣ್ಯಪುಣ್ಯವರತೀರ್ಥಸ್ಥಾ ।
ನಂಗಳೊಳಿರ್ದ ತಪೋಧನ। ರಂ ಗೋಬ್ರಾಹ್ಮಣರನಟಿದನಿಂತಿದನಟಿದಂ ॥ 594 ॥

## 123 ಚೆನ್ನರಾಯಪಟ್ಟಣ 186 [1142]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಸೋವರಸ, ದಾವರಸ ಮುಂತಾದವರು ನಾಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಕೇಶವ

ಉತ್ತರಿಪಂ ಜಸಲತೆಯಂ। ಬಿತ್ತರಿಪಂ ಸದ್ಗುಣಂಗಳಂ ಬುಧತತಿಯೊಳ್ ।
ಕತ್ತರಿಪಂ ಭಯಲೋಭಮ। ನುತ್ತಮಪುರುಷಂ ಮಹಾಂತಗುಣಿ ಕೇಶವನುಂ ॥ 595 ॥

ಕೇಶವನ ಹೆಂಡತಿ ದಣ್ಣಲದೇವಿ

ಪೊಳೆವಲರ್ಗಣ್ಗಳೊಪ್ಪೆ ನಳಿತೋಳ್ಗಳ ಭಾವಮದೊಪ್ಪೆ ಕೋಮಳಾಂ।
ಗುಳಿನಖವೊಪ್ಪೆ ದಂತನಿಕರಂಗಳ ರೋಚಿಗಳೊಪ್ಪೆ ಜಂಘೆಯುಂ॥
ಸೆಳೆನಡುವುಂ ನಿತಂಬಮುಮದೊರ್ಪ್ಪಿರೆ ದಣ್ಣಲದೇವಿಯೊಪ್ಪುತುಂ।
ಸುಳಿವಳಪೂರ್ವರೂಪೆಯೆನೆ ಕೇಶವದೇವನ ಲಕ್ಷ್ಮಿ ಲೀಲೆಯಿಂ ॥ 596 ॥

ದಾವರಸ

ನುಡಿದುದೆ ದೇವಾಲಿಕೆ ಮೇಣ್। ನಡೆವಳಿ ಮನುಮಾರ್ಗಮಾರ್ಪು ಸುರಕುಜದ ಬನಂ।
ಎಡೆಗೊಂಡ ರೂಪು ಕಾಮನ। ಹಿಡಿದಲರ್ಗಣೆಯೆನಿಪ ದಾವದಂಡಾಧಿಪನುಂ ॥ 597 ॥

## 124 ನಾಗಮಂಗಲ 94 [1142]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಸಾಮಂತ ಸೋಮೆಯನಾಯಕನು ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಫಲಸ್ತುತಿ

ಪ್ರಿಯದಿಂದಿಂತಿದನೆಯ್ದೆ ಕಾವ ಪುರುಷಂಗಾಯುಂ ಜಯಶ್ರೀಯುಮು।
ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವಿಯೊಳ್ ವಾರಣಾ॥
ಸಿಯೊಳೇೞ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂ।
ದಯಶಂ ಪೊರ್ದುಗುಮೆಂದು ಸಾಱಿದಪುದೀ ಶೈಳಾಕ್ಷರಂ ಸಂತತಂ ॥ 598 ॥

## 125 ದಾವಣಗೆರೆ 85 [1143]

ಇದರಲ್ಲಿ ಚಾಳುಕ್ಯರಾಜನಾದ ಜಗದೇಕಮಲ್ಲನ ಆಳಿಕೆಯಲ್ಲಿ ವೀರಪಾಂಡ್ಯನ ದಂಡನಾಯಕ ಸೇನಾಪತಿ ಅರಸಿಯಕೆರೆಯ ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಗದೇಕಮಲ್ಲ

ವನಧಿಪರೀತಭೂತಳದೊಳೆಂದುದನೊಲ್ಲದ ರಾಯರಿಲ್ಲ ತ।
ನ್ನನೆ ಶರಣೆಂದು ಜೀವಿಸದ ಭೂಭುಜರಿಲ್ಲ ಸಮಸ್ತವಸ್ತುವಾ॥
ಹನಮನನೂನಕಾಂಚನಮನಿತ್ತಿರದುದ್ಧತರಿಲ್ಲ ಜೀಯೆನು।
ತ್ತನುದಿನಮೆಯ್ದೆ ಬಿಟ್ಟಿವೆಸಗೆಯ್ಯದ ಜಟ್ಟಿಗರಿಲ್ಲ ನೋೞ್ಪಡೇ।
ನನುಪಮಮಾಯ್ತೊ ರಾಜ್ಯವಿಭವಂ ಜಗದೊಳ್ ಜಗದೇಕಮಲ್ಲನಾ ॥599॥ *

* ಇದು ಪಂಚಪಾದ ವೃತ್ತ

ಅಳವಿಗಳುಂಬಮುಪ್ಪ ಭುಜಗರ್ವದ ಚೋಳನೃಪಾಳನಂಜಿ ತ ।
ಲ್ಲಟಿಸೆ ತಗುಳ್ದು ಚೋಳ್ಕಿಲನನಾಳ್ಕಿಲನಾಗಿರೆ ಮಾಡಿಕೊಂಡ ಹೊ ॥
ಯ್ಸಳನನದಿರ್ಪಿ ತೇಜದೆಸಕಂ ಮಿಗಲಾನೆಗವರ್ತೆಗೊಂಡನಾ ।
ರಳವೊ ಭುಜಪ್ರತಾಪವಿಭವಂ ಜಗದೊಳ್ ಜಗದೇಕಮಲ್ಲನಾ ॥600॥

ವೀರಪಾಂಡ್ಯ

ಎಸಕದ ಸೋಮವಂಶಜರೊಳಾರ್ ದೊರೆ ತನ್ನೊಳೆನಿಪ್ಪುದೊಂದು ಸಾ ।
ಹಸದ ನಿಮಿರ್ಕೆ ವರ್ಧಿಸುವ ರಾಜ್ಯದಮರ್ಕೆ ಸುಖಪ್ರಪಂಚಮಂ ॥
ಪೆಸರಿಪ ತೋರ್ಕೆ ವೈರಿಗಳ ರಾಜ್ಯದ ಸಾರ್ಕೆ ಕಡುರ್ಪಿನಿಂ ವಿಗು ॥
ರ್ವಿಸುವರ ಮೀಸೆಯುಂ ಸುಡುವ ತೇಜದಳುರ್ಕೆ ಧರಿತ್ರಿಯೊಳ್ ವಿರಾ ।
ಜಿಸುತಿರಲುತ್ತರೋತ್ತರಮಿಳಾಸ್ತುತಿವೆತ್ತುದು ವೀರಪಾಂಡ್ಯನಾ ॥601॥ *

## 126 ಶ್ರವಣಬೆಳ್ಗೊಳ 140 [1145]

ಇದರಲ್ಲಿ ಮೇಘಚಂದ್ರತ್ರೈವಿದ್ಯನ ಶಿಷ್ಯ ಪ್ರಭಾಚಂದ್ರನು ಸ್ವರ್ಗಸ್ಥನಾದಂತೆ ಹೇಳಿದೆ.

ಶುಭಕೀರ್ತಿ

ಘನದರ್ಪೋನ್ನದ್ಧಬೌದ್ಧಕ್ಷಿತಿಧರಪವಿಯಿಾಬಂದನೀಬಂದನೀಬಂ ।
ದನೆ ಸನ್ನೈಯಾಯಿಕೋದ್ಯತ್ತಿಮಿರತರಣಿಯಿಾಬಂದನೀಬಂದನೀಬಂ ॥
ದನೆ ಸನ್ಮೀಮಾಂಸಕೋದ್ಯತ್ಕರಿಕರಿರಿಪುವೀಬಂದನೀಬಂದನೀಬಂ ।
ದನೆ ಪೋ ಪೋ ವಾದಿ ಪೋಗೆಂದುಲಿವುದು ಶುಭಕೀರ್ತೀದ್ಧಕೀರ್ತಿಪ್ರಘೋಷಂ ॥602॥

ವಿತಥೋಕ್ತಿಯಲ್ತಜಂ ಪಶು । ಪತಿ ಶಾರ್ಙ್ಗಿಯೆನಿಪ್ಪ ಮೂವರುಂ ಶುಭಕೀರ್ತಿ ।
ವ್ರತಿಸನ್ನಿಧಿಯೊಳ್ ನಾವೋ । ಚಿತಚರಿತರೆ ತೊಡರ್ದೊಡಿತರವಾದಿಗಳಳವೇ ॥603॥

ಸಿಂಗದ ಸರಮುಂ ಕೇಳ್ದ ಮ । ತಂಗಜದಂತಳ್ಕಿ ಬಳ್ಕಲಲ್ಲದೆ ಸಭೆಯೊಳ್ ।
ಪೊಂಗಿ ಶುಭಕೀರ್ತಿಮುನಿಪನೊ । ಳೇಂ ಗಡ ನುಡಿಯಲ್ಕೆ ವಾದಿಗಳ್ಗೆಂಟೆರ್ದೆಯೇ ॥604॥

ವೀರಣಂದಿ

ಹರಿಹರಹಿರಣ್ಯಗರ್ಭರ । ಸುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋ ।
ಭರದಿಂದುರಿಪಿದರೆನೆ ಬಿ । ತ್ತರಿಸದರಾರ್ ವೀರಣಂದಿಸೈದ್ಧಾಂತಿಕರಂ ॥605॥

* ಇದು ಪಂಚಪಾದ ವೃತ್ತ

## 127 ನಾಗಮಂಗಲ 76 [1145]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ತಂತ್ರಪೆಗ್ಗಡೆ ದೇವರಾಜನು ಸೂರನಹಳ್ಳಿಯಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಶ್ರೀಕಾಂತಾನೇತ್ರನೀಳೋತ್ಪಳವದನಸರೋಜಾತಸಸ್ಮೇರಲೀಲಾ ।
ಲೋಕಂ ಲೋಕತ್ರಯೋಜ್ಜೃಂಭಿತವಿಶದಯಶಶ್ಚಂದ್ರಿಕಾದೋಃಪ್ರತಾಪ ॥
ವ್ಯಾಕೀರ್ಣ್ಣಂ ತ್ಯಕ್ತಯುಕ್ತಕ್ರಮಕಳಿತಕುಭೃಚ್ಚಕ್ರಖೇದಪ್ರಮೋದ ।
ಶ್ರೀಕಂ ಶ್ರೀವಿಷ್ಣುಭೂಪಂ ಬೆಳಗುಗೆ ಜಗಮಂ ರಾಜಮಾರ್ತಂಡರೂಪಂ ॥606॥

ಜಳಧಿವ್ಯಾವೇಷ್ಟಿತೋರ್ವ್ವೀಪತಿಯೆನಿಸಿ ಸುಖಂ ಬಾಟ್ಗೆ ಚಂದ್ರಾರ್ಕತಾರಂ ।
ತಳಕಾಡಂ ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ ॥
ತಳವಾರಲ್ ತಳ್ತ ಭೂಪಾಳರ ಹೆಡತಲೆಯಂ ಧೊಪ್ಪೆನಲ್ ಹೊಯ್ದ ಗಂಡಂ ।
ಬಳವದ್ರಾಜ್ಯಂಗಳಂ ತನ್ನಲಗಿನ ಮೊನೆಯೊಳ್ ಪೊಯ್ದು ಕೆಯ್ಕೊಂಡ ಗಂಡಂ ॥607॥

ದೇವರಾಜ

ಜನಸಂಸ್ತುತ್ಯರೊಳೀತನತ್ಯಧಿಕನೀತಂ ವಿಶ್ರುತಾಚಾರನೀ ।
ತನತರ್ಕ್ಯಾಸ್ಪದನೀತನುದ್ಧ್ವಯಂಶನೀತಂ ಸತ್ಕಳಾಧಾರನೆಂ ॥
ದೆನಿತಾನುಂ ತೆಱದಿಂದೆ ಬಣ್ಣಿಸಲಿಳಾಲೋಕಂ ಕರಂ ಪೆಂಪುವೆ ।
ತ್ತನುದಾತ್ತಸ್ಥಿತಿಯಿಂ ಸುಹೃಜ್ಜನವಿಪದ್ವಿದ್ರಾವಣಂ ದೇವಣಂ ॥608॥

ದೇವರಾಜನ ಹೆಂಡತಿ ಕಾಮಲದೇವಿ

ತಳಿರಂ ಕೆಂದಳಮಿಂದುವಂ ವದನಮುದ್ಭೃಂಗಾಳಿಯಂ ಕುಂತಳಾ ।
ವಳಿ ಚೆಂಬೊಂಗೊಡನಂ ಪೊದಟ್ಟಿ ಪೋಲೆ ಮುಕ್ತಾನೀಕಮಂ ದಂತಮು ॥
ತ್ಪಳಮಂ ಲೋಚನಮಿಕ್ಷುಚಾಪಲತೆಯಂ ಭ್ರೂವಿಭ್ರಮಂ ಪೋಲ್ವೆಯಂ ।
ತಳೆಯಲ್ ಕಾಮಲದೇವಿ ಮನ್ಮಥಧನುರ್ಜ್ಯಾಲೇಖೆಯಂತೊಪ್ಪಿದಳ್ ॥609॥

## 128 ಸೊರಬ 138 [ಸು. 1145]

ಈ ಅಸಮಗ್ರಶಾಸನದಲ್ಲಿ ಚಾಳುಕ್ಯರಾಜನಾದ 2ನೆಯ ಜಗದೇಕಮಲ್ಲನ ಸಾಮಂತ ಏಕ್ಕಲದೇವನ ಮತ್ತು ಅವನ ಹೆಂಡತಿಯ ಸ್ತುತಿ ಇದೆ.

### ಬನವಾಸಿದೇಶ

ವರರತ್ನಾಕರದಿಂದಳಂಕರಿಸಿ ಮೆಯ್ವೆಚ್ಚಿರ್ದ ಭೂದೇವಿಗಾ ।
ದರದಿಂ ಕುಂತಳದಂತೆ ಕುಂತಳಸುದೇಶಂ ತೋರ್ಕುಮಾದೇಶಕಾ ॥
ದರಣೀಯಂ ಬನವಾಸಿದೇಶಮದು ಭೋಗಕ್ಕಾಗರಂ ಸೌಖ್ಯಸಾ ।
ಗರಮಾಹ್ಲಾದಕರಂ ನಿರಂತರವಿಳಾಸಾವಾಸಲಕ್ಷ್ಮೀಕರಂ ॥610॥

### ಏಕ್ಕಲದೇವ

ಕರವಾಳಿಂ ಪೊಯ್ಯೆ ಮಾಱಾಂತಹಿತರ ತಲೆಗಳ್ ಸೆಂಡುವೊಯ್ದಂತೆ ಪಾಱು ।
ತ್ತಿರೆ ಮುಂಡಂ ಜೆಂಡುಮುಂದಾಗುರುಳುತಿರೆ ರಣಕ್ಷೋಣಿಯೊಳ್ ಭೂತವೇತಾ ॥
ಳರ ಪರ್ವಂ ತಾನಿದೆಂದಚ್ಚರಿವಡೆ ಸುರಟಿಂದಾಂತರಂ ಕೊಲ್ವನತ್ಯು ।
ದ್ಧುರವೀರಾಡಂಬರಂ ತ್ರೈಭುವನಭರಿತಮಾಗೆಕ್ಕಲಕ್ಷೋಣಿಪಾಳಂ ॥611॥

ಬಳವದ್ವಿಕ್ರಾಂತದೊಳ್ ಕಾಯ್ಪಿನೊಳದಟಿನೊಳಾಕ್ಷೇಪದೊಳ್ ಭೀಮಸೇನಂ ।
ಬಳವದ್ರಾಮಾನುಜಂ ಬಾಡವಶಿಖಿ ಹನುಮಂ ವೈನತೇಯಂ ಸಮಂ ತ ॥
ನ್ನೊಳೆನಿಪ್ಪಂ ಮಾರ್ಮರಾರಾಂತರನದಟಲೆವಂ ಕೊಲ್ವನಾಟಂದು ಗೆಲ್ವಂ ।
ವರವೀರಾಡಂಬರಂ ತ್ರೈಭುವನಭರಿತಮಾಗೆಕ್ಕಲಕ್ಷೋಣಿಪಾಳಂ ॥612॥

ಮುಳಿದಿದಿರಾಂತ ದುರ್ಧರವಿರೋಧಿಬಳಾಂಬುಧಿಗುಗ್ರಬಾಡವಾ ।
ನಳನದಟಿಂದೆ ಮಚ್ಚರಿಪ ದರ್ಪದ ಮನ್ನೆಯರೆಂಬಹೀಂದ್ರಮಂ ॥
ಡಳಿಗೆ ಫಣೀಂದ್ರವೈರಿಯೆನಲಾಂತು ಬರ್ದುಂಕುವನಾವನುದ್ಧುದೋ ।
ರ್ಬಳದಿನರಾತಿವೀರಭಟನೆಕ್ಕಲವೀರನೊಳಾಜಿರಂಗದೊಳ್ ॥613॥

ಶರಣೆಮಗೆಂದು ಬಂದು ಮಱೆವೊಕ್ಕು ಬರ್ದುಂಕದೆ ಕೀೞಿ ಮೀಱಿ ಮ ।
ಚ್ಚರಿಸುವ ವೈರಿಮನ್ನೆಯರ ಕೋಟಿಮ್ಮಿದುಳಿಂ ಪೊಸ ಕಂಡದಿಂಡೆಯಿಂ ॥
ಕರುಳ ಪಿಣಿಲ್ಗಳಿಂ ರುಧಿರದಿಂಬೆ ಮರುಳ್ವಡೆಗುದ್ಧುರಾಗಮಂ ।
... ವಿಪನೆಂದೊಡಾಹವದೊಳೆಕ್ಕಲವೀರನನಾಂಪ ಗಂಡರಾರ್ ॥614॥

### ಎಕ್ಕಲದೇವನ ಹೆಂಡತಿ ಬೊಪ್ಪಾದೇವಿ

ಉಮೆ ಸೌಭಾಗ್ಯದೊಳೊಳ್ಪುವೆತ್ತ ರತಿ ರೂಪಾಶ್ಚರ್ಯದೊಳ್ ಲಕ್ಷ್ಮಿ ವ ।
ಕ್ಷಮನಂಗೀಕರಿಸಿರ್ಪ ನಲ್ಮೆಯೊಳತಿಪ್ರಾಗಲ್ಭ್ಯದೊಳ್ ಸೂಕ್ತಿಲ ॥
ಕ್ಷ್ಮಿ ಮಹೀಲೋಕದೊಳೀಪ್ರಮೋದವತಿ ಬೊಪ್ಪಾದೇವಿಯೆಂಬೀ ಪ್ರಭಾ ।
ವಮನಾಂತೆಕ್ಕಲದೇವನಗ್ರಮಹಿಷೀತ್ವಶ್ರೀಯಿನುದ್ಯೋತಿಪಳ್ ॥615॥

## 129 ಹಾಸನ 130 [1147]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನು ಮುಗುಳಿಯ ಗೋವಿಂದ ಜಿನಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಯತ್ಸುಧಾಕಾಂತನತ್ಯೂ ।
ರ್ಜಿತತೇಜೋಲಕ್ಷ್ಮಿಯಿಂ ತೀವ್ರಕರನೆನಿಸಿಯುಂ ದೃಶ್ಯರೂಪಂ ಕಳಾಸಂ ॥
ಭೃತಭಾಸ್ವದ್ವೃತ್ತದಿಂದಂ ವಿಧುವೆನಿಸಿಯುಮಾತ್ಮೀಯನಿತ್ಯೋದಯೋತ್ಸಾ ।
ರಿತದೋಷಾಶೇಷನಿಂತಾವನೊಳಮಸದೃಶಂ ಧೀರವಿಷ್ಣುಕ್ಷಿತೀಶಂ ॥616॥

ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ಪುಂಗವಭ್ರಾಂತಿ ತಳ್ತು ।
ಪ್ಪಿರೆ ತನ್ನುಗ್ರಾಸಿಯಿಂದುಚ್ಚಳಿಸಿ ಧರೆಗುರುಳ್ತಿರ್ಪ ವಿದ್ವಿಟ್ಛಿರಂಗಳ್ ॥
ತರದಿಂ ಕುಂಭಂಗಳಂ ಪೋಲ್ತಿಸೆಯೆ ನವಘಟೀಯಂತ್ರದಿಂ ವಿಷ್ಣು ಯುದ್ಧಾ ।
ಜಿರವಾಪೀವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತುಮಿರ್ಪಂ ॥617॥

ಮಗುಮಗುಳ್ದು ಪೊಕ್ಕು ದುರ್ಗಮು । ನಗಟ್ಟಿ ಗಟ್ಟಿದ್ದ ವಾರ್ಧಿವರೆಗಮುಡ್ಡಂತಿಗಟಂ ।
ತಗುತಗುಳ್ದು ಕೊಂದನೋವದೆ । ಜಗಬಿರುದರನಱಿಸಿ ವಿಷ್ಣುವರ್ಧನದೇವಂ ॥618॥

ಹಿಮದಿಂ ಸೇತುವರಂ ಮ । ತ್ತೆ ಮಗುಳ್ದು ಸೇತುವಿಂ ಹಿಮಂಬರೆಗಂ ವಿ ।
ಕ್ರಮಕೇಳಿಯಿಂ ತೊಟಲ್ವಂ । ಸಮದಕ್ಷತ್ರಿಯರನಱಿಸಿ ವಿಷ್ಣುನೃಪಾಳಂ ॥619॥

## 130 ನಗರ 37 [1147]

ಇದರಲ್ಲಿ ಚಾಳುಕ್ಯರಾಜನಾದ 2ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಸಾಂತರ ರಾಜನಾದ ಶ್ರೀವಲ್ಲಭದೇವನು ಪಂಚಕೂಟಬಸ್ತಿಯ ಬಡಗಣ ಪಟ್ಟಶಾಲೆಯನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಬಮ್ಮದೇವಸಾಂತರ

ಪರನರಪಶಿರಃಕಂಜೋ । ತ್ಕರಕರಿ ಕಮಳಾಪಯೋಧರದ್ವಯಹಾರಂ ।
ಸ್ಮರಮೂರ್ತಿ ಸಕಳದಿಙ್ಮುಖ । ಪರಿಚುಂಬಿತಕೀರ್ತಿ ಬಮ್ಮದೇವಕುಮಾರಂ ॥620॥

ತೈಲಸಾಂತರ

ಪುಟ್ಟಿದನಿನಂಗೆ ತೇಜಂ । ದಿಟ್ಟಿ ಪೊಗಕ್ಕಮರ್ದು ಚಂದ್ರಮಂಗೆಟ್ಟಿರದಿಂ ।
ಪುಟ್ಟುವವೊಲಖಿಳವೈರಿಘ । ರಟ್ಟಂ ಶರದಿಂದುಕೀರ್ತಿ ತೈಲನೃಪಾಲಂ ॥621॥

ನಳನೆ ವಿನೋದಿ ಧರ್ಮಜನೆ ಧಾರ್ಮಿಕನಬ್ಧಿಯೆ ರತ್ನದಾಗರಂ ।
ಕುಳಿಶಮೆ ಶಸ್ತ್ರಮರ್ಜುನನೆ ಧನ್ವಿ ಸುರೇಂದ್ರನೆ ಭೋಗಿ ಮಂದರಾ ॥
ಚಳಮೆ ಗಿರೀಂದ್ರಮಪ್ರತಿಮರಾಯರಝಳಪ್ಪನೆ ಚಕ್ರಿ ತೈಲಮಂ ।
ಡಳಿಕನೆ ದಾನಿಯೆಂದು ಮುಡಿಗಿಕ್ಕಿದೆನಾರ್ಪವರೆತ್ತಿಕೊಳ್ಳಿರೇ ॥622॥

ಶ್ರೀವಲ್ಲಭಸಾಂತರ

ಪರಭೂಪಾಳಸಮುದ್ರದೊಳ್ ನಿಜಕರಪ್ರೋತ್ಖಾತನಿಸ್ತ್ರಿಂಶಮಂ ।
ದರಮಂ ಸಂಧಿಸಿ ವಿಕ್ರಮದ್ಭುಜಫಣೀಂದ್ರಾವೇಷ್ಟಿತಪ್ರಾಂತಮಂ ॥
ಭರದಿಂದಂ ಕಡೆದುಗ್ರವಂಶತಿಳಕಂ ಶ್ರೀಕಾಂತೆಯಂ ತನ್ನ ಪೇ ।
ರುರದೊಳ್ ತಾಳ್ದೆ ಬುಧಾಳಿಯೇಂ ಪೊಗೞದೋ ಶ್ರೀವಲ್ಲಭಾಖ್ಯಾನಮಂ ॥623॥

ವಿಕ್ರಮಗರ್ವಮಂ ತಳೆದು ತಾಗಿದ ವೈರಿನೃಪಾಳಜಾಳದೋ ।
ಶ್ಚಕ್ರದೊಳಿರ್ದ ವಿಕ್ರಮವಧೂಟಿಯನಿಟ್ಟುಳಿಗೊಂಡು ಬಲ್ಪಿನಿಂ ॥
ವಿಕ್ರಮವಜ್ರವೇದಿಭುಜಮಂಡಪದೊಳ್ ತಳೆದೊಲ್ದು ತಾಳ್ದಿದಂ ।
ವಿಕ್ರಮಶಾಲಿಗಳ್ ಪೊಗೞೆ ವಿಕ್ರಮಸಾಂತರನೆಂಬ ನಾಮಮಂ ॥624॥

ಕತ್ತುರಿಯ ಬೊಟ್ಟೊ ಮೇಣೆದು। ಪುತ್ತಳಿಗೆಯೊ ನೀಲಮಣಿಯ ತೋಳ್ಗಂಬದೊಳೇಂ ।
ತೆತ್ತಿಸಿದುದೆನಿಸಿ ಧರೆಯಂ । ಪೊತ್ತುದು ಭುಜವಜ್ರಕೋಟಿ ಸಿರಿವಲ್ಲಭನಾ ॥625॥

## 131 ಎಮ್ಮನೂರು ಶಾಸನ [1149]

(ಮೈಸೂರು ಶಾಸನದ ಇಲಾಖೆಯ 1928 ನೆಯ ವರ್ಷದ ವರದಿ, ಶಾಸನ ಸಂಖ್ಯೆ 79)

ಇದರಲ್ಲಿ ಚಾಳುಕ್ಯ ರಾಜನಾದ 3ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಕಳಚುರ್ಯ ವಂಶದ ವಿಜಯಾದಿತ್ಯನ ಸಾಮಂತನಾದ ಬಮ್ಮಯ್ಯನು ಬನವಸೆನಾಡನ್ನು ಆಳುತ್ತಿರಲು ಕಾಮಗಾವುಂಡನು ಎಮ್ಮನೂರ ರಾಮೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಜಯಾದಿತ್ಯ

ಪರಭೂಪಾಳಕರಂ ಪಳಂಚಲೆದು ದೋರ್ವಿಕ್ರಾಂತದಿಂ ತ್ಯಾಗದಿಂ ।
ನೆರೆದರ್ಥಿಪ್ರಕರಕ್ಕೆ ಮಾಡಿ ಮುದಮಂ ಕಾರುಣ್ಯದಿಂ ಕಾದು ತ ॥
ಚ್ಚರಣಾಯಾತರನಾತ್ಮ ಸತ್ಯಗುಣದಿಂ ಮರ್ಯಾದೆಯಿಂದಾಳ್ವನಾ ।
ದರದಿಂ ಕುಂತಳ ಚಕ್ರವರ್ತಿ ವಿಜಯಾದಿತ್ಯಂ ಮಹೀಚಕ್ರಮಂ ॥626॥

ಬಮ್ಮಯ್ಯ

ನೆಗೞ್ದೆ ಜಯುಂ ಪೊಗೞ್ದೆ ಜಗಂ। ಮಿಗೆ ತನ್ನಳವನುೞಿ ಬಮ್ಮಯಂ ಪಾಲಿಸುವಂ॥
ನೆಗೞ್ದೀ ಬನವಸೆ ನಾಡಂ। ದಿಗಿಭಂಬರಮೆಯ್ದೆ ಕೀರ್ತಿಲತೆಯುಂ ಶ್ರೀಯುಂ॥627॥

ಎಮ್ಮನೂರು

ಬನವಸೆ ದೇಶದೊಳ್ ನೆಗೞ್ದ ನಾಗರಖಂಡಮೆ ಸಾರಮಾದುದಾ।
ಜನಪದದೊಳ್ ವಿರಾಜಿಸುವ ಕೆಯ್ವೊಲದಿಂ ವನದಿಂ ತಟಾಕದಿಂ॥
ವನರುಹ ಷಂಡದಿಂ ಬಳಸಿ ನಾಡೆ ಮನಂಗೊಳಿಪೆಮ್ಮನೂರಿಳಾ।
ಜನ ಜನಿತಾನುರಾಗ ವಿಭವೋದಯಮಕ್ಷತ ಸೌಖ್ಯ ಸಂಪದಂ॥628॥

ಕಾಮಗಾವುಂಡ

ಜಳನಿಧಿಯೊಳ್ ಹಿಮಧಾಮಂ। ಕುಳಗಿರಿಯೊಳ್ ಸಿಂಹಮೊಗೆವವೋಲೊಗೆದಂ ನಿ॥
ರ್ಮ್ಮಳ ಕೀರ್ತಿ ಕೇತಿಸೆಟ್ಟಿಗೆ। ಲಳಿತಾಕೃತಿಯೆಮ್ಮನೂರ ಕಾಮಗವುಂಡಂ॥629॥

ಧರ್ಮ್ಮದ ಕಣಿ ಸತ್ಯದ ನಿಧಿ। ಪೆರ್ಮೆಯ ನೆಲೆ ಭೋಗದಾಗರಂ ವಿಜಯ ಶ್ರೀ॥
ಗಾರ್ಮ್ಮಂ ಕಾಮಗವುಂಡಂ। ನಿರ್ಮ್ಮಳತರ ಕೀರ್ತಿ ವಿಕ್ರಮಾಳಂಕಾರಂ॥630॥

ಮಂಗಳಮಂ ಮಾಡುಗೆ ಜಯ। ಸಿಂಗ ನೃಪಂಗೆ ನೆಗೞ್ದೆಮ್ಮನೂರೊಡೆಯಂ ದೇ॥
ವಂ ಗುಣನಿಧಿ ಕಾಮಗವಂ। ಡಂಗಿಂತೀ ನೆಲನುಮಿನನುವುಳ್ಳನ್ನೆವರಂ॥631॥

## 132 ಹಾಸನ 65 [1149]

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಸಾಮಂತ ಶಂಕರದಂಡನಾಥನು ಹೊನ್ನವಾರದಲ್ಲಿ ಕೇಶವದೇವರನ್ನು ಪ್ರತಿಷ್ಠೆ ಮಾಡಿಸಿದಂತೆ ಹೇಳಿದೆ.

ವಿಷ್ಣುವರ್ಧನ

ಮೊದಲೊಳ್ ಪೊಯ್ಸಳರಾಜ್ಯಲಕ್ಷ್ಮಿಯೊದವಂ ತೋಳ್ಬಲ್ಪಿನಿಂ ತಾಳ್ದಿ ತ।
ನ್ನುದಯಂ ರಂಜಿಸೆ ತನ್ನ ಬಲ್ಪೊದವೆ ತನ್ನಾರ್ಪೇೞೆ ತನ್ನಾಜ್ಞೆ ಮಿಾ॥
ೞೆ ದಿಶಾಚಕ್ರಮನೊತ್ತಿ ಕೊಂಡು ತಳಕಾಡಂ ಗಂಗರಾಜ್ಯಕ್ಕೆ ತಾಂ।
ಮೊದಲಾದಂ ಯದುವಂಶವರ್ದ್ಧನಕರಂ ಶ್ರೀವಿಷ್ಣುಭೂಪಾಳಕಂ॥632॥

ಇವನೀ ತೋಳ್ಗಂಬದೊಳ್ ಪುತ್ತಳಿಯವೊಲವನೀದೇವಿ ತಾನಿರ್ಪಳೆಂದುಂ ।
ತವದಿಕ್ಕುರ್ಕಿಂ ವಿಕ್ರಮಶ್ರೀ ಪೊಗರ್ವೊಲಿವನ ತೀವ್ರಾಸಿಯೊಳ್ ಬಿಟ್ಟಿವಂದಾ ॥
ಜವನಿಕ್ಕುರ್ಕಿಂ ಕೋಣನಿಂದಂ ಪಗೆವರ ಪೆಣನಂ ಪೇಱಲೀ ವಿಷ್ಣುವಂ ಕಾ ।
ದುವನಾವಂ ಗೆಲ್ವನಾವಂ ನಡುಗದಿದಿರೊಳಾಟಂದು ಬಂದಿರ್ಪನಾವಂ ॥633॥

## 133 ಶಿಕಾರಿಪುರ 103 [1149]

ಇದರಲ್ಲಿ ಶಾಂತರರಾಜನಾದ ಜಗದ್ದೇವನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಶಾಂತರರು

ಶಾಂತತಮೋಗುಣಗಣರತಿ । ಶಾಂತಸಮುಗ್ರಾರಿವರ್ಗದೋರ್ಬಲವಿಭವರ್ ।
ಶಾಂತಭಯಲೋಭರದಱಿಂ । ಶಾಂತರವೆಸರಾದುದವರ್ಗೆ ಭೂಮಂಡಲದೊಳ್॥634॥

ಜಗದೇವ

ಈವ ಗುಣಕ್ಕೆ ತನ್ನ ತೊಡೆಸಕ್ಕಿ ನಿಜಾಶ್ರಿತಪಂಡಿತರ್ಕಳೊಳ್ ।
ತೀವಿದುದಗ್ರಲಕ್ಷ್ಮಿ ನಿಜದೋರ್ಬಲದೇಟ್ಗೆಗೆ ಸಕ್ಕಿ ಶತ್ರುವೀ ॥
ರಾವನಿಪಾಲಕಾಂತೆಯರ ಕರ್ಣಕರಚ್ಯುತನೂತ್ನರತ್ನಭೂ ।
ಷಾವಳಿಯೆಂದೊಡಾರ್ ದೊರೆಗೆವಂದಪರೀ ಜಗದೇವಭೂಪನೊಳ್ ॥635॥

ಕುಸುಮಸ್ರಗ್ಭಾರಶೂನ್ಯೋದ್ಧತಕಚಭರಮುದ್ದಾಮಹೈಮಪ್ರಕಾಂಚೀ ।
ಪ್ರಸರಾಪೇತಪ್ರಶುಂಭದ್ಘನಜಘನತಟಂ ಮೌಕ್ತಿಕೋದಾರಹಾರಾ ॥
ಲಸರಂಗತ್ತುಂಗಪೀನಸ್ತನಕಲಶಯುಗಂ ಶ್ರೀಜಗದ್ದೇವಭೂಪಾ ।
ಲಸುಹೃದ್ಭಾವವ್ಯಪೇತಕ್ಷಿತಿಪತಿತತಿಶುದ್ಧಾಂತಕಾಂತಾಕದಂಬಂ ॥636॥

ಚಾಗಮನೀಸಿಕೊಳ್ಳದ ವನೀಪಕರಿಲ್ಲ ವನೀಪಕರ್ ಮದೋ ।
ದ್ಯೋಗಮನೊಕ್ಕು ಬಾಳದವರಿಲ್ಲ ಜಯೋತ್ಸುಕನಾಗಿ ಪೋಗೆ ಕೋ ॥
ಳ್ವೋಗದ ದೇಶಮಿಲ್ಲೆನಿಸುವಾ ಜಯಕೇಶಿ ನಿಜಾಗ್ರಜಾತನಾ ।
ಶಾಗಜವರ್ತಿಕೀರ್ತಿಯೆನಲಾರ್ ಜಗದೇವನವೋಲ್ ಯಶಸ್ವಿಗಳ್ ॥637॥

## 134 ಚಿಕ್ಕನಾಯಕನಹಳ್ಳಿ 30 [1149]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಮನಹರಸನು ಶಿವಶಕ್ತಿ ಮುನಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಶಿವಶಕ್ತಿ

ಉಱಿದಾಂತೀ ಶಿವಶಕ್ತಿಯು । ಸೆಱೆಕೋಲಿಂಗಳ್ಕಿ ಮನ್ಮಥಂ ಸತಿಯರ ಕಿ ।
ಕ್ಕಿಱಿದಿರ್ದ ಕುಚದ ಸಾರ್ಕೆಯು । ಸೆಱೆಯೊಳಡಂಗಿದನಿದೇಂ ಕರಂ ವಿಸ್ಮಯಮೋ ॥637 ಅ॥

ಹಡೆದ ಹಣಹಾಗಮೆಲ್ಲಮು । ಜಡೆಯಿಡುಕುಱಿ ಮಡಗಿ ಮಿಂಡಿದೊಟ್ಟಿರ್ಗೀವೀ ।
ತುಡುಗುಣಿ ಗೊರವರ ಮೆಚ್ಚಂ । ಪೊಡವಿಗೆ ಶಿವಶಕ್ತಿ ತಾನೆ ನೈಷ್ಠಿಕಮುನಿಪಂ ॥638॥

**135 ಚೆನ್ನಗಿರಿ 38, 39 [1149]**

ಈ ಶಾಸನಗಳಲ್ಲಿ ಚಾಲುಕ್ಯರಾಜನಾದ ಜಗದೇಕಮಲ್ಲನ ಆಳಿಕೆಯಲ್ಲಿ ಪಾಂಡ್ಯರಾಜನಾದ ಜಗದೇಕಮಲ್ಲ ವೀರಪಾಂಡ್ಯದೇವನ ಸಾಮಂತ ಎಡವರಿಯರಸನು ಸೂಸಲಗೆರೆಯ ಶಿವಾಲಯ ಗಳಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಎಡವರಿಯ ತಂದೆ ಸೋಮ

ಮದವದರಿನೃಪರನಾಜಿಯೊ । ಳದಿರದೆ ಬೆಂಕೊಂಡು ಧರೆಯನುನ್ನತಶೌರ್ಯಂ ।
ಪದುಳಿಸಿ ಪಾಳಿಸಿ ಕೀರ್ತಿಯ । ನೊದವಿಸಿದಂ ಗುಣವಿಭಾಸಿ ಮನ್ನೆಯ ಸೋಮಂ॥639॥

ಎಡವರಿ

ನುಡಿದ ನುಡಿ ರಾಮಬಾಣಂ । ತೊಡರ್ದೆಡೆಯೊಳ್ ಭೀಮನಾರ್ತು ಕುಡುವೊಡೆ ಕರ್ಣಂ ।
ಪಡಿಯೆನಿಸಿ ನೆಗಟ್ದ ನಮ್ಮೀ । ಯೆಡವರಿದೇವಂಗೆ ಕುಚಿತಮನ್ನೆಯರ್ ದೊರೆಯೇ ॥ ॥640॥

ಪಣೆದಂಬೊಯ್ದ್ವನ್ಯಸೈನ್ಯದ್ವಿಪಹಯಭಟಸಂದೋಹಮಂ ತನ್ನ ತೋಳೊಳ್ ।
ಕುಣಿಯಲ್ಕುತ್ಸಾಹದಿಂದಂ ಜಯಸಿರಿ ಸಿರಿ ತಳ್ತಪ್ಪಿರಲ್ ತನ್ನನೀ ಧಾ ॥
ರಿಣಿಯುಂ ಪಾಂಡ್ಯಾವನೀಶಂಗಳವಡಿಸುವನೀವಾರ್ಧಿತೀರಂಬರಂ ಬಂ ।
ಡಣದೊಳ್ ಮಾರ್ಕೊಂಡರಂ ತಳ್ತಿಱಿದೆಡವರಿದೇವಂ ಜಗತ್ಸ್ತುತ್ಯನಾದಂ ॥641॥

ಎಳೆಯುನಿತುಂ ರಸಾತಳದೊಳಟ್ದಿರೆ ಕಂಡು ವರಾಹವೇಷಮಂ ।
ತಳೆದು ಗದಾಧರಂ ನೆಗಪಿ ಪೊತ್ತಿರೆಯುಂ ಕಲಿ ಕಾಯ್ದು ನೂಂಕಲ ॥
ಗ್ಗಳಿಸಿ ದರಿದ್ರತಾರ್ಣವದೊಳಟ್ದ ಧರಿತ್ರಿಯನೋಹೊ ತನ್ನ ಕೋ ।
ಡೊಳೆ ನೆಗಹಿತ್ತು ಕೇವಳಮೆ ಭೂಸುತಮಣ್ಣನ ಗಂಧವಾರಣಂ ॥642॥

ಒದವಿದ ದಾನದಿಂದಮೆರೆದಂಗಮರಾತಿಗಮೀವ ತೋರ್ಪ ಕೂ।
ರಿದುವೆನಿಸಿರ್ಪ ಕೋಡೆರಡಱಿಂ ನೆಗಟ್ದುನ್ನತವಂಶದಿಂ ಸಗಾ॥
ತ್ರದ ಕಡುಗಾಡಿ ನೇತ್ರದ ಮಧುಚ್ಛವಿಯಿಂದಮಗುರ್ವುವೆತ್ತು ಪೋ।
ಲ್ತುದು ದಿಗುದಂತಿಯಂ ವಿಜಯಕಾರಣಮಣ್ಣನ ಗಂಧವಾರಣಂ॥643॥

## 136 ಬೇಲೂರು 93 (ಅನುಬಂಧ), [ಸು. 1150]

ಇದರಲ್ಲಿ ಹೊಯ್ಸಳ ರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಚಟ್ಟಬೋವನು ದತ್ತಿಯನ್ನು ಬಿಟ್ಟಂತೆ ತೋರುತ್ತದೆ.

ವಿಷ್ಣುವರ್ಧನ

ದನುಜರ ಕುಳಮಂ ನಿಮೂರ್ಳ। ಳನಮಂ ಮಾಡಲ್ಕೆ ಪುಟ್ಟಿದಂದಿನ ಕೃಷ್ಣಂ।
ಮನವೊಲ್ದು ಭೂಪ ಕುಳದೊಳ್। ಜನಿಯಿಸಿ ಬಳೆದಂತೆ ವಿಷ್ಣುವರ್ಧನನಾದಂ॥
॥644॥

ಮಲೆಯಂ ಸಾಧಿಸಿ ಕೊಂಗು ಚಂಗ ವಿಷಯ ಕ್ಷೋಣೀಶರಂ ಗೆಲ್ದು ದೋ।
ರ್ಬಲದಿಂ ಕಪ್ಪಮನೆಯ್ದೆ ಕೊಂಡರಿಗಳಂ ಬೆಂಕೊಂಡು ಗಂಗೋರ್ವಿಗಂ॥
ಚಲದಿಂ ಕೂಡೆ ನೊಣಂಬವಾಡಿ ಮಹಿಗಂ ಶ್ರೀ ಕೃಷ್ಣವೇಣೀ ನದೀ।
ಜಲದಿಂ ದಕ್ಷಿಣ ಭೂಮಿಗಂ ಪತಿಯೆನಲ್ ಶ್ರೀ ವಿಷ್ಣು ಕಣ್ಗೊಪ್ಪಿದಂ॥645॥

ನಾರಸಿಂಹ

ಜನನಿಯ ಗರ್ಭದಿಂದೊಗೆದ ಲಗ್ನದ ಮೇಲೆ ಬಟಿಕ್ಕೆ ಯಾಮದೊಳ್।
ಜನಕನರಾತಿಯಂ ಕವಿಯ ಕಾಳೆಗದೊಳ್ ನೆಱಿ ಕೊಂದು ಗೆಲ್ದು ಬಂ॥
ದನುನಯದಿಂ ಪ್ರತಾಪ ನರಸಿಂಹನೆನಲ್ ಪೆಸರಿಟ್ಟು ಪಟ್ಟಮಂ।
ಜನಿಯಿಸಿದಂದು ಕಟ್ಟಿದನೆನಲ್ ದೊರೆವೆತ್ತುದು ರಾಜ್ಯ ಸಂಪದಂ॥646॥

## 137 ಬಿಜಾಪುರದ ಶಾಸನ * [1151]

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಪೆರ್ಗಡೆ ಮಲ್ಲದೇವ ಮುಂತಾದ ಕರಣಂಗಳು ವಿಜಯಾಪುರದ ನಾರಸಿಂಹದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಿಜ್ಜಳ

ಮುಳಿಸಿಂ ಮಾಱಾಂಪರಾತಿಕ್ಷಿತಿಪರ ತಲೆಯಂ ಕಿಱ್ತು ಸೆಂಡಾಡನೇ ಕೇ।
ರಳಕಾಂತಾರಾನಳಂ ಮಾಳವಗಿರಿಕುಳಿಶಂ ಲಾಳಕಾಳಾಹಿತಾರ್ಕ್ಷ್ಯಂ॥

---

* ಈ ಶಾಸನದ ಪ್ರತಿಯನ್ನು ಶ್ರೀಮಾನ್ ಹಲಸಂಗಿ ಚೆನ್ನಮಲ್ಲಪ್ಪನವರು ಬರೆದು ಕಳುಹಿಸಿ ಕೊಟ್ಟಿದ್ದಾರೆ.

ಬಳವನ್ನೇಪಾಳಮತ್ತದ್ವಿರದನಿಶಿತವಜ್ರಾಂಕುಶಂ ಗೂರ್ಜರಾಭ್ರಾ ।
ನಿಳನಾಂಧ್ರಕ್ಷ್ಮಾಜತೀಕ್ಷ್ಣಕ್ರಕಚನತಿಬಳಂ ಬಿಜ್ಜಳಕ್ಷೋಣಿಪಾಳಂ ॥647॥

ಮಲ್ಲದೇವ

ತನಗಂ ಮನುಗಂ ಚರಿತಂ । ತನಗಂ ಸುರತರುಗಮಾರ್ಪು ಗಂಭೀರಗುಣಂ ।
ತನಗಂ ವಾರ್ಧಿಗಮೆನಿಪಂ । ಘನಶೌರ್ಯಂ ಮಲ್ಲನಹಿತಕುಳಹೃತ್ಸೆಲ್ಲಂ ॥648॥

ಬೀಲ

ಸುರಭೂರುಹದಗೆಯಂ ಬಿ । ತ್ತರದಿಂ ಪರಮೇಷ್ಠಿ ತಂದು ಮನುಜಾಕೃತಿಯಿಂ ।
ವಿರಚಿಸಿ ಪುಟ್ಟಿಸಿದನೆನಲ್ । ದೊರೆವೆತ್ತಂ ಬೀಲನಖಿಳಲಕ್ಷ್ಮೀಲೋಲಂ ॥649॥

ರಾಮ

ರಾಮಂಗೆ ಸುಕವಿಕಳ್ಪಾ । ರಾಮಂಗನವದ್ಯವಾಗ್ವಧೂಕಚಸುಮನೋ ।
ದಾಮಂಗೆ ಸಕಳಗುಣಗಣ । ಧಾಮಂಗೆಣೆಯೊಳರೆ ವಸುಮತೀಮಂಡಳದೊಳ್ ॥650॥

ಮಾಧವ

ಬುಧಜನದೊದವಿರ್ದಾಪ । ತ್ಕುಧರಮನೌದಾರ್ಯವಜ್ರದಿಂ ಪೊಯ್ದು ಯಶೋಂ ।
ಬುಧಿಯೊಳವಗಾಹಮಿರಿಸಿದ । ನಧನರ ನಿಧಿ ಮಾಧವಂ ದಿಶಾಸಿಂಧುರಮಂ ॥651॥

ಕೇದಾರ

ಸುಜನಜನವನಜದಿನಮಣಿ । ನಿಜಕುಲನೀರಧಿಸುಧಾಂಶುಬಿಂಬಂ ವಿಬುಧ ।
ವ್ರಜಚಿತ್ತವಲ್ಲರೀಪಾ । ರಿಜಾತನೆನೆ ನೆಗಟ್ದನವನಿಯೊಳ್ ಕೇದಾರಂ ॥652॥

ಗೋವಿಂದ

ಭೂವಿಶ್ರುತವಿಶದಯಶಂ । ದೇವದ್ವಿಜಗುರುಪದಾಬ್ಜಭೃಂಗಂ ಬುಧಕ ।
ಳ್ಪಾವನಿಜನೆನಿಸಿ ನೆಗಟ್ದಂ । ಗೋವಿಂದಂ ಸುಕವಿನಿಕರಪಿಕಮಾಕಂದಂ ॥653॥

## 138 ಲಕ್ಷ್ಮೇಶ್ವರದ ಶಾಸನ [1152-53]

(ಎಪಿಗ್ರಾಫಿಯಾ ಇಂಡಿಕ XVI, 37)

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಕಾದಂಬತ್ಯೆಲನೂ ಡಾಕರಸನೂ ಪುರಿಗೆರೆಯ ಸೋಮೇಶ್ವರದೇವರಿಗೆ ದತ್ತಿಗಳನ್ನು ಬಿಟ್ಟಂತೆ ಹೇಳಿದೆ.

ಪುರಿಕರನಗರ (ಪುರಿಗೆರೆ)

ತೆವರೆಲ್ಲಂ ದೇವತಾಮಂದಿರನಿವಹಮೆ ನಿಷ್ಕುಸ್ಥಳೀರಾಜಿಯೆಲ್ಲಂ ।
ಸುವಿರಾಜದ್ದೀರ್ಘಿಕಾಸಂಕುಲಭರಿತಪಯಃಪೂರನೀರೇಜಕಾಸಾ ॥
ರವೆ ಮತ್ತಂ ತತ್ಸಮಾಳಂಕೃತವಸುಧೆಯದೆಲ್ಲಂ ಲಸಚ್ಛಂದನೋದ್ಯಾ ।
ನವೆನಲ್ ರಮ್ಯಂ ದಲೆಂದುಂ ಪುರಿಕರನಗರೀಲೀಲೆ ಲೋಕಾವಲೋಕಂ ॥654॥

ಒಂದೊಂದಕ್ಷತೆಯಂ ಸಾ । ನಂದದಿನಭ್ಯರ್ಚಿಸಲ್ಕೆ ಕೊಳಗಂ ತೀವಿ ।
ತ್ತೆಂದೊಡೆ ಶಿವಲಿಂಗದ ಸಮು । ಸಂದ ಮಹೋನ್ನತಿಯ ಪವಣನಱಿಯೆಂ ಪೊಗೞಲ್
॥654 ಅ॥

ಕಾದಂಬತೈಲ

ಬಲಿಯೆಂತಂತೆ ತದೀಯದೇಶಮನದಂ ನಿರ್ಬಾಧೆಯಿಂದಾಳ್ದು ಮೆ ।
ಯ್ಗಲಿ ದಿಕ್ಕುಂಭಿಯ ಕುಂಭಸಂಭೃತಲಸತ್ಸಿಂದೂರರಾಗಾವಿಳಂ ॥
ಬಲವತ್ತೇಜಮೆನಲ್ ಧರಾವಳಯಮಂ ನಿಷ್ಕಂಟಕಂಮಾಡಿದಂ ।
ಪಲರುಂ ಬಣ್ಣಿಸಲುದ್ಧತಾರಿದಳನಂ ಕಾದಂಬಕಂಠೀರವಂ ॥655॥

ವೀರಪಾಂಡ್ಯ

ಅಸಿಧಾರಾವ್ರತಮಂ ಸಾ । ಧಿಸಿ ಜಯವಧು ವಾಣಿ ಬಾಣಮುಖಮಂ ಸಲೆ ಸಾ ।
ಧಿಸಿ ಬಂದು ಭುಜದೊಳಾಸ್ಯದೊ । ಳೆಸೆದಿರ್ಪಳ್ ವೀರಪಾಂಡ್ಯಭೂಪಾಳಕನಾ ॥656॥

ಬಿದ್ದರಾಜ

ಎರಡಂ ನುಡಿಯದ ಸಂಗರ । ಧರೆಯೊಳ್ ಬೆಂಗುಡದ ಪರವಧೂಕೇಳಿಯನಾ ।
ಚರಿಸದ ಪೆಂಪಿನೊಳಾವಂ । ದೊರೆ ಪರಿಕಿಸೆ ಬಿದ್ದರಾಜದಂಡಾಧಿಪನೊಳ್ ॥657॥

ಫಲಸ್ತುತಿ

ಗಂಗಾಸಾಗರಯಮುನಾ । ಸಂಗಮದೊಳ್ ಕೋಟಿಕವಿಲೆಯಂ ಬ್ರಾಹ್ಮಣರಂ ।
ಲಿಂಗಿಗಳಂ ಸಲೆ ಪುಣ್ಯದಿ । ನಂಗಳೊಳೞಿದವರ್ಗಳಪ್ಪರಿಂತಿದನೞಿದರ್ ॥658॥

**139 ಬೇಲೂರು 168 [1154]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನು ಚೆನ್ನಸೋಮನಾಥದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ 1

ಆ ನರಸಿಂಹಂ ರಿಪುನೃಪ। ಸೇನಾಜಳನಿಧಿಗೆ ಬಾಡಬಂ ರಿಪುಭೂಭೃ।
ತ್ಸೇನಾವನರಾಜಿಗೆ ದಾ। ವಾನಳನೇಕಾಂಗವೀರನತಿಗಂಭೀರಂ ॥659॥

## 140 ಹಾಸನ 57 [1155]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಮಹಾಪ್ರಧಾನ ಚಾವಿಮಯ್ಯನ ಹೆಂಡತಿ ಜಕ್ಕಲೆ ಹೆರಗಿನಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಚಾವಿಮಯ್ಯ

ಇನನಂ ತೇಜದೊಳಿಂದ್ರನಂ ವಿಭವದೊಳ್ ಚಾಣಕ್ಯನಂ ನೀತಿಯೊಳ್।
ಮನುವಂ ಚಾರುಚರಿತ್ರದೊಳ್ ಜಳಧಿಯಂ ಗಾಂಭೀರ್ಯದೊಳ್ ಧೈರ್ಯದೊಳ್॥
ಕನಕಾದ್ರೀಂದ್ರಮನೆಯ್ದೆ ಪೋಲ್ವನದಟಿಂ ತ್ರೈಲೋಕ್ಯಮುಂ ಮೆಚ್ಚಿದ।
ರ್ಜುನನಂ ಶ್ರೀಪಡೆವಳ್ಳಚಾಮನೆನಲಿನ್ನೇವಣ್ಣಿಪಂ ಬಣ್ಣಿಪಂ ॥660॥

ವರವನಿತಾಜನಂಗಳ ಮನಂ ಕುಸುಮಾಸ್ತ್ರಶರಕ್ಕೆ ಸದ್ಬುಧೋ।
ತ್ಕರಕರಪಂಕಜಂ ಬಹುಸುವರ್ಣಚಯಕ್ಕಧಿನಾಥಮಂದಿರಂ॥
ಸ್ಥಿರತರರಾಜ್ಯಲಕ್ಷ್ಮಿಗೆಡೆಯಾದುವು ರೂಪವಿಳಾಸದೇಟಿಗ್ಗಿಯಿಂ।
ನಿರುಪಮದಾನದಿಂ ಪತಿಹಿತೋನ್ನತಿಯಿಂ ಪಡೆವಳ್ಳಚಾಮನಾ ॥661॥

ಅನುಪಮಮಪ್ಪ ಬಂಧುನಿವಹಂ ನಿಜಪಕ್ಷಮನರ್ಘರತ್ನಮುಂ।
ಡನತತಿ ಪಂಚವರ್ಣಮಖಿಳೋಗ್ರಭುಜಾಸಿಯೆ ಚಂಚು ದುಷ್ಟದು॥
ರ್ಜನರಿಪುಭೂಭುಜರ್ ಭುಜಗರಾಗೆ ನೆಗಟ್ತೆಯನಾಂತ ಬಿಟ್ಟಿದೇ।
ವನ ಗರುಡಂ ಸಮಂತೆಸೆದನೀ ಧರೆಯೊಳ್ ಪಡೆವಳ್ಳಚಾಮಣಂ ॥662॥

ಚಾವಿಮಯ್ಯನ ಹೆಂಡತಿ ಜಕ್ಕಲೆ

ರತಿಯನ್ನಳ್ ರೂಪಿಂ ಭಾ। ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ।
ಕ್ಷಿತಿಯನ್ನಳ್ ಪೆರ್ಮೆಗರುಂ। ಧತಿಯನ್ನಳ್ ಜಕ್ಕಿಯವ್ವೆ ಕಾಂತಾರತ್ನಂ ॥663॥

ಕೋಮಳಮಾಗಿ ತಾನೆ ಶುಭಲಕ್ಷಣಯುಕ್ತಮೆನಿಪ್ಪ ಮೂರ್ತಿಯಿಂ।
ವ್ಯೋಮಮನೆಯ್ದೆ ಪರ್ಬಿ ದಿಗುದಂತಿವರಂ ನಿಮಿರ್ದಿರ್ದ ಕೀರ್ತಿಯಿಂ॥
ಶ್ರೀಮುಖದಿಂದಮುದ್ಭವಿಪ ಸತ್ಯದ ಮೆಲ್ನುಡಿಯಿಂದೆ ಗೋತ್ರಚಿಂ।
ತಾಮಣಿ ಜಕ್ಕಿಯವ್ವೆ ಸಲೆ ರಂಜಿಸಿದಳ್ ಶಚಿದೇವಿಯಂದದಿಂ ॥664॥

ತಕ್ಕಳ ಮಿಕ್ಕ ಸೋರ್ಮುಡಿಯು ವೃತ್ತಕುಚಂಗಳ ... ನೋ ।
ಟಕ್ಕಲರಂಬಿವೆಂಬ ನಗೆಗಣ್ಗಳ ರೊಕ್ಕವೆನಿಪ್ಪ ಹೊನ್ನ ಬ ॥
ಣ್ಣಕ್ಕೆ ವಿಶೇಷಮಪ್ಪಧರಕಾಂತಿಯು ಜಕ್ಕಲನಾರಿಯೊಂದು ಭಾ ।
ವಕ್ಕೆ ಗುಣಕ್ಕೆ ವಾಗ್ವಿಭವದುನ್ನತಿಗಾರ್ ದೊರೆ ಪೆಂಡಿರುರ್ವಿಯೊಳ್ ॥665॥

ತಳದೊಳಶೋಕೆಯೊಪ್ಪುವ ತಳಿರ್ ಮುಖಪಂಕಜದೊಳ್ ಸರೋಜಮಾ ।
ಸುಳಿಗುರುಳೋಳಿಯೊಳ್ ಮಧುಪಸಂಕುಳಮೊಳ್ನುಡಿಗಳ್ಗೆ ಮಿಕ್ಕ ಕೋ ॥
ಗಿಲೆವೆಱ ಯಾನದೊಳ್ ಗಜಸಮುಚ್ಚಯಮುದ್ಧಪಯೋಧರಕ್ಕೆ ಪೊಂ ।
ಗಳಸಮೆನಿಪ್ಪಿವೇಂ ದೊರೆಯೆ ಜಕ್ಕಲೆನಾರಿಯ ರೂಪಿನೇೞ್ಗೆಯೊಳ್ ॥666॥

## 141 ನರಗುಂದ ಶಾಸನ [ಸು. 1155]*

ಇದರಲ್ಲಿ ಚಾಳುಕ್ಯ ರಾಜನಾದ 2ನೆಯ ತೈಲನ (ತ್ರೈಲೋಕ್ಯಮಲ್ಲ) ಆಳಿಕೆಯಲ್ಲಿ ನರಗುಂದದ ಕುಪ್ಪಟೆ ಯೇಚಿಸೆಟ್ಟಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಶಿವಸ್ತುತಿ

ಶ್ರೀಮದ್ದೇವೇಂದ್ರ ಲೋಕಾರ್ಚಿತ ಪದಕಮಳಂ ವಿಶ್ವಲೋಕೈಕನಾಥಂ ।
ಸೋಮೇಶಂ ಶಂಕರಂ ಶಾಶ್ವತನಮರ ನದೀ ಶೀಕರೋದಾರ ತಾರಾ ॥
ರಾಮೇಂದುಪ್ರಾಂಶು ಸಂಶೋಭಿತ ಕಪಿಳ ಜಟಾಜೂಟನಾನಂದ ಲಕ್ಷ್ಮೀ ।
ಧಾಮಂ ಕಾರುಣ್ಯದಿಂ ಮಾಡುಗೆ ನಮಗೆ ಸುಖಾವಾಪ್ತಿಯಂ ದೇವ ದೇವಂ ॥667॥

ನರುಗುಂದ

ಅನುಪಮ ದೇವತಾ ಭವನ ಮಾಲೆಗಳಿಂದತಿರಮ್ಯ ಭಾವದಿಂ ।
ದನಿಮಿಷ ಸೌಧದಂತೆಸೆವ ಹರ್ಮ್ಯನಿಕಾಯದಿನಿಂದ್ರ ಕಾಮಿನೀ ॥
ಜನದವೊಲೊಪ್ಪಮಂ ತಳೆದ ಕಾಂತೆಯರಿಂದೆ ಗುರೂಪಮಾನ ಸ ।
ಜ್ಜನದೆ ಧನೇಶನಂ ನಗುವ ವೈಶ್ಯರಿನಾ ನರುಗುಂದಮೊಪ್ಪುಗುಂ ॥668॥

ನರುಗುಂದದ ಹೇಮುಗೇರಿಯ ಬ್ರಾಹ್ಮಣರು

ವಿದಿತ ಕಳಾ ಕಳಾಪರನವದ್ಯ ಗುಣೌಘರನೂನ ದಾನ ಸಂ ।
ಪದರುಚಿತಜ್ಞರೂರ್ಜಿತ ಯಶೋರ್ಥಿಗಳಾರ್ಜಿತ ಪುಣ್ಯ ಸಂಚಯರ್ ॥
ಸದಮಳ ಕೀರ್ತಿಗಳ್ ವಿಬುಧಲೋಕ ಸಮಾಶ್ರಮ ಕಲ್ಪ ಭೂಜರೆಂ ।
ಬುದು ಧರೆ ಹೇಮುಗೇರಿಯ ಧರಾಮರರಂ ಪ್ರಭು ಶಕ್ತಿ ಯುಕ್ತರಂ ॥669॥

* ಶ್ರೀಮಾನ್ ಹಲಸಂಗಿ ಚೆನ್ನಮಲ್ಲಪ್ಪನವರು ಬರೆದು ಕಳುಹಿಸಿದುದು.

ಕುಪ್ಪಟಿ ಯೇಚಿಸೆಟ್ಟಿ

ನುಡಿಯೊಳ್ ಶೌಚದೊಳೋಜೆಯೊಳ್ ನಿಯಮದೊಳ್ ಸೌಜನ್ಯದೊಳ್ ದಾನದೊಳ್।
ನಡೆಯೊಳ್ ಸಾಹಸದೊಳ್ ವಿಶಿಷ್ಟ ಗುಣದೊಳ್ ಸೌಂದರ್ಯಸಂಪತ್ತಿಯೊಳ್॥
ಮೃಡ ಪಾದಾರ್ಚನ ಭಕ್ತಿಯೊಳ್ ಪರ ಹಿತ ವ್ಯಾಪಾರದೊಳ್ ಧರ್ಮಜಂ।
ಗಡ ತಾಂ ಕುಪ್ಪಟಿ ಯೇಚಿಸೆಟ್ಟಿಯೆನಲಿನ್ನಾರ್ ಧನ್ಯರಾತಂಬರಂ ॥670॥

ಇವನ ಮಗಳು ಜಕ್ಕಣಬ್ಬೆ

ರಂಭೆ ತಿಲೋತ್ತಮೋರ್ವಶಿಯರನ್ನರೆನಲ್ ಧರೆಗಂತು ಭಾವಿಸಲ್।
ರಂಭೆ ತಿಲೋತ್ತಮೋರ್ವಶಿಯರಪ್ಪರೆ ಕಾಂತೆಯರನ್ಯ ಕೀರ್ತನಾ॥
ಲಂಬದೊಳೇನೊ ವಿಶ್ವಜನಸಂಸ್ತುತೆ ಚಾರು ಚರಿತ್ರೆ ಸದ್ಗುಣಾ।
ಲಂಬಿನಿ ಯೇಚಿಸೆಟ್ಟಿಯ ತನೂಭವೆಯೆಂಬುದು ಜಕ್ಕಣಬ್ಬೆಯಂ॥671॥

**142 ಶಿಕಾರಿಪುರ 104 [1156]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಮಹಾಪ್ರಧಾನಿ ಮಾಯಿದೇವನು ಬಳ್ಳಿಗಾವೆಯ ಕೇದಾರೇಶ್ವರ ದೇವರಿಗೆ ಕೆಲವು ಸುಂಕಗಳನ್ನು ಬಿಟ್ಟುಕೊಟ್ಟನೆಂದು ಹೇಳಿದೆ.

ಮಾಯಿದೇವ

ಕುದಿದೆಲ್ಲಂದದಿನಂದು ನಂದಕುಲಮಂ ಗೆಲ್ವಾತ್ಮಮಂತ್ರಕ್ಕೆ ನಾ।
ಣ್ಚದೆ ಚಾಣಕ್ಯನದೇಕೆ ಮಂತ್ರಿಯೆನಿಪಂ ಪೇಟಿಂದನಾಯಾಸದಿಂ॥
ದೆ ದೃಢಾರಾತಿಕುಲಂಗಳಂ ತವಿಸಿ ತನ್ನ ಸ್ವಾಮಿಗತ್ಯುನ್ನತಾ।
ಭ್ಯುದಯಶ್ರೀಯನೊಡರ್ಚುತಿರ್ಪನೊಲವಿಂ ಶ್ರೀಮಾಯಿದಂಡಾಧಿಪಂ ॥672॥

ವಿದಿತಂ ಕೆಯ್ಯಾಂತು ತನ್ನಂ ಪದೆದೆರೆದ ಬುಧಂ ಪೋಗಿ ಮತ್ತೋರ್ವನಂ ಬೇ।
ಡಿದೊಡಂ ಸಂಗ್ರಾಮದೊಳ್ ನಿರ್ಜಿತಮದನೆನಿಪಂ ಪೋಗಿ ಮತ್ತೊರ್ಮೆ ಬಿಲ್ಪೊ॥
ಯ್ದಿದಿರೊಳ್ ಬಂದಾಂತೊಡಂ ದಾನದ ಭುಜಬಲದುರ್ವಲ್ತದೆಂದೆಂದು ನಿಚ್ಚಂ।
ಮುದದಿಂ ವ . ಲ್ವನೆಂದಂದಿತರಜನಸಮುಸ್ಕಂಧನೇ ಮಾಯಿದೇವಂ ॥673॥

**143 ಹಾಸನ 69 [1156]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಸಾಮಂತ ಎರೆಯಮಯ್ಯನು ಮುದುಗೆರೆಯಲ್ಲಿ ಎರಗೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

## 1 ನೆಯ ನಾರಸಿಂಹನ ಸೇನಾಧಿಪತಿ ಬೋಕಣ

ದಿಗುವಿಜಯಪ್ರತಾಪನಿಧಿ ಬೋಕಣನೆತ್ತಿದನೆಂದೊಡತ್ತಲಿ ।
ರ್ದಗಿಯದೆ ಚೋಟನಂಜಿ ಹೆಱಿಹಿಂಗದೆ ಮಾಳವನೋಡಿ ದುರ್ಗಮಂ ॥
ಹುಗದೆ ಕಳಿಂಗನೋಸರಿಸಿ ಹೋಗದೆ ಗುಜ್ಜರನಾಂತು ಯುದ್ಧದೊಳ್ ।
ಮಿಗುವವರೆ ಬಿಟ್ಟಿದೇವಗರುಡಂಗಿದಿರಾಗಿ ಧರಿತ್ರಿಮಧ್ಯದೊಳ್ ॥674॥

## ಮಾಕಿಯಕ್ಕ

ಮುರಹರವಕ್ಷದೊಳ್ ಪೊಳೆವ ಲಕ್ಷ್ಮಿಯ ಕಾಂತಿಯನಾಂತು ಪದ್ಮದೊಳ್ ।
ಪರಿವೆರಸಿರ್ಪ ಭಾರತಿಯ ಸಾರತೆಯಂ ಗೆಡೆಗೊಂಡು ಚೆಲ್ವನಂ ॥
ಕುರಿಸುವ ಪಾರ್ವತೀಪದಸರೋಜದ ಕೆಂಪಿನ ಸೊಂಪನಾಳ್ದು ವಿ ।
ಸ್ತರಿಸುವ ಮಾಕಿಯಕ್ಕನ ಜಸಂ ವಸುಧಾತಳಸೇವ್ಯಮಲ್ಲವೇ ॥675॥

## ಬೋಕಣನ ಮಂತ್ರಿ ಎರಗ

ಹಡೆವಳಬೋಕಣಂ ಕುಡೆ ನಿಯೋಗಮನೂರ್ಜಿತತೇಜದೆಟ್ಟಿರಂ ।
ಪೊಡವಿಗಪೂರ್ವಮಾಗೆ ಮಱಿವೊಕ್ಕೊಡೆ ಖೇಚರಚಕ್ರಿ ನನ್ನಿಯಂ ॥
ನುಡಿವೊಡೆ ಕರ್ಣನಾಂತೊಡೆ ಕೃತಾಂತನೆನಿಸಲ್ಕೆ ಪೊಗಟ್ಟೆವೆತ್ತ ಹೆ ।
ಗ್ಗಡೆಯೆಱಗಂ ಪ್ರತಾಪನಿಧಿ ಶೋಭಿಸುವಂ ಶಶಿಸೂರ್ಯರುಳ್ಳಿನಂ ॥676॥

ನುಡಿ ಕನಕಾದ್ರಿಯೊಳ್ ಪದುಮಜಂ ಕಡೆದಕ್ಕರಮಾರ್ಪು ಬೇಟ್ಟುದಂ ।
ಕುಡುವ ಸುರದ್ರುಮಕ್ಕೆ ಪಡಿ ಮಾಟ್ಪ ಪರಾರ್ಥತೆ ಖೇಚರಂಗೆ ನೂ ॥
ರ್ಮಡಿ ಪತಿಭಕ್ತಿ ಮಾರುತಸುತಂಗೆ ಪದಿರ್ಮಡಿಯೆಂದೊಡಣ್ಣ ಹೆ ।
ಗ್ಗಡೆಯೆಱಗಂಗೆ ಪಾಸಟಿಯೆ ಮತ್ತಿನ ಮಾನವರೀ ಧರಿತ್ರಿಯೊಳ್ ॥677॥

## ಎರಗನ ಹೆಂಡತಿ ಬಾಚವ್ವೆ

ಶೃಂಗಾರದ ಕಣಿ ಮದನನ । ಜಂಗಮಲತೆ ಸಿರಿಗೆ ತಾನೆ ಕೆಯ್ಗನ್ನಡಿ ಲೇ ।
ಸಿಂಗೆ ನೆಲೆಯೆನಿಸಿ ನೆಗಟ್ದಿ । ರ್ದಂಗನೆ ಬಾಚವ್ವೆಗೆಣೆಯೆ ಮತ್ತಿನ ಮನುಜರ್ ॥678॥
ಹರನರ್ಧಾಂಗದೊಳದ್ರಿಜೆ । ಹರಿಯುರದೊಳ್ ಲಕ್ಷ್ಮಿ ಶೋಭಿಪಂತಿರೆ ವಿಶ್ವಂ ।
ಭರೆಗೆಸೆವೆಱಗನೊಪ್ಪುವ । ವರವಧು ಬಾಚವ್ವೆಯೆಸೆವಳವನೀತಳದೊಳ್ ॥679॥

## ಎರಗನ ಹೆಂಡತಿ ಮಾಚಲದೇವಿ

ದೆಸೆಯಂ ಕಣ್ಗಳ ಕಾಂತಿಯಿಂ ಧವಳಿಪಳ್ ಲಾವಣ್ಯದಿಂ ಸೋಲಿಪಳ್ ।
ವಸುಧಾಚಕ್ರಮನುದ್ಘಯೌವನವನಶ್ರೀಯೊಳ್ ಮನಃಕಾಂತನಂ ॥

ಸಸಿಯುಂ ಸೂರ್ಯ್ಯನ ಮಾರ್ಗನಂ ನಿಲಿಸುವಳ್ ಸೌಭಾಗ್ಯದೊಳ್ ರೂಪಿನೊಳ್ ।
ಜಸದೊಳ್ ಮಾಚಲದೇವಿ ಮಾಟ್ಪಳೆಱಗಂಗಾನಂದಸಂದೋಹಮಂ ॥680॥

ಭೂಮಿಯೊಳುಳ್ಳ ಚೆಲ್ವನಬುಜೋದ್ಭವನೀ ಸತಿಯಂಗಭಿತ್ತಿಯೊಳ್ ।
ಕಾಮಿಸಿ ತಿಟ್ಟವಿಟ್ಟನೆನೆ ಪಾದಯುಗಂ ಕಟಿ ನಾಭಿ ಲೇಸಿನು ॥
ದ್ದಾಮತೆವೆತ್ತ ವೃತ್ತಕುಚಮಿಂದುನಿಭಾನನಮಬ್ಜಲೋಚನಂ ।
ಕೋಮಲೆಗೊಪ್ಪುಗುಂ ನೆಗಟ್ದ ಮಾಚಲದೇವಿಗೆ ಭೂತಳಾಗ್ರದೊಳ್ ॥681॥

ಎರಗನ ಮಗ ಬಮ್ಮದೇವ

ಅತಿಶಯರೂಪದಿಂದತನುವಲ್ಲದ ಕಂತು ಕಳಂಕಮಿಲ್ಲದೂ ।
ರ್ಜಿತಕುಮುದಪ್ರಿಯಂ ನೆಗಟ್ದ ಬಂಧುಜನಪ್ರಿಯನಿಷ್ಟಶಿಷ್ಟಸಂ ॥
ತತಿಖಗಕಲ್ಪಭೂಜನಿನತೇಜನೆಱಂಗತನೂಜನೆಂಬುದು ।
ನ್ನತಸಿರಿಗಾಣ್ಮನಂ ಧರೆ ನೆಗಟ್ತೆಯ ಹೆಮ್ಮೆಯ ಬಮ್ಮದೇವನಂ ॥682॥

## 144 ಶಿಕಾರಿಪುರ 185 [1157]

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ದಂಡನಾಯಕ ಕೇಶಿಮಯ್ಯನು ತಾಣಗುಂದೂರ ದೇವರಿಗೂ ಕನ್ನಡಕ್ಷರಶಿಕ್ಷೆಯ ಉಪಾಧ್ಯಾಯಛಾತ್ರರ ಗ್ರಾಸವಸ್ತ್ರಗಳಿಗೂ ತಗುಳದ್ದಿಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಬಿಜ್ಜಳ

ಜಗಮಂ ಕೆಯ್ಯಾನಿಸಿತ್ತಾರ್ಪಹಿಮಕರಸಮಸ್ಪರ್ಧಿಯಾದತ್ತು ತೇಜಂ ।
ಮಿಗೆವಂದತ್ತಬ್ಧಿಯಂ ಗುಣ್ಪಲೆದುದು ಕಲಿಯಂ ಚಾರುಚಾರಿತ್ರಮುಗ್ರಾ ॥
ರಿಗಣಪ್ರಾಣಾಂಬುವಿಂದಂ ತಣಿದುದಸಿಲತಾಯಷ್ಟಿ ದಿಗ್ದಂತಿದಂತಾ ।
ನುಗಮಾದತ್ತುದ್ಧಕೀರ್ತಿಪ್ರಸರಮೆನಿಸಿದಂ ಬಿಜ್ಜಳಕ್ಷೋಣಿಪಾಳಂ ॥683॥

ಕೇಶಿಮಯ್ಯ

ತನುಸೌಂದರ್ಯದೊಳಿಂದ್ರಜಂ ಸೊಬಗಿನೊಳ್ ಪುಷ್ಪಾಯುಧಂ ನೀತಿಯೊಳ್ ।
ಮನು ಚಾತುರ್ಯ್ಯದೊಳಬ್ಜಜಂ ಪರಹಿತ ವ್ಯಾಪಾರದೊಳ್ ಖೇಚರಂ॥
ಘನಶೌರ್ಯ್ಯೋನ್ನತಿಯೊಳ್ ನೆಗಟ್ದ ರಘುರಾಮಂ ತಾನೆನುತ್ತುಂ ಜಗ।
ಜ್ಜನಮೀ ಕೇಶವದಂಡನಾಥನನನೂನಪ್ರೀತಿಯಿಂ ಬಣ್ಣಿಕುಂ ॥684॥

ರೇಚರಸ

ಸರಸೀರುಹತತಿ ದಿನಕರ। ಕರದಿಂದಲರ್ವಂತೆ ಜನದ ಮನಮಲರ್ವಿನೆಗಂ।
ಸರಸೋಕ್ತಿಯುಕ್ತಿಯಿಂ ರೇ। ಚರಸಂ ಧರ್ಮಪ್ರಸಂಗಮಂ ಪುಟ್ಟಿಸಿದಂ ॥ 685 ॥

**145 ಸೊರಬ 369 [1157]**

ಈ ವೀರಗಲ್ಲಿನಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಕನ್ನೆಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ.

ಎತ್ತಿದ ಮಾರ್ವಲಕ್ಕಿದಿರನಳ್ಕದೆ ತಾಗಿಯೆ ವೀರರೆಲ್ಲರಂ।
ಮುತ್ತಿದನೊತ್ತಿದಂ ಪೆಣನನಂಬರಕೆತ್ತಲು ಭೂತಕೋಟಿ ಪಾ॥
ಡುತ್ತಿರೆ ಮಂಗಳಂ ಜಯ ಜಯಧ್ವನಿ ಘೂರ್ಣಿಸೆ ವೀರಲಕ್ಷ್ಮಿ ಮೆ।
ಯ್ವೆತ್ತಿದ ಸಾಹಸಂಬಡೆದ ಕನ್ನೆಯನೀಗಳಿದೇಂ ಕೃತಾರ್ಥನೋ ॥ 686 ॥

ರಣದೊಳ್ ತಾಗಿದ ಸುಭಟರ। ಪೆಣಮಯಮಂ ಮಾಡಿದಾಗಳರಿಬಲಮೆಲ್ಲಂ
ಕಣೆಯುಮಯವಾಗಿ ಕಱಿದೊಡೆ। ಕಣೆಹಂಜರದಲ್ಲಿ ಕನ್ನ ಮಱಿದೊಱಗಿರ್ದಂ ॥ 687 ॥

**146 ಶಿಕಾರಿಪುರ 123 [1158]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ದಂಡನಾಯಕ ಕೇಶವರಾಜನು ತಾನು ಮಾಡಿಸಿದ ಕೇಶವಪುರವೆಂಬ ಆಗ್ರಹಾರದ ವೃತ್ತಿಗಳಿಗಾಗಿ ಬೆಳುವಣೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಬ್ರಹ್ಮೋತ್ಪತ್ತಿ

ಅಮೃತಾಂಭೋರಾಶಿಶಯ್ಯಾಸದನದೊಳುರುವೀಚೀಸಮುತ್ತುಂಗಮಂಚಾ।
ಗ್ರಿಮಶೇಷಾನಲ್ಪತಲ್ಪಸ್ಥಳದೊಳಘಹರಂ ಶ್ರೀಧರಂ ಯೋಗನಿದ್ರೋ॥
ದ್ಯಮದಿಂದಿರ್ದೆಟ್ಟು ವಿಶ್ವೋಜ್ಜನನವಿಧಿಗೆ ಚಿತ್ತಂದರಲ್ ತನ್ನ ಸಾಮ।
ರ್ಥ್ಯಮೆ ರೂಪಾದಂತೆ ನಾಭ್ಯಂಬುರುಹದಿನೊಗೆದಂ ಚಿನ್ಮಯಂ ಪದ್ಮಸದ್ಮಂ ॥ 688 ॥

ತೈಲಪ

ಶಿಪುವೆಱದುಯ್ದು ಭೂತಳಮನೆಯ್ದೆ ರಸಾತಳದಿಂದೆ ತಂದ ತ।
ದ್ರಿಪುವ ಪರಾಕ್ರಮಕ್ಕೆ ನಿಜವಿಕ್ರಮಮಿಮ್ಮಡಿಯಾಗೆ ರಟ್ಟರಿಂ॥
ದಪಹೃತಮಾದ ವಿಶ್ವಧರಣೀತಳಮಂ ಬಿಡದೀಟ್ಟುಕೊಂಡ ತೈ।
ಲಪನೃಪನಾದಮುದ್ಧರಿಸಿದಂ ದಲತರ್ಕ್ಯಚಳುಕ್ಯವಂಶಮಂ ॥ 689 ॥

## ಆಹವಮಲ್ಲ

ಇಳೆಯುಂ ತಮಾಳಕುಳಕುಂ। ತಳೆಯುಂ ನವಪೂಗಕಾಂಡಮಂಡಿತಗಳಕಂ।
ದಳೆಯುಂ ಭೂಭೃತ್ಕುಚಮಂ। ಡಳೆಯುಂ ತತ್ತ್ವನಯನಾಳ್ದನಾಹವಮಲ್ಲಂ ॥ 690 ॥

## ಜಗದೇಕಮಲ್ಲ

ಮಾಲವಮಾಲವಾದಿಹರಣಂ ಧೃತಪಲ್ಲವಪಲ್ಲವಾವನೀ।
ಪಾಲಕಮಂಡಲಂ ಮುಕುಳಹಸ್ತಯುಗಾತ್ತಲಲಾಟಲಾಟಭೂ॥
ಮೀಲಲನಾಧಿಪಂ ವಿಪದನೂನಕಳಿಂಗಕಳಿಂಗನೆಂಬುದಾ।
ಭೀಲಪರಾಕ್ರಮಕ್ರಮಮನೆಯ್ದೆ ಜಗಂ ಜಗದೇಕಮಲ್ಲನಾ ॥ 691 ॥

## ಕೇಶವರಾಜನ ಪಿತಾಮಹಿ ಪಂಪಾದೇವಿ

ರತಿಯುಂ ಪಾರ್ವತಿಯನರುಂ। ಧತಿಯುಂ ಭಾರತಿಯನೆಸೆವ ರೂಪಿಂ ಪೆಂಪಿಂ।
ಪತಿಹಿತದಿಂ ಚದುರಿಂ ತ। ತ್ಸತಿ ಪಂಪಾದೇವಿ ನಾಡೆಯುಂ ಧಿಕ್ಕರಿಪಳ್ ॥ 692 ॥

## ಕೇಶವರಾಜ

ಶ್ರೀಕಾಂತಾಪತಿ ವಿಕ್ರಮಾರ್ಜಿತಬಲಿಕ್ಷೋಣೀತಳಂ ವಿಶ್ವಲೋ।
ಕೈಕಸ್ತುತ್ಯದಶಾವತಾರಯುತನುದ್ಯಚ್ಛಂಖಚಕ್ರಾಬ್ಜಲ॥
ಕ್ಷ್ಮಾಕೀರ್ಣಾತ್ಮಕರಾಗ್ರನೆನ್ನವೊಲಿವಂ ತಾನೆಂದು ಸಾನಂದದಿಂ।
ದಾಕಲ್ಪಾಯುವನೀಗೆ ಕೇಶವಚಮೂಪಂಗಾಗಳುಂ ಕೇಶವಂ॥ 693 ॥

ಉದಯಿಸಿದಂ ಪ್ರತಾಪನಿಧಿ ಕೇಶವದೇವನುದಾತ್ತಸಚ್ಚರಿ।
ತ್ರದ ನೆವದಿಂದೆ ತತ್ಕೃತಯುಗಂ ಪರಿವರ್ತಿಸೆ ತನ್ನತರ್ಕ್ಯವಾ॥
ಕ್ಯದ ನೆವದಿಂದೆ ರಾಮವಿಶಿಖಂ ಪರಿವರ್ತಿಸೆ ಕೀರ್ತಿ ರುಂದ್ರಭಾ।
ವದ ನೆವದಿಂದೆ ವಾಸರದೊಳಂ ಪರಿವರ್ತಿಸೆ ಚಂದ್ರಿಕೋತ್ಕರಂ ॥ 694 ॥

ಪುಸಿಯಲ್ಲು ಬೇಟ್ಟರಂ ಪು। ಟ್ಟಿಸುವ ಬೆಸಂ ಬರ್ಮನದು ಸಮಂತವರಂ ರ।
ಕ್ಷಿಸುವ ಬೆಸಂ ತನ್ನದು ಗಡ। ನಿಸದಂ ಕೇಶವನಿದೇನುದಾತ್ತನೊ ಧರೆಯೊಳ್ ॥ 695 ॥

ಇಗಜಂ ಕೊಟ್ಟ ತೆ ಇವಲ್ ಶಿಬಿ। ಮುನಿ ಕೊಟ್ಟಡಗಾ ದಧೀಚಿ ಕೊಟ್ಟೆಲ್ವುಗಳೇಂ।
ಧನದಂತೆ ಸೇವ್ಯಮೇ ಪೇ। ಟಿನುತುಂ ಹೊಂಗಳನೆ ಕೇಶವಂ ಕುಡುತಿರ್ಪಂ ॥ 696 ॥

ಧುರದೊಳ್ ಕೇಶವದಂಡನಾಥನ ಭುಜೋತ್ಪಾತಾಸಿಘಾತಕ್ಕೆ ವಿ।
ಶ್ವ ರಿಪೂರ್ವೀಶ್ವರರಂಜಿ ಪುತ್ತಡದುರ್ಜ ಜೀವಂಬೆತ್ತೊಡೆಮ್ಮೆಮ್ಮ ಕಾಂ॥

ತರನೊಲ್ದಿಂತಿದು ರಕ್ಷಿಸಿತ್ತಿದುವೆ ದೈವಂ ತಾನೆನುತ್ತಾ ವಧೂ।
ತ್ಕರದಿಂದಾದುದು ಹುತ್ತನೂದುವ ಕೃತವ್ಯಾಪಾರಮೀ ಧಾತ್ರಿಯೊಳ್ ॥ 697 ॥

ದೋಣರಾಜ

ತದಮಾತ್ಯಂ ಕೀರ್ತಿವೆತ್ತಂ ಧರೆಯೊಳನುಪಮಂ ದೋಣರಾಜಂ ಬುಧೇಷ್ಟ।
ಪ್ರದಚಂಚತ್ಕಲ್ಪಭೂಜಂ ನಿಜಕುಲಕುಮುದಾನಂದರಾಜಂ ವಧೂದ್ಯ॥
ಜ್ಮದಭೃಂಗೀಹರ್ಷಸಂಪಾದಕವದನಸರೋಜಂ ಸುಶೀಲಾಂಗರಾಜಂ।
ವಿದಿತೋದ್ಯತ್ಸತ್ಯಭಾಜಂ ರಿಪುಗಜಮೃಗರಾಜಂ ಸಮಗ್ರೋಗ್ರತೇಜಂ ॥ 698 ॥

ನರಸಿಂಗನಾಯಕ

ಹುಸಿ ನೆಲಸದ ನುಡಿ ಲೋಭದ। ದೆಸೆ ಪೊರ್ದದುದಾರವೊಳ್ಪು ಕುಂದದ ಚರಿತಂ।
ಮಸುಳದ ಜಸದೆಸಕಂ ಭಾ। ವಿಸುವೊಡೆ ನರಸಿಂಗನಾಯಕಂಗಿವು ಸಾಜಂ ॥ 699 ॥

ರೇಚರಸ

ಅಮಳಗುಣಾನಮಳಕುಳನ। ತ್ಯಮಳಚರಿತ್ರೈಕನಿಳಯನಮಳನಯುಪ್ರ।
ಕ್ರಮನಮಳಯಶೋರೋಚಿ। ಸ್ಸಮಾವೃತಾಶಾಳಿಯೆನಿಸಿದಂ ರೇಚರಸಂ ॥ 700 ॥

ಪೋತರಸ

ಪರಿಚಿತಬಹುನಾಟಕಕಾ। ವ್ಯರಸಂ ಬುಧಜನಮನೋಮಧುವ್ರತನುತತಾ।
ಮರಸಂ ಕರಣಾಗ್ರಣಿ ಪೋ। ತರಸಂ ಸ್ವಕುಲಪ್ರಭೂತಜನಸಿದ್ಧರಸಂ ॥ 701 ॥

ಕೇಶವಪುರ

ಇದು ಕೃತಕಲ್ಪಜನ್ಮನಿಲಯಂ ದಿಟಮಿಂತಿದು ವಿಶ್ವವೇದದ।
ಭ್ಯುದಯನಿವಾಸಮಿಂತಿದು ಪವಿತ್ರಚರಿತ್ರಗುಣಾಕರಂ ಸಮಂ॥
ತಿದು ಘನಪುಣ್ಯಸಂಪದನಿಕೇತನಮೆಂಬಿನವೊಪ್ಪಿ ತೋಱುತಿ।
ರ್ಪುದು ಸಲೆ ವೀರಕೇಶವಪುರಂ ಧರಣೀನವರತ್ನನೂಪುರಂ ॥702॥

ಕೇಶವದೇವಾಲಯ

ತರುಪಾಷಾಣಾದಿಕರ್ಮಾಂತರಪರಿಣತಿಯುಂ ಪದ್ಮಜಂ ಲೋಕದೊಳ್ ಬಿ।
ತ್ತರಿಸಲ್ವೇೞ್ಕುಂ ದಲೆಂದಿಂತಿದಱೊಳೆ ಪಡಿಯಚ್ಚಾಗಿ ಮಾಡಿಟ್ಟನೆಂಬಂ॥

ತಿರೆ ಚೆಲ್ವಂ ತಾಳ್ದಿ ದೃಜ್ಮಂಡನಮೆನಿಪ ಲಸತ್ಕೇಶವಾವಾಸಮಂ ನಿ।
ರ್ಭರಭಕ್ತಿಭ್ರಾಜಿತಂ ಮಾಡಿಸಿದನೆಸೆಯೆ ದಂಡಾಧಿಪಂ ಕೇಶಿರಾಜಂ ॥ 703 ॥

## 147 ಅರಸಿಯಕೆರೆ 141 [1158]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ದಂಡನಾಯಕ ಶಾಂತಿಯಣ್ಣನು ಕರಿಗುಂದ ದಲ್ಲಿ ಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಬಲಿದೊಡೆ ಮಲೆದೊಡೆ ಮಲೆಪರ। ತಲೆಯೊಳ್ ಬಾಳಿಡುವನುದಿತಭಯರಸವಶದಿಂ।
ಬಲಿಯದ ಮಲೆಯದ ಮಲೆಪರ। ತಲೆಯೊಳ್ ಕೈಯಿಡುವನೊಡನೆ ವಿನಯಾದಿತ್ಯಂ
॥ 704 ॥

ಎರೆಯಂಗ

ಆನತರಾಗದ ರಿಪುನೃಪ। ರಾನನಸರಸಿರುಹನಾಳಮಂ ಖಂಡಿಸಲೆಂ।
ದಾನೀಳ್ಕುಮದಾನೀಳ್ಕುಮ। ದಾನೀಳ್ಕುಮದೆಱೆಗನೃಪನ ಭುಜದಸಿಹಂಸಂ ॥ 705 ॥

ತೈಲದಂಡಾಧಿಪ

ಎರೆದಟ್ಟಿದನ್ಯವಧುಗಂ। ನೆರೆದಾಂತ ವಿರೋಧಿಜನಕೆ ಕಣ್ಣುಂ ಮನಮುಂ।
ಪರಿಕಿಸೆ ಸೋಲವೆನಲ್ಕಿಂ। ಧರೆಯೊಳ್ ದೊರೆಯಾರೊ ತೈಲದಂಡಾಧಿಪನೊಳ್ ॥706॥

ವರವನಿತೆಯರ್ಗೆ ರಿಪುಗ। ಳ್ಗೆರೆದರ್ಥಿಜನಕ್ಕೆ ತೈಲದಂಡಾಧೀಶಂ।
ಹರಿತನಯಂ ಹರಿತನಯಂ। ಪರಿತನಯಂ ಧರೆಯೊಳೆಂದು ಪೊಗಟದರೊಳರೇ ॥707॥

ಚಾವುಂಡ

ಆವಾವ ಗುಣಂಗಳೊಳಂ। ಭಾವಿಸುವೊಡೆ ನೋಡ ಜಗದೊಳುಪ್ಪರವಟ್ಟಂ।
ಕೇವಳಮೆ ಸಂಧಿವಿಗ್ರಹಿ। ಚಾವುಂಡಂ ಗುಣಕರಂಡನಮೃತದ ಪಿಂಡಂ ॥ 708 ॥

ಜಿನದೇವ

ಜಿನ್ನಂ ಸಮಸ್ತಗುಣಸಂ। ಪನ್ನಂ ಶಿಷ್ಟೇಷ್ಟತತಿಗೆ ಕೈ ತೀವಿರೆ ಚಿಂ।
ಬೊನ್ನಂ ಕುಡುವೆಡೆಗಿನಸುತ। ನನ್ನಂ ಪರಹಿತದೊಳಾ ವಿಯಚ್ಚರನನ್ನಂ ॥ 709 ॥

### ಜಗದೇಕಮಲ್ಲ ವಾದಿರಾಜ

ಆದಿತ್ಯನ ಕೆಲದೊಳ್ ಚಂ। ದ್ರೋದಯಮೆಸೆಯದವೊಲೀ ಧರಾಮಂಡಳದೊಳ್।
ವಾದಿಗಳೆವೆಂಬ ಟುಂಟುಕ। ವಾದಿಗಳೆಸೆದಪರೆ ವಾದಿರಾಜನ ಸಭೆಯೊಳ್ ॥ 710 ॥

### ಶ್ರೀಪಾಲ ತ್ರೈವಿದ್ಯ

ಆವನ ವಿಷಯಮೊ ಷಟ್ತ। ರ್ಕಾವಿಳಬಹುಭಂಗಿಸಂಗತಂ ಶ್ರೀಪಾಲ।
ತ್ರೈವಿದ್ಯಗದ್ಯಪದ್ಯವ। ಚೋವಿನ್ಯಾಸಂ ನಿಸರ್ಗವಿಜಯವಿಳಾಸಂ ॥ 711॥

## 148 ಶಿಕಾರಿಪುರ 18 [1158]

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಣದೇವನ ಸಾಮಂತ ನನ್ನಿಯ ಗಂಗನ ಆಳಿಕೆಯಲ್ಲಿ ಸೇನಬೋವ ಸೋಮನು ಬೇಗೂರ ಮಲ್ಲಿಕಾರ್ಜುನದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ನನ್ನಿಯ ಗಂಗ

ಬೇಡಿದೊಡಲ್ಲದೀಯದು ನಿಳಿಂಪಕುಜಂ ಕರೆದೀವ ದಾನದಿಂ।
ನೋಡೆ ಸುರಾವನೀಜಮದು ಪೇಟ್ ದೊರೆಯೇ ಮಣಿ ಚಿಂತಿಸಲ್ಕೆ ಕೈ॥
ಯ್ಗೂಡುವುದಲ್ಲದಿರ್ದೊಡದು ತಾಂ ಕುಡದರ್ಥಿಜನಕ್ಕೆ ರಾಗದಿಂ।
ನೀಡಿರದೀವನೀ ವಸುಧೆಯೊಳ್ ಸಲೆ ನನ್ನಿಯ ಗಂಗಭೂಭುಜಂ ॥ 712 ॥

### ಬೇಗೂರ ಮಹಾಜನಗಳು

ಪ್ರತ್ಯೇಕಮಾ ಧರಾಮರ। ಸತ್ಯದ ಶೌಚದ ಕುಲಾಭಿಮಾನದ ಜಸದೊಂ।
ದತ್ಯುನ್ನತಿಕೆಯನಜನುಂ। ನಿತ್ಯಸ್ಥಿತನೆಯ್ದೆ ಪೊಗೞಲೇಂ ನೆಱೆದಪನೇ ॥ 713 ॥

### ಭಾಸ್ಕರದೇವ

ಮುನಿಸಿಂದಂ ಕಡಲಂ ಕಡಂಗಿ ಕುಡಿದಂತಾತಾಪಿ ವಾತಾಪಿಯಂ।
ಘನಮಪ್ಪೊಂದುದರಾಗ್ನಿಯಿಂ ಕಿಡಿಸಿ ವಿಂಧ್ಯಾದ್ರೀಂದ್ರಮಂ ತದ್ವಿಲೋ॥
ಚನದಿಂ ನೋಡಿ ನಿಜಾಜ್ಞೆಯಿಂ ನಿಲಿಸಿದಾ ಕುಂಭೋದ್ಭವಂ ಕೋಪಸಂ।
ಜನಿತಂ ಭಾಸ್ಕರದೇವನೊಳ್ ಸಮನೆ ಶೌಚಾಚಾರನಿಷ್ಕೋಪಿಯೊಳ್ ॥ 714 ॥

## 149 ಸೊರಬ 328 [1159]

ಇದರಲ್ಲಿ ಚಾಳುಕ್ಯರಾಜನಾದ ನೂರ್ಮಡಿತೈಲನ ಆಳಿಕೆಯಲ್ಲಿ ಬೀರಿಸೆಟ್ಟಿ ಕಾದಂಬ ಸೋಯಿದೇವನ ಸಮ್ಮತಿಯಿಂದ ಕೇದಾರೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸೋಯಿದೇವ

ಪೆಸರ್ವೆತ್ತಂ ತೋಳ ಕೂರ್ವಾಳರಿನೃಪರ ಕುಲಧ್ವಂಸಮಂ ಮಾಡೆ ವಾಕ್ಯ।
ಪ್ರಸರಂ ಶ್ರೀರಾಮಬಾಣಕ್ಕಧಿಕತೆಯನಣಂ ತಾಳ್ದೆ ಭಾಸ್ವದ್ವಿವೇಕಂ॥
ಬಿಸಜಪ್ರೋದ್ಭೂತನಂ ಧಿಕ್ಕರಿಸೆ ವಿತರಣಂ ವಂದಿಸಂದೋಹಮಂ ರ।
ಕ್ಷಿಸೆ ತನ್ನಾಚಾರಮೀ ಕಲ್ಕಿಯನಲೆಯೆ ಧರಾಧೀಶ್ವರಂ ಸೋವಿದೇವಂ ॥ 715 ॥

ಬೀರಿಸೆಟ್ಟಿ

ಅರಿಗಬಲಾಜನಕ್ಕೆರೆದ ವಂದಿಗೆ ವೀರದಿನಾತ್ಮರೂಪಸುಂ।
ದರತೆಯಿನಾರ್ಪಿನಿಂ ಪಲವು ಕೂರ್ಗಣೆಯುಂ ನನೆಯುಂಬಿನೋಳಿಯುಂ॥
ಸುರುಚಿರಕಾಂಚನಪ್ರಕರಮಂ ಸಲೆ ತನ್ನಯ ಹಸ್ತಯುಗ್ಮದಿಂ।
ಸುರಿದಪನೆಂದೊಡಾರ್ ಬಗೆದು ಬಣ್ಣಿಸರೀ ನುತ ಬೀರಿಸೆಟ್ಟಿಯಂ ॥ 716 ॥

## 150 ಶ್ರವಣಬೆಳ್ಗೊಳ 345 [1159]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಮಂತ್ರಿ ಹುಳ್ಳನು ಬೆಳ್ಗೊಳದಲ್ಲಿ ಚತುರ್ವಿಂಶತಿತೀರ್ಥಂಕರ ಬಸ್ತಿಯನ್ನು ಕಟ್ಟಿಸಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಹುಳ್ಳ

ಧರೆಯುಂ ಗೆಲ್ದಿರ್ದ ತಿಣ್ಪುಳ್ಳನನುದಧಿಯನೇನೆಂಬ ಗುಣ್ಪುಳ್ಳನಂ ಮಂ।
ದರಮಂ ಮಾರ್ಕೊಳ್ವ ಪೆಂಪುಳ್ಳನನಮರಮಹೀಜಾತಮಂ ಮಿಕ್ಕ ಲೋಕೋ॥
ತ್ತರಮಪ್ಪಾಪ್ಪುಳ್ಳನಂ ಪುಳ್ಳನನೆಸೆವ ಜಿನೇಂದ್ರಾಂಘ್ರಿಪಂಕೇಜಪೂಜೋ।
ತ್ಕರದೊಳ್ ತಳ್ಪೊಯ್ದು ಲಂಪುಳ್ಳನನನುಕರಿಸಲ್ ಮರ್ತ್ಯನಾವೊಂ ಸಮರ್ಥಂ॥ 717 ॥

ಸತತಂ ಪ್ರಾಣಿವಧಂ ವಿನೋದಮನೃತಾಳಾಪಂ ವಚಃಪ್ರೌಢಿ ಸಂ।
ತತಮನ್ಯಾರ್ಥಮನೀಟ್ಟುಕೊಳ್ವುದೆ ವಲಂ ತೇಜಂ ಪರಸ್ತ್ರೀಯರೊಳ್॥
ರತಿ ಸೌಭಾಗ್ಯಮನೂನಕಾಂಕ್ಷೆ ಮತಿಯಾಯ್ತೆಲ್ಲರ್ಗಮಾರ್ ಪೋಲ್ತಪರ್।
ವ್ರತರತ್ನಪ್ರಕರಕ್ಕೆ ಶೀಳಭಟರೊಳ್ಗಾ ಹುಳ್ಳನಂ ಹುಳ್ಳನಂ ॥ 718 ॥

ಹುಳ್ಳಚಮೂಪನ ಗುಣಗಣ। ಮುಳ್ಳನಿತುಮನಾರೊ ನೆಱೆಯೆ ಪೊಗೞಲ್ ನೆಱೆವರ್।
ಬಳ್ಳದೊಳಳೆದುದಧಿಯ ಜಳ। ಮುಳ್ಳನಿತುಮನಾರೊ ಪವಣಿಸಲ್ ನೆಱೆವನ್ನರ್ ॥719॥

## 151 ಸಾಗರ 159 [1159]

ಇದರಲ್ಲಿ ಚಾಳುಕ್ಯರಾಜನಾದ ನೂರ್ಮಡಿತೈಲನ ಆಳಿಕೆಯಲ್ಲಿ ಸಾಂತರ ಕಾಮನ ಮಗಳಾದ ಅಳಿಯಾದೇವಿ ಸೇತುವಿನಲ್ಲಿ ಜಿನಬಸ್ತಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ತೈಲಸಾಂತರ

ಅದಟಿನಳುರ್ಕೆ ಮ್ಯೆಮೆಯ ನಿಮಿರ್ಕೆ ಯಶೋಧನದಿರ್ಕೆ ರಾಜವಂ।
ಶದ ಕಡುದೆಳ್ಪು ದಾನಗುಣದೊಳ್ಪು ಗುಣಂಗಳ ತಳ್ಪು ರಾಜ್ಯಸಂ॥
ಪದದ ಪೊದಟ್ಕೆ ತೇಜದ ತೆರಳ್ಕೆ ವಿರೋಧಿಯ ಬಾಟ್ಕೆ ತನ್ನದೆಂ।
ಬುದನೆನೆ ಪೆರ್ಮೆಯಂ ತಳೆದನಾ ನೃಪರೊಳ್ ನೃಪತೈಲಸಾಂತರಂ ॥ 720 ॥

### ಅಳಿಯಾದೇವಿಯ ಅಣ್ಣ ಜಗದೇವ

ಅದಿರದ ವೀರರಿಲ್ಲಳವುಗುಂದದ ಮನ್ನೆಯರಿಲ್ಲ ಕೂಗಡಂ।
ಗದ ನರನಾಥರಿಲ್ಲ ನಡಪೆನ್ನದ ರಾಜಕುಮಾರರಿಲ್ಲ ಚಾ॥
ಗದ ಬಳವಂತರಿಲ್ಲ ಕೆಡೆದೊಡ್ಡಿಸಿ ಪೋಗದ ದುರ್ಗವರ್ಗಮಿ।
ಲ್ಲೊದವಿದ ಶೌರ್ಯಶಕ್ತಿಗೆ ದಿಟಂ ಜಗದೊಳ್ ಜಗದೇವಭೂಪನಾ ॥ 721 ॥

ಉನ್ನತಿ ಮೇರುವಿಂಗೆ ಮಣಿಮಾಲಿಕೆಯಾದುದು ಸರ್ವಶಾಸ್ತ್ರಸಂ।
ಪನ್ನತೆ ಭಾರತೀಪಚನಮಾದುದು ದಾನಗುಣಂ ಸಮಸ್ತವಿ॥
ದ್ವನ್ನಿಕರಕ್ಕೆ ಕೆಯ್ಪಿಡಿವೊಲಾದುದು ತನ್ನ ಜಸಂ ಜಗಕ್ಕೆ ಕೆ।
ಯ್ಗನ್ನಡಿಯಾದುದೇನೆಸೆದನೋ ಜಗದೊಳ್ ಜಗದೇವಭೂಭುಜಂ ॥ 722 ॥

## 152 ತುಮಕೂರು 9 [1160]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಸಾಮಂತ ಬಾಚಿದೇವನು ಕೈದಾಳದಲ್ಲಿ ಗಂಗೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ನಾರಸಿಂಹ I

ದಿನಕೃತ್ತೇಜಕ್ಕೆ ತೇಜಂ ಸಮನೆಸೆವದಟುದ್ವೃತ್ತ ಕಂಠೀರವಕ್ಕಂ।
ತೆನಸುಂ ಸಾದೃಶ್ಯಮಾರ್ಪಂತಮರಕುಜಕೆ ಮಾಱಿಂಡಳಂ ನೋಟ್ಪೊಡಂತಾ॥

ಘನಬಾಹಾಟೋಪ ಭೀಮಾರ್ಜುನನೃಪನಳಭೂಪಾಳರೊಳ್ ಪಾಟಿಯೆಂದೀ।
ಜನಮೆಲ್ಲಂ ಕೀರ್ತಿಸಲ್ ಧಾತ್ರಿಗೆ ಪತಿಯೆಸೆದಂ ನಾರಸಿಂಹಕ್ಷಿತೀಶಂ ॥ 723 ॥

ಬಾಚಿದೇವ

ಸಿಂಗದ ಶೌರ್ಯಮಂಗಜನ ರೂಪು ಮುರಾರಿಯ ಶಕ್ತಿಯಾಗಡುಂ।
ಪಿಂಗದೆ ಕರ್ಣನೀವ ಗುಣಮಿಂದ್ರನ ಲೀಲೆ ಭುಜಂಗರಾಜನೊಳ್॥
ಸಂಗಳಿಸಿರ್ದ ಪೆರ್ಮೆ ಸುರಶೈಲದ ಬಿಣ್ಪುವೊಱಲ್ದು ನಿಂದುವೀ।
ಗಂಗನ ಪುತ್ರನೊಳ್ ಸುಭಟಬಾಚಿಯೊಳೂರ್ಜಿತಸವ್ಯಸಾಚಿಯೊಳ್ ॥ 724 ॥

ಸಾಮಂತಂ ಸುರಧೇನುವಿತ್ತು ತಣಿಪಲ್ ವಿಶ್ವಂಭರಾಭಾಗಮಂ।
ಸಾಮಂತಂ ರಿಪುಸೈನ್ಯಮಂ ತಱಿಯಲಾ ಪ್ರತ್ಯಕ್ಷವೀರಾರ್ಜುನಂ॥
ಸಾಮಂತಂ ಶರಣೆಂದವಂಗೆ ದಯೆಯಿಂ ಗಂಭೀರರತ್ನಾಕರಂ।
ಸಾಮಂತಂ ಕಲಿಬಾಚಿಯಾರ್ಗಮಧಿಕಂ ವೈರೀಭಪಂಚಾನನಂ ॥ 725 ॥

ಬಾಚಿಯ ತಂದೆ ಗಂಗ

ಭೀಮಂಗೆಣೆ ಭುಜಬಳದಿಂ। ರಾಮಂಗೆಣೆ ಶೌರ್ಯದೇಟ್ಗೆಯಿಂ ರೂಪಿನೊಳಾ।
ಕಾಮಂಗೆಣೆಯೆನಲೊಪ್ಪಿದ।ನೀ ಮಹಿಯೊಳ್ ಗಂಗನಮಳಲಕ್ಷ್ಮೀಸಂಗಂ॥ 726 ॥

ಕೈದಾಳ

ತುಱುಗಿದ ಮಾಮರದಿಂ ಬೆಳೆ। ದೆಱಗಿದ ಸೌಗಂಧಿಶಾಳಿಯಿಂ ಪೂಗೊಳದಿಂ।
ಕೆಱೆಯಿಂ ದೇವಾಲಯದಿಂ। ನೆಱೆ ಸೊಗಯಿಸಿ ತೋರ್ಕುಮಾಗಳುಂ ಕೈದಾಳಂ॥ 727 ॥

**152 (ಅ) ದಾವಣಗೆರೆ 35 [ಸು. 1100]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಯಿದೇವನ ಆಜ್ಞೆಯಿಂದ ನಾಳ್ಪ್ರಭು ಸಂಕಗಾವುಂಡ ಮುಂತಾದವರು ಹರಿಹರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಹರಿಹರ ದೇವರು

ಶ್ರೀಗಿರಿಜಾಪ್ರಿಯರ್ ಶಿತಿಸಿತಚ್ಛವಿಗಳ್ ನುತಕೌಸ್ತುಭಸ್ಫುರ।
ದ್ಭೋಗಿವಿಭೂಷಣರ್ ವಿಹಗರಾಜವೃಷಾಸನರೇಕಮೂರ್ತಿಸಂ॥
ಯೋಗವಿರಾಜಿತರ್ ಹರಿಹರಪ್ರಭುಗಳ್ ದಯೆಗೆಯ್ಗನಾರತಂ।
ರಾಗದೆ ಸೋಮಭೂಪತಿಗೆ ನಿಶ್ಚಲಲಕ್ಷ್ಮಿಯುಮಂ ಸ್ಥಿರಾಯುಮಂ ॥ 728 ॥

## ಬ್ರಹ್ಮ

ಅಮೃತಾಂಭೋನಿಧಿಯೆಂಬ ಸಜ್ಜೆವನೆಯೊಳ್ ಕಲ್ಲೋಲಮಂಚಾಗ್ರಸಂ।
ಸ್ಥಮಹದ್ಭೋಗಿಪಭೋಗತಲ್ಪತಳದೊಳ್ ಸದ್ಯೋಗನಿದ್ರಾಪರಂ।
ಕಮಲಾವಲ್ಲಭನಿರ್ದು ವಿಶ್ವಜನನಕ್ಕುದ್ಯೋಗಿಸಲ್ ತತ್ಪ್ರಸ।
ತ್ವಮೆ ರೂಪಂ ತಳೆದಂತೆ ಚಿನ್ಮಯನಜಂ ನಾಭ್ಯಬ್ಜದೊಳ್ ಪುಟ್ಟಿದಂ ॥ 729 ॥

## ತೈಲ

ದನುಸುತನೊರ್ವನುರ್ವರೆಯನಾ ರಸೆಗುಯ್ದೊಡವಂಗೆ ಭಂಗಮಂ।
ಜನಿಯಿಸಿ ತಂದ ಮುನ್ನಿನ ಮುಕುಂದನ ಶೌರ್ಯಮನಾತ್ಮ ವಿಕ್ರಮಂ॥
ನೆನೆಯಿಸೆ ರಾಷ್ಟ್ರಕೂಟ ನೃಪರಾಳ್ವ ಧರಿತ್ರಿಯನೀಟ್ಟಿ ಕೊಂಡಗು।
ರ್ವಿನ ಕಲಿತೈಲನುದ್ಧರಿಸಿದಂ ನಿಜಚಾರುಚಳುಕ್ಯವಂಶಮಂ ॥ 730 ॥

## ಜಯಸಿಂಹ

ಕ್ಷಿತಿಯಂ ಕುಳಕುಧರಸ್ತನ। ವತಿಯಂ ಕೋಮಳತಮಾಳಕುಳಕುಂತಳಸಂ।
ತತಿಯಂ ಸಮುದ್ರರಶನಾ। ವೃತಿಯಂ ತದವರಜನಾಳ್ದನಾ ಜಯಸಿಂಹಂ ॥ 731 ॥

## ಆಹವಮಲ್ಲ

ಆಂತರನಿಕ್ಕಿ ಸಾಧಿಸಿದ ಧಾತ್ರಿಗೆ ಸುತ್ತಿದಗಟ್ಟ ಪಯೋಧಿ ತಾ।
ಣಾಂತರದೊಳ್ ನಿಯೋಜಿಸಿದ ನಾಯಕರಾ ದಿಗಧೀಶರಾಗೆ ನಿ॥
ಶ್ಚಿಂತೆಯಿನೇಕಭೋಗ್ಯಮಖಿಳಂ ಜಗಮೆಂಬಿನಮಾಳ್ದನಾ ಧರಾ।
ಕಾಂತನ ಸೂನು ಪಾರ್ಥಿವಶಿರೋಮಣಿಯಾಹವಮಲ್ಲಭೂಭುಜಂ ॥ 732 ॥

## ವಿಕ್ರಮ

ಮಗಧಾಧೀಶನ ನೆತ್ತಿಯೊಳ್ ಮುಜಿದ ಕೂರ್ವಾಳ್ ಚೋಳನೀರಳ್ಳೆ ಬಿ।
ಟ್ಟಗೆಗೋದಂತಿರಲುರ್ವಿ ನಿಂದ ಸಬಳಂ ನೇಪಾಳನಾ ಬಾಯೊಳಾ॥
ಯುಗವಡ್ಡಂ ನಿಲೆ ನಟ್ಟ ಕಟ್ಟಿದಲಗಾದಂ ತನ್ನ ದೋರ್ಗರ್ವಮಂ।
ತ್ರಿಗುಣಂಮಾಡೆ ಸಮಸ್ತಮಂ ತಳೆದನುರ್ವೀಚಕ್ರಮಂ ವಿಕ್ರಮಂ ॥ 733 ॥

## ಬಿಜ್ಜಳ

ಧರಣೀಚಕ್ರಕ್ಕಧಿಷ್ಠಾನಮಿದೆನಿಸಿದುದಾತ್ಮೀಯದೋರ್ದಂಡಮುನ್ನ।
ತ್ತರಿಪುವ್ರಾತಾಸುವಾತಾಶನದೆ ತಣಿದುದಾಶಾತಖಡ್ಗಾಹಿ ವಿದ್ವ॥

ದ್ವರಚೇತಃಪ್ರೀತಿಸಂತರ್ಪಣದೆ ಸಫಲಮಾಯ್ತರ್ಥಮಾಶಾಕರೀಂದ್ರೋ।
ತ್ಕರಕರ್ಣೋತ್ಕೀರ್ಣಮಾಯ್ತುಜ್ವಳಯಶಮೆನಿಪಂ ಬಿಜ್ಜಳಕ್ಷೋಣಿಪಾಳಂ॥ 734 ॥

ತೊಡದರ್ೊಡರಾತಿಭೂಭುಜರ ಬೆನ್ದೊವಲಂ ಹೆಡಮುಂಡೆಗೆತ್ತಿ ಕೂ।
ಗಿಡಿಸದೆ ಕೆತ್ತಿ ಮುನ್ನಡಿಗುರುಳ್ಚಿ ಕರುಳ್ಗಳನೆಯ್ದೆ ಸಾಚಿ ಗೋ॥
ಳಿಡಿಸದೆ ಗಂಟಲಿಂ ನೆಱೆಯೆ ಕಣ್ ಪೊಱಪಾಯ್ವಿನಮೆತ್ತಿ ಮುತ್ತಿ ಬಾ।
ಯ್ವಿಡಿಸದೆ ಮಾಣ್ಬನೇ ಸಮರದೊಳ್ ಕಲಿಬಿಜ್ಜಳದೇವಭೂಭುಜಂ ॥ 735 ॥

ಪುಸಿಯಲ್ತು ವೀರಭೋಜ್ಯಾ। ವಸುಂಧರಾ ಎಂಬ ವಾಕ್ಯಮೆನೆ ಧರೆಯಂ ಸಾ।
ಧಿಸಿದಂ ತೆಂಕಬ್ಧಿಯ ಬಡ। ಗ ಸೀಮೆ ಚಾಳುಕ್ಯಕಟಕಮೆನೆ ಬಿಜ್ಜನೃಪಂ ॥ 736 ॥

## ಬನವಾಸಿ

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರಮಾರಯಲ್ ಸಮು।
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜನಿರ್ಕೆದಾಣಮು॥
ನ್ಮದಯುವತೀಜನಂಗಳೆಱೆವಟ್ಟು ಬುಧಾಳಿಯ ಜನ್ಮಭೂಮಿಯೆಂ।
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿಮಂಡಲಂ ॥ 737 ॥

ದೆಸೆಯಂ ಪೊಂಬಣ್ಣದಿಂ ತುಂಬುವ ಕಳಮವನಂ ದಿವ್ಯಸೌರಭ್ಯದಿಂದಾ।
ಗಸಮಂ ನಿರ್ವ್ಯಾಕುಳಂ ಪೂರಿಪ ಕುಸುಮವನಂ ಧಾತ್ರಿಯಂ ನಿರ್ಯದಂಭಃ॥
ಪ್ರಸರಸ್ರೋತಂಗಳಿಂದಂ ಜಳಮಯಮೆನಿಪಾ ನಾಳಿಕೇರೀವನಂ ಸ।
ದ್ಬಿಸದಿಂ ಹಂಸಾಳಿಯಂ ರಕ್ಷಿಪ ಜಳಜವನಂ ರಯ್ಯಮಾ ನಾಡೊಳೆಲ್ಲಂ ॥ 738 ॥

ನಿಱಿದಳಿರ್ದೊಂಗಲಂ ತಳೆದಶೋಕೆ ತಗುಳ್ದೆಳನೀರ ತಂದಲಂ।
ಕಱೆವೆಳದೆಂಗು ಬಿಣ್ಪೊನೆಗಳಿಂ ತೊನೆದಾಡುವ ಕೌಂಗು ಬೇರ್ಗಳಿಂ॥
ತುಱುಗಿರೆ ಕಾತ ಬಕ್ಕೆ ಸಲೆ ಕಟ್ಟಿಲೆ ತಾಂ ನೆಲೆಗೊಳ್ವಿನಂ ದ।
ಡಿಱಿದೆಲೆವಳ್ಳಿ ಕಣ್ಗೆಸೆವುವೆಲ್ಲಿಯುಮಲ್ಲಿಯ ನಂದನಂಗಳೊಳ್ ॥ 739 ॥

## ನಾಗರಖಂಡ

ಮದಮಧುಪಾಳಿ ಸುತ್ತದಲದರ್ೊಂಟಮುಗುರ್ವಿನ ಗಂಧಶಾಲಿ ಸು।
ತ್ತದ ಬಯಲಂಚೆವಿಂಡು ನೆಱೆ ಸುತ್ತದ ಪೂಗೊಳನಿಕ್ಷುವಾಟಿ ಸು॥
ತ್ತದ ಪುರಮಂಬುಜಪ್ರತತಿ ಸುತ್ತದ ಪೆರ್ಗೆಱೆ ಕಾವನಾಜ್ಞೆ ಸು।
ತ್ತದ ಬನಮಿಲ್ಲೆನಲ್ ಸೊಗಯಿಸಿರ್ಪುದು ನಾಗರಖಂಡಕಂಪಣಂ ॥ 740 ॥

ಆಗಳುಮೆಸೆದಿರ್ಪುದು ಪು। ನ್ನಾಗವನದಿನೆಸೆವ ನಾಗಚಂಪಕವನದಿಂ।
ನಾಗಲತಾವನದಿಂ ಸಲೆ। ನಾಗರಖಂಡಂ ವಿಳಾಸರತ್ನಕರಂಡಂ ॥ 741 ॥

ಪರಿಕಿಪೊಡನೂನಸೌರಭ। ಭರಿತಶ್ರೀಖಂಡಮುಂ ದಿಟಂ ಪ್ರತಿಪದ್ವಿ।
ಸ್ಫುರಿತಶಶಿಖಂಡಮುಂ ನಾ। ಗರಖಂಡಮುಮಾರ ಮನಮುಮಂ ಸೋಲಿಸವೇ ॥742॥

### ಕಾದಂಬ ಬರ್ಮದೇವ

ಜಗಮುಂ ತನ್ನಾರ್ಪು ನಿಚ್ಚಂ ತಣಿಪೆ ದಶದಿಶಾಚಕ್ರಮುಂ ತನ್ನ ಕೀರ್ತ್ಯಂ।
ಶುಗಳಾದಂ ಪರ್ವೆ ತನ್ನಾಕೃತಿ ಜನನಯನಾನಂದಮುಂ ಮಾಡೆ ದುಷ್ಟಾ॥
ರಿಗಳಂ ತನ್ನುಗ್ರಶೌರ್ಯಂ ನೆಱೆ ಮಸುಳಿಸಿ ಕೀೞ್ಮಾಡೆ ತನ್ನುಜ್ವಳಕ್ಷ।
ತ್ರಗುಣಂ ಮತ್ತಾದ್ಯರಂ ಧಿಕ್ಕರಿಸೆ ನೆಗೞ್ದನುರ್ವೀಶ್ವರಂ ಬರ್ಮದೇವಂ॥ 743 ॥

### ಕಾದಂಬ ಬೊಪ್ಪದೇವ

ತತ್ತನಯುಂ ಘನಶೌರ್ಯಮ। ರುತ್ತನಯುಂ ವಿತರಣಾಂಶುಮತ್ತನಯುಂ ಲೋ।
ಕೋತ್ತರಶೌಚಗುಣೇಂದ್ರಸ। ರಿತ್ತನಯುಂ ಬೊಪ್ಪದೇವಭೂಪಂ ನೆಗೞ್ದಂ॥ 744 ॥

ಹೋಗೆಡೆಗೆಟ್ಟು ಬಂಟನೊಳಕೆಯ್ದು ವಿರೋಧಿಯನಾಂಪ ವಂದಿಯುಂ।
ನೀಗಲದೆಂತುಮಾಱದಟುತೀವ ನಿಜೇಪ್ಸಿತಕಾರ್ಯಮೊಂದನು॥
ದ್ಯೋಗಿಸಿ ಸತ್ಯಮುಂ ನುಡಿವ ಭೂಭುಜರಂ ದಿಟಮುಪ್ಪ ವೀರದಿಂ।
ಚಾಗದಿನೊಪ್ಪುವೊರ್ನುಡಿಯಿನಾಂ ಸರಿದರ್ಪನೆ ಬೊಪ್ಪದೇವನೊಳ್ ॥ 745 ॥

ಶರನಿಧಿ ಗುಣ್ಪಿನೊಳ್ ದೊರೆ ಸುರೇಂದ್ರಧರಾಧರಮುನ್ನತಿಕ್ಕೆಯೊಳ್।
ದೊರೆ ಹರಿ ಶೌರ್ಯದೊಳ್ ದೊರೆ ಸುರಾವನಿಜಂ ಘನದಾನವೃತ್ತಿಯೊಳ್॥
ದೊರೆ ಶಶಿ ಕೀರ್ತಿಯೊಳ್ ದೊರೆ ಮನೋಭವನಂಗವಿಲಾಸದೇೞ್ಗೆಯೊಳ್।
ದೊರೆಯಿನಿತಕ್ಕುಮಲ್ಲದೆ ನೃಪರ್ ದೊರೆಯಪ್ಪರೆ ಬೊಪ್ಪದೇವನೊಳ್ ॥ 746 ॥

### ಬೊಪ್ಪದೇವನ ಹೆಂಡತಿ ಸಿರಿದೇವಿ

ಪರಿವಾರಕಲ್ಪಲತೆ ಪತಿ। ನಿರೀಕ್ಷಣಭ್ರಮರಮಲ್ಲಿಕಾಲತೆ ವಿದ್ವ।
ತ್ಪರಪುಷ್ಪಚೂತಲತೆಯೆನೆ। ಸಿರಿದೇವಿಗವಲ್ತೆ ಸಾರ್ಥಪರ್ಯಾಯಂಗಳ್॥ 747 ॥

### ಕಾದಂಬಸೋಯಿದೇವ

ಸ್ತ್ರೀಚಯಶೇಷಮಾಯ್ತು ರಿಪುರಾಜಕುಲಂ ನಿಜವೀರದಿಂದೆ ನಿ।
ರ್ಯಾಚಕಮಾಯ್ತು ಧಾತ್ರಿ ನಿಜದಾನಗುಣೋನ್ನತಿಯಿಂದೆ ಪೂರ್ವಕ॥
ಲ್ಪೋಚಿತಮಾಯ್ತು ಕಲ್ಕಿ ನಿಜಚಾರುಚರಿತ್ರದಿನೆಂದೊಡಣ್ಣ ವಾ।
ಗ್ಗೋಚರಮೇ ಗುಣಾವಳಿ ನೃಪಾಳಶಿಖಾಮಣಿಸೋವಿದೇವನಾ ॥ 748 ॥

ಪೆಸರ್ವಡೆದಂ ನಿಜಾಚರಣಮುಂ ಮಱೆವೆತ್ತು ಯುಗಂ ಕೃತಾಹ್ವಯುಂ।
ನಿಸದಮುದೆಯ್ದೆ ವರ್ತಿಸೆ ನಿಜೋಜ್ವಳಕೀರ್ತಿಯನೊತ್ತುವೆತ್ತು ವ॥
ರ್ತಿಸೆ ಹಗಲುಂ ಶಶಾಂಕರುಚಿ ರಾಮಶರಪ್ರಕರಂ ನಿಜೋದ್ಭವಾ।
ಕೃಸರಮನಿಂಬುವೆತ್ತು ಪರಿವರ್ತಿಸೆ ಸೋಮನೃಪಾಲನುರ್ವಿಯೊಳ್ ॥ 749 ॥

**153 ತುಮಕೂರು 38. ಸು. [1160]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಪ್ರಧಾನ ಎರೆಯಂಗನ ಆಶ್ರಿತನಾದ ಈಶ್ವರನ ಹೆಂಡತಿ ಮಾಚವ್ವೆ ಜಿನಾಲಯವನ್ನು ಎತ್ತಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ

ಶ್ರೀಯಂ ಶ್ರೀವಕ್ಷದೊಳ್ ಸುಸ್ಥಿರಮೆನಿಸಿ ಜಗಂ ಬಣ್ಣಿಸಲ್ ತಾಳ್ದಿ ವೀರ।
ಶ್ರೀಯಂ ದೋರ್ದಂಡದೊಳ್ ಶಾಶ್ವತಮೆನೆ ತಳೆದೀ ಲೋಕಸಂಸ್ತುತ್ಯವಾಣೀ॥
ಶ್ರೀಯಂ ವಕ್ತ್ರಾಬ್ಜದೊಳ್ ವಾಗ್ವರನೆನೆ ಮೆಱೆದಂ ಯಾದವಾಮ್ನಾಯರಾಜ್ಯ।
ಶ್ರೀಯಂ ಸ್ವಾಂಗೀಕೃತಂ ಮಾಡಿದ ನೃಪತಿಳಕಂ ನಾರಸಿಂಹಕ್ಷಿತೀಶಂ ॥ 750 ॥

ಮಾಚವ್ವೆ

ಲಾವಣ್ಯಾಂಭೋಧಿಯ ವೇ। ಳಾವನವನಲತೆ ಸುಧಾಬ್ಧಿಸಂಭವಲಕ್ಷ್ಮೀ।
ದೇವತೆಯೆನಿಸುವಳೀಶ್ವರ। ದೇವನ ವಧು ಮಾಚಿಯಕ್ಕನಬಳಾರತ್ನಂ ॥ 751 ॥

ದ್ವಿಗುಣಿಸುತಿರ್ಪುದುದಾದ ದರಹಾಸವಿಳಾಸನವೀನಚಂದ್ರಿಕಾ।
ಪ್ರಗುಣಗುಣಂಗಳಿಂ ಕುವಳಯಕ್ಕೆ ವಿಳಾಸಮನೆಂದೊಡುದ್ಘಲೀ॥
ಲೆಗೆ ನೆಲೆಯಾದ ಮಾಚಲೆಯನೂನಲಸದ್ವದನೇಂದು. ಯೆ ರೂ।
ಢಿಗೆ ನೆಗಟ್ದಿಂದುಮಂಡಳದೊಳಿರ್ದ ಕಳಂಕಮನಾಗಲೀಗುಮೇ ॥ 752 ॥

**154 ಹಾಸನ 72 [1160]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಮಂತ್ರಿ ಗೋವಿಂದರಾಜನು ಕೋರ ವಂಗಲದಲ್ಲಿ ಗೋವಿಂದೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಗೋವಿಂದರಾಜ

ಕಲಿಕಾಲಕ್ಕಗಿದೋಡಿದಾಸುಚರಿತಂ ಮಾಕಾಂಬಿಕಾಗರ್ಭನಿ।
ಶ್ಚಲದುಗ್ಧಾಬ್ಧಿಯೊಳೊಂದಿ ನಿಂದು ಬೞಿಯಂ ಮೆಯ್ಗೊಂಡು ಗಂಡೇೞಿ ತ॥
ತ್ಕಲಿಯಂ ತಾಂ ಬಿಡೆ ಬೆಂಕೊಳಲ್ಕೆ ತಲೆದೋಱಿತ್ತೆಂದು ಸರ್ವೋರ್ವರಾ।
ತಲವೆಲ್ಲಂ ಪೊಗೞ್ವಂತದೇಂ ನೆಗೞ್ದನೋ ಗೋವಿಂದನಾನಂದದಿಂ ॥ 753 ॥

ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ ಕಳಾಳಾಪದಿಂ।
ನುಡಿಗಲ್ವಲ್ಲಿಯೆ ಸತ್ಯಮಂ ನುಡಿವುದಂ ಕಲ್ತಂ ಪರಾರ್ಥಮಂ॥
ಪಡೆವಂದೇ ಜಸಮಂ ತೆರಳ್ಚಿ ಪಡೆಯಲ್ ಕಲ್ತಂ ದಲೇದಂದು ಪೆ।
ರ್ಗಡೆ ಗೋವಿಂದನವೋಲದಾರ್ ಸುಕೃತಿಗಳ್ ವಿಶ್ವಂಭರಾಭಾಗದೊಳ್ ॥ 754 ॥

ನದಿಗಳ್ ಗಂಗೆಗಳಾದುವೆಯ್ದೆ ಗಿರಿಗಳ್ ಕೈಲಾಸಮಾಗಿರ್ದುವು।
ನ್ಮದಮಾತಂಗಕುಳಂ ಸುರೇಂದ್ರಗಜಮಾಯ್ತಂಭೋಧರಂ ಶಾರದಾಂ॥
ಬುದಮಾಯ್ತಬ್ಧಿಗಳೆಯ್ದೆ ದುಗ್ಧನಿಧಿಯಾಯ್ತೆಂದಂದು ಗೋವಿಂದನಂ।
ದದಿನಾರ್ ಕೀರ್ತಿಯನೀತುಪಾರ್ಜಿಸಿದವರ್ ಸನ್ಮಾನದಾನಂಗಳಿಂ ॥ 755 ॥

ಗೋವಿಂದರಾಜನ ಹೆಂಡತಿ ಸಾಂತವೆ

ಪೊಗೞೆ ಜಗಮಿಂತನಾರತ। ಮಗಣಿತಗುಣಮಣಿಗಣಾಂಗಭೂಷಣೆ ಬಗೆಯೊಳ್।
ಬಗೆಯಂದೆ ಪೆಱತಂ ಪತಿರೇ। ವ ಗುರುಃ ಸ್ತ್ರೀಣಾಮೆನಂತ್ತೆ ಸಾಂತವೆ ನೆಗೞ್ದಳ್ ॥756॥

**154 (ಅ) ಬೇಲೂರು 171 [ಸು. 1160]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಜನ್ನಮಯ್ಯಹೆಗ್ಗಡೆ ಬೆಳವಾಡಿ ಜನ್ನೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ಯಾದವವಂಶಕ್ಕಮರೆ ಮ। ಹೋದಯುಮೆಱೆಯಂಗನೃಪತಿ ವಿನಯಾದಿತ್ಯಂ।
ಗಾದಂ ತನಯಂ ವಿನಯಂ ।ಸೋದರಮೆನೆ ತನಗೆ ನೆಗೞ್ದ ಧೀರೋದಾತ್ತಂ ॥ 757 ॥

ವಿಷ್ಣುವರ್ಧನ

ಇಱಿದ ನೆಲಂಗಳಾಂತವರ ನೆತ್ತರನಟ್ಟಿಸಲಾಱದೀಗಳುಂ।
ದುಱಿತೊಱೆಯುತ್ತುಮಿರ್ದಪುವು ತೀಂಬ ಕಟಂಗಳನೆಂಟುಮಾನೆಗಳ್॥
ತಱತಱನಪ್ಪಿನಂ ಜಯದ ಲಚ್ಚಣಗಂಬದೊಳುರ್ದಿಕೊಳ್ವವಾ।
ವಱಿವೆವೆ ವಿಷ್ಣುವಿಕ್ರಮದುಪಕ್ರಮುಮಂ ಪೊಗೞಲ್ ಕುಬುದ್ಧಿಗಳ್ ॥ 758 ॥

ಮದವದ್ವೈರಿಯನಾಂತು ಪೊಯ್ಯೆ ಜಯಶೀಲಂ ವಿಷ್ಣು ವಿದ್ವಿಷ್ಟನು।
ರ್ಱಿದ ಕತ್ತಾಱದೆ ಪಾಱಿ ಬಿಟ್ಟ ತನಿಗಂದಂ ಕಪ್ಪೆಗೂಂತಿರ್ಕುತಿ॥
ರ್ದುದು ವೀರರ್ಕಳ ಬಿಟ್ಟ ತೋಳ್ ಪಿಡಿದ ಖಡ್ಗಂ ಪೊಯ್ವ ಸೂಟಿಗ್ದೇಱುತಿ।
ರ್ದುದಿದೇನದ್ಭುತಮಾಯ್ತೊ ವೀರವಿಭವಂ ಸಂಗ್ರಾಮರಂಗಾಗ್ರದೊಳ್ ॥ 759 ॥

ಮುಕ್ಕುಳಿಸಿರ್ಪಳಾದಿನರಪಾಳರ ಕೀರ್ತಿಯನಾತ್ಮಕೀರ್ತಿ ತಿಂ।
ದಕ್ಕುಳಿಸಿರ್ಪಳನ್ಯಬಳಮಂ ಬಸಿಱಿಂ ನಿಜಖಡ್ಗಕಾಳಿ ಕೆ॥
ಯ್ಮಿಕ್ಕುದು ತೇಜಮಾಂ ಬಿರುದನೆಂಬನ ಮೀಸೆ ಕರಂಪುನಾರ್ಪಿನಂ।
ಮೊಕ್ಕಳಮಾಯ್ತು ರಾಜಗುಣಮೀಕ್ಷಿಸಲೀ ಕಲಿವಿಷ್ಣುಭೂಪನೊಳ್ ॥ 760 ॥

ಓರೆ ಅಗಲಾದ (?) ಭೂಮಿಗೆ। ನೀರೆಱಗುವುದುಚಿತಮೆಱಗದುನ್ನತಭೂಭೃ।
ದ್ಧಾರಿಣಿಗೆ ಕೀೞ್ ಪರಿವುದು। ಭೋರೆನೆ ತರವಾರಿವಾರಿ ಬಿಟ್ಟಿಗನೃಪನಾ ॥ 761 ॥

ಕರವಾಳವಾಡೆ ಪಾಂಡ್ಯಂ। ಕರವಾಳಿಂ ಹೊಯ್ಸಳೇಶನಿಱಿಯಲ್ ನೋಡ।
ಲ್ಕರವಾಳಲ್ಲದೆ ಕಾದ। ಲ್ಕರವಾಳಿಲ್ಲಾಯ್ತು ನೋಡೆ ತಿಗುಳನ ಪಡೆಯೊಳ್ ॥ 762 ॥

ಕಮಠೇಂದ್ರಾದಿಗಳಾಂತು ಪರ್ಬಿದ ನೆಲಂ ನಿಷ್ಕಂಪದಿಂದಿರ್ದ ನಿ।
ನ್ನ ಮಹಾಬಾಹುವ ತೀನನೇಂ ಕಳೆಗುಮೇ ಪಾಂಡ್ಯಂ ಕುಭೃನ್ಮಾತ್ರನ॥
ಕ್ಕುಮೆಲೇ ಹೊಯ್ಸಳ ಮೇರುವಲ್ಲಿ ಭುಜಮಂ ಮಾಱುರ್ದು ದಿಗ್ದಂತಿದಂ।
ತಮನಿಂತಂತೊರಸಲ್ಲದುಂತೆ ಕಳೆವೈ ದೋರ್ದಂಡಕಂಡೂತಿಯಂ ॥ 763 ॥

ಘುರದೊಳ್ ಬಂದೊಡ್ಡಿ ವೈರಿಪ್ರಕರಮಿರಲವಷ್ಟಂಭದಿಂ ಬಿಟ್ಟಿದೇವಂ।
ಕರವಾಳಂ ತೋಡಿಕೊಂಡಿಂಬಱಿಕಮೆಲೆ ಮಹಾದೇವ ಕಾಲಾಗ್ನಿರುದ್ರಂ-॥
ಗುರಿಗಣ್ ಬಂದಂತೆ ಮಾಕಾಳಿಗೆ ಗರವಿಡಿದಂತಿಂದ್ರದಿಗ್ದಂತಿ ಕಾಯ್ಪಿಂ।
ಪರಿಘಂಗೊಂಡಂತಗುರ್ಬುರ್ಬಿದುದೆನೆ ಭರದಿಂ ಮೀಱಿ ಮಾಱಾಂಪನಾವಂ ॥ 764 ॥

ಒದವಲ್ ರಾಗರಸಪ್ರವಾಹಮುದಟಿಂ ಪುಣ್ಣೆಂಬಿನಂ ಪೊಯ್ಯೆ ಕೂ।
ಡಿದ ತಾಳಂ ಲಯಮುಂ ನೆಗೞ್ಚಿ ಜಡಿದಂ ಸೋಲಿಕ್ಕೆ ಗಂಡಾಜಿರಂ॥
ಗದೊಳಂದಾಂತಿರಳೊಪ್ಪೆ ಬಾಹು...ಶಿಕ್ಷಾಯುಕ್ತಚಂಡಾಸಿದು।
ರ್ಮದವೀರಾರಿನಿವಾರಣಾಭಿನಯಮುಂ ಶ್ರೀವಿಷ್ಣುಭೂಪಾಳನಾ ॥ 765 ॥

### ವಿಷ್ಣುವರ್ಧನನ ಮಹಿಷಿ ಲಕ್ಷ್ಮಿ

ನಗೆ ಸುಧೆಯೊಳ್ ನಿಶಾರಮಣನೊಳ್ ವದನಂ ಸುರಕುಂಭಿಕುಂಭದೊಳ್।
ಬಿಗಿದ ಕುಚಂ ಸುರದ್ರುಮದ ಪಲ್ಲವದೊಳ್ ಪದಪಲ್ಲವಂ ತಳ॥
ರ್ದೊಗೆದುವೆನಿಪ್ಪ ಪಟ್ಟದ ಮಹಾಸತಿ ಲಕ್ಷ್ಮಿಗೆ ಶೇಷನಾಂತ ಭೂ।
ಮಿಗೆ ಪತಿಯಪ್ಪ ವಿಷ್ಣು ಪತಿಯೆಂದೊಡದೊಪ್ಪುವುದೆಂತು ನೋಟ್ಪೊಡಂ ॥ 766 ॥

### ಜನ್ನಮಯ್ಯ

ಉತ್ತಮ ಜೀವನಕ್ಕೆ ಕುಮುದಕ್ಕೆ ಗಭೀರಗುಣಕ್ಕೆ ಸತ್ವಸ।
ದ್ವೃತ್ತಿಗತಿಪ್ರಸನ್ನತೆಗೆ ತನ್ನವೊಲಾಶ್ರಯಮಾಗಿ ಪೆರ್ಮೆಯಂ॥
ಪೆತ್ತುದೆನಿಪ್ಪುದೊಂದು ಕೆಱೆಯಂ ನೆಱೆ ಕಟ್ಟಿಸಿ ದೇವಪೂಜನಾ।
ವೃತ್ತಿಗೆ ಜನ್ನಮಯ್ಯವಿಭು ತಾನದನಿತ್ತನಿದೇನುದಾತ್ತನೋ ॥ 767 ॥

## 155 ಬೇಲೂರು 193 [1160]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಚಟ್ಟನು ಚಟ್ಟಸಮುದ್ರವೆಂಬ ಕೆರೆಯನ್ನೂ ಚಟ್ಟೇಶ್ವರವೆಂಬ ದೇವಸ್ಥಾನವನ್ನೂ ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ

ವಿನಯಾದಿತ್ಯ

ವಿನಯಸ್ಫೂರ್ತಿನಿಧಾನಂ। ವಿನಯಾದಿತ್ಯಾಭಿಧಾನನರ್ಥಿನಿಧಾನಂ।
ವಿನತಜನಜಳನಿಧಾನಂ। ಜನಿಯಿಸಿದಂ ಶತ್ರುಘಾತಶರಸಂಧಾನಂ ॥ 768 ॥

ಎರೆಯಂಗ

ಎಱಗಿದಗೆ ಹೊನ್ನ ಮೞೆಯೆನ। ಲೆಱಪಂ ಮಾಱಾಂತ ಭೂಮಿಪಾಳರ ತಲೆಯೊಳ್।
ಬಱಸಿಡಿಲಂದದೆ ತೊಟ್ಟೆನ। ಲೆಱಗುವನೆಱೆಯಂಗದೇವನದಟರ ಗೋವಂ ॥ 769 ॥

ವಿಷ್ಣುವರ್ಧನ

ಪಡುವಲ್ ಪಶ್ಚಿಮವಾರ್ಧಿ ಮೂಡ ನೆಗೞ್ದಾ ಕಾಂಚೀಪುರಂ ತೆಂಕ ನೋ।
ೞ್ಪೊಡೆ ಸಚ್ಚಂದನಮಂದಮಾರುತಚಳಶ್ರೀಖಂಡಷಂಡಾಚಲಂ ॥
ಬಡಗಲ್ ಪೆರ್ದೊಱೆ ಮೇರೆಯಾಗೆ ನೆಲನಂ ವಿಕ್ರಾಂತದಿಂದಾಳ್ದನೆಂ।
ದೊಡೆ ಪೋಲ್ವನ್ನನದಾವನೀಭುಜಬಳಭ್ರಾಜಿಷ್ಣುವಂ ವಿಷ್ಣುವಂ॥770॥

ತರದಿಂ ತಪ್ಪದೆ ತಾರಕಾತತಿಗಳಂ ತಾರಾಧ್ವದೊಳ್ ತಳ್ವದೊಂ।
ದೆರಡೆಂದಿಂತೆಣಿಸಲ್ಕಮಪ್ಪುದುಱಿದಾಂತೀ ವಿಷ್ಣುಭೂಪಾಳನೊಳ್॥
ಶರಣಾಯಾತರನಣ್ಮಿ ಸತ್ತ ನೃಪರಂ ಬೆನ್ನಿತ್ತರಂ ಲೆಕ್ಕಿಸ।
ಲ್ಕರಿದಿಂದ್ರಾರ್ಚಿತವಾಸುಕಿಪ್ರಭೃತಿಗಂ ಮೇಲಾದರಾರಾರ್ಪವರ್ ॥ 771 ॥

ವಿಷ್ಣುವರ್ಧನನ ಮಹಿಷಿ ಲಕ್ಷ್ಮಾದೇವಿ

ಪವಳಂ ಬಾಯ್ ನವಮೌಕ್ತಿಕಾಳಿ ಸುಲಿಪಲ್ ಶಂಖಂ ಕೊರಲ್ ಚಂದ್ರನೊ।
ಪ್ಪುವ ಭಾಳಂ ನವಮೇಘಜಾಳಮಳಕಂ ಸ್ವಚ್ಛಾಂಬು ಲಾವಣ್ಯಮು॥
ಣ್ಮುವ ಪೀಯೂಷರಸಂ ತೊದಳ್ನುಡಿ ಚಳದ್ವೀಚೀಚಯಂ ತೋಳೆನಲ್।
ನವದುಗ್ಧಾಬ್ಧಿವಿಳಾಸಲಕ್ಷ್ಮಿಯೆನೆ ಲಕ್ಷ್ಮಾದೇವಿ ಕಣ್ಗೊಪ್ಪುವಳ್ ॥ 772 ॥

ಧರಣೀಕಾಮಿನಿ ತನ್ನ ಪೇೞ್ದುದನೆ ಗೆಯ್ದಾಯತ್ತೆಯಾಗಿರ್ಪಳಾ।
ಗಿರಿರಾಜಾತ್ಮಜೆಯಪ್ಪ ಪೆಂಪಿನುಮೆಯುಂ ತನ್ನಾಕೆ ವಾಕ್ಕಾಂತೆಯುಂ॥
ಪಿರಿದುಂ ತಾಂ ನುಡಿದಂತೆ ಕಾಮಸತಿಯುಂ ತನ್ನನ್ನಳೆಂದಂದು ಸುಂ।
ದರಿಯರ್ ಭಾಗ್ಯವಿಳಾಸವಿಶ್ರಮದೆ ಲಕ್ಷ್ಮಾದೇವಿಗಾರಗ್ಗಳಂ ॥ 773 ॥

## ನಾರಸಿಂಹ I

ಭುವನೈಕಾಶ್ಚರ್ಯಮಾಯ್ತಾತನ ಚರಿತಮದೆಂತೆಂಬೆ ಕಾದಂಬಸೈನ್ಯಂ।
ಕವಿಯೇೞಿಂಗೆಂದು ಬಂಕಾಪುರದೊಳಿರಲದಂ ಕೇಳ್ದು ಗರ್ಭಸ್ಥನಾಗಿ॥
ರ್ದವತಾರಂಗೆಯ್ದುತುಂ ತದ್ಬಳಮನರೆದು ತತ್ರಾಜ್ಯಸಾಮ್ರಾಜ್ಯಸರ್ವ॥
ಸ್ವವನಾದಂ ತಂದೆಗಿತ್ತಂ ಜಸಮೆಸೆವಿನೆಗಂ ನಾರಸಿಂಹಕ್ಷಿತೀಶಂ ॥ 774 ॥

ನಳನಾಭಾಗಾಂಬರೀಷಪ್ರಥಿತಪೃಥುಹರಿಶ್ಚಂದ್ರುತಚ್ಚಂದ್ರಗುಪ್ತೋ।
ಜ್ಜ್ವಳಕೀರ್ತ್ಯಾರಾಮರಾಮಾರ್ಜುನಪುರುಸಗರಖ್ಯಾತದುಷ್ಯಂತಧಾತ್ರೀ॥
ತಳಪಾಳರ್ ಕೂಡಿ ಬಂದೀ ಕಲಿಯುಗದೊಳಗೊಂದಾದವೋಲ್ ಕ್ಷತ್ರಧರ್ಮಂ।
ತೊಳಗಲ್ ವಿಖ್ಯಾತಿವೆತ್ತಂ ಯದುಕುಳತಿಳಕಂ ನಾರಸಿಂಹಕ್ಷಿತೀಶಂ ॥ 775 ॥

ಧುರದೊಳ್ ಶೂದ್ರಕನೂರ್ಜಿತಾರ್ಥಚಯದಿಂ ಧೈರ್ಯಕ್ರಮಕ್ಷತ್ರಿಯಂ।
ಪರಸೈನ್ಯಾಂಬುಧಿಬಾಡವಂ ದಲಿದಱಿಂ ತಾಂ ವರ್ಣಸಾಂಕರ್ಯಮಂ॥
ನರಸಿಂಹಂ ತಳೆದಿರ್ದನಿರ್ದುಮಿದು ಮತ್ತಾಶ್ಚರ್ಯಕಂ ವರ್ಣಸಂ।
ಕರಮೀರಾಷ್ಟ್ರದೊಳೇನುಮಿಲ್ಲೆನಿಸಿ ಧಾತ್ರೀಚಕ್ರಮಂ ರಕ್ಷಿಪಂ ॥ 776 ॥

ನುತಧರ್ಮಂ ರಿಪುಭೀಮನರ್ಜುನಯಶಂ ವಿದ್ವಿಷ್ಟಭೂಭೃದ್ಯಮಂ।
ಕ್ಷಿತಿರಾಮಂ ಕೃತಸೀಮಗೀತಭರತಂ ಭಾಸ್ವತ್ಸುಮಿತ್ರೋದ್ಭವಂ॥
ಕ್ಷಿತಿಪಾಳಂ ನರಸಿಂಹದೇವನವನೀಶತ್ರುಘ್ನನಂತುದ್ಭಭಾ।
ರತರಾಮಾಯಣಪೂರ್ವಪುಣ್ಯಪುರುಷಪ್ರಖ್ಯಾತಿಯಂ ತಾಳ್ದಿದಂ ॥ 777 ॥

ಸಬಳಂ ಚಂಚು ತುರಂಗಮಂಗಮೆರಡುಂ ಪಕ್ಷಂಗಳೆಂಬಂತಿರಲ್।
ನಿಬಿಡಂ ಪೊಣ್ಮಿದ ಪಕ್ಕರಕ್ಕೆ ಕುಡುಕಾಗಲ್ಕನ್ಯಸೈನ್ಯಂಗಳಾ॥
ತ್ತಬಲಂ ಪಕ್ಷದೊಳಿಕ್ಕಿ ರಕ್ಷಿಸಿದನಿಂತೀಗಂಡಭೇರುಂಡಸೈ।
ನ್ಯಬಲಂಬೆತ್ತಿರೆ ನಾರಸಿಂಹನೃಪನಾತ್ಮಾವಾಪ್ತಸಪ್ತಾಂಗಮಂ ॥ 778 ॥

ಉಱದಾಂತೊಡ್ಡಿದರಾತಿರಾಜಬಳಮಂ ತನ್ನೊಂದು ಮೆಯ್ಯಿಂದೆ ನಿಂ।
ದಿಱಿದೀವೀರನೃಸಿಂಹನಂತು ಜಸಮಂ ಪೆತ್ತಂದದೇಂ ತಪ್ಪೆ ಕಂ॥
ಡಱಿಯಲ್ ಕಾಳೆಗಮಂ ಪೊಗಟ್ಟಿಗೆಳಸುತ್ತಿರ್ಪರ್ ಕೆಲರ್ ಪೇಟದೇಂ।
ತೆಱೆಯೋ ಸುಂಕಮೋ ಸೂಱೆಯೋ ಪರಕೆಯೋ ಪನ್ನಾಯಮೋ ಬಿಟ್ಟಿಯೋ॥ 779 ॥

ಸಿರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘ ಸುವೃತ್ತಹಸ್ತದಿಂ।
ಪರಿಣತಮಾದ ಕೋಪದಿನನುಗ್ರಹದಿಂ ಸ್ಥಿರಪದ್ಮವಕ್ತ್ರದಿಂ॥
ದುರುತರವಂಶದಿಂದೆಸೆವ ದಾನದಿನೀನರಸಿಂಹಭೂಭುಜಂ।
ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಂ ॥ 780 ॥

ಸಮರದೊಳಿಷ್ಟಮಾದ ಕವಳಂ ತನಗಾಗಿರಲನ್ಯಸೈನ್ಯದಿಂ।
ಸಮನಿಸೆ ಹಸ್ತಿನೀಸಹಿತ ಪದ್ಮಿನಿಯಲ್ಲಿ ವಿನೋದವಿಶ್ರಮಂ॥
ಸಮುಚಿತದಾನಲಕ್ಷ್ಮಿ ಪೆರಸೊಲ್ದ ವೊಲಾಡುವುದೊತ್ತಿ ತನ್ನನಾ।
ಕ್ರಮಿಸುವನೆಂಬನಂ ನೆಲಕೆದರ್ಪುದು ಬಪ್ಪನ ಗಂಧವಾರಣಂ ॥ 781 ॥

ನೆಣದ ಬಣಂಬೆ ಪೆರ್ವೆಣದ ಬೆಟ್ಟು ಕರುಳ್ಗಳ ಬಳ್ಳಿವಳ್ಳಿ ಸಂ।
ದಣಿಸಿದ ಕಂಡ ವರ್ಧಿಸುವ ಪಂದಲೆ ನೆತ್ತರನೀಂಟಿ ರಾಗದಿಂ॥
ಕುಣಿಕುಣಿದಾಡಿ ಪಾಡುವ ನಿಶಾಟೆಯರೆಂಬಿವಱಿಂದೆ ಸಂಗರಾಂ।
ಗಣಮತಿರೌದ್ರಮಾಗಿಱಿದು ಕೊಲ್ವುದು ಬಪ್ಪನ ಗಂಧವಾರಣಂ ॥ 782 ॥

ಇವನ ಮಹಿಷಿ ಚಾಗಲೆ

ಪರಿವಾರಸುರಭಿಯೆನಿಸುವ। ನರಸಿಂಹನರೇಂದ್ರಮಹಿಷಿ ಚಾಗಲೆ ನಿಚ್ಚಂ।
ಪರಿಜನವತ್ಸಸ್ನೇಹದೆ। ತೊರೆದಮೃತಮನಱಿದು ಕಱೆಯುತಿರ್ಪುದು ಸಹಜಂ ॥ 783 ॥

ಸಿರಿಸದ ಹೂವಿನ ಮಾಲೆಯು। ಸರಿಯೆನಿಸುವ ಸಿರಿಯುನೆಸೆಯೆ ತಾಳ್ದಿದ ನಳಿತೋಳ್।
ನರಸಿಂಹಂಗಿದು ವಜ್ರ। ಸ್ಥಿರಪಂಜರಬಂಧಮೆನಿಸಿದುದು ಚಾಗಲೆಯಾ ॥ 784 ॥

ಚಟ್ಟಿ

ನರಸಿಂಹಕ್ಷೋಣೀಪಾಳಂಗಣುಗನಣುವನೆಂತಂತಿರಲ್ ಸ್ವಾಮಿಸಂಪ।
ತ್ಪರಿಪೂರ್ಣ ಕರ್ಣನೆಂತಂತಧಿಕವಿತರಣಂ ದುಗ್ಧವಾರಾಶಿಯೆಂತಂ॥
ತಿರೆ ಗಂಭೀರಂ ಪ್ರತಾಪಾನ್ವಿತನುದಿತದಿನಾಧೀಶನೆಂತಂತೆನಲ್ ತಾಂ।
ಸಿರಿಗಂ ಬರ್ಮಂಗಮುರ್ವೀಜನವಿನುತಗುಣಂ ಪುಟ್ಟಿದಂ ಕೂಸಚಟ್ಟಂ ॥ 785 ॥

ಭೃಗುಮತದೊಳಾದ ಪರಿಣತಿ। ಪೊಗಟಿಲ್ ದೇವಂಗಮರಿದು ನೆಟ್ಟನೆ ಚಟ್ಟಂ।
ತ್ರಿಗುಣೆಸುವ ತಿರುಗಿ ಪಾಯಿಪ। ನಿಗತಂದಿವಿವೆಡೆಯೊಳಾದಿಭೃಗುವಂ ಮಿಗುವಂ ॥786॥

ಭೃಗುವಿಂ ನಾಕಪನಿಂದಂ। ನೆಗಟ್ದ ಬೇತಾಳನಿಂದೆ ಶೂದ್ರಕನಿಂದಂ।
ಬಿಗಿವೊಟ್ಟಜೆಯಿಂ ಚಟ್ಟಂ। ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥ 787 ॥

ಎಡೆಗಡಿವ ಬಿಡುವ ಬಿಡಿಸುವ। ಪಿಡಿದೊತ್ತುವ ಪೊತ್ತುಪರಿವ ಕುತ್ತುವ ಬಲ್ಪು।
ಗ್ಗಡವೊಟ್ಟಜೆಯಿಂ ಚಟ್ಟಯ। ನೊಡನಾರ್ ಮಾರ್ಕೊಲನಿಲ್ಲಿ ಬಿಡಲೊಡರಿಸುವರ್
॥ 788 ॥

ಧರೆಗಾಳಂಬನಮಾಗಿ ಪೆಂಪು ಮುಗಿಲಂ ಮುಟ್ಟಿತ್ತೆನಲ್ ಕೊಟ್ಟು ಬೇ।
ಟ್ಟಿರ ಬೇಟ್ಟಿಂತುಟನೆನ್ನ ಪೊನ್ನ ತೆಱದಿಂ ಸಾಫಲ್ಯಮಂ ತಾಳ್ದದಾ॥
ದರದಿಂ ಸದ್ದ್ವಿಜರಾಜಮಿತ್ರನಿಕರಂ ತನ್ನಂ ಸಮಾಶ್ರೈಸಿಯುಂ।
ತಿರಿಯುತ್ತಿರ್ದಪುದಿನ್ನುಮೆಂದು ನಗುವಂ ಪೊಂಬೆಟ್ಟಮಂ ಚಟ್ಟಯಂ ॥ 789 ॥

ಕೂಸನೊಡನಾಡುವೆಡೆಯೊಳ್। ಭಾಸುರಸುರಮಂತ್ರಿ ಮಂತ್ರದೊಳ್ ರಿಪುತಂತ್ರೋ।
ಗ್ರಾಸುರರಣರಂಗಾಗ್ರದೊ। ಳಾಸುರಕೇಸರಿವಿಳಾಸಿ ನೆಟ್ಟನೆ ಚಟ್ಟಂ ॥ 790 ॥

ರಂಬೆಗಮೂರ್ವಶಿಗಂ ಮಿಗಿ। ಲೆಂಬವಳೇಕಾಂತದಲ್ಲಿ ಪರವಧು ಸಲೆ ತ।
ನ್ನಂ ಬಯಸಿ ಬಂದು ನಿಲಲವ। ಳಂ ಬಗೆಯಿಂ ನೋಡನಳಿಪಿ ಮುಟ್ಟಂ ಚಟ್ಟಂ ॥ 791 ॥

ಕಲಿಯುಗಬಲಿ ಕಲಿಯುಗಶಿಬಿ। ಕಲಿಯುಗವಿದ್ಯಾಧರೇಶಿ ಕಲಿಯುಗಕರ್ಣಂ।
ಕಲಿಯುಗಕಲ್ಪಕ್ಷ್ಮಾಜಂ। ಕಲಿಯುಗಸುರಧೇನುವೆನಿಸಿ ಕೊಟ್ಟಂ ಚಟ್ಟಂ ॥ 792 ॥

ಎಣಿಕೆವೆರಸೊಂದು ಪೊಟ್ಟಿನ। ಗುಣದಿಂದಂ ಕುಡುವ ಕರ್ಣನೇಂ ಗಳ ಚಟ್ಟಂ।
ಗೆಣೆಯೆ ಧನಕನಕರಾಶಿಯ। ನೆಣಿಸದೆ ಕುಡುತಿರ್ಪನೀತನೊಲ್ದಾಪೊಟ್ಟುಂ ॥ 793 ॥

ಪಿರಿದುಂ ಚಿತ್ರಾನ್ವಿತಮಂ। ಬರಸಂಗತಮುತ್ತರೋತ್ತರಂ ತಾನೆನಲು।
ರ್ವರೆ ತಣಿಯಲ್ ಮುದದಿಂ ಪೊಂ। ಗಱೆವುದು ಚಟ್ಟಯನ ಹಸ್ತಮುಪ್ರತಿಹಸ್ತಂ ॥794॥

ಪಿರಿದುಂ ಭ್ರಾಂತಿಂದೆ ನಾಲ್ಕುಂ ಕಡಲ ಕಡೆವರಂ ನೋಡಿದೆಂ ನೋಡ ಬಂದೆಂ।
ಸಿರಿಯಿಂದಂ ಶೀಲದಿಂದಂ ಸನಯುವಿನಯುದಿಂ ದಾನದಿಂ ಧರ್ಮದಿಂದಂ॥
ಗುರುದೇವಬ್ರಾಹ್ಮಣಾಳೀಪರಿಚರಣಭವದ್ಭಕ್ತಿಯಿಂ ಶಕ್ತಿಯಿಂದಂ।
ದೊರೆಯಂ ಚಟ್ಟಂಗೆ ಕಾಣೆಂ ಗಱಪಲಱಿಯೆನಾಂ ಚಾಗದಿಂ ಭೋಗದಿಂದಂ ॥795 ॥

ಹರಹಾಸಂ ದರಹಾಸಮಾಗೆ ಹಿಮವತ್ಕುಕ್ಷಿಕ್ಕೀಳಮುಂ ಶಂಭುಭೂ।
ಧರಮುಂ ತುಂಗಕುಚಂಗಳಾಗೆ ಮುಖಮಾಗಲ್ ಚಂದ್ರಮಂ ಚಿನ್ನ[ಚೀನ?]ದಾ॥
ವರಣಂ ದುಗ್ಧಸಮುದ್ರಮಾಗೆ ದಶನಂ ದಿಗ್ದಂತಿದಂತಂಗಳಾ।
ಗಿರೆ ತಾರಾನಪೆ ಕೂಸಚಟ್ಟನ ಯಶಶ್ರ್ರೀ ಲೋಕದೊಳ್ ವರ್ತಿಪಳ್ ॥ 796 ॥

ಕೆಱೆಗಂ ದೇಗುಲಕಂ ತಾ। ನಱಿಸಿದ ಧನಮನಿತುಮೆನಿಸಿ ಜಸದಿಂ ಚಟ್ಟಂ।
ನೆಱೆದಂ ಬಱಿದೊಱೆವೋದುದು। ಕೆಱೆಗಂ ದೇಗುಲಕಮಾಗದುೞಿದವರರ್ಥಂ॥797॥

ಮಣ್ಣ ಸಮನೆನಿಸಿ ಹೊನ್ನಂ। ಮಣ್ಣಂಗೆಯ್ವವಗೆ ನೆಱೆಯೆ ಕೊಟ್ಟಂ ಚಟ್ಟಂ।
ಮಣ್ಣುಂಡು ಹೋದುದೆನಿಸದೆ। ತಣ್ಣನೆ ತಣಿಪಿದನಶೇಷಮಂ ಜೀವನದಿಂ ॥ 798 ॥

ಸೀತಾಪ್ರಾಪ್ತಿಯೆ ಫಳಮಾ। ಸೇತುಗೆ ಚಟ್ಟಿಯನ ಧರ್ಮಸೇತುಗೆ ಫಳಮಾ।
ಸೇತುಹಿಮಾದ್ರಿಸಮುದ್ರ। ಖ್ಯಾತಿಸುಪುಣ್ಯಂ ವಿಶಾಲಶಾಲಿಕ್ಷೇತ್ರಂ ॥ 799 ॥

ರಸಭಾವೋಜ್ಜ್ವಳಮೂರ್ತಿ ಪದ್ಮವದನಂ ಕಲ್ಪಾಂಘ್ರಿ ಚಕ್ರಸ್ತನಂ।
ಬಿಸದೋರ್ವಲ್ಲರಿ ರಾಜಹಂಸಗಮನಂ ಮೀನಾಂಬಕಂ ನೀಳಿಕಾ॥
ವಿಸರತ್ಕುಂತಳವೊಪ್ಪೆ ಕನ್ನೆಗೆಱೆಯಂ ಚಟ್ಟಂ ಧನಂಗೊಟ್ಟು ಕ।
ಟ್ಟಿಸಿ ಚಟ್ಟೇಶ್ವರಸದ್ವರಂಗೆ ಫಳಿಸಲ್ ಹಸ್ತೋದಕಂ ಮಾಡಿದಂ ॥ 800 ॥

## ಚಟ್ಟ ಸಮುದ್ರ

ಪಿರಿದಾಯಾಸದಿನರ್ಥಮಂ ನೆರೆಪಿದಂ ಚಟ್ಟಂಬೊಲಿಂತೀಶಮಂ।
ದಿರಮಂ ಪೂರ್ಣತಟಾಕಮಂ ನಿಜಯಶೋರ್ಥಂ ಮೇರುವಾರಾಶಿಸು॥
ಸ್ಥಿರಮಪ್ಪಂತಿರೆ ಮಾಟ್ಟುದುಂತು ಚಪಳಂ ತಾನರ್ಥಮೆಂದಾಗಳುಂ।
ನಿರತಂ ಚಟ್ಟಸಮುದ್ರಮಾರ್ದಱಿಪುಗುಂ ವ್ಯಾಲೋಲಕಲ್ಲೋಲದಿಂ ॥ 801 ॥

ನಾಡೆನ್ನಂ ನಡುವಿಟ್ಟುಕೊಂಡುದದಱಿಂ ಮಜ್ಜೀವನಂ ಸಾರ್ಥಕಂ।
ನಾಡಿಂದಂ ಪೊಱಗಾಯ್ತುಸೇವ್ಯಸಲಿಲಂ ತಾನುಪ್ಪುನೀರೆಂದು ಱೋ॥
ಡಾಡುತ್ತಿರ್ಪುದು ನಿರ್ಮಳಾಂಬುಭರಿತಶ್ರೀಸಾರಸಾರೋವರಂ।
ನೋಡೀ ಚಟ್ಟಸಮುದ್ರಮಿಲ್ಲಿ ಲವಣಾಂಭೋರಾಶಿಯಂ ಪೆರ್ಮೆಯಿಂ ॥ 802 ॥

ಎಳನೀರಂ ಸವಿ ಲಾಘವಂ ಗಗನಮಂ ತಣ್ಪಾಹಿಮಾದ್ರೀಂದ್ರಮಂ।
ತಳಿರಂ ಬಣ್ಣಿಗೆ ಶುದ್ಧಿ ಬಾಂದೊಱೆಯನಾಗಾಂಭೀರ್ಯಮಂಭೋಧಿಸಂ॥
ಕುಳಮಂ ಕೀೞ್ಪಡಿಸುತ್ತಿರಲ್ಕೆ ವಿಸರತ್ಸೌರಭ್ಯಸೌಲಭ್ಯಸಂ।
ಕಳಿತಂ ಚಟ್ಟಸಮುದ್ರಮುದ್ಧೃತಜಗತ್ತಾಪಂ ಸಮಂತೊಪ್ಪುಗುಂ ॥ 803 ॥

ಫಳಮಂ ಪೊಗೞ್ವೊಡಳುಂಬಂ। ಬೆಳೆವುದು ಮುಂದತ್ತ ಭುಕ್ತಿಯಂ ಮುಕ್ತಿಯುಮಂ।
ಜಳದಿಂ ಚಟ್ಟ ಸಮುದ್ರಂ। ಬೆಳೆವುದು ಪಿಂತಿತ್ತ ಕರ್ಪುಮಂ ಕೞಿವೆಯುಮಂ॥ 804 ॥

## ಚಟ್ಟೇಶ್ವರ ದೇವಾಲಯ

ನರತುರಗಾಳಿಯಿಂ ಗಜರಥಾವಳಿಯಿಂ ಪೊಸಪೊನ್ನರಾಶಿಯಿಂ।
ಸ್ಥಿರಪರಿಪೂರ್ಣಮಾಯ್ತುದುಪೆ ರಾಜ್ಯಮದೇವುದು ಬೆಳ್ಳಿಕಟ್ಟು ಬೆ॥
ಳ್ಕರಿಪುದು ಕೆಮ್ಮನೆಂದು ರಜತಾದ್ರಿಯುನಿಲ್ಲಿಯೆ ಬಂದು ನಿಲ್ವಿನಂ।
ಗಿರಿಪತಿ ಶಂಭುಮಂದಿರಮನೆತ್ತಿಸಿದಂ ಗುಣಿ ಕೂಸಚಟ್ಟಿಯಂ ॥ 805 ॥

ಪಲರಂ ರಕ್ಷಿಸಿ ಮತ್ತಂ। ಪಲವಂ ನಡೆದೇಗುಲಂಗಳಂ ಮಾಡಿಸಿದಂ।
ನೆಲನೆಲ್ಲಮಱಿಯೆ ಚಟ್ಟಂ। ನೆಲೆದೇಗುಲಮುಮನಿದೊಂದನೊಲ್ದೆತ್ತಿಸಿದಂ ॥ 806 ॥

ಚಟ್ಟನ ಹೆಂಡತಿ ಮಹಾದೇವಿ

ಅಂತೆನಿಸಿ ನೆಗಟ್ದ ಚಟ್ಟನ। ಕಾಂತೆ ಮನಃಕಾಂತೆ ಕಂತುಕಾಂತೆಯ ರೂಪಿಂ।
ಕಾಂತತನುಕಾಂತಿಜಿತಶಶಿ। ಕಾಂತೆ ಮಹಾದೇವಿ ದೇವಿಯೆನಿಪಳ್ ಗುಣದಿಂ ॥ 807 ॥

ಚರಣಾಬ್ಜಂ ಬೆರಲುಂಗುಟಂ ನಖಕುಳಂ ಮೇಂಗಾಲ್ ಮಡಂ ಜಂಘೆಗಳ್।
ವರವೃತ್ತೋರುನಿತಂಬಬಿಂಬಂ ಮಧುರಂ ವಕ್ಷೋರುಹಂ ತೋಳ್ ತಳಂ॥
ಕೊರಲೋಷ್ಠಂ ಸುಲಿಪಲ್ ಕಪೋಲಫಲಕಂ ಕಣ್ಬುರ್ವು ಕರ್ಣಂ ನೊಸಲ್।
ವರನೀಲಾಳಕಮೊಪ್ಪೆಯೊಪ್ಪಿದಪಳೀ ಮಾದೇವಿ ಮಾದೇವಿವೋಲ್ ॥ 808 ॥

**156 ದಾವಣಗೆರೆ 84 [1160]**

ಇದರಲ್ಲಿ ಕಳಚುರ್ಯ ರಾಜನಾದ ಬಿಜ್ಜಳನ ಆಳಿಕೆಯಲ್ಲಿ ಪಾಂಡ್ಯರಾಯನ ದಂಡನಾಯಕ ಸೇನಾಪತಿಯ ಹೆಂಡತಿ ಮಹಾದೇವಿದಣ್ಣಾಯಕಿತಿ ಅರಸಿಯಕೆರೆಯ ಮಾದೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಪಾಂಡ್ಯವಂಶ

ಸುರಪತಿಯ ಮಕುಟದೊಳ್ ನಿಜ। ಕರವಳಯುಮನೊಡೆದು ಮೀನಲಾಂಛನಮನಳಂ।
ಕರಿಸಿದುದು ಮೇರುಗಿರಿಯೊಳ್। ಪರಿಭಾವಿಸೆ ಪಾಂಡ್ಯನನ್ವಯಂ ಕೇವಳಮೇ ॥809॥

ಅರಸಿಯಕೆರೆ

ಸಿರಿಯ ತವರ್ಮನೆಯೆನಿಪುದು। ಧರಣೀದೇವತೆಗೆ ತಿಳಕಮೆನಿಪುದು ಪುಣ್ಯಾ।
ಕರಮೆನಿಪ್ಪುದು ಸೇನಾಪತಿ। ಯರಸಿಯಕೆರೆಯುಬ್ಬೆಗೌಂಡನೊಳ್ಪೆಸರಿಂದಂ ॥810॥

**157 ಅರಸಿಯಕೆರೆ 117 [1161]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಕೆಲ್ಲಂಗೆರೆಯ ಮಹಾಜನಂಗಳು ಧರ್ಮೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಮಲೆರಾಜರಾಜನೆನಿಪಂ । ಕಲಿಕಾಲಯುಧಿಷ್ಠಿರಂ ಚರಿತ್ರದಿನೆನಿಪಂ ।
ಬಲಿಶಿಬಿಖಚರೇಶ್ವರರಿಂ । ಸಲೆಯಧಿಕಂ ದಾನದೆಡೆಗೆ ವಿಷ್ಣುನೃಪಾಲಂ ॥811॥

ನಾರಸಿಂಹ I

ಅರಿನರಪಾಲಕೋಗ್ರಮದಕುಂಭಿವಿಷಾಣಮನೊತ್ತಿ ಕಿಱ್ತು ಮಾ ।
ಣ್ದಿರದೆ ಕಱುತ್ತು ಪೊಯ್ಯೆ ಬಿದುವಿಂ ? ಶ್ರಿಗುವಮೌಕ್ತಿಕಮುಣ್ಮೆ ಪಾಯೆ ಭೀ ॥
ಕರತರಮಪ್ಪ ತನ್ನ ನಖಶಾಖೆಗಳಿಂದವೆ ಸೀಳ್ವನಾಗಳುಂ ।
ನರಹರಿಯಂತಿರನ್ಯನೃಪಸಿಂಧುರಮಂ ನರಸಿಂಹಭೂಭುಜಂ ॥812॥

ಕೆಲ್ಲಂಗೆರೆ

ಭೃಂಗನಿನಾದದಿಂ ಪಿಕನಿನಾದದಿನೊಳ್ಗಿಳಿವಿಂಡಿನೋಳಿಯಿಂ ।
ಮಂಗಳಲಕ್ಷ್ಮಿಯಿರ್ಪ ವನದಂತಿರೆ ಶೋಭಿಸುವಾ ಬನಂಗಳಿಂ ॥
ತುಂಗತರಂಗದಿಂದೆಸೆದು ತೋರ್ಪ ತಟಾಕದಿನೊಳ್ಪುವೆತ್ತ ಕೆ ।
ಲ್ಲಂಗೆಱೆಯಂದಮಿಂದ್ರನಮರಾವತಿಯಂತೆ ಬಸಂತಮಾಗಳುಂ ॥813॥

## 158 ನಗರ ತಾಲ್ಲೂಕು ಹಾಲುಗುಡ್ಡೆಯ ವೀರಗಲ್ಲು [ಸು. 1162]

(ಮೈಸೂರು ಶಾಸನ ಇಲಾಖೆಯ ರಿಪೋರ್ಟ್, 1923, 64 ನೆಯ ಶಾಸನ)

ಇದರಲ್ಲಿ ಸಾಂತರ ರಾಜನಾದ ತೈಲಪನು ಯುದ್ಧದಲ್ಲಿ ಸತ್ತ ಗೊಗ್ಗಿಗೋಸ್ಕರ ಹಾಲುಗುಡ್ಡೆ ಗ್ರಾಮವನ್ನು ಕೊಟ್ಟಂತೆ ಹೇಳಿದೆ.

ಗೊಗ್ಗಿ

ಕಂ॥ ರೂಪಿನೊಳೆ ಕಾಮ ಸನ್ನಿಭ । ಕೂರ್ಪಿನೊಳಾ ನರ ತನೂಜನಭಿಮನ್ಯುವೆ ತಾಂ ॥
ಬೇಟ್ಪ ಜನಕ್ಕೀವೆಡೆಯೊಳ್ । ನೋಟ್ಪೊಡೆ ಕಲಿ ಗೊಗ್ಗಿ ಕಲ್ಪವೃಕ್ಷಂ ಜಗದೊಳ್ ॥814॥

ಚಂ॥ ಅಣಿಯುರಮೊಡ್ಡಿದಡ್ಡಣದ ವೀರರನಾಂತಿಸುತಿರ್ಪ ಬಿಲ್ಲ ಬ ।
ಲ್ಲಣಿಯ ತುರಂಗ ಸಾಧನಮನಾಂತಿಱಿವಲ್ಲಿ ಮಹಾ ಭಯಂಕರಂ ॥
ನೆಣಮಯ ಖಂಡದಿಂದೆ ನೊರೆ ನೆತ್ತರ ಕಾಟ್ಪುರಮಂದು ನೋಟ್ಪೊಡೇ ।
ನಣಕಮೊ ಗೊಗ್ಗಿಯಾಂತಿಱಿದ ವಿಕ್ರಮಮಾಹವ ರಂಗಭೂಮಿಯೊಳ್ ॥815॥

ಕಂ॥ ಸಂಗರದೊಳಿಱಿದ ವೀರಮೆ । ಶೃಂಗಾರಮನೆಕ್ಕವೆತ್ತ ಗೊಗ್ಗಿಯ ತಮ್ಮು ॥
ತ್ಸಂಗದೊಳಿಟ್ಟುಯ್ದು ನಿಳಿಂ । ಪಾಂಗನೆಯರ್ ... ಸಾರ್ದರಮರಾವತಿಯಂ ॥816॥

**159 ದಾವಣಗೆರೆ 42 [ಸು. 1162]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಬಮ್ಮರಸದಂಡನಾಯಕನು ಹರಿಹರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಕನ್ನಮದೇವ

ಪೆಸರ್ವಡೆದಂ ನಿಜಾಕೃತಿ ವಿದಗ್ಧವಧೂಜನವಶ್ಯವಿದ್ಯೆಯಿಂ ।
ಬೆಸಕಮನಪ್ಪುಕೆಯ್ಯೆ ನಿಜವಿಕ್ರಮಮುದ್ಧತನಾಶಹೇತುವೆಂ ॥
ಬೆಸಕಮನಪ್ಪುಕೆಯ್ಯೆ ನಿಜಕೀರ್ತಿಯಪೂರ್ವಸುಧಾಂಶುರೋಚಿಯಿಂ ।
ಬೆಸಕಮನಪ್ಪುಕೆಯ್ಯೆ ಧರಣೀಪತಿಕನ್ನಮದೇವನುರ್ವಿಯೊಳ್ ॥817॥

ಬಿಜ್ಜಳ I

ಅವರೊಳಗಗ್ರಜಂ ನೆಗೞ್ದ ಬಿಜ್ಜಳದೇವನನೂನಸಾಹಸೋ ।
ದ್ಭವನಿಧಿ ಶತ್ರುಮಂಡಳಿಕಮಂಡಳಿಯಂ ನಿಜಮಂಡಳಾಗ್ರದಿಂ ॥
ದವನತವೃತ್ತಿಗಾಳ್ವೆಸಕೆದಂದು ಜಗದ್ವಿಜಿಗೀಷುವೃತ್ತಿ ಭೂ ।
ಭುವನದೊಳಿಕ್ಕಲಾವಣಮಿವಂಗೆನೆ ನಿಂದನಿಳೇಜ್ಯರಾಜ್ಯದೊಳ್ ॥818॥

ಜೋಗಮ

ಅಂತರನಂತಕಾನನದೊಳಟ್ಟಿಗಿಸಿ ಮತ್ತುಱಿದೋಡಿದನ್ಯಭೂ ।
ಕಾಂತರನಂತಕಾನನದೊಳಟ್ಟಿಗಿರೆ ಶಾಸಿಸಿ ಲೀಲೆಯಿಂ ಪದಾ ।
ಕ್ರಾಂತರನಾದ್ಯವೃತ್ತಿಗೆ ಸಮಂತು ನಿಯೋಜಿಸಿ ಧಾತ್ರಿ ಬಣ್ಣಿಪ ।
ನ್ನಂ ತಱಿಕಾಡ ಜೋಗಮನೃಪಂ ಮೆಱೆದಂ ನಿಜರಾಜನೀತಿಯಂ ॥819॥

ಪೆರ್ಮಾಡಿ

ಅರಿಭೂಪಾಳರ ಮೀಸೆ ಭೋಂಕೆನೆ ಕರಿಂಕೇಱ್ವಿನ್ನೆಗಂ ತೇಜಮಾ ।
ವರಿಸಿತ್ತುರ್ವಿಯನಾಪದಬ್ಧಿವಿನಿಮಗ್ನೋನ್ಮಗ್ನರಂ ದಾನಮು ॥
ದ್ಧರಿಸಿತ್ತರ್ಥಿಜನಂಗಳಂ ಮನುಪವಿತ್ರಾಚಾರಮಂ ತಾಂ ತಿರ ।
ಸ್ಕರಿಸಿತ್ತಾತ್ಮಚರಿತ್ರಮೇನಧಿಕನೋ ಪೆರ್ಮಾಡಿಭೂಪಾಳಕಂ ॥820॥

## ಬಿಜ್ಜಳ II

ಉದಯಿಸಿದಂ ಪ್ರತಾಪನಿಧಿ ಬಿಜ್ಜಳದೇವಧರಾಧಿನಾಥನಿ ।
ತ್ತುದಯಿಸೆ ಯಾವನೋದ್ಧತವಧೂತತಿಗುತ್ಕಳಿಕಾಪ್ರಪಂಚಮು ॥
ತ್ತುದಯಿಸೆ ದುರ್ಮದಾರಿಧರಣೀಶ್ವರಮಾಲೆಗನೂನಭೀತಿ ಮು ।
ತ್ತುದಯಿಸೆ ಬಾಂಧವಕ್ಷಿತಿತಳೇಶ್ವರಸಂತತಿಗುತ್ಸವೋತ್ಸವಂ ॥821॥

ಸಲೆ ನಿಲೆ ವೇಳೆಯೆಂದು ಭಯದಿಂ ಕಡಿದಂಗುಳಿ ಮೆಲ್ದ ಬಾಯ ತಂ ।
ಬುಲಮೆಱಿಕೊಂಡು ಮುಂಡ ಮಡಗೂಱಿರದಂಕುಸಮಾಗಿ ಕೊಯ್ದ ನು ॥
ಣ್ಗಲೆಯಿವು ಕಾಗುಮಲ್ಲದೆ ವಿರೋಧಿನೃಪರ್ ಚಲದಂಕರಾಮನೊಳ್ ।
ಮಲೆದಿದಿರಾದೊಡಾಳ್ ಕುದುರೆಯಾನೆ ರಥಂ ನೆಱೆ ಕಾಯಲಾರ್ಪುವೇ ॥822॥

ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸಲೊಡನೆ ದೋರ್ಗರ್ವದಿಂ ಮನ್ನೆಯರ್ಗು ।
ಬ್ಬಸಮಂ ಮುಂ ಮಾಡಿದಂ ಮತ್ತಿರೆಯಿರೆ ಚಲದಿಂ ಮಂಡಲೇಶರ್ಗೆ ಬೇರೊಳ್ ॥
ಬಿಸಿನೀರಂ ಪೊಯ್ದನಂತಂತಿರೆಯಿರೆ ಬಱಿಯಂ ರಾಯರಂ ಕೂಡೆ ನಿರ್ಮೂ ।
ಳಿಸಿದಂ ಚಕ್ರಾಧಿನಾಥೋಜ್ಜ್ವಳಮುಕುತಿಳಕಂ ಬಿಜ್ಜಳಕ್ಷೋಣಿಪಾಳಂ ॥823॥

ಒದವಿದ ಗರ್ವದಿಂ ಬೆಸೆವ ರಾಯರ ಬೆನ್ನೊವಲಂ ಬಿದಿರ್ಚಿ ರಾ ।
ಗದಿನೆಱಿತಂದ ದಂತಿಹಯಸಂತತಿಯಲ್ಲದೆ ಹೊನ್ನನಿತ್ತು ಕ ॥
ಟ್ಟಿದ ಕರಿ ವಾಜಿ ಸಾಹಣದೊಳೆಲ್ಲಿಯುಮಿಲ್ಲೆನಿಪೊಂದು ಸಾಹಸಾ ।
ಭ್ಯುದಯಮನೊಂದೆ ನಾಲಗೆಯೊಳೇವೊಗಟ್ವಿಂ ಗಿರಿದುರ್ಗಮಲ್ಲನಾ ॥824॥

ಮುನಿದಿದಿರಾಂತ ಭೂಭುಜರ ನೆತ್ತಿಯನಟ್ಟೆಯೊಳಾಱಿ ಪೊಯ್ಯದಿ ।
ರ್ಪನೆ ಸುಲಿಪಲ್ ಘಳಿಲ್ಲೆನುಗೆ ಬಾಳಿನ ಕೀಱ್ವಿರಜಿಂದೆ ಮೋದದಿ ॥
ರ್ಪನೆ ನಡುಬೆನ್ನೊಳಗ್ಗರುಳನೊರ್ಮ್ಮೆಯೆ ನೆಯ್ದು ಲ ಕಾವನುರ್ಚುವಂ ।
ತನಿತುಮನುರ್ಚದಿರ್ಪನೆ ರಣಾಗ್ರಣಿ ಬಿಜ್ಜಳದೇವಭೂಭುಜಂ ॥825॥

ಕೊಡದಿನುದಯಿಸಿದಗಸ್ತ್ಯಂ । ಕಡಲಂ ಪೀರ್ದಂತೆ ಮಂಡಳೇಶ್ವರರಾಜ್ಯ ।
ಕ್ಕೊಡೆಯನೆನೆ ಪುಟ್ಟಿ ಬೀರದಿ । ನೆಡೆಗೊಂಡಂ ಸಕಲಧಾತ್ರಿಯಂ ಬಿಜ್ಜನೃಪಂ ॥826॥

## ಕಸಪಯ್ಯನಾಯಕ

ಚತುರುಪಧಾವಿಶುದ್ಧಮತಿ ಚಿತ್ತಭವಪ್ರತಿರೂಪಸುಂದರಾ ।
ಕೃತಿ ಸುರಶೈಲಸನ್ನಿಭಮಹೋನ್ನತಿ ವಿಪ್ರಜನೇಷ್ಟದಾನಸಂ ॥
ಗತಿ ರಿಪುವೃಂದದುರ್ಮದನಿವಾರಣಕಾರಣಚಾರುಸಾಹಸ ।
ಸ್ಥಿತಿ ಕಸಪಯ್ಯನಾಯಕನೊಳೆಯ್ದೆ ಜಗನ್ನುತಿವೆತ್ತು ತೋಱುಗುಂ ॥827॥

**160 ಶಿಕಾರಿಪುರ 102 [1162]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಕಿರುಗೇರಿಯನ್ನು ಬಿಟ್ಟಂತೆ ಹೇಳಿದೆ.

ಬಿಜ್ಜಳ

ಅಸುಹೃದುದಗ್ರಭೂಭುಜರ ತೇಜದ ದಳ್ಳುರಿಯಂ ಸಮಂತು ಮು ।
ಟ್ಟಿಸೆ ನಿಜದೋರ್ಬಲಪ್ರಥಿತಖಡ್ಗಸಮುಚ್ಚಲದುಚ್ಚವಾರಿಸಂ ॥
ಪ್ರಸರಮಶೇಷಭೂತಲಮನಿಲ್ಲ ಮಹೀಭುಜರನ್ಯರೆಂಬಿನಂ ।
ಪೆಸರ್ವಡೆದೀಗ ಬಿಜ್ಜಳಮಹೀಭುಜನೊರ್ವನೆ ತಾನೆ ತಾಳ್ದಿದಂ ॥828॥

ವೀರಾರಾತಿನೃಪೋತ್ತಮಾನನಲಸದ್ವಲ್ಮೀಕಸಂಚಾರಿ ದು ॥
ರ್ವಾರೋದಗ್ರತದೀಯರಕ್ತಜಳಧಾರಾಕ್ಷೀರಸಂಸೇವಿ ತ ॥
ಚ್ಚಾರಿಪ್ರಾಣಸಮೀರಪಾಯಿ ಪಿರಿದುಂ ಮತ್ತಂ ಕ್ಷುಧೋಗ್ರಾನಳಾ ।
ಧಾರಂ ಭೀಕರಖಡ್ಗಕಾಳಭುಜಗಂ ಶ್ರೀ ಬಿಜ್ಜಳಕ್ಷ್ಮಾಪನಾ ॥829॥

ಕೆದಱಿದರಾತಿಭೂಪರ ಶಿರೋಮಣಿಗಳ್ ನೆಗಟ್ದಾಲಿಕಲ್ಗಳು ।
ರ್ಚಿದ ಭಟಶಸ್ತ್ರಸಂಚಯದ ಮಿಂಚುಗಳೊಪ್ಪುವ ಮಿಂಚುಗಳ್ ಸಮಂ ॥
ತೊದವಿದ ರಕ್ತಜಾಳಜಳಧಾರೆಗಳಾಗಿರೆ ವರ್ಷಮಿಂತು ಪೋ ।
ಲ್ತುದು ಮೞೆಗಾಲಮಂ ನೆಗೞ್ದ ಬಿಜ್ಜಳದೇವನ ಸಂಗರಾಂಗಣಂ ॥830॥

ಸುರಿದ ಕರುಳ್ ಕರುಳ್ ತೊಡರೆ ಬಿದ್ದ ಭಟರ್ ಭಟರಸ್ತ್ರಘಾತದಿಂ ।
ದುರುಳ್ದ ಹಯಂ ಹಯಂಗಳೆಡೆಯೊಳ್ ಕುಣಿವಟ್ಟೆಗಳಟ್ಟೆಯಂ ಭಯಂ ॥
ಕರತರಮಾಗೆ ನೋಟ್ಪ ಮರುಳಾ ಮರುಳಂ ಗೆಲೆ ಸೋವ ತನ್ನಿಶಾ ।
ಚರಿಯರೆನಲ್ಕೆ ನೋಡಲರಿದಾಯ್ತು ರಣಂ ಗಿರಿದುರ್ಗಮಲ್ಲನಾ ॥831॥

ನುಡಿದನೆ ಮೇರುಮಂದರಶಿಲಾಕ್ಷರಮಿತ್ತನೆ ಬೇಡಿ ಬಂದವಂ ।
ಗೆಡಱಿನ ಕೇಡು ಕಾದನೆ ಸರಣ್ಬುಗುತಂದ ನೃಪಾನ್ವಯಕ್ಕೆ ಬೆಂ ॥
ಬಿಡದಜರಾಮರತ್ವಮೆನಲಿನ್ನನನನ್ಯನರೇಂದ್ರರೊಳ್ ಸಮಂ ।
ನುಡಿಯುದಿರಣ್ಣ ಬಿಜ್ಜಳಮಹೀಪನನಾಹವರೌದ್ರರೂಪನಂ ॥832॥

ಬಿಜ್ಜಳನ ಮಂತ್ರಿ ಕಸಪಯ್ಯನಾಯಕ

ಕಸಮೆನಿತಿರ್ದೊಡಂ ನಿಜನಿರೀಕ್ಷಣಮಾತ್ರದೆ ತತ್ಕ್ಷಣಂ ಕರಂ ।
ಕಸವರಮಾಗಿ ತೋರ್ಪುದು ನಿಜೇಷ್ಟವಿಶಿಷ್ಟಜನಕ್ಕೆ ಸತ್ಕುಲ ॥
ಪ್ರಸವಜನಕ್ಕೆ ತದ್ಗೃಹಗೃಹಂಗಳೊಳಂತದಱಿಂದಮೆಲ್ಲಿಯುಂ ।
ಕಸಪಯನಾಯಕಾಖ್ಯೆ ಪೆಸರ್ವೆತ್ತುದು ವಾರ್ಧಿಪರೀತಧಾತ್ರಿಯೊಳ್ ॥833॥

ಬಮ್ಮರಸ

ತನ್ನಧಿಕಾರಮೆಂಬಮೃತವೃಷ್ಟಿಗಳಿಂ ಬಳೆಯಿಪ್ಪನೆಯ್ದೆ ವಿ ।
ದ್ವೋನ್ನತವಿಪ್ರಶಿಷ್ಟಜನಸಸ್ಯಚಯಂಗಳನೆಂದು ಸಂತತಂ ॥
ಸನ್ನುತಿಗೆಯ್ಯುತಿರ್ಪುದವನೀತಳಮುದ್ಧಕಳಾವಿಶೇಷಸಂ ।
ಪನ್ನನನೊಲ್ದು ಕೆಯ್ಮುಗಿದು ಬರ್ಮನನಾಶ್ರಿತಶರ್ಮಕರ್ಮಸಂ ॥834॥

ಅಧಿಕಾರಿಗಳರೆಬರ್ ಬುಧ । ರ್ಗಧಿಕಾರಿಗಳೆನಿಪರಲ್ಲದಿಂತೀತನವೋ ।
ಲಧಿಕಾರಿಗಳೆನಿಪವರಾರ್ । ಬುಧರ್ಗೆನಿಪಂ ಬರ್ಮನಖಿಳಬುಧಜನಶರ್ಮಂ ॥835॥

ಬಮ್ಮರಸನ ಕರಣಂಗಳ್

ಪರಹಿತಕಾರ್ಯರಬ್ಧಿಸಮಧೈರ್ಯರಬಾಧಿತಮಂತ್ರವೀರ್ಯರು ।
ದ್ಧುರತರಸಿಂಹಶೌರ್ಯರುಪಧಾಚತುರಾರ್ಯರವಾರ್ಯಕಾರ್ಯರು ॥
ತ್ಸ್ಫುರಿತಯಶೋನದತ್ರ್ಯಬಳತೂರ್ಯರುಪಾರ್ಜಿತಪುಣ್ಯವರ್ಯರೀ ।
ಶ್ವರಪದಭಕ್ತಿಧುರ್ಯರೆನಿಪರ್ ಕರಣಂಗಳಿದೇಂ ಮಹಾತ್ಮರೋ ॥836॥

ರವಿದೇವ

ಅಲರ್ಗೆಮ ಮಂತ್ರಿಮುಖ್ಯರ ಮುಖಾಂಬುರುಹಂ ರವಿದೇವಮಂತ್ರನಿ ।
ರ್ಮಲಕಿರಣಂಗಳಿಂ ಮುಗಿವುವೇಕೆಯೊ ಹಸ್ತಸರೋರುಹಂಗಳು ॥
ಳ್ಫಲರ್ದಪುದೇಕೆ ಬಮ್ಮರಸನುದ್ಧತರಾಜ್ಯಸಮಗ್ರದೇವತಾ ।
ಲಲಿತವಿಲೋಚನೋತ್ಪಲಮಿದಚ್ಚರಿ ನೋಟಿಕ್ಕೊಡಶೇಷಧಾತ್ರಿಯೊಳ್ ॥837॥

ವಾಮಶಕ್ತಿಪಂಡಿತ

ವದನಂ ವಾಣೀನರ್ತನ । ಸದನಂ ನಿಜಹೃದಯಮುಮಳಮಣಿಮಯಸದನಂ ।
ಮದನಹರಂಗೆನೆ ಭೂತಳ । ವಿದಿತಯಶಂ ವಾಮಶಕ್ತಿಪಂಡಿತದೇವಂ ॥838॥

## 161 ಹುಣಸೂರು 137 [1162]

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನು ಧರ್ಮಾಪುರದ ಕೇಶವದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ವಿಷ್ಣುಸ್ತುತಿ

ಶ್ರೀಯುವತಿಯುಮಖಿಳಧರಿ । ತ್ರೀಯುವತಿಯುಮೆರಡುಕೆಲದೊಳಂ ಸೋಂಕಿರೆ ನಾ ।
ರಾಯಣನಾಗಳ್ ಕಲ್ಪಲ । ತಾಯುಗ್ಮದ ನಡುವೆ ಕಲ್ಪಕುಜದಂತಿರ್ದಂ ॥839॥

ವಿಷ್ಣುವರ್ಧನ

ಜವನುಂ ತನ್ನಯ ಗಂಡಲಚ್ಚಣಮೆನಿಪ್ಪಾ ಮೀಸೆಯುಂ ತಿರ್ದಲಂ।
ಜುವಿನಂ ಕಂದುಗುಂಮೆಂದು ಕಾಲುಗುರ್ಗಳಾ ನಮ್ರಾರಿಗಳ್ ಸುಯ್ಯಲಂ॥
ಜುವಿನಂ ತೇಜದ ಬೆಂಕೆಯಿಂದಮೆಮೆ ಸೀಗೆಂದುದ್ಧತರ್ ನೋಡಲಂ।
ಜುವಿನಂ ವಿಕ್ರಮವಿಭ್ರಮಂ ಸೊಗಯಿಸಿತ್ತೀ ವಿಷ್ಣುಭೂಪಾಲನೊಳ್ ॥840॥

ನಾರಸಿಂಹ I

ಮಾಳವನಳ್ಕಿದುಳ್ಗೆ ಖಚನೀರಿಗೆ ಪಾಂಡ್ಯನ ಕಾಳಿಜಕ್ಕೆ ನೇ।
ಪಾಳನ ಬೆನ್ನ ಸುಂಟಗೆಗೆ ಚೋಟನ ಕಾರಡಗಿಂಗೆ ವಂಗಭೂ॥
ಪಾಳನ ಬಿಕ್ಕುಗಂಧ್ರನರಪಾಳನ ಮೂಳೆಗೆ ಕಾಯ್ದು ಖಳ್ಗಮಾ।
ಕಾಳಿಯಡುರ್ತು ನಿಳ್ಕುವಳು ನಾಲಗೆಯುಂ ನರಸಿಂಗಭೂಪನಾ ॥841॥

ಹಡಿದೆಱೆದಂದವಾದುದೆರ್ದೆ ಪಾಂಡ್ಯನ ಚೋಟನ ಗಂಡವಾತು ನೂ।
ರ್ಮಡಿ ಕುಸಿದತ್ತು ಚೇರನೆರ್ದೆ ಹವ್ವನೆ ಪಾಱಿದುದಂಧ್ರನುಬ್ಬೆಗಂ॥
ಬಡುತವೆ ಕಂದಿದಂ ಕುಸಿದನಾಳ್ವರನಾಲಿಸಿ ಪೊಯ್ವ ಭೇರಿಯಂ।
ನಡೆದೆಡೆಯೊಳ್ ಪ್ರತಾಪನರಸಿಂಗನೃಪಂ ರಣರಂಗರಾಕ್ಷಸಂ ॥842॥

ವಿಷ್ಣುದಂಡಾಧಿಪ

ಮೇರುವಿನ ತೂಕಮಱಿವೊಡೆ। ವಾರಾಸಿಯ ಗುಣ್ಪನಱಿವೊಡಂ ನಿಟ್ಟಿಸಿಯುಂ।
ತಾರಗಣಮೆಣಿಸಲಱಿವೊಡೆ। ಬಾರದು ಬಿಟ್ಟಿಗನ ಸಹಜಗುಣಮಂ ಪೊಗೞಲ್ ॥843॥

ಅರಿದವಾಳ್ಕೆ

ಅಱಿದೆಱೆವಟ್ಟು ರಾಗದ ತವರ್ಮನೆ ಕುಂದದೆ ಲಕ್ಷ್ಮಿಯಿರ್ಪ ಹೇ।
ರಱಿಕೆಯಶೇಷಸೌಖ್ಯನಿಳಯಂ ಬೆಳೆಗೆಯ್ಗಳ ಗೊತ್ತು ಸಂದ ಪೆ।
ರ್ಗಱಿಗಳ ಜನ್ಮಭೂಮಿಯೆಳಗೌಂಗಿನ ಬಾಚ್ಚಿಲನೆಂದೊಡಿನ್ನದಂ।
ನೆಱೆಯನದಾವನುಂ ಪೊಗೞಲಾರಿದವಾಳ್ಕೆಯ ಪೆಂಪನಾವಗಂ ॥844॥

**162 ಅರಸಿಯಕೆರೆ 172 [1162]**

ಇದರಲ್ಲಿ ಹೊಯ್ಸಳ ರಾಜನಾದ 1ನೆಯ ನಾರಸಿಂಹನ ಮಹಾಪ್ರಧಾನ ಶ್ರೀಕರಣದ ಬೂಚಿ ರಾಜನು ಹುಲ್ಲೆಯಕೆರೆಯನ್ನು ಸೋಮನಾಥಪುರವೆಂದು ಹೆಸರಿಟ್ಟು ಅಗ್ರಹಾರವನ್ನು ಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.

ಬೂಚಿರಾಜ

ಶ್ರೀಯ ಮನಃಪ್ರಿಯಂ ಜನಿತಕಾಮನಿಳಾಪ್ರಿಯನಬ್ಜಶಂಖಲ ।
ಕ್ಷ್ಮಾಯುತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲ ॥
ಜ್ಯಾಯನಭೇದ್ಯಮಂತ್ರಕುಶಲಂ ಬಲಿಬಂಧನನಂತೆ ರಾಯನಾ ।
ರಾಯಣನೆಂಬುದುರ್ವಿ ನರಸಿಂಹನರೇಂದ್ರನ ಮಂತ್ರಿ ಬೂಚನಂ ॥845॥

ಪರಭೂಪಾಳಕಜಿಷ್ಣು ಶತ್ರುದಹನಂ ದುಷ್ಟಾರಿಕಾಲಂ ಮನೋ ।
ಹರಮಂತ್ರೋನ್ನತಿರಾಕ್ಷಸಂ ಭುವನಪಂ ಸಮ್ಯಗ್ಗುಣಸ್ಪರ್ಶನಂ ॥
ವರವಿತ್ತೇಶನುಮೇಶನಂತಖಿಳದಿಕ್ಪಾಳಪ್ರಭಾವಾನ್ವಿತಂ ।
ನರಸಿಂಹಪ್ರಿಯಮಂತ್ರಿ ಮಂತ್ರವಿಳಸದ್ವಿದ್ಯಾಚಣಂ ಬೂಚಣಂ ॥846॥

ವಿನಯದ ಬೆಟ್ಟು ವೀರರಸದಾಗರವೊಳ್ಪಿನ ಕೂರ್ಪು ವಿಕ್ಕಮಾಂ ।
ತನದ ತವರ್ ವಿಧಾನನಿಳಯಂ ಜಯಲಕ್ಷ್ಮಿಯ ರಮ್ಯಹರ್ಮ್ಯಮಾ ॥
ಳ್ದನ ಮನಮಾಶ್ರಿತಾಳಿಕವಚಂ ಬುಧಬಾಂಧವಕಾಮಧೇನು ಸ ।
ಜ್ಜನನಿಧಿಯೆಂಬುದುರ್ವಿ ವಿಭುಬೂಚಿಯನಾಹವಸವ್ಯಸಾಚಿಯಂ ॥847॥

## 163 ಹೂಲಿಯ ಶಾಸನ ಎಲ್. [1162]

(ಎಪಿಗ್ರಾಫಿಯಾ ಇಂಡಿಕ, XVIII, 208)

ಇದರಲ್ಲಿ ಕಳಚುರ್ಯ ರಾಜನಾದ ತ್ರಿಭುವನಮಲ್ಲದೇವನ (ಬಿಜ್ಜಳನ) ಆಳಿಕೆಯಲ್ಲಿ ದಾಸಿರಾಜನು ನಾಗರ ಖಂಡಿಯ ಕೇಶವ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಪೂಲಿ

ರಾಮಾರಾಮ ವಿಕೀರ್ಣದಿಂ ನಿಖಿಲ ದೇವಾನೀಕದಿಂ ಋಗ್ಯಜು ।
ಸ್ಸಾಮಾಥರ್ವಣ ವೇದ ಶಾಸ್ತ್ರವಿದಿತ ವ್ಯಾಪಾರ ಚಾತುರ್ಯದಿಂ ॥
ಶ್ರೀಮತ್ಕೋಟ್ಟಜವಾವಿಯಿಂ ಕೆಱೆಗಳಿಂ ಕಾಂತಾ ಜನಾನೀಕದಿಂ ।
ದೇಮಾತೋ ಸಲೆ ಪೂಲಿ ಲೀಲೆವಡೆಗುಂ ಪೂದೋಂಟದೊಂದೋಳಿಯಿಂ ॥848॥

ಪೂಲಿಯ ಸಾಸಿರ್ವರ್

ಇನನಂ ತೇಜದೊಳಿಂದ್ರನಂ ವಿಭವದೊಳ್ ಚಾಣಕ್ಯನಂ ನೀತಿಯೊಳ್ ।
ಮನುವಂ ಚಾರು ಚರಿತ್ರದೊಳ್ ಜಳಧಿಯಂ ಗಾಂಭೀರ್ಯದೊಳ್ ಧೈರ್ಯದೊಳ್ ॥
ಕನಕಾದ್ರೀಂದ್ರಮನೆಯ್ದೆ ಪೋಲ್ವರೆನಿಪೀ ಸಾಸಿರ್ವರಂ ಖ್ಯಾತಿಯೊಳ್ ।
ಮನುಜರ್ಕಳ್ ಪಡಿ ಪಾಟಿ ಪಾಸಟಿ ಸಮಂ ಬರ್ಪನ್ನರಾರ್ ಧಾತ್ರಿಯೊಳ್ ॥849॥

## ಶಿವೆಯಗೇರಿಯ ನೂರ್ವರ್

ಒರ್ವೊರ್ವರ್ ಪರಿಭಾವಿಸೆ। ಸರ್ವಜ್ಞರ್ ನೆಗಟ್ದಿ ವೇದಶಾಸ್ತ್ರಂಗಳೊಳೆಂ॥
ದುರ್ವೀ ತಳಮಭಿವರ್ಣಿಸೆ। ನೂರ್ವರ್ ಶ್ರೀ ಶಿವೆಯಗೇರಿಯೊಳ್ ಕರಮೆಸೆದರ್ ॥850॥

## ಮಾಳಪಯ್ಯ

ಭಾರದ್ವಾಜ ಕುಲಾಗ್ರಣಿ। ಚಾರು ಚರಿತ್ರಂ ವಿವೇಕಿ ವಾಚಸ್ಪತಿ ಕಂ॥
ಸಾರಿಪದಕಮಲಭೃಂಗನು। ದಾರಂ ಪ್ರಭು ಮಾಳಪಯ್ಯ ಪೆರ್ಗಡೆಯೆಸೆದಂ ॥851॥

## ರೇವಿಯಕ್ಕ

ಆತನ ಕುಲವನಿತೋತ್ತಮೆ। ಸೀತೆಗರುಂಧತಿಗೆ ರತಿಗೆ ಪೆಂಪಿಂ ಗುಣದಿಂ॥
ಖ್ಯಾತಿಯಿನತಿಶಯಮೆನಿಪಳ್। ನೀತಿಯ ಕಣಿ ರೇವಿಯಕ್ಕನೆನೆ ಮೆಚ್ಚದರಾರ್ ॥852॥

## ದಾಸಿರಾಜ

ಚರಿತಂ ಸನ್ಮುನಿಮೂಲಸೂತ್ರಮಜಿತಂ ವಾಗ್ದೇವತಾ ಮಂಗಳಾ।
ಭರಣಂ ಕೀರ್ತಿ ದಿಗಂಗನಾಕುಸುಮವಲ್ಲೀದಾಮಮಾರ್ಪಿಪ್ಪಶಿ॥
ಷ್ಟರ ಬಯ್ಸಿಟ್ಟ ಸುವರ್ಣಮೆಂದೊಡಿತರರ್ ಪೋಲ್ವನ್ನರಾರ್ ಸದ್ಗುಣೋ।
ತ್ಕರನಂ ಪೆರ್ಗಡೆ ದಾಸಿರಾಜನನುದಾರಶ್ರೀಸುರೋರ್ವೀಜನಂ ॥853॥

ಸಹಜಂ ಸತ್ಯಮುದಾರಮನ್ವಯಗುಣಂಸ್ವಾಭಾವಿಕಂ ಸದ್ಗುಣ।
ಗ್ರಹಣಂ ನೀತಿ ನಿಸರ್ಗಮಾತ್ಮ ಕುಲಧರ್ಮಂ ಚಾರು ಚರಿತ್ರಮಿ॥
ಷ್ಟಹಿತಾರ್ಥಂ ನಿಜ ಜೀವಿತವ್ಯಮಳವಟ್ಟಾ ಮಂತ್ರಶಕ್ತಿತ್ರಯಂ।
ಸಹಜಾತಂ ತನಗೆಂದೊಡಿಂ ಪಿರಿಯರಾರ್ ಶ್ರೀದಾಸಿರಾಜಂಬರಂ ॥854॥

## ಅವನ ಹೆಂಡತಿ ಒಳಜಲೆ

ರತಿಯನ್ನಳ್ ರೂಪಿಂ ಭಾ। ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ॥
ಕ್ಷಿತಿಯನ್ನಳ್ ದಾಸಿಯ ಕುಲ। ಸತಿಯೊಳಜಲೆ ನಾರಿಯುಂತು ನೋಂತರುಮೊಳರೇ॥855॥

## ಭಾಗಲೆ

ಕ್ಷೀರ ಸಮುದ್ರ ಮಂಥನದೆ ಪುಟ್ಟಿದ ಲಕ್ಷ್ಮಿಯ ರೂಪಿನೇಟಿಗ್ಗಿಯೊಳ್।
ಗೌರಿಯೊಳೊಂದಿ ನಿಂದ ಪತಿಭಕ್ತಿಯ ಪೆರ್ಮೆಯೊಳಿಂಪುವೆತ್ತವಾ॥
ಜ್ನಾರಿಯ ವಾಗ್ವಿಲಾಸ ತತಿಯೊಳ್ ನೆಜಿ ಪೋಲ್ವೆಗೆ ವಂದಳೆಂದೊಡಿ।
ನ್ನಾರೆಣೆ ದಾಸಿರಾಜನ ಮನೋರಮೆ ಭಾಗಲೆಗೀ ಧರಿತ್ರಿಯೊಳ್ ॥856॥

ಮಹದೇವ

ಗೃಹದೊಳ್ ಲಕ್ಷ್ಮಿ ಮಹೋತ್ಸವಂಬೆರಸು ನಿಂದಳ್ ತನ್ನ ತದ್ವಕ್ತ್ರದೊಳ್ ।
ಮಹಿವಾಲಂಕೃತೆಯಪ್ಪ ವಾಗ್ವನಿತೆಯಿರ್ದಳ್ ತನ್ನ ಸತ್ಕೀರ್ತಿ ಸೇ ॥
ತು ಹಿಮಾದ್ರೀಂದ್ರದೊಳೆಯ್ದೆ ತೀವಿದಳೆನಲ್ ಸಾಮಾನ್ಯನಾಗಿರ್ದನೇ ।
ಮಹದೇವಪ್ರಭು ದಾಸಿರಾಜತನಯಂ ಸೌಜನ್ಯರತ್ನಾಕರಂ ॥857॥

ಮಾಳಯ್ಯ

ಧ್ರುವನನ್ನಂ ಧೃತಿಯೊಳ್ ಸರೋಜಭವನನ್ನಂ ವಿದ್ಯೆಯೊಳ್ ಚೆನ್ನಮಾ ।
ಧವನನ್ನಂ ನಿಜಮೂರ್ತಿಯೊಳ್ ಖಚರನನ್ನಂ ದಾನದೊಳ್ ಕುಂಭ ಸಂ ॥
ಭವನನ್ನಂ ಸುಚರಿತ್ರದೊಳ್ ಜಳಧಿಯನ್ನಂ ಗುಣ್ಪಿನೊಳ್ ಭಾವಿಸಲ್ ।
ಸವನಾರ್ ಪೆರ್ಗಡೆ ದಾಸಿರಾಜ ತನಯಂ ಮಾಳಯ್ಯನೊಳ್ ಮಾನವರ್ ॥858॥

ಫಲಸ್ತುತಿ

ಇನಿತಂ ನಿಶ್ಚಯಮಾಗೆ ಭಾವಿಸುವುದೀ ಧರ್ಮಕ್ಕಪಾಯಕ್ಕೆ ವ ।
ರ್ಪನಮೋಘಂ ಸಕುಲಂ ನಿಗೋದ ತಳದೊಳ್ ಬೀೞ್ಗುಂ ಮಹಾಪಾತಕಂ ॥
ಮನವೊಲ್ದಿಂತಿದನೆಯ್ದೆ ರಕ್ಷಿಸುವ ದೇವಂಗಕ್ಕುಮಾಯುಷ್ಯವ ।
ರ್ಧನಮತ್ಯೂರ್ಜಿತ ಲಕ್ಷ್ಮಿ ನಿರ್ಮಲ ಯಶಂ ಭದ್ರಂ ಶುಭಂ ಮಂಗಳಂ ॥859॥

**164 ಹೂಲಿಯ ಶಾಸನ ಎಂ. [1162]**

(ಎಪಿಗ್ರಾಫಿಯಾ ಇಂಡಿಕ, XVIII, 212)

ಇದರಲ್ಲಿ ಕಳಚುರ್ಯ ರಾಜನಾದ ತ್ರಿಭುವನಮಲ್ಲದೇವನ (ಬಿಜ್ಜಳನ) ಆಳಿಕೆಯಲ್ಲಿ ಅಗಸ್ತ್ಯೇಶ್ವರ ದೇವರಿಗೆ ಭೂಮಿಯನ್ನು ಕೊಂಡುಬಿಟ್ಟಂತೆ ಹೇಳಿದೆ.

ವಿಷ್ಣು ಸ್ತುತಿ

ಕ್ಷೀರಾಂಭೋಧಿಯೊಳಿರ್ಪನಂತ ಶಯನಂ ನಾರಾಯಣಂ ಕೌಸ್ತುಭಾ ।
ಧಾರಂ ತನ್ನ ಸಮಕ್ಷದೊಳ್ ಕಮಲೆಯುಂ ಭೂಕಾಂತೆಯುಂ ನಾಭಿಯೊಳ್ ॥
ಸಾರಾಂಶಂಬಡೆದಬ್ಜಗರ್ಭ ಸಹಿತಂ ಶ್ರೀ ಪೂಲಿಗೇಟ್ಟಿಂದು ನಿಂ ।
ದಾರಾಧ್ಯಂ ಕರುಣಾ ರಸಾರ್ದ್ರ ಹೃದಯಂ ರಕ್ಷಿಕ್ಕೆ ಸಾಸಿರ್ವರಂ ॥860॥

### ಪೂಲಿ

ರಾಮಾರಾಮ ವಿಕೀರ್ಣದಿಂ ನಿಖಿಲ ದೇವಾನೀಕದಿಂ ಋಗ್ಯಜು ।
ಸ್ಸಾಮಾಥರ್ವಣವೇದಶಾಸ್ತ್ರನಿವಹ ಪ್ರಖ್ಯಾತ ಸಾಸಿರ್ವರಿಂ ॥
ಕಾಮೋದ್ದಾಮ ಗಜಂಗಳಂತಿರೆಸೆವಾ ವಾರಾಂಗನಾನೀಕದಿಂ ।
ಶ್ರೀಮತ್ಪೂಲಿ ನಿರಂತರಂ ಸೊಗಯಿಕುಂ ಸತ್ಸೇವ್ಯ ಸಂಪತ್ತಿಯಿಂ ॥861॥

### ಪೂಲಿಯ ಸಾಸಿರ್ವರ್

ಶ್ರೀ ರಾಮಾಯಣ ಭಾರತಾದಿ ಮನು ಚಾರಿತ್ರಂಗಳ ವ್ಯಾಪ್ತಿಯೊಳ್ ।
ಸಾರಾಸಾರ ವಿಚಾರ ತರ್ಕ ನಿಚಯ ಪ್ರಖ್ಯಾತ ಶಾಸ್ತ್ರಂಗಳೊಳ್ ॥
ಶೂರರ್ ವೇದ ಸಮೂಹದೊಳ್ ಸಕಲ ತತ್ವಜ್ಞಾನ ಸಂಪತ್ತಿಯಿಂ ।
ದಾರಾಧ್ಯರ್ ಧರೆಗೇದೊಡಿಂ ಪಿರಿಯರಾರ್ ಸಾಸಿರ್ವರಿಂದುರ್ವಿಯೊಳ್ ॥862॥

### ಶಿವೆಯುಗೇರಿಯ ನೂರ್ವರ್

ಕವಿ ಗಮಕಿ ವಾದಿ ವಾಗ್ಮಿಗ । ಳವಿವೇಕದ ದೆಸೆಯನಱಿಯರಾಶ್ರಿತ ಜನಮು ॥
ತ್ಸವದಿಂ ಬೇಡಲ್ಕೀವರ್ । ಸವಿಲಾಸಿಗಳಲ್ತೆ ಶಿವೆಯುಗೇರಿಯ ನೂರ್ವರ್ ॥863॥

### ಆದಿತ್ಯ

ಭಾರದ್ವಾಜ ಕುಲಾಂಬರದ್ಯುಮಣಿ ತೇಜಃಪುಂಜದಿಂ ಪೆರ್ಮೆಯಿಂ ।
ಕ್ಷೀರಾಂಭೋನಿಧಿ ಧೈರ್ಯದುನ್ನತಿಕೆಯಿಂದಂ ಮಂದರಂ ಶೌರ್ಯದೊಳ್ ॥
ಶ್ರೀ ರಾಮಂ ಪರಮಾರ್ಥ ನಿಶ್ಚಯದಿನಾ ಕಂಜಾಸನಂ ತಾನೆನ ।
ಲ್ಕಾರುಂ ಪೋಲ್ವೆಗೆ ಬರ್ಪರೇ ಬುಧಜನ ಪ್ರಸ್ತುತ್ಯನಾದಿತ್ಯನೊಳ್ ॥864॥

### ಸೋಮ

ಧುರದೊಳ್ ಬಂದುಱಿದೊಡ್ಡಿ ನಿಂದರಿಬಲವ್ರಾತಕ್ಕೆ ಕೈಯಾಂತು ಬಂ ।
ದೆರೆದರ್ಥಿ ಪ್ರಕರಕ್ಕೆ ವಾರವನಿತಾನೀಕಕ್ಕೆ ಗಂಭೀರ ಸಾ ॥
ಗರನೀ ಪೆರ್ಗಡೆ ಸೋಮನಾಂತಿಱಿಯಲೀಯಲ್ ಸೋಲಿಸಲ್ ಪೇಟಿಪ್ಪೊಡಾ ।
ಹರಿಪುತ್ರಂ ಹರಿಪುತ್ರನಾ ಹರಿಸುತಂ ತಾನೆಂದೊಡೇವಣ್ಣಿಪೆಂ ॥865॥

### ಮಾಳಪಯ್ಯ

ವರ ವನಿತಾ ಜನಂಗಳ ಮನಂ ಕುಸುಮಾಸ್ತ್ರ ಶರಕ್ಕೆ ಸದ್ಬುಧೋ ।
ತ್ಕರ ಕರ ಪಂಕಜಂ ಬಹು ಸುವರ್ಣ ಚಯುಕ್ಕಧಿನಾಥ ಮಂದಿರಂ ॥
ಸ್ಥಿರತರ ರಾಜ್ಯಲಕ್ಷ್ಮಿಗೆಡೆಯಾದುವು ರೂಪವಿಲಾಸದೇಟಿಗೆಯಿಂ ।
ನಿರುಪಮ ದಾನದಿಂ ಪತಿ ಹಿತೋನ್ನತಿಯಿಂ ಪ್ರಭು ಮಾಳಪಯ್ಯನಾ ॥866॥

ಕಾಳಿದಾಸ

ಅಕಳಂಕಂ ತನುವಾಗಿ ವರ್ತಿಸುವ ಚಂದ್ರಕಾಂತಿಯೊಂದೇೞ್ಗೆಯಿಂ ।
ಸಕಲ ವ್ಯಾಪಕನಾಗಿ ಜಾಡ್ಯ ತನಮಂ ಬಿಟ್ಟಿರ್ದ ಪದ್ಮಾಸನಂ ॥
ಸುಕವೀಂದ್ರತ್ವದೊಳೀಶನಿಂ ಕಿಡದ ಕಾಮಂ ರೂಪ ಸಂಪತ್ತಿಯಿಂ ।
ಪ್ರಕಟಂಬೆತ್ತ ಚರಿತ್ರದಿಂ ಮನುವೆನಿಪ್ಪಂ ಕಾಳಿದಾಸೋತ್ತಮಂ ॥867॥

ರೇವಿಯಕ್ಕ

ರತಿಯನ್ನಳ್ ರೂಪಿಂ ಭಾ । ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ ॥
ಕ್ಷಿತಿಯನ್ನಳ್ ಪೆರ್ಮೆಗರುಂ । ಧತಿಯನ್ನಳ್ ರೇವಿಯಕ್ಕನೆನೆ ಮೆಚ್ಚದರಾರ್ ॥868॥

ಬಿಜ್ಜಳ

ಜವನಿವನೇವನೆಂಬನದಟಿಂ ಕುಳಿಕಾಹಿಯ ಹಲ್ಗಳಂ ಕಟಿ ।
ಳ್ಚುವನಿದಿರಾಗೆ ರಾವಣನುಮಂ ನೆಲಕಿಕ್ಕುವನುಗ್ರ ಹೈಹಯಂ ॥
ಬವರದೊಳಾಂತೊಡಾತನ ಭುಜಂಗಳನೊಪ್ಪುವ ಖಡ್ಗಧಾರೆಯಿಂ ।
ದವೆ ಕಡಿಖಂಡಮಾಗೆ ತಱಿವಂ ಸಲೆ ಬಿಜ್ಜಣದೇವಭೂಭುಜಂ ॥869॥

ಪರಿವರುಣಾಂಬು ಸೂಸಿದ ಮಿದುಳ್ ಪರೆದೊಕ್ಕ ಕರುಳ್ ಬಟಲ್ದು ಜೋ ।
ಲ್ದರಿಕರಿ ಸಂಕುಳಂ ಸುೞಿದು ಕಿತ್ತುವ ಪುಣ್ಬೆರಸಾಡುವಟ್ಟೆಯಿಂ ॥
ಚರಮೆಸೆಯಲ್ಕೆ ಪಾಡುವ ಭಟರ್ಕಳ ಪಂದಲೆಯಿಂದೆ ನೋಡಲಾ ।
ಸುರಮುಮುಗುರ್ವುಮಾಯ್ತುೞಿದು ಗೆಲ್ದೆಡೆ ಬಿಜ್ಜಣದೇವ ಭೂಪನಾ ॥870॥

## 165 ಪಟ್ಟದಕಲ್ ಶಾಸನ [1162]

ಇದರಲ್ಲಿ ಸಿಂದರಾಜನಾದ 2ನೆಯ ಚಾವುಂಡನ ಹೆಂಡತಿ ದೇವಲದೇವಿಯೂ ಅವರ ಜ್ಯೇಷ್ಠ ಪುತ್ರ 2ನೆಯ ಆಚಿದೇವನೂ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಚಾವುಂಡ

ಜನದ ಮನಕ್ಕೆ ರಾಗಮನೊಡರ್ಚಿಪ ವೈರಿಜನೇಶ್ವರಾಂಗನಾ ।
ಜನದ ಮೊಗಕ್ಕೆ ಕರ್ಪನೆ ಸಮರ್ಪಿಪ ಸದ್ಬುಧಸತ್ಕವೀಂದ್ರಸ ॥
ಜ್ಜನರ್ಗೆ ಸುವರ್ಣಮಂ ಪಡೆದು ಪೆರ್ಚಿಪ ವೀರಚವುಂಡಮಂಡಲೇ ।
ಶನ ಸಿತಕೀರ್ತಿ ನಿರ್ಮಳೆಯೆನಿಪ್ಪುದು ಧಾತ್ರಿಗೆ ಚಿತ್ರಮಲ್ಲವೇ ॥871॥

ತೊಡರದೆ ನಿಜಾಂತ್ರಜಾಳದ। ತೊಡರೊಳ್ ಸುರಯುವತಿಜನದ ತೋಳ್ಗಳ ತೊಡರೊಳ್।
ತೊಡರದೆ ಪೋಪರೆ ಬಿರುದಿಂ। ತೊಡರ್ದೊಡೆ ಚಾವುಂಡಭೂಪನೊಳ್ ರಿಪು ಭೂಪರ್ ॥872॥

ದೇಮಲದೇವಿ

ಜಳಮೆನೆ ದೇಹಕಾಂತಿ ನಳಿತೋಳ್ಗಳೆ ನೋಡೆ ತರಂಗಮಾಲೆ ಕ।
ಣ್ಗಳೆ ವಿಕಚೋತ್ಪಳಂ ನಗೆಮೊಗಂ ಕಮಳಂ ಕುರುಳೋಳಿ ಷಟ್ಪದಾ॥
ವಳಿಯೆನೆ ಚಕ್ರವಾಕಕುಚೆ ದೇಮಲದೇವಿ ಸರೋವಿಳಾಸದಿಂ।
ತಳೆದಳನೂನರಾಗದೆ ಚವುಂಡನೃಪಾಳಮನೋಮರಾಳಮಂ ॥873॥

ಆಚಿದೇವ

ಎಱಗಿ ಶರಣ್ಯಮೆಂದೊಡದನಾನಱಿಯೆಂ ಪಗೆ ಮುಟ್ಟಿದಲ್ಲಿ ಕ।
ಣ್ದೆಱೆದ ಜವಂ ಕನಲ್ದ ಕುಳಿಕೋರಗನೊಟ್ಟಿದ ಕಿಚ್ಚು ಮುಟ್ಟಿವಂ॥
ದೆಱಪ ಸಿಡಿಲ್ ಕೆರಳ್ದ ಮೃಗರಾಜನಿದಿರ್ಚಿದ ಮಿಟ್ಟುವಟ್ಟಿ ತಿ।
ನ್ಬಱಗುಲಿಮಾರಿಯೆಂಬರರಿವೀರಕುಮಾರಕರಾಚಿದೇವನಂ ॥874॥

ಕಿಸುವೊಳಲ್

ಭವಭವನಂಗಳಿನಂಬುಜ। ಭವಭವನಂಗಳಿನನೂನವಸುದೇವತನೂ।
ಭವಭವನಂಗಳಿನೇನು। ದ್ಭವಭವನಮೊ ಸಿರಿಗೆ ಕಿಸುವೊಟಲ್ ವಸುಮತಿಯೊಳ್ ॥875॥

**166 ಶಿಕಾರಿಪುರ 242 [1163]**

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಮದೇವನ ಸಾಮಂತ ಮಾಚಿಯನಾಯಕನು ಒಂದಣಿಕೆಯಲ್ಲಿ ಸೋಮೇಶ್ವರದೇವಸ್ಥಾನವನ್ನು ಮಾಡಿಸಿ ಭೂಮಿಯನು ಬಿಟ್ಟಂತೆ ಹೇಳಿದೆ.

ಕಾದಂಬಸೋಮದೇವ

ಶರಣಾರ್ಥಿವ್ರಾತರಕ್ಷಾಕರಣಪರಿಣತಂ ತನ್ನ ತೀವ್ರಾಸಿ ವಿದ್ವಿ।
ಟ್ತರುಣೀವೈಧವ್ಯದೀಕ್ಷಾಕರಣಪರಿಣತಂ ತನ್ನ ದೋರ್ಮಂಡಲಂ ಬಂ॥
ದೆರೆದಂಗಿಷ್ಟಾರ್ಥತುಷ್ಟೀಕರಣಪರಿಣತಂ ತನ್ನುದಾರತ್ವಮಾಯ್ತೆಂ।
ಬರ ಮಾತಂ ನನ್ನಿಮಾಟ್ಪಂ ನಿರುಪಮಮಹಿಮಂ ಸೋಯಿದೇವಕ್ಷಿತೀಶಂ ॥876॥

ದೆಸೆದೆಸೆಯೊಳ್ ತರಂಬಿಡಿದು ಪಾಱುವ ವೀರರ ಸೆಕ್ಕೆಗಂಡದಿಂ।
ವಿಸಸನಭೂಮಿ ಕೋಟಿಲ್ಮಿದುಳ ನೆತ್ತರ ಕಾಳ್ಗೆಸಱಿಂ ತಗುಳ್ದು ನ॥
ರ್ತಿಸುವ ಕಬಂಧದಿಂದೊಱೆವ ಲೋಹಿತಧಾರೆಗಳಿಂ ನಭಂ ವಿಗು।
ರ್ವಿಸುವುದಿದೇಂ ವಿಚಿತ್ರಮೊ ಕದಂಬರ ಸೋಮನಿದಿರ್ಚಿದಾಜಿಯೊಳ್॥877॥

ತನು ತನುವಂ ತಱುಂಬೆ ಮಿಗೆ ಕೂರಸಿ ಕೂರಸಿಯುಂ ಪಳಂಚೆ ಥೊ।
ಪ್ಪೆನೆ ಕರುಳಿಂಡೆಗೊಂಡಡಗು ಥಿಪ್ಪೆನೆ ಬೋರೆನೆ ರಕ್ತವಾರಿ ಬಾ॥
ಪ್ಪೆನೆ ಮರುಳಾರ್ದು ವೈರಿನೃಪರಂ ಚಲದಿಂದಮೆ ಕಾದಿ ಗೆಲ್ವ ವೀ।
ರನೊಳಿದಿರಾಂತು ಗೆಲ್ವದಟನಾವನೊ ಸೋಮನೊಳಾಜಿರಂಗದೊಳ್॥878॥

### ಸೋಮದೇವನ ಹೆಂಡತಿ ಮಾಳಲದೇವಿ

ಜಗಮಂ ರಕ್ಷಿಸಿದತ್ತು ಕೀರ್ತಿ ಮುಗಿಲಂ ಮುಟ್ಟಿತ್ತು ಪೆಂಪಾತ್ಮದಾ।
ನಗುಣಂ ಜೀಯೆನಿಸಿತ್ತು ವಿಶ್ವಜನತಾಸಂಸ್ತುತ್ಯಮಾದತ್ತು ಸ॥
ತ್ಯಗುಣಂ ತಾನೆನೆ ಸೋವಿದೇವನೃಪರಾಜ್ಯಶ್ರೀ ಜಯಶ್ರೀಯೆನಲ್।
ನೆಗಟ್ದೀ ಮಾಳಲದೇವಿಯುನ್ನತಿಯನಿನ್ನೇವಣ್ಣಿಪೊಂ ಬಣ್ಣಿಪೊಂ॥879॥

### ಮಾಚಿಯನಾಯಕ

ವಿನಯಂ ಸಜ್ಜನಹರ್ಷದಂ ಪ್ರಭುತೆ ಲೋಕಸ್ತುತ್ಯಮೊಳ್ಪಿಷ್ಟಶಿ।
ಷ್ಟನಿಕಾಯೋತ್ಸವಕಾರಿ ಧರ್ಮಚರಿತಂ ಸತ್ಪೂಜಿತಂ ವಿಶ್ವದಿ॥
ಗ್ವನಿತಾಚಂದನಲಿಪ್ತಕೀರ್ತಿ ಪರನಾರೀದೂರಮಾಚಾರಮಾ।
ಯ್ತೆನಲೇವೇೞ್ವುದೊ ಮಾಚಿಗಾಂಕನೆ ವಲಂ ಧನ್ಯಂ ಮಹೀಚಕ್ರದೊಳ್॥880॥

ಪತಿಗರ್ಥಾರ್ಜನೆಯಿಂ ಪ್ರಜಾಪ್ರತತಿಗಂ ಮರ್ಯಾದೆಯಂ ದಾಂಟದು।
ನ್ನತಿಯಿಂ ಸ್ವಪ್ನದೊಳಪ್ಪೊಡಂ ಪುಸಿಯದೆಂತುಂ ಪೊರ್ದದಾತ್ಮೀಯಸ॥
ನ್ನುತಸತ್ಯವ್ರತದಿಂ ವಿರೋಧಿಬಳಮಂ ಬೆಂಕೊಳ್ವ ವಿಕ್ರಾಂತದಾ।
ಯತಿಯಿಂ ನಾಯಕಮಾಚಿಗಾಂಕನೆ ವಲಂ ವಿಖ್ಯಾತಿಯಂ ತಾಳ್ದಿದಂ॥881॥

ಪರವಧುಗಾಸೆಗೆಯ್ಯದ ಮನಂ ಜಗಮಂ ಪೊರೆವಾರ್ಪುಸತ್ಯದೊಳ್।
ಪೊರೆಯದ ವಾಣಿ ವೈರಿಜಯಮಂ ಪಡೆವಾಚರಣಂ ಕಳಂಕದೊಳ್॥
ನೆರೆಯದ ಕೀರ್ತಿ ಪೂಜಿತಮಹೇಶಪದಾಂಬುಜಭಕ್ತಿ ತಾನದ।
ಚ್ಚರಿಯೆನೆ ಬಣ್ಣಿಸಲ್ಕಳವೆ ಮಾಚಿಯನಾಹವಸವ್ಯಸಾಚಿಯಂ॥882॥

## 167 ಶ್ರವಣಬೆಳ್ಗೊಳ 63 [1163]

ಇದರಲ್ಲಿ ದೇವಕೀರ್ತಿಮುನಿ ಸತ್ತನೆಂದೂ ಅವನ ಶಿಷ್ಯರು ನಿಸಿದಿಗೆಯನ್ನು ಮಾಡಿಸಿದರೆಂದೂ ಹೇಳಿದೆ.

ಚತುರತೆ ಸತ್ಕವಿತ್ವದೊಳಭಿಜ್ಞತೆ ಶಬ್ದಕಳಾಪದೊಳ್ ಪ್ರಸ ।
ನ್ನತೆ ಮತಿಯೊಳ್ ಪ್ರವೀಣತೆ ನಯಾಗಮತರ್ಕವಿಚಾರದೊಳ್ ಸುಪೂ ॥
ಜ್ಯತೆ ತಪದೊಳ್ ಪವಿತ್ರತೆ ಚರಿತ್ರದೊಳೊಂದಿ ವಿರಾಜಿಸಲ್ ಪ್ರಸಿ ।
ದ್ಧತೆ ಮುನಿದೇವಕೀರ್ತಿವಿಬುಧಾಗ್ರಣಿಗೊಪ್ಪುವುದೀ ಧರಿತ್ರಿಯೊಳ್ ॥883॥

## 168 ಶ್ರವಣಬೆಳ್ಗೊಳ 64 [1163]

ಇದರಲ್ಲಿ ಮಹಾಪ್ರಧಾನ ಹುಳ್ಳರಾಜನು ತನ್ನ ಗುರು ದೇವಕೀರ್ತಿ ಪಂಡಿತರಿಗೆ ಪರೋಕ್ಷ ವಿನಯವಾಗಿ ನಿಸಿದಿಗೆಯಂ ಮಾಡಿಸಿದಂತೆ ಹೇಳಿದೆ.

ಕೊಲ್ಲಾಪುರದ ಮಾಘಣಂದಿ

ಎಳಮಾವಿಂ ಬನಮಬ್ಜದಿಂ ತಿಳಿಗೊಳಂ ಮಾಣಿಕ್ಯದಿಂ ಮಂಡನಾ ।
ವಳಿ ತಾರಾಧಿಪನಿಂ ನಭಂ ಶುಭದಮಾಗಿರ್ಪಂತಿರಿರ್ದತ್ತು ನಿ ॥
ರ್ಮಳವಿರಾಗಳ್ ಕುಲಚಂದ್ರದೇವಚರಣಾಂಭೋಜಾತಸೇವಾವಿನಿ ।
ಶ್ಚಳಸೈದ್ಧಾಂತಿಕಮಾಘಣಂದಿ ಮುನಿಯಿಂ ಶ್ರೀಕೊಂಡಕುಂದಾನ್ವಯಂ ॥884॥

ಹಿಮವತ್ಕುತ್ಕೀಲಮುಕ್ತಾಫಲತರಲತರತ್ತಾರಹಾರೇಂದುಕುಂದೋ ।
ಪಮಕೀರ್ತಿವ್ಯಾಪ್ತದಿಙ್ಮಂಡಳನವನತಭೂಮಂಡಳಂ ಭವ್ಯಪದ್ಮೋ ॥
ಗ್ರಮರೀಚೀಮಂಡಳಂ ಪಂಡಿತತತಿವಿನತಂ ಮಾಘಣಂದ್ಯಾಖ್ಯವಾಚಂ ।
ಯಮಿರಾಜಂ ವಾಗ್ವಧೂಟೀನಿಟಿಲತಟಘಟನ್ನೂತ್ನಸದ್ರತ್ನಪಟ್ಟಂ ॥885॥

ಶ್ರುತಕೀರ್ತಿ

ಆವೊಂ ವಾದಿಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿ।
ದ್ಯಾವಷ್ಟಂಭಮನಪ್ಪುಕೆಯ್ದು ಪರವಾದಿಕ್ಷೋಣಿಭೃತ್ಪಕ್ಷಮಂ॥
ದೇವೇಂದ್ರಂ ಕಡಿವಂದದಿಂ ಕಡಿದೆಲೇ ಸ್ಯಾದ್ವಾದವಿದ್ಯಾಸ್ತ್ರದಿಂ।
ತ್ರೈವಿದ್ಯಶ್ರುತಕೀರ್ತಿದಿವ್ಯಮುನಿವೊಲ್ ವಿಖ್ಯಾತಿಯಂ ತಾಳ್ದಿದೊಂ ॥ 886 ॥

ಶ್ರುತಕೀರ್ತಿತ್ರೈವಿದ್ಯ। ವ್ರತಿ ರಾಘವಪಾಂಡವೀಯಮಂ ವಿಬುಧಚಮ।
ತ್ಕೃತಿಯೆನಿಸಿ ಗತಪ್ರತ್ಯಾ। ಗತದಿಂ ಪೇಟ್ದಿ ವಿಮಳಕೀರ್ತಿಯಂ ಪ್ರಕಟಿಸಿದಂ[1] ॥ 887 ॥

---

[1] ಪಂಪರಾಮಾಯಣ 1. 24, 25

## 169 ದಾವಣಗೆರೆ 43 [1164]

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಸಿಂದವಂಶದ ಈಶ್ವರದೇವನು ಶಂಕರ ನಾರಾಯಣದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸಮುದ್ರ

ಪರಿಧಾವನ್ನಕ್ರಚಕ್ರಕ್ರಮಣರಮಣಸಂಜಾತಕಲ್ಲೋಲಮಾಲಾ।
ಸ್ಫುರದುದ್ಯಚ್ಛೀಕರೌಘಸ್ಥಗಿತಗಗನದಿಙ್ಮಂಡಲಂ ಚಾರುಚಾಮೀ॥
ಕರರತ್ನವ್ರಾತನಾನಾರುಚಿನಿಚಯವಿಲಾಸಾಸ್ಪದಂ ಶೋಭಿಕುಂ ಭಾ।
ಸುರಜಂಬೂದ್ವೀಪಮಂ ಸುತ್ತಿದುದತಿಬಹಳಧ್ವಾನರೌದ್ರಂ ಸಮುದ್ರಂ ॥ 888 ॥

ಮಂದರಾಚಲ

ಅಮರಗಣಸೇವ್ಯಮತಿತುಂ। ಗಿಮಶಿಖರಭ್ರಾಜಿ ನಿಖಿಲತಾರಾಚಕ್ರ।
ಭ್ರಮಣಾವಳಿ...ದಿವಿಜೋ। ತ್ತಮನಿಳಯಂ ಮಂದರಾಚಲಂ ರಂಜಿಸುಗುಂ ॥ 889 ॥

ಕುಂತಳ ದೇಶ

ಸಂತತವಿಲಾಸ . ತಭೂ । ಸ್ವಾಂತಂ ಕಮನೀಯನಗರನಂದನಲಕ್ಷ್ಮೀ।
ಕಾಂತಂ ಧಾತ್ರೀಕಾಂತೆಯ। ಕುಂತಳಮೆನೆ ತೋರ್ಪುದೊಪ್ಪಿ ಕುಂತಳದೇಶಂ ॥ 890 ॥

ಚಟ್ಟ ಭೂಪ

ಸಿಡಿಲ ಪೊಡರ್ಪಿನೊಳ್ ದೊರೆಗೆವರ್ಪುದು ದಳ್ಳಿಪ ತೇಜದೇಟಿಗ್ಗಿ ಪಾ।
ಲ್ಗಡಲ ಗಭೀರವೃತ್ತಿಗೆಣೆಯಾದುದು ತನ್ನ ಗಭೀರವೃತ್ತಿ ನಾ॥
ಲ್ವಡಿ ಕನಕಾಚಳಕ್ಕೆ ಮಿಗಿಲುನ್ನತಿ ಕಲ್ಪಮಹೀರುಹಕ್ಕೆ ನೂ।
ರ್ಮಡಿ ಮಿಗಿಲಾಯ್ತು ಚಾಗದೆಸಕಂ ದೊರೆಯಾವನೊ ಚಟ್ಟಭೂಪನೊಳ್ ॥ 891 ॥

ತಳರೆ ತಳರ್ಚುವಂಗೆ ಕನಕಾಚಳಮೊತ್ತುವವಂಗೆಲೇ ವಿಯ।
ತ್ತಳಮಲರ್ವಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕ॥
ಪ್ರಳಯಮುವುಂಕುವಂಗೆ ಜವನಂಕಿಸುವಂಗೆ ಸಿಡಿಲ್ ಸಿಡಿಲ್ ದಿಟಂ।
ಸೆಳೆದಪೆನೆಂಬವಂಗಳುರ್ವ ದಳ್ಳುರಿ ಚಟ್ಟಮನೆಂಬ ಜಟ್ಟಿಗಂ ॥ 892 ॥

ಸಿಂದವಂಶದ ಮಾಚರಸ

ಕಾದಿದ ಕಾಳೆಗಂಗಳನದೇವೆಸಗೊಂಡಪೆ ಮಾಚಿದೇವಶ।
ಸ್ತ್ರೋದಿತವೈರಿಭೂಪರುಧಿರಹ್ರದಮುಗ್ನಮಣಿವ್ರಜಂಗಳಂ॥
ಭೇದಿಸಿ ಕಾಣ್ಬರಿನ್ನುಮರಿರಾಜಪುರಂಗಳ ಸೀಮೆಯಲ್ಲಿ ಸಂ।
ಪಾದಿತಪೋತಯಾತ್ರಿಕಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ ॥ 893 ॥

ಕಲಿಯುಂ ಮೂದಲಿಪಂತೆ ಪಂದೆಯನೆಲೇ ಪೋಗೆಂದು ಸಂಗ್ರಾಮದಿಂ।
ತೊಲಗಿಪ್ಪಂತೆವೊಲುನ್ನತಾಂಸಯುಗದೊಳ್ ವಕ್ಷಸ್ಥಳೋದ್ದೇಶದೊಳ್॥
ಸಲೆ ಪೂರ್ವಾಂಗದೊಳಾವಗಂ ತುಱುಗಿ ತೋಱುತ್ತಿರ್ಪ್ಪ ಶಸ್ತ್ರವ್ರಣಾ।
ವಲಿ ವೀರಾಂಗನೆ ಕೂಡೆ ಕಣ್ದೆಱೆದಳೆಂಬಂತೊಪ್ಪುಗುಂ ಸಂತತಂ ॥ 894 ॥

ಕ್ಷೀರಸಮುದ್ರದಂತೆ ಕಮಳೋದ್ಭವನೀಶ್ವರನಂತುಮಾವರಂ।
ಮೇರುಗಿರೀಂದ್ರನಂತೆ ವಿಬುಧಾಶ್ರಯನಂಬುಜನಾಭನಂತೆ ವಿ॥
ಸ್ತಾರಿತವಿಕ್ರಮಂ ದ್ಯುಮಣಿಯಂತಿರೆ ಸತ್ಪಥವರ್ತಿಯೆಂಬುದೀ।
ಧಾರಿಣಿ ಮಾಚಿದೇವನರಪಾಳನನೂರ್ಜಿತಪುಣ್ಯಶೀಳನಂ ॥ 895 ॥

ಈಶ್ವರದೇವ

ಅರಸಂಕಗಾಳನೆಂಬುದು। ಪರಬಳಕೆ ಗಜೇಂದ್ರವೈರಿಯೆಂಬುದು ಮತ್ತಂ।
ಬಿರುದರ್ಗೆ ಬಿರುದನೆಂಬುದು।ಧುರದೊಳಗೀಶ್ವರನೃಪಾಳಕಹಳಾನಿನದಂ ॥ 896 ॥

**170 ಹಾಸನ 76 [ಸು. 1165]**

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನು ಸಾಮಂತ ನಾಕರಸನು ಕೋರಮಂಗಲದಲ್ಲಿ ನಾಕೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾಕರಸ

ಲೋಕೈಕಪ್ರಿಯದಿವ್ಯಸೇವ್ಯಸುಧೆಯಿಂ ಸಂಕಲ್ಪಿತಾರ್ಥಪ್ರದಾ।
ನೈಕಾಕಾರಸುರದ್ರುಮಾಳಿಪದದಿಂ ವಾಚಸ್ಪತಿಖ್ಯಾತಿಯಿಂ॥
ನಾಕಂ ಮೇಲಖಿಳೋರ್ವಿ ಕೀೞಿನೆ ಜಗದ್ವಿಖ್ಯಾತಮೆಂದಂದು ಮ।
ತ್ತೇಕೈಕೋತ್ತಮವಸ್ತುವಿಂ ದೊರೆಯೆ ಪೇೞ್ ನಾಕಂಗಿಳಾಲೋಕದೊಳ್॥ 897 ॥

ತನಗೀ ಲೋಕಮನೆಯ್ದೆ ರಕ್ಷಿಪ ಮನಂ ತಾನುಳ್ಳುದಾ ಪಕ್ಷಿಗಾ।
ತ್ಮನನಂತೊಪ್ಪಿಸಲಪ್ಪುದೇ ಬೞಿಕೆ ಪೇೞ್ ಮಿಕ್ಕರ್ಗದೇಗೆಯ್ವನೆಂ॥
ದನವದ್ಯಾತ್ಮಪರೋಪಕಾರಕರಣಂ ವಿಖ್ಯಾತಜೀಮೂತವಾ।
ಹನನಂ ಕೇಳ ವಿವೇಕಿ ನಾಕಿ ನಗುವಂ ಲೋಕೋಪಕಾರೋದಯಂ ॥ 898 ॥

ಪಡೆವರ್ ಪೊಂಗಳನೆಲ್ಲರುಂ ತಮಗುಣಲ್ ಪೆಂಡಿರ್ಗೆ ಮಕ್ಕಳ್ಗೆ ಬ।
ಯ್ತಿಡಲಂತಲ್ತು ನಿಜೇಷ್ಟಶಿಷ್ಟತತಿಗಿಷ್ಟಾಪೂರ್ತಮಂ ನಿರ್ಮಿಸಲ್॥
ಪಡೆವಂ ಧರ್ಮದಿನರ್ಥಮಂ ಪರಹಿತವ್ಯಾಪಾರನೆಂದಂದು ಹೆ।
ಗ್ಗಡೆ ನಾಕಣ್ಣನೆ ವಿಶ್ವಧಾತ್ರಿಯೊಳಗಿಂ ಧನ್ಯಂ ಪೆಱರ್ ಧನ್ಯರೇ ॥899 ॥

ಎಸೆದಿರ್ದಿಂದುಕಲಾಕಲಾಪಮುಮನಾ ದುಗ್ಧಾಬ್ಧಿಯೊಳ್ ಪುಟ್ಟಿದಾ।
ಪೊಸ ಪೀಯೂಷಮುಮಂ ತೆರಳ್ಚಿ ಪದಪಿಂ ಧಾತ್ರಂ ಪದಂಗೆಯ್ವ ಸಂ॥
ತೊಸದಿಂ ಧರ್ಮದೊಳೋದಿ ನಿರ್ಮಿಸಿದನೀ ವಿಶ್ವಂಭರಾರಕ್ಷಣ।
ವ್ಯಸನವ್ಯಾಪ್ತಯಶೋವಿಳಾಸವಿಳಸದ್ಭೂನಾಕನಂ ನಾಕನಂ ॥ 900 ॥

ನುಡಿಗಳ್ ಕರ್ಣರಸಾಯನಂ ತನು ಜಗನ್ನೇತ್ರಕ್ಕೆ ಚಂದ್ರೋದಯಂ।
ಕುಡುವಾರ್ಪರ್ಥಿಜನಂಗಳಂಗಣನಿಧಿವ್ರಾತಂ ಸದಾಚಾರಮಾ॥
ಮೃಡಚೂಡಾಮಣಿಮಂದಮಂದವಿಸರದ್ಗಂಗಾಪಗಾಪೂತಮೆಂ।
ದೊಡೆ ಪೋಲ್ವನ್ನನದಾವನಾಶ್ರಿತಕೃತಶ್ರೀಲೋಕನಂ ನಾಕನಂ ॥ 901 ॥

ನೆಲದೊಳ್ ಪೊಂಗಳನೇಕೆ ಪೂಳ್ವರೆನುತಂ ತಾಂ ಲುಬ್ಧರಂ ಮಾಣದಂ।
ಡಲೆಯುತ್ತಿರ್ಪ ವಿವೇಕಿ ನಾಕಿ ಪಡೆದಾ ಸರ್ವಸ್ವಮಂ ಕೋರಮಂ॥
ಗಲದೊಳ್ ತನ್ನಯ ಜನ್ಮಭೂಮಿಯದಿಳಾವಿಖ್ಯಾತಮಪ್ಪಂತಿರಲ್।
ಶಿಲೆಯೊಳ್ ಬಯ್ತನುಮೇಶ್ವರಾಲಯಕೃತಿವ್ಯಾಪಾರಪಾರಾಯಣಂ ॥ 902 ॥

ಸ್ಥಿರನೇ ಸದ್ಗುಣಿಯೇ ವಿವೇಕನಿಧಿಯೇ ವಿದ್ವಜ್ಜನಾಧಾರನೇ।
ನಿರಹಂಕಾರವಿನೋದನೇ ಮನುಮುನಿಪ್ರಖ್ಯಾತನೇ ನಾಕನೇ।
ಸ್ಥಿರನೇ ಸದ್ಗುಣಿಯೇ ವಿವೇಕನಿಧಿಯೇ ವಿದ್ವಜ್ಜನಾಧಾರನೇ।
ನಿರಹಂಕಾರ ವಿನೋದನೇ ಮನುಮುನಿಪ್ರಖ್ಯಾತಕೀರ್ತಿಧ್ವಜಂ ॥ 903 ॥

ಎರೆದ ಮನುಜಂಗೆ ಸುರಭೂ। ಮಿರುಹಂ ಶರಣೆಂದವಂಗೆ ಕುಲಿಶಾಗಾರಂ।
ಪರವನಿತೆಗನಿಲತನಯಂ। ನಿರುಪಮಗುಣಧರ್ಮತತಿಪತಾಕಂ ನಾಕಂ ॥ 904 ॥

**171 ಸೊರಬ 277 [ಸು. 1165]**

ಇದರಲ್ಲಿ ಚಾಳುಕ್ಯರಾಜನಾದ ನೂರ್ಮಡಿತೈಲನ ಆಳಿಕೆಯಲ್ಲಿ ಮಹಾದೇವ ದಂಡನಾಯಕನು ಬಲಿಪುರದಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಮಹಾದೇವ ದಂಡನಾಯಕ

ಚಲದಭಿರಾಮನಣ್ಮಿನ ತವರ್ಮನೆ ಚೆನ್ನರ ಚಕ್ರವರ್ತಿ ಭೂ।
ವಲಯದ ಭೂಷಣಂ ಚದುರರಾಜನುದಾರನುದಾತ್ತಮೂರ್ತಿ ನಿ॥
ರ್ಮಲತೆಯ ಜನ್ಮಭೂಮಿ ಸುಜನತ್ವದ ಸುಗ್ಗಿ ವಿಲಾಸದಾಗರಂ।
ಕಲಿಗಳ ದೇವನೆಂಬುದನಿಶಂ ಮಹದೇವನನೀ ಜಗಜ್ಜನಂ ॥ 905 ॥

ಬನವಾಸೆ

ಫಲಭರದಿಂ ಮನಂಗೊಳಿಪ ಪೂಗವನಂ ವನದೊಳ್ ಸರೋಜಲಂ।
ಜಲದ ಪೊನಲ್ಗಳಿಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ ಬಳ್ಳಿ ಗೊಂ॥
ಡುಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ।
ಕುಲಮದೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆದೇಶದೊಳ್ ॥ 906 ॥

ಬಲಿಪುರ

ಕಲಹಂಸಗತಿಯ ಮೃದುಕೋ। ಕಿಲನಾದದ ನೀಲಕಚದ ತನುಮಧ್ಯದ ಮಂ।
ಗಲಕಲಶಕುಚದ ಸೊಗಯಿಪ। ಲಲಿತಮನೋಜನಮದೆತ್ತಲುಂ ಬಲಿಪುರದೊಳ್ ॥907॥

## 172 ಶ್ರವಣಬೆಳ್ಗೊಳ 346 [ಸು. 1165]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ಹುಳ್ಳನು ಭಾನುಕೀರ್ತಿಗೆ ಸವಣೇರು ಎಂಬ ಗ್ರಾಮವನ್ನು ಕೊಟ್ಟಂತೆ ಹೇಳಿದೆ.

ಹುಳ್ಳನ ಹೆಂಡತಿ ಪದ್ಮಾವತಿ

ಕಮನೀಯಾನನಹೇಮತಾಮರಸದಿಂ ನೇತ್ರಾಸಿತಾಂಭೋಜದಿಂ।
ದಮಳಾಂಗದ್ಯುತಿಕಾಂತಿಯಿಂ ಕುಚರಥಾಂಗದ್ವಂದ್ವದಿಂ ಶ್ರೀನಿವಾ॥
ಸಮೆನಲ್ ಪದ್ಮಲದೇವಿ ರಾಜಿಸುತುಮಿರ್ಪಳ್ ಹುಳ್ಳರಾಜಾಂತರಂ।
ಗಮುರಾಳಂ ರಮಿಯಿಪ್ಪ ಪದ್ಮಿನಿಯವೋಲ್ ನಿತ್ಯಪ್ರಸಾದಾಸ್ಪದಂ ॥ 908॥

ಚಲಭಾವಂ ನಯನಕ್ಕೆ ಕಾರ್ಶ್ಯಮುದರಕ್ಕತ್ಯಂತರಾಗಂ ಪದಾ।
ಮ್ಮಲಸತ್ಪಾಣಿತಳಕ್ಕೆ ಕರ್ಕಶತೆ ವಕ್ಷೋಜಕ್ಕೆ ಕಾಷ್ಣ್ಯಂ ಕಚ॥
ಕ್ಕಲಸತ್ವಂ ಗತಿಗಲ್ಲದಿಲ್ಲ ಹೃದಯಕ್ಕೆಂದಂದು ಪದ್ಮಾವತೀ।
ಲಲನಾರತ್ನದ ರೂಪಶೀಲಗುಣಮಂ ಪೋಲ್ವನ್ನರಾರ್ ಕಾಂತೆಯರ್ ॥ 909 ॥

## 173 ಶಿಕಾರಿಪುರ 277 [1165]

ಇದರಲ್ಲಿ ಕಳಚುರ್ಯ ರಾಜನಾದ ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಮದೇವನ ಮಹಾಪ್ರಧಾನ ನಾಕರಸನು ಜಗದೇಕಮಲ್ಲೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಕಾದಂಬ ಸೋಮದೇವ

ಚಂಡರಿಪುನೃಪತಿತಮಮಾ। ರ್ತಂಡಂ ಕದನಪ್ರಚಂಡನಹಿತರ ಗಂಡಂ।
ಮಂಡಳಿಕವನಜವನವೇ। ತಂಡಂ ಬಾಂಧವಪುರಾಧಿನಾಥಂ ಸೋಮಂ ॥ 910 ॥

ಹೃದಯಂ ಲಕ್ಷ್ಮೀವಧೂಮಂಡನಮಣಿಭವನಂ ಬಾಹುದಂಡಂ ಜಯಶ್ರೀ।
ಸುದತೀನೃತ್ಯಶ್ರಮೋದ್ಯದ್ವಿಪುಳಕನಕದಂಡಂ ಸುಧಾಸ್ಮೇರಪೂರಂ॥
ವದನಂ ವಾಕ್ಕಾಮಿನೀನರ್ತನಕನಕಗೃಹಂ ತಾನೆನಲ್ ಕೀರ್ತಿಕಾಂತಾ।
ಸ್ಪದನಾದಂ ಸೋಮಿದೇವಂ ವಿಬುಧಜನಸುರೇಂದ್ರಾವನೀಜಪ್ರಭಾವಂ ॥911॥

## 174 ಲಕ್ಷ್ಮೇಶ್ವರದ ಶಾಸನ [1166]

ಇದರಲ್ಲಿ ಕಲಚುರ್ಯ ರಾಜನಾದ ಬಿಜ್ಜಳನ ಆಳಿಕೆಯಲ್ಲಿ ಅವನ ದಂಡನಾಯಕ ಶ್ರೀಧರನು ಪುಲಿಗೆರೆಯಲ್ಲಿ ಬ್ರಹ್ಮಪುರಿಯನ್ನು ಕಟ್ಟಿಸಿ ಬ್ರಾಹ್ಮಣರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಿಜ್ಜಳ

ಕಂ॥ ಶ್ರೀಮತ್ಕಳಚುರ್ಯ ಕುಳೋ। ದ್ದಾಮಂ ನೆಗಟ್ಟಂ ಧರಿತ್ರಿಯೊಳ್ ಜಯಲಕ್ಷ್ಮೀ।
ಧಾಮಂ ಪಾಳಿತ ವಿಬುಧ। ಸ್ತೋಮಂ ಬಿಜ್ಜಳ ನೃಪಾಳನಹಿತ ಕರಾಳಂ ॥912॥

ಮ॥ ಧರೆಯಂ ಪೀಡಿಸಿ ಸೊರ್ಕಿದಕ್ಕುದಲೆವಾಯ್ದುದ್ವೃತ್ತರಂ ವೈರಿ ಭೂ।
ಪರನುನ್ಮೂಳಿಸಿದಂ ಸ್ವಬಾಹು ಬಳದಿಂ ವಿಶ್ವಂಭರಾ ಭಾರಮಂ॥
ಪಿರಿದುಂ ತಾಳ್ದಿದನಾತ್ಮ ಬಾಹುತಳದೊಳ್ ಮಿಕ್ಕನ್ಯಭೂಪಾಳರೊಳ್।
ದೊರೆಯೇ ಬಾಷ್ಪ ವಿಕೀರ್ಣ ವೈರಿ ವನಿತಾ ದೃಕ್ಕಜ್ಜಳಂ ಬಿಜ್ಜಳಂ ॥ 913 ॥

ಚಂ॥ ಪರ ನೃಪರಂಜಿ ತೆತ್ತ ಧನಮುಂ ವನಿತಾ ಜನಮುಂ ವಿಭೂಷಣಾಂ ।
ಬರ ಗಜ ವಾಜಿ ಸಂಕುಳಮುಮಲ್ಲದೆ ಮಿಕ್ಕ ನೃಪಾಳರಂತಿರ॥
ಜ್ಜರ ಪಡೆದಿತ್ತ ರಾಜ್ಯವಿಭವಕ್ಕನುರಾಗದ ಮುಯ್ಯನಾಂಪನೇ।
ಸ್ಫುರಿತತರ ಪ್ರತಾಪ ನಿಧಿ ಭಾಪ್ಪುರೆ ಬಿಜ್ಜಳ ಭೂಮಿಪಾಳಕಂ ॥ 914 ॥

ಧರೆಯೊಳ್ ವಿಕ್ರಮ ಚಕ್ರವರ್ತಿಯೆನಿಸಿರ್ದಾ ಬಿಜ್ಜಳೋರ್ವೀಶ ಭೇ।
ಕರ ಭೇರೀ ರವಮೊರ್ಮೊದಲ್ ನೆಗಟ್ ಕೇಳ್ದಾ ಗೂರ್ಜರಂ ಕೂಡೆ ಜ॥
ರ್ಜರನಾದಂ ಕುಸಿದಂ ಖಸಂ ನಡುಗಿ ಕಂಡಂ ಪಾಂಡ್ಯನಂದಂಜಿ ಬ।
ರ್ಬರನುರ್ಬಂ ಬಿಸುಟೋಡಿದಂ ಭಯದೆ ಪೊಕ್ಕಂ ಮಾಳವಂ ಮಾಳವಂ ॥ 915 ॥

### ಅಗಸ್ತ್ಯಮುನಿ

ಕಂ॥ ಕಮಳಭವಾನ್ವಯದೊಳಗು। ತ್ತಮನಖಿಳ ಜಗದ್ವಿನೂತನೆಸೆದಿರ್ದನಗ।
ಸ್ತ್ಯಮುನೀಂದ್ರಂ ಸುರನುತನನು। ಪಮಿತಮಹಾಮಹಿಮನಖಿಳ
ಮುನಿಜನ ಸೇವ್ಯಂ ॥ 916 ॥

### ಶ್ರೀಧರನ ತಾತ ದಾಸಿರಾಜ

ಎನೆ ನೆಗಟ್ದಗಸ್ತ್ಯಗೋತ್ರದೊ। ಳನುಪಮಿತಂ ದಾಸಿರಾಜ ದಂಡಾಧೀಶಂ।
ಜನತಾಸಂಸ್ತುತ್ಯಂ ಖ್ಯಾ।ತನಾದನಾಶ್ರಿತಸಮಾಜದಿವಿಜಮಹೀಜಂ ॥ 917 ॥

### ಇವನ ಹೆಂಡತಿ ದುಗ್ಗಣವ್ವೆ

ಆತನ ಕುಲವಧು ಗುಣ ಗಣ। ನೂತನ ಮಣಿ ಭೂಷಣಾವಳಂಬಿನಿ ಭುವನ।
ಖ್ಯಾತ ಪತಿವ್ರತೆಯಾದಳ್। ಭೂತಳದೊಳ್ ದುಗ್ಗಣವ್ವೆಯೆಂಬಳ್ ಪೆಸರಿಂ ॥ 918 ॥

### ಶ್ರೀಧರನ ತಂದೆ ಹರಿಯಣಯ್ಯ

ಕಂ॥ ಅವರ್ಗೆ ಸುತಂ ಪುಟ್ಟಿದನು। ತ್ಸವದಿಂದಂ ಹರಿಯಣಯ್ಯ ದಂಡಾಧೀಶಂ।
ಭುವನ ಜನ ಸ್ತುತನಾಶ್ರಿತ। ನಿವಹ ಮನೋರಥ ಫಳಪ್ರದಾಮರಭೂಜಂ
॥ 919 ॥

ಜಗದೊಳ್ ಶ್ರೀಕರಣೈಕಾ। ಗ್ರಗಣ್ಯನನುಪಮಿತ ಪುಣ್ಯನೆಸೆದಿರ್ದಂ ಚಾ।
ರು ಗುಣಾಭಿರಾಮನಂಭೋ। ಧಿಗಂಭೀರಂ ಹರಿಯಣಯ್ಯ ದಂಡಾಧೀಶಂ ॥ 920 ॥

### ಇವನ ಹೆಂಡತಿ ಮುದ್ದಿಕವ್ವೆ

ಆತನ ಕುಲವಧು ಭೂಧರ। ಜಾತೆಗೆ ಸೀತೆಗೆ ಪಯೋಧಿ ಜಾತೆಗೆ ಪಂಕೇ।
ಜಾತಾಸ್ಯ ಜಾತೆಗೆಣೆಯೆನೆ। ಭೂತಳದೊಳ್ ಮುದ್ದಿಕವ್ವೆ ಪೆಸರ್ವಡೆದಿರ್ದಳ್ ॥ 921 ॥

### ಶ್ರೀಧರನ ಅಣ್ಣ ಮಾಚಿ ದಂಡಾಧಿಪ

ಮ॥ಸ್ರ॥ ಕ್ಷಿತಿಯೊಳ್ ವಿಖ್ಯಾತನಾದಂ ಸಕಳ ಗುಣಗಣಾಳಂಕೃತಂ ಬಿಜ್ಜಳೋರ್ವೀ।
ಪತಿ ಪಾದಾಂಭೋಜ ಭೃಂಗಂ ಕುಮುದ ಧವಳ ಚಂಚದ್ಯಶೋವಲ್ಲರೀ ವೇ॥
ಲ್ಲಿತ ದಿಗ್ಪಾಳಂ ಸುರೇಂದ್ರಾವನಿಧರನಿಭಧೈರ್ಯಂ ಬೃಹತ್ತ್ಯಾಗ ಸಂತ।
ರ್ಪಿತ ದೀನಾನಾಥ ಸಾರ್ಥಂ ನಿರುಪಮಮಹಿಮಂ ಮಾಚಿ ದಂಡಾಧಿನಾಥಂ
॥ 922 ॥

ಕಂ॥ ಈ ಚತುರುದಧಿ ಪರೀತ ಧ। ರಾ ಚಕ್ರಂ ಪದಪಿನಿಂದೆ ಬಣ್ಣಿಸೆ ನೆಗಳ್ದಂ।
ಮಾಚಿ ನೃಪಂ ಶಿಬಿ ರವಿಜ ದ। ಧೀಚಿಗಳಿಂದಧಿಕವೆನಿಪ ವಿತರಣ ಗುಣದಿಂ ॥923॥

ಶ್ರೀಧರ ದಂಡನಾಥ

ಕಂ॥ ಆ ರಾಜಶಿಖಾಮಣಿ ಪದ। ನೀರಜಭೃಂಗಂ ವಿನೂತ ವಿಜಯೋತ್ತುಂಗಂ।
ಧಾರಿಣಿಯೊಳ್ ನೆಗಳ್ದಿರ್ದಂ। ಧೀರಂ ಶ್ರೀಧರಚಮೂಪನಂಗಜರೂಪಂ ॥924॥

ಮ॥ಸ್ರ॥ ಚರಿತಂ ಗಾಂಗೇಯನೊಳ್ ಪಾಸಟಿ ಚತುರತೆ ವಾಕ್ಕಾಮಿನೀನಾಥನೊಳ್ ತಾಂ।
ಸರಿ ಗಾಂಭೀರ್ಯಂ ಪಯೋರಾಶಿಯೊಳೆಣೆ ನಿಜವಿಕ್ರಾಂತಮಿಂದ್ರಾರಿಯೊಳ್ ಪೋ॥
ದೊರೆ ತನ್ನೊಂದಾರ್ಪು ವಿದ್ಯಾಧರಪತಿಯೊಳಣಂ ಪಾಟಿಯೆಂದೆಂದು ವಿಶ್ವಂ।
ಭರೆಯೆಲ್ಲಂ ಬಣ್ಣಿಕುಂ ಶ್ರೀಧರನನನುದಿನಂ ನಿರ್ಭರಾನಂದದಿಂದಂ ॥ 925 ॥

ಕಲಿಮಳಕಳಂಕಪಂಕಮ। ನಲೆವಂ ತನ್ನೊಂದು ಚಾರು ಚರಿತ ಸುಧಾ ನಿ।
ರ್ಮಲ ಜಳದಿಂದಮೆನಲ್ ಭೂ। ತಲದೊಳ್ ಶ್ರೀಧರನ ಸರಿಗೆ ವರ್ಷವನಾವಂ ॥ 926 ॥

ಅವರಿವರುವರೊಳ್ಳಿದರೆಂ। ಬ ವಿವಾದಮದೇಕೆ ಸಕಳ ಗುಣ ಗಣದಿಂದಂ।
ಭುವನತ್ರಯದೊಳಗೊಳ್ಳಿದ। ನಿವನೊರ್ವಂ ಶ್ರೀಧರಂ ಚಮೂಪತಿತಿಳಕಂ ॥ 927 ॥

**175 ಸೊರಬ 286 [1168]**

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋಮದೇವನ ಆಳಿಕೆಯಲ್ಲಿ ನಾಳ್ಪ್ರಭು ತಾರಕಗೌಡನು ಶಿವದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬನವಾಸೆ

ಸಾಗರವಾರಿವೇಷ್ಟಿತಸಮಸ್ತಧರಾರಮಣೀಘನಸ್ತನಾ।
ಭೋಗಮಿದೆಂಬಿನಂ ವಿದಿತವಿಸ್ತೃತಸಾರತರಾಗ್ರಹಾರದಿಂ॥
ನಾಗರಖಂಡಪತ್ರಪರಿವೇಷ್ಟನದಿಂ ಜನನೇತ್ರಪುತ್ರಿಕಾ।
ರಾಗಮನಿತ್ತು ಮಾಣ್ದುದೆ ಮನಸ್ಸುಖದಂ ಬನವಾಸೆಮಂಡಲಂ ॥ 928 ॥

ತಾರಕಗೌಡ

ಎತ್ತಿಸಿದಂ ಶಿವಗೃಹಮಂ। ಸುತ್ತಿಸಿದಂ ಕೀರ್ತಿಲತಿಕೆಯಿಂ ದಶದಿಶೆಯಂ।
ಮತ್ತೆನಿಸದೆ ಪ್ರಜೆಯಂ ಮೆ। ಯ್ವತ್ತಿಸಿದಂ ಸತ್ಯದಿಂದೆ ತಾರಕಗೌಂಡಂ ॥929॥

ನಾಕದಿನಿೞಿತಂದುದೊ ಫಣಿ। ಲೋಕದಿನೊಗೆತಂದುದೋ ವಸುಂಧರೆಗೆಂದೀ।
ಲೋಕಂ ಬಣ್ಣಿಸೆ ತಾರಕ। ಶ್ರೀಕಂಠಾಲಯಮನೆಸೆವಿನಂ ಮಾಡಿಸಿದಂ ॥ 930 ॥

**176 ನಂಜನಗೂಡು 175 [1168]**

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ದಂಡನಾಯಕ ಲಕ್ಷ್ಮಯ್ಯನು ತಾನು ಸುತ್ತೂರಲ್ಲಿ ಕಟ್ಟಿಸಿದ ನಾಗಕೇಶವದೇವಸ್ಥಾನಕ್ಕೆ ಬೆಳ್ಗಲಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಮುದ್ರಿಸಲಾದಿರಾಜಚರಿತಂಗಳನಾತ್ಮಚರಿತ್ರಮಾವಗಂ।
ಮುದ್ರಿಸಲಾಜ್ಞೆ ಭೂತಳಮನುದ್ಧತರಪ್ಪರ ಗಂಡಗರ್ವಮಂ॥
ಮುದ್ರಿಸೆ ತೋಳ ಬಾಳ ಬಳಮುಜ್ಜ್ವಳಕೀರ್ತಿ ಜಗಂಗಳೆಲ್ಲಮಂ।
ಮುದ್ರಿಸೆ ಪೆಂಪೆ ಮುದ್ರೆ ತನಗಾಗಿರೆ ವಿಷ್ಣುಸಮುದ್ರನೊಪ್ಪುವಂ ॥ 930 ಅ ॥

ನಾರಸಿಂಹ I

ಅರಿಭೂಪರ್ ಬಂದು ಮೆಯ್ದೋಱಿದೊಡವಯವದಿಂ ತೋಱಿನೇ ಕ್ರೂರದೈತ್ಯೇ।
ಶ್ವರವಕ್ಷಃಕ್ಷೇತ್ರನಿರ್ದಾರಣನಖನಿಕರೋಚ್ಚಂಡದೋರ್ದಂಡಮಂ ಭೀ॥
ಕರಜಿಹ್ವಾಕೀರ್ಣದೀರ್ಣಾನನಮನೊಗೆದ ಕೂರ್ದಾಡೆಯುಂ ಸಂಚಳತ್ಕೇ।
ಸರಭಾಸ್ವತ್ಕಂಠಮಂ ಘುರ್ಘುರಘನರವಮಂ ನಾರಸಿಂಹಕ್ಷಿತೀಶಂ ॥ 930 ಆ ॥

ತರಳವಿಲೋಚನಾಂಚಳಕೆ ಕೆಂಪಿನಿತುಂ ಬರೆ ಬರ್ಕುಮಾಗಳಂ।
ತರಿಸರಪಾಳಸಂಕುಳದ ಪಂದಲೆ ಕೈಗೆ ತುರಂಗರಾಜಿ ಮಂ॥
ದುರಕೆ ಗಜಾಳಿ ಸಾಲೆಗೆ ಧನಂ ನಿಜಕೋಶಗೃಹಾಂತರಕ್ಕೆ ತ।
ದ್ಧರೆ ಕಡಿತಕ್ಕಮುಂಡಿಗೆಗವೋಲೆಗಮಾ ನರಸಿಂಹದೇವನಾ ॥ 930 ಇ ॥

**177 ಅರಸಿಯಕೆರೆ 1 [1168]**

ಇದರಲ್ಲಿ ಹೊಯ್ಸಳ ರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬೆಳ್ಳಿಯ ದಾಸಿಸೆಟ್ಟಿಯ ಸೋದರರದಳಿಯಂದಿರು ಮಾದಿರಾಜನೂ ಶಂಕರಸೆಟ್ಟಿಯೂ ಕೆಲವು ಬಸದಿಗಳಿಗೆ ಭೂಮಿಯನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಮಲೆಯಂ ಸಾಧಿಸಿ ಮಾಣ್ದನೇ ತಳವನಂ ಕಾಂಚೀಪುರಂ ಕೋಯತೂರ್।
ಮಲೆನಾಡಾ ತುಳುನಾಡು ನೀಲಗಿರಿಯಾ ಕೋಳಾಲಮಾ ಕೊಂಗು ನಂ॥
ಗಲಿಯುಚ್ಚಂಗಿ ವಿರಾಟರಾಜನಗರಂ ಪಲ್ಲೂರಿವೆಲ್ಲಂ ಭುಜಾ।
ಬಲದಿಂ ಲೀಲೆಯೆ ಸಾಧ್ಯಮಾದುದೆಣೆಯಾರ್ ವಿಷ್ಣುಕ್ಷಮಾಪಾಳನೊಳ್ ॥ 931 ॥

### ಬಲ್ಲಾಳ II

ವಿನಯಶ್ರೀನಿಧಿಯಂ ವಿವೇಕನಿಧಿಯಂ ಬ್ರಹ್ಮಣ್ಯನಂ ಪೂರ್ಣಪು।
ಣ್ಯನನುದ್ದಾಮಯಶೋರ್ಥಿಯಂ ಜಿತಜಗತ್ಪ್ರತ್ಯರ್ಥಿಯಂ ಸರ್ವಸ॥
ಜ್ಜನಸಂಸ್ತುತ್ಯನನುದ್ಭವದ್ವಿತರಣ ಶ್ರೀವಿಕ್ರಮಾದಿತ್ಯನಂ।
ಮನುಜೇಶರ್ ಮಲೆರಾಜರಾಜನನದೇಂ ಬಲ್ಲಾಳನಂ ಪೋಲ್ವರೇ ॥ 932 ॥

### ಶ್ರೀಪಾಲಯೋಗಿ

ತಮಂಗಾಜ್ಞಾವಶಮಾದುದುನ್ನತಮಹೀಭೃತ್ಕೋಟಿ ತಮ್ಮಿಂದೆ ಬಿ।
ಣ್ಪಮರ್ದತ್ತೀಧರೆಗೆಯ್ದು ತಮ್ಮ ಮುಖದೊಳ್ ಷಟ್ತರ್ಕವಾರಾಶಿವಿ॥
ಭ್ರಮಮಾಪೋಶನಮಾತ್ರಮಾದುದೆನಲಿಂ ಮಾತೇನಗಸ್ತ್ಯಪ್ರಭಾ।
ವಮುಮಂ ಕೀಳ್ಪಡಿಸಿತ್ತು ಪೆಂಪಿನೆಸಕಂ ಶ್ರೀಪಾಲಯೋಗೀಂದ್ರರಾ ॥ 933 ॥

### ಬೆಳ್ಳಿಯ ದಾಸಿಸೆಟ್ಟಿ

ಪಡೆವಂ ಸದ್ಧರ್ಮಮರ್ಯಾದೆಯೊಳೆ ಪರದುಗೆಯ್ದರ್ಥಮಂ ನ್ಯಾಯದಿಂದಂ।
ಪಡೆದರ್ಥಂ ದೇವತಾಪೂಜೆಗೆ ಬಸದಿಗೆ ಶಿಷ್ಟೇಷ್ಟದಾನಕ್ಕೆ ನಿಚ್ಚಂ ॥
ಕುಡೆ ಮತ್ತಂ ತನ್ನ ಭಾಗ್ಯಂ ತವನಿಧಿಯೆನೆ ನೀಳ್ದುಣ್ಮೆ ಕೆಯ್ಗಣ್ಮೆ ಪೆಂಪಂ।
ಪಡೆದಂ ದಾಸಂ ವಿಯನ್ಮಂಡಪಕಳಿತಯಶಃಕಲ್ಪವಲ್ಲೀವಿಳಾಸಂ ॥ 934 ॥

## 178 ಶಿಕಾರಿಪುರ 92 [1168]

ಇದರಲ್ಲಿ ಕಳಚುರ್ಯ ರಾಜನಾದ ರಾಯಮುರಾರಿ ಸೋವಿದೇವನ ಮಹಾಪ್ರಧಾನ ಬ್ಯಾಳಿಕೆಯ ಕೇಶಿದಣ್ಣಾಯಕನು ಒಳ್ಳಿಗಾವೆಯ ಕೇದಾರೇಶ್ವರದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ಸೋವಿದೇವ

ರಿಪುಭೂಪಾಳತಮೌಘಮೋಡೆ ಕುಮುದವ್ರಾತಂ ಕರಂ ಪೆರ್ಚೆ ತ।
ದ್ರಿಪು ಕಾಂತಾಮುಖಪಂಕಜಂ ಕೊರಗೆ ನಕ್ಷತ್ರೋದಯೇಶಂ ಕಲಾ॥
ಳಿಪರಿಭ್ರಾಜಿತನೂರ್ಜಿತೋರ್ಜಿತಯಶಶ್ರೀಚಂದ್ರಿಕಾಧೀಶ್ವರಂ।
ನೃಪನೇ ಸೋಮನೆನಲ್ಕೆ ಬಿಜ್ಜಣಮಹೀಪಾಲಾಬ್ಧಿಯೊಳ್ ಪುಟ್ಟಿದಂ ॥ 935 ॥

ಕೇಶಿದಣ್ಣಾಯಕ

ಇದು ವಿದ್ಯಾಧರಲೋಕಮಲ್ಲದಿದು ನಾಕಾನೀಕಮಂತಲ್ಲದಿಂ।
ತಿದು ಗಂಧರ್ವನಿಕಾಯಮಲ್ಲಣಮಿದಾಸತ್ಕಿನ್ನರವ್ರಾತಮಾ॥
ಲ್ಲಿದಲೇ ಬ್ಯಾಳಿಕೆಕೇಶಿಮಯ್ಯವಿಜಯಪ್ರಾರಂಭದೊಳ್ ಮುಟ್ಗಿಪೋ।
ದದಟಕ್ಷ್ಮಾಪನಿಕಾಯಪುಷ್ಪಕಚಯಂ ವ್ಯೋಮೈಕಸಾಂಕೀರ್ಣಕಂ ॥ 936 ॥

ಮನುಚಯಸೇವ್ಯವೃತ್ತಿ ನಿಜವೃತ್ತಿ ಪುರಾತನರಾಜನೀತಿ ತಾಂ।
ತನಗಳವಟ್ಟ ನೀತಿಯೆ ಪರಾರ್ಥಮೆ ತನ್ನ ಭುಜಾರ್ಜಿತಾರ್ಥಮಾ॥
ಳ್ದನ ಮಹಿಮೋನ್ನತತ್ವಮೆ ನಿಜೋನ್ನತಿಯಾಶ್ರಿತತುಷ್ಟಿ ತನ್ನದೆಂ।
ದೆನಿಪ ನೆಗಲ್ತೆ ಪೆರ್ಚೆ ಸಲೆ ಜೀವಿಸು ಕೇಶವದಂಡನಾಯಕಾ ॥ 937 ॥

## 179 ಕಡೂರು 51 [1169]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ನಾಕನು ನಾಕೇಶ್ವರದೇವರನ್ನು ಪ್ರತಿಷ್ಠೆಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ತುಳುನಾಡಾಮಲೆನಾಡು ಕೊಂಕಣಮೆರಟ್ಟ್ಕೊಂಗಂಗಪಾಂಡ್ಯೋರ್ವಿ ಸಿಂ।
ಹಳಮಾ ಚೋಳನ ದೇಶಮಾಂಧ್ರವಿಷಯಂ ಕಾಂಚೀಪುರಂ ಕೂಡೆ ಕುಂ॥
ತಳದೇಶಂ ತೆಱೆದೆತ್ತ ಬಿಟ್ಟವೆಸಕೆಯ್ದಿರ್ಪಂತು ದುರ್ವಾರದೋ।
ರ್ಬಳದಿಂ ವಿಷ್ಣುನೃಪಾಳನಾಳ್ವನಿವನಂ ಪೋಲ್ವನ್ನರಾರ್ ಭೂಭುಜರ್ ॥ 938 ॥

ಜಳನಿಧಿಯಂ ಕೆಸರ್ಮಸಗೆ ಕೂಡೆ ಕಲಂಕುವ ಬಾಡಬಾಗ್ನಿಯಂ।
ತಳದೊಳಗಿದ್ದಲಾಗೆ ಪೊಸೆದಿಕ್ಕುವ ಶೇಷನ ಕಂಠನಾಳಸಂ॥
ವಳನದೆ ನಿನ್ನ ನಂಜನುಗುಳೆಂದು ಮುಳಿಪ್ಪ ಪೊಡರ್ಪನಾವಗಂ।
ಮುಳಿದೊಡೆ ತೋಱುವಂ ವಿಜಯವರ್ಧನನೀ ಕಲಿವಿಷ್ಣುವರ್ಧನಂ ॥ 939 ॥

ಇನನೊರ್ವಂ ಪೊಱಗಾಗೆ ಪೇಱ್ ಪುದುವೆ ತೇಜಂ ಕ್ಷತ್ರಿಯಂಗರ್ಕನಂ।
ದನನೊರ್ವಂ ಪೊಱಗಾಗೆ ಪೇಱ್ ಪುದುವೆ ದಾನಂ ಭೂಭುಜಂಗಬ್ಜಗ॥
ರ್ಭನುಮೊರ್ವಂ ಪೊಱಗಾಗೆ ಪೇಱ್ ಪುದುವೆ ಚಾತುರ್ಯಂ ನೃಪಂಗೆಂದು ಮೆ।
ಚ್ಚನಿವಂ ಮತ್ತಿನ ಭೂಪರಂ ನೃಪವರ ಶ್ರೀರೂಪನಾರಾಯಣಂ ॥ 940 ॥

ಸಾಹಸದೊಳ್ ಧರಾಧರಧರಂ ಭುಜವೀರ್ಯನಿಜಪ್ರತಾಪಸಂ।
ದೋಹದೊಳರ್ಜುನಂ ಬಳವಿರೋಧಿನೃಪಾಳಸಮಸ್ತ ಸೈನಿಕ॥
ವ್ಯೂಹಮನಾವಗಂ ತವಿಪ ಚಂಡಪರಾಕ್ರಮನೆಂದೊಡೀ ರಣೋ।
ತ್ಸಾಹಜಯಾಂಗನಾಸಕತವಿಷ್ಣುನೃಪಾಳನೊಳಾರಿದಿರ್ಚುವರ್ ॥ 941 ॥

ನಾರಸಿಂಹ I

ಧುರದೊಳ್ ಬಂದುಱದೊಡ್ಡಿ ನಿಂದರಿಬಳವ್ರಾತಕ್ಕೆ ಕೆಯ್ಯಾಂತು ನಿಂ।
ದರಿಪತ್ನೀಪ್ರಕರಕ್ಕೆ ವಾರವನಿತಾನೀಕಕ್ಕೆ ಗಂಭೀರಸಾ॥
ಗರನಪ್ಪಂ ನರಸಿಂಹನಾಂತಿಱಿಯಲೀಯಲ್ ಸೋಲಿಸಲ್ ಬಲ್ಲನಾ।
ಹರಿಪುತ್ರಂ ಹರಿಪುತ್ರನಾ ಹರಿಸುತಂ ತಾನೆಂದೊಡೇವಣ್ಣಿಪೆಂ ॥ 942 ॥

ರಣರಾಗೋದ್ರೇಕದುರ್ಕಂ ಬಗೆಯದೆ ಬಗೆದಂತೊಡ್ಡಿದಂದನ್ಯರಂತಾ।
ಕ್ಷಣದಿಂದಾಶ್ಚರ್ಯಮಪ್ಪಂತೆಱಗಿ ಬಱಸಿಡಿಲ್ ಪೊಯ್ವವೋಲ್ ಪೊಯ್ದು ಪುಷ್ಯ॥
ತ್ತೃಣುತಾಂತಾಕ್ಷುಣ್ಣಪಕ್ಷದ್ವಿಮುಖಕಬಳನವ್ಯಗ್ರ ಮಂಡಳಾಗ್ರೋ।
ಲ್ಬಣಚಂಚಚ್ಚಂಚುವಿಂದಂ ತಱಿದು ಕೆದಱನೇ ಗಂಡಭೇರುಂಡಭೂಪಂ ॥ 943 ॥

ನಾಕನ ತಂದೆ ಮದ್ದಿರಾಜ

ಕನಕಾದ್ರೀಂದ್ರಮನುನ್ನತಿಕ್ಕೆ ಜಲಧಿವ್ರಾತಂಗಳಂ ಗುಣ್ಪು ಭೂ।
ವಿನುತೌದಾರ್ಯಮನಲ್ಪಕಲ್ಪಕುಜಮಂ ಪೆಂಪಂಬರಾಭೋಗಮು॥
ದ್ಯುನದೀನಂದನನಂ ವಿನೂತಚರಿತಂ ಕೀೞ್ಮಾಡೆ ಮೇಲ್ಮಾಡಿದಂ।
ಜನತಾನಂದಮನಿಂದುಸುಂದರಯಶಶ್ರೀಮದ್ದಿರಾಜದ್ವಿಜಂ 944 ॥

ನಾಕ

ನರಸಿಂಹಕ್ಷಿತಿಪಪ್ರಸಾದವಿಳಸತ್ಸರ್ವಾಧಿಕಾರಂ ಪರಾ।
ರ್ಥರತಂ ನಂಟರ ಮೇರು ಮಿತ್ತು ಮುಳಿವಂಗಾಳ್ದಂಗೆ ಸಂಪತ್ಕರಂ॥
ಪುರುಷಾರ್ಥಕ್ಕೆಱವಟ್ಟು ಬೆಟ್ಟು ವಿನಯಕ್ಕಾರ್ಪಿಂಗಡರ್ಪೊಳ್ಳಿನಾ।
ಗರಮೆಂಬೀಗುಣದಿಂ ಗುಣಂಗೊಳಿಸಿದಂ ಭೂಲೋಕಮಂ ನಾಕಮಂ ॥ 945 ॥

ಅಸದಾಳಾಪದೊಳಪ್ಪುದೇಂ ಸುರತರುವ್ರಾತಂಗಳೊಂದಾಗಿ ಸಂ।
ತೊಸದಿಂದರ್ಥಿಗೆ ಸರ್ವಶಕ್ತಿಸಹಿತಂ ಮಾೞ್ಪಂತುಟಂ ಮಾಡದೇ॥
ವಿಸರದ್ಧಂತಮರೀಚಿಕೇಸರಲಸದ್ವಕ್ತ್ರಾಬ್ಜಭಾಸ್ವದ್ದಯಾ।
ರಸಸಂಮಿಶ್ರಮೃದೂಕ್ತಿಯುಕ್ತಮೃದಧೀರಾಳೋಕನಂ ನಾಕನಾ ॥ 946 ॥

ಸುರಭಿ ತೊರೆದತ್ತು ಸುರಭೂ। ಮಿರುಹಂ ಫಲಮಾಯ್ತು ಸಿದ್ಧರಸದೊಂದು ಪೊನಲ್।
ಪರಿದುದೆನೆ ಧರೆಗೆ ಧನಮಂ। ಪಿರಿದಿತ್ತ ನಾಕಿ ತತ್ಪ್ರತಿಷ್ಠೋತ್ಸವದೊಳ್ ॥ 947 ॥

## 180 ಐಹೊಳೆಯ ಶಾಸನ [1169]

(ಇಂಡಿಯನ್ ಅಂಟಿಕ್ವರಿ IX, 97)

ಈ ಅಸಮಗ್ರಶಾಸನದಲ್ಲಿ ಸಿಂದರಾಜನಾದ 2 ನೆಯ ಚಾಮುಂಡನ ಮತ್ತು ಅವನ ಹೆಂಡತಿ ಸಿರಿಯಾದೇವಿಯ ಸ್ತುತಿ ಇದೆ.

ಸಮುದ್ರ

ಉದಿತೇಂದುಶ್ರೀನಿವಾಸಂ ಶರಣಗತಕುಭೃದ್ರಾಜಿತಂ ನೂತ್ನರತ್ನಾ।
ಭ್ಯುದಯಕ್ಷೇತ್ರಂ ಮುಕುಂದಪ್ರಿಯುಶಯನತಳಂ ಕೂರ್ಮಪಾಠೀನನಕ್ರೋ॥
ನ್ಮದಮಾತಂಗಾಳಿಕೇಳೀಚಳಿತಜಳಚರಾಸ್ಫಾಳಕಲ್ಲೋಳಮಾಳಾ।
ನದನದ್ಯಂಭಃಪ್ಲವಾಲಂಕರಣನೃಜಗದಾವಾಸಮುದ್ರಂ ಸಮುದ್ರಂ ॥ 948 ॥

ಚಾಮುಂಡ

ಅನತಾರಾತಿನೃಪಾಳರಂ ಬೆದಱಿ ಬೆಂಕೊಂಡರ್ಥಮಂ ವಸ್ತುವಾ।
ಹನಮಂ ಪೆಂಡಿರ ತಂಡಮಂ ಗುಡಿಗಳಂ ಗೂಡಾರಮಂ ನಾಡುಮಂ॥
ಮುನಿಸಿಂದಿರ್ಕುಟಿಗೊಳ್ವುದೆಂಬುದೆ ವಿನೋದಂ ತನ್ನೊಳೆಂದಂದು ಪೇಟ್।
ಘನಶೌರ್ಯಂಬಡೆದಿರ್ಪರಾರ್ ತೊಡರ್ದು ಚಾಮುಂಡಾವನೀಪಾಳನೊಳ್ ॥ 949 ॥

ಸಿರಿಯಾದೇವಿ

ಪತಿಭಕ್ತಿಯಿಂದರುಂಧತಿ। ಮತಿಯಿಂ ಭಾರತಿ ಸುಭಾಗ್ಯದಿಂ ರತಿಯೆಂದೀ।
ಕ್ಷಿತಿಯೊಳ್ ಚಮುಂಡಭೂಪನ ।ಸತಿ ಸಿರಿಯಾದೇವಿಯುಂ ಜಗು ಬಣ್ಣಿಸುಗುಂ ॥950॥

## 181 ಕಡೂರು 30 [1170]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಸೋಮಗೌಡನು ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಮಲ್ಲ

ಆಂತೊಡೆ ಕೊಂದನೆಂದೆ ಬಗೆ ವೈರಿನಿಕಾಯಮನರ್ಥಿ ಕೋಟಿ ಕೆ।
ಯ್ಯಾಂತೊಡೆ ಕೊಟ್ಟನೆಂದೆ ಬಗೆ ಬೇಡಿದುದಂ ಶರಣೆಂದು ಬಂದರಂ॥
ಭ್ರಾಂತಿಯೆ ಕಾದನೆಂದೆ ಬಗೆ ವೀರದ ಚಾಗದ ಕಾವ ಪೆರ್ಮೆಗಾ।
ವಂ ತೊಣೆಯೆಂದು ಬಣ್ಣಿಪರು ಮಲ್ಲನನುದ್ಘಯಶಕ್ಕೆ ನಲ್ಲನಂ ॥ 951 ॥

ಒಕ್ಕಲು., ಮಲ್ಲಮನೊಳಿಕ್ಕತುಳಕ್ಕಿಱಿವಲ್ಲಿ ವೈರಿ ನಿ।
ನ್ನಿಕ್ಕಿದ ವಜ್ರದ.ಪುರಕೆ ಸೀಸಕವೊಂದಿದ ಬಾಹುರಕ್ಕೆ ತಾ॥
ಮಕ್ಕಟ ಕಾಯವುಟ್ಟ ನಿಱಿ ಬಿಟ್ಟ ಸಿರಂ ಮುಗಿದಿರ್ದ ಕೆಯ್ ಸಮಂ।
ತಿಕ್ಕಿದ ಕೆಯ್ದು ಹೊಕ್ಕ ಜಳಮಪ್ಪಿದ ಲಿಂಗಮೆ ಕಾವುವಾಜಿಯೊಳ್ ॥ 952 ॥

## 182 ದಾವಣಗೆರೆ 32 [1170]

ಇದರಲ್ಲಿ ವಿಜಯಪಾಂಡ್ಯದೇವನ ಆಳಿಕೆಯಲ್ಲಿ ನಾಗತಿಯರಸ ಮುಂತಾದವರು ಕೂಡಲೂರ ಸ್ವಯಂಭು ಶಂಕರನಾರಾಯಣದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿಜಯಪಾಂಡ್ಯ

ಮಿಱುವೆವೆಂಬ ಮಂಡಳಿಕರಿಲ್ಲದಟಿಂದೆ ಬಯಲ್ಗೆವಂದು ಮೆ।
ಯ್ದೋಱುವೆವೆಂಬ ವಿಕ್ರಮಿಗಳಿಲ್ಲ ಕುನುಂಗಿ ಕಟಿಲ್ದಟಿಲ್ದು ಕಾ॥
ಯ್ಪಾಱಿ ಪೊಡರ್ಪುಗೆಟ್ಟು ಬೆಸಕೆಯ್ವವರಲ್ಲದೆ ಮಿಕ್ಕ ತನ್ನ ಕಾ।
ಯ್ಪೇಱಿದ ತೇಜದಿಂ ವಿಜಯಪಾಂಡ್ಯಮಹೀಪನಿದೇಂ ಪ್ರತಾಪಿಯೋ ॥ 953 ॥

ಮೀಱಿ ಮದವೇಱಿ ಗೆಲೆ ತಲೆ। ದೋಱಿ ರಣೋತ್ಸವದಿನಾಂತು ನಿಜ ಭುಜಬಳಮಂ।
ತೋಱಿದೊಡೆ ಜವನ ಮುಳಿಸಂ। ತೋಱಿದೆ ಮಾಣ್ದಪನೆ ವಿಜಯಪಾಂಡ್ಯ ಮಹಿಪಂ ॥ 954 ॥

ಪೆರ್ಮಾಡಿದಂಡನಾಥ

ಬೆಸನೇನೆನ್ನದ ವೀರರಿಲ್ಲ ಭಯದಿಂ ಮೂವಿಟ್ಟೆಯಿಂ ಬಂದು ಜೀ।
ವಿಸದಿರ್ಪುದ್ಧತರಿಲ್ಲ ಪೇಟ್ದ ಬೆಸನಂ ಮಾರ್ಕೊಂಡು ಕೆಯ್ವಾರ್ದು ಬಾ॥
ಟ್ವಿ ಸಮುಗ್ರಾರಿಗಳಿಲ್ಲೆನಲ್ ವಿಜಯಪಾಂಡ್ಯಶ್ರೀಮಹೀಪಂಗೆ ಸಾ।
ಧಿಸಿದಂ ರಾಜ್ಯಮನೇಂ ಪ್ರತಾಪನಿಧಿಯೋ ಪೆರ್ಮಾಡಿದಂಡಾಧಿಪಂ ॥ 955 ॥

ನಾಗತಿಯರಸ

ಮದಲೇಖಾವಿಳಸಿತಸುರ। ರದನಿಗೆ ಸೊರ್ಕುದಯಿಪಂತೆ ರಿಪುವನಜವನ।
ಪ್ರದಳನಪಟು ಕೀರ್ತಿವ್ಯಾ। ಪ್ತದಿಶಂ ನಾಗತಿನೃಪಾಲನಂದುದಯಿಸಿದಂ ॥955 ಅ॥

ಎರೆಗೊಳ್ವುದಖಿಳವಿದ್ವ।ದ್ದರಿದ್ರತಾಪಿಶಿತಮಂ ದ್ವಿಷದ್ರಾಜಮನೋ।
ಹರಮಂಡಳಮುಂಮನವನೀ। ವರನಾಗತಿಯರಸನತುಳಬಳಭುಜಭುಜಗಂ ॥ 956 ॥

**183 ಹಾಸನ 53 [1170]**

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಹಾಪ್ರಧಾನ ಹೆಗ್ಗಡೆ ಕಾಳಿಮಯ್ಯನು ಜಕ್ಕಿಯನಹಳ್ಳಿಯಲ್ಲಿ ಕಾಳೇಶ್ವರದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಧನದಂ ದಕ್ಷಿಣವಾಯುವೇಕೆ ತಡೆದತ್ತೇಂ ತೀಡಿತಿಲ್ಲಿನ್ನುಮೆಂ।
ಬಿನೆಗಂ ವೈರಿಕರೋಟಿಕೋಟಿಮುಖನಾಸಾರಂಧ್ರದೊಳ್ ಮಂದ್ರನಿ॥
ಸ್ವನಮುಣ್ಮಲ್ ಮಳಯಾನಿಳಂ ಸುಟಿಿದು ಕಾಲಕ್ಷೇಪಮಂ ವಿಷ್ಣುಭೂ।
ಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀನದೀತೀರದೊಳ್ ॥ 957 ॥

ಸ್ಥಿರನೇ ಕೆಯ್ಯೊಳೆ ಧಾತ್ರಿಯಂ ನಿಲಿಸಿದಂ ತೇಜಸ್ವಿಯೇ ವಹ್ನಿಯಂ।
ಕೊರಗಿಪ್ಪಂ ಕುಡಲಾರ್ಪನೇ ಕನಕಶೈಲಂ ದೂರಮಾಗಿರ್ದು ನಿ॥
ತ್ತರಿಸಿತ್ತೇಂ ಶುಚಿಯೇ ನಿರೀಕ್ಷಿಸಿದವರ್ ನಿಷ್ಪಾಪಿಗಳ್ ಚೆಲ್ವನೇ।
ಹರನಂ ಮೋಹಿಸಲೆಂತುಮಾರ್ಪನಧಿಕಂ ಶ್ರೀವಿಷ್ಣುಭೂಪಾಳಕಂ ॥ 958 ॥

ಬಳಸುತ್ತುಂ ಕೀರ್ತಿಸುತ್ತುಂ ಸುಟಿಿದು ಸುಟಿಿದು ತಟ್ಟಿಸಿರಲ್ ಕೂಡೆ ಶೇಷೋ।
ಜ್ವಳಕಾಯಂ ತೀವಿದಾ ಪೇಟಿಿಗೆವೊಲಿರೆ ಸರೋಜಾತಜಾಂಡಂ ಧರಿತ್ರೀ॥
ತಳಮೆಲ್ಲಂ ತನ್ನ ದೀರ್ಘಾಯುವನೆ ಪರಸಿ ಪರ್ದೇಟಿಿನಂ ಕ್ಷತ್ರಧರ್ಮೋ।
ಜ್ವಳರವ್ಯೋತ್ತುಂಗಹರ್ಮ್ಯಾರ್ಪಿತಮಣಿಕಳಶಂ ವಿಷ್ಣು ಪೆತ್ತಂ ಬೆಡಂಗಂ॥ 959 ॥

ಪದದೊಳ್ ಕೂರ್ಮಸ್ವರೂಪಂ ನಯನಯುಗಳದೊಳ್ ಮತ್ಸ್ಯರೂಪಂ ಘನಗ್ರೀ।
ವದೊಳಾದಿಕ್ರೋಡರೂಪಂ ನಡುವಿನೊಳೆ ನೃಸಿಂಹತ್ವಮಾತ್ಮಪ್ರಭಾವಾ॥
ಸ್ಪದದೊಳ್ ರಾಮತ್ರಯತ್ವಂ ಮತಿವಿಕಸನದೊಳ್ ಬುದ್ಧರೂಪಾಗಿ ಗುಜ್ಜಾ।
ಗದ ಕಲ್ಕಿತ್ವಕ್ಕೆ ಮೆಯ್ದಾರದ ಹರಿಯೆನಿಪಂ ವಿಷ್ಣು ಜಿಷ್ಣು ಕ್ಷಿತೀಶಂ ॥ 960॥

ಸ್ತುತಿವಚನಂಗಳಲ್ತು ರಿಪುಕೋಟಿಗೆ ಭೀಮಪರಾಕ್ರಮಂ ದಯಾ।
ಸತಿ ಸತಿಯುಪ್ಪ ಕಾರಣದೆ ತಾನೆ ಕೃಪಂ ಮನವೊಲ್ದು ಬೇಳ್ಪವ॥
ರ್ಗತಿಶಯಮಾಗಲಿತ್ತು ವಿಪುಲಾರ್ಜುನಕೀರ್ತಿಯೆನಲ್ಕೆ ಬೇಱೆ ಭಾ।
ರತಕಥೆಯೆಂಬುದೇಕೆ ಸಲೆ ವಿಷ್ಣುನೃಪಾಳಚರಿತ್ರ ಸಾಲದೇ ॥ 961 ॥

ನಾರಸಿಂಹ I

ಅಹಿಪತಿಯಂತೆ ಭೋಗಿ ಶಶಿಯಂತೆ ಕಲಾಧರನೀಶನಂತುಮಾ।
ಸಹನಮರೇಂದ್ರನಂತೆ ವಿಭವಾನ್ವಿತನುನ್ನತಮೇರು ಸೂರ್ಯನಂ॥
ತಹಿಮಕರಪ್ರಭಾವನಮರೇಜ್ಯನವೋಲ್ ಬಹುತತ್ವಕೋವಿದಂ।
ಮಹಿನುತನೆಂದು ಬಣ್ಣಿಪುದು ಧಾತ್ರಿಯೊಳೀ ನರಸಿಂಹದೇವನಂ ॥ 962 ॥

ಕಾಳಿಮಯ್ಯ

ವನಧಿಗದೊಂದೆ ಗುಣ್ಪು ಸಹಜಂ ಕನಕಾದ್ರಿಗದೊಂದೆ ಪೆಂಪು ಮ।
ತ್ತನುಪಮದಾನವೊಂದೆ ನಿಜಮಾ ದಿವಿಜಕ್ಷಿತಿಜಕ್ಕೆ ನೋಟಿಸ್ಪೊಡಾ॥
ವನಧಿಯ ಗುಣ್ಪು ಮೇರುವಿನ ಪೆಂಪು ಸುರದ್ರುಮದಾರ್ಪದಾವಗಂ।
ತನಗೆನಲೀ ಧರಾತಳದೊಳಾರ್ ದೊರೆ ಹೆಗ್ಗಡೆ ಕಾಳಿಮಯ್ಯನೊಳ್ ॥ 963 ॥

ಜಡಿ ರಿಪುರಕ್ತವಾರಿಯೊಳಗಾಜಳಕೇಳಿಗೊಡರ್ಚದಿರ್ದೊಡಂ।
ಜಡಿ ಕಡಿದಿಕ್ಕಿ ವೈರಿಭಟಖಂಡದೊಳಿಂಡೆಯನಾಡದಿರ್ದೊಡಂ॥
ಜಡಿ ಸಮದೇಭಕುಂಭಯುಗಮಂ ಬಿಡೆ ಸೌಳನೆ ಸೀಳದಿರ್ದೊಡಂ।
ಜಡಿಯೆನುತಿರ್ಪ ಕಾಳನ ಕರಾಸಿ ಕರಂ ಜಡಿಯುತ್ತುಮಿರ್ಪುದು ॥ 964 ॥

ಕನಕಾದ್ರೀಂದ್ರಮನುನ್ನತಿಕ್ಕೆ ವಿಭವಂ ದೇವೇಂದ್ರನಂ ಮೂರ್ತಿ ಕಾ।
ಮನನಾರ್ತೀವ ಗುಣಂ ದಧೀಚಿ ಬಲಿ ಗುತ್ತಂ ಚಾರುದತ್ತಂಗವೊಂ।।
ದಿನಿತಾನುಂ ಮಿಗಿಲೆಂದೊಡೇವೊಗಟ್ಟಿ ಪೆಂ ವಿದ್ವಜ್ಜನಾಧಾರನಂ।
ವಿನಯಾಂಭೋನಿಧಿ ಕಾಳಿಮಯ್ಯನನತಿಪ್ರಖ್ಯಾತನಂ ಧಾತ್ರಿಯೊಳ್ ॥ 965 ॥

ಜನವಿನುತಂ ವಿವೇಕನಿಧಿ ಸಚ್ಚರಿತಾಶ್ರಯನಾತ್ಮವಂಶವ।
ರ್ಧನನಭಿಮಾನಮೇರು ಸುಜನಾಗ್ರಣಿ ದಾನವಿನೋದಿ ಪುಣ್ಯಭಾ॥
ಜನನನವದ್ಯನೆಂದು ಧರೆ ಬಣ್ಣಿಪುದಟ್ಟಿಱಿಳೆಯ್ದೆ ಕಾಳಿಮ।
ಯ್ಯನನಿನತೇಜನಂ ಗುಣಿಸಮಾಜನನಾಶ್ರಿತಕಲ್ಪಭೂಜನಂ ॥ 966 ॥

ಸಮರದೊಳಾಂತರಾತಿನರನಾಥವಧೂವದನಕ್ಕೆ ಹಾರವಂ।
ಕಮಳದಳಾಕ್ಷಿ ಯುಗ್ಮದೊಳೆ ಕಂಕಣಮೊಪ್ಪಿರೆ ರಮ್ಯಮಪ್ಪ ಕುಂ॥
ಕುಮಘನಪರ್ವತೋಪಮಕುಚಂಗಳೊಳಂದುಗೆಮಾಡಿದೊಂದು ವಿ।
ಕ್ರಮಘನಶೌರ್ಯದುನ್ನತಿಗೆ ಸಲ್ಲದೆ ಹೆಗ್ಗಡೆಕಾಳಿಮಯ್ಯನೊಳ್ ॥ 967 ॥

ಮಿಸುಗುವ ತಾರಕಾದ್ರಿರುಚಿಯಿಂದಮೃತಾರ್ಣವಫೇನರೋಚಿಯಿಂ।
ದೆಸೆಗಳನಾವಗಂ ಬೆಳಗುತಿರ್ಪ ಹಿಮಾಕರಬಿಂಬದಿಂ ವಿರಾ॥
ಜಿಸುವಮರೇಂದ್ರದಂತಿಯ ತನುಚ್ಛವಿಯಿಂ ಮಿಗಿಲಾಗಿ ಪರ್ವಿ ರಾ।
ಜಿಸುವುದು ಕೀರ್ತಿ ಧಾತ್ರಿಯೊಳಗೀ ವಿಭು ಹೆಗ್ಗಡೆ ಕಾಳಿಮಯ್ಯನಾ ॥ 968 ॥

## 184 ಸೊರಬ 345 [1170]

ಇದರಲ್ಲಿ ಕಾದಂಬಸೋಯಿದೇವನ ಆಳಿಕೆಯಲ್ಲಿ ತೆವರತೆಪ್ಪದ ಲೋಕಗೌಡನು ರತ್ನತ್ರಯ ದೇವರನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬನವಾಸಿಮಂಡಲ

ಬಳಸಿದ ನಂದನಾವಳಿಗಳಿಂ ಶುಕಸಂಕುಳದಿಂ ಪಿಕಾಳಿಯಿಂ।
ಬೆಳೆದೆಱಗಿರ್ದ ಶಾಳಿವನದಿಂ ಭ್ರಮರಾಳಿಯಿನಿಕ್ಷುವಾಟಿಯಿಂ॥
ತಿಳಿಗೊಳದಿಂ ಲತಾಭವನದಿಂ ಕಮಳಾಕರದಿಂ ಕುಮುದ್ವತೀ।
ಕುಳದಿನಿದೇಂ ಮನಂಗೊಳಿಪುದೋ ಸತತಂ ಬನವಾಸಿ ಮಂಡಲಂ ॥ 969 ॥

ಸೋಯಿದೇವ

ಅದಟರ್ ಮೆಯ್ಯಿಕ್ಕೆ ಬೀರರ್ ಬಿರುದನುೞಿದು ಕುಂಬಿಕ್ಕೆ ವಿದ್ವಿಷ್ಟಭೂಪರ್।
ಮದಮಂ ಬಿಟ್ಟಿಕ್ಕೆ ಶೇಷಾಕ್ಷತಮನೊಸೆವರೋತಿಕ್ಕೆ ಸರ್ವಸ್ವಮಂ ಬ॥
ಲ್ಲಿದರುಂ ತಂದಿಕ್ಕೆ ಮಾಱಾಂತವನಿಪಸತಿಯರ್ ಕಣ್ಣ ನೀರಿಕ್ಕೆ ಪೂಣ್ದಿ।
ಕ್ಕಿದನಾ ಚಂಗಾಳ್ವಧಾತ್ರೀಪತಿಗೆ ನಿಗಳಮಂ ಸೋವಿದೇವಕ್ಷಿತೀಶಂ ॥ 970 ॥

ಲೋಕಗೌಡ

ಆತನ ಮಾತೆ ಮಾತು ಧರೆಗಾತನ ಪೂಣ್ಕೆಯೆ ಮಿಕ್ಕ ಪೂಣ್ಕೆ ಸಂ।
ದಾತನ ಬಂಟೆ ಬಂಟು ನೆಗಟ್ಬಾತನ ಬುದ್ಧಿಯೆ ಶುದ್ಧಬುದ್ಧಿ ಮಿ॥
ಕ್ಕಾತನ ಸಾಹಸಂ ನೆಱೆಯೆ ಸಾಹಸಮೆಂದಭಿವರ್ಣಿಕುಂ ಧರಿ।
ತ್ರೀತಳಮಾಗಳುಂ ತೆವರತೆಪ್ಪದ ನಾಟ್ಟಿಭು ಲೋಕಗೌಂಡನಂ ॥ 971 ॥

ಎತ್ತಿಸಿದಂ ಜಿನೇಂದ್ರಗೃಹಮಂ ಧರೆ ಬಣ್ಣಿಸಲೆಯ್ದೆ ತನ್ನ ಮಂ।
ಯ್ವತ್ತಿಸಿದಂ ಪ್ರಜಾಪ್ರಕರಮಂ ರಿಪುವರ್ಗದ ಬಾಯ ಬಾಗಿಲೊಳ್॥
ತೆತ್ತಿಸಿದಂ ಪಲರ್ ಬೆದಱೆ ಕೂರಲಗಂ ನಿಜಕೀರ್ತಿವಲ್ಲಿಯಂ।
ಪತ್ತಿಸಿದಂ ದಿಗಂತಮನಿದೇಂ ಕೃತಕೃತ್ಯನೊ ಲೋಕನುರ್ವಿಯೊಳ್ ॥ 972 ॥

## 185 ಹಾಸನ 66 [ಸು. 1170]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಹಾಪ್ರಧಾನ ಹೆಗ್ಗಡೆ ಲಕುಮಯ್ಯನು ಕೇಶವದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಲಕ್ಷ್ಮ

ಉತ್ತರಮಾಗೆ ಹಸ್ತಮಿಱಿವೀವೆಡೆಯೊಳ್ ಜಯಲಕ್ಷ್ಮಿ ಲಕ್ಷ್ಮಲೋ।
ಕೋತ್ತರಮಾಗಿರಲ್ ನಡೆವ ಲಕ್ಷ್ಮಚಮೂಪತಿಯಾಳ್ದನಟ್ಕಱಿಂ ॥
ಪೆತ್ತು ಜನಂಗೆಳೆಯ್ದೆ ಮುದದಿಂ ಪೊಗಟುತ್ತಿರೆ ಭುಕ್ತಿಮುಕ್ತಿಗೆಂ।
ದಿತ್ತನು ಭಕ್ತಿಯಿಂದೆಸೆವ ಕೇಶವಮೂರ್ತಿಗನಂತಭೂಮಿಯಂ ॥ 973 ॥

## 186 ಅರಸಿಯಕೆರೆ 38 [1171]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಜಯಗೊಂಡಪುರದ ಜನರು ಸಿರಿಧರದೇವರ ನಂದಾದೀವಿಗೆಗೆ ಹೊನ್ನನ್ನು ಕೊಟ್ಟಂತೆ ಹೇಳಿದೆ.

### ಹೊಯ್ಸಳವಂಶ

ಸ್ವಸ್ತಿ ಶ್ರೀಯಿರ್ಪುತ್ತಮ। ವಾಸ್ತು ಜಯ ಶ್ರೀಯ ವಿಲಸಿತಾವಾಸಂ ಲೋ।
ಕಸ್ತುತ್ಯೆ ಯಶೋವನಿತೆಯ। ವಿಸ್ತಾರಸ್ಥಾನಮೆಸೆವ ಹೊಯ್ಸಳವಂಶಂ ॥ 974 ॥

### ವಿಷ್ಣುವರ್ಧನ

ಮುನಿಸಿಂದರುಣತೆ ಕಡೆಗೆ। ಣ್ಗನಿಸೊದವೆ ವಿರೋಧಿನರಪಸಪ್ತಾಂಗಂ ವಿ।
ಷ್ಣುನೃಪಾಳಂಗಪ್ಪುವು ನೋ। ಡನುಪಮುಮುವನಳವಿಯಿತರರಳವಿಯೆ ಜಗದೊಳ್
॥975॥

ಬುಧಲೋಕಾಶ್ರಯನೆಂಬ ತಾರ್ಕ್ಷ್ಯರಥನೆಂಬಬ್ಜಾಯತಾಕ್ಷಂ ದಲೆಂ।
ಬ ಧರಾಧಾರಕನೆಂಬ ಭೋಗಯುತನೆಂಬುದ್ಯದ್ಬಲಾನ್ವಿತನೆಂ॥
ಬ ಧರಿತ್ರೀವರನೆಂಬ ಲೋಕನುತನೆಂಬೀ ಪೆರ್ಮೆಯಿಂ ನೋಡೆ ವಿ।
ಷ್ಣುಧರೇಶಂ ಸಲೆ ವಿಷ್ಣುವೋಲ್ ಸೊಗಯಿಪಂ ಲಕ್ಷ್ಮೀಮನೋವಲ್ಲಭಂ ॥ 976 ॥

ನಾರಸಿಂಹ I

ಕದನದೊಳಾಂತರಾತಿಗಳ ದಂತಿಯ ದಂತಮನೊತ್ತಿ ಕಿಟ್ಟು ತ।
ದ್ವಿದುವನೆ ಪೊಯ್ಯೆ ಪೋಟ್ಟು ಪೊಱಪೊಣ್ಮೆ ಸರಕ್ತಕಮೌಕ್ತಿಕಂಗಳಾ॥
ಪದದೊಳವಂ ಜಯಾಂಗನೆಗೆ ಹಾರಮನೊಪ್ಪಿರೆ ಮಾಟ್ಪನೆಂದೊಡಾರ್।
ಕದನದೊಳಾಂಪಿದಿರ್ಚುವದಟರ್ ಜಗದೊಳ್ ನರಸಿಂಹಭೂಪನಂ ॥ 977 ॥

ಕದನದೊಳಿದಿರ್ಚಿದದಟರ। ಮದರದನಿಯ ಬಿದುವಿನಲ್ಲಿ ನಟ್ಟಿ ಸರಲ್ ಬಾ।
ಲದ ಮೊದಲೊಳುಚ್ಚಳಿಸುವೊಂ। ದದಟಾ ನೃಪನಾರಸಿಂಹದೇವಂಗೆ ನಿಜಂ ॥ 978॥

ಬಲ್ಲಾಳ II

ಅನುಪಮರಣನಿಸ್ತಾರಕ। ನನೂನಶಕ್ತ್ಯನ್ವಿತಂ ವಿಚಾರಕ್ಷಮನೆಂ।
ಬ ನೆಗೞ್ತೆಯಿಂದೆ ಬಲ್ಲಾ। ಳನೃಪಾಳಂ ಕಾರ್ತಿಕೇಯನಂತೊಪ್ಪಿರ್ಪಂ ॥ 979 ॥

ಜಯಗೊಂಡಪುರ

ತುಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋಡೆನಿಪ್ಪ ಪೆ।
ರ್ಗ್ಗಿಡಿಕೆ ಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ॥
ಮೆಱೆವಮರಾಲಯಂ ಬಹುಗೃಹಂಗಳ ಗುಣ್ಪೆವಱಿಂದೆ ಚೆಲ್ವು ಕ।
ಣ್ದೆಱೆದವೊಲೀ ಜಗಕ್ಕೆ ಜಯಗೊಂಡಪುರಂ ನಿಸದಂ ವಿರಾಜಿಕುಂ ॥ 980 ॥

ನಾಗದೇವ

ಹೃದಯಕಳಂಕನಲ್ಲದ ಜಡಾತ್ಮಕನಲ್ಲದ ಶೀತರೋಚಿಯೆಂ।
ಬುದು ಗುರುಗೋತ್ರಶತ್ರುವಣಮಲ್ಲದ ಕೌಶಿಕನಲ್ಲದಿಂದ್ರನೆಂ॥
ಬುದು ವಿಪರೀತನಲ್ಲದ ಕುಜನ್ಮಕನಲ್ಲದ ಕಲ್ಪವೃಕ್ಷಮೆಂ।
ಬುದು ವಿಬುಧಾಶ್ರಯೈಕನಿಧಿಯಂ ಧರೆ ದ್ಘಮ್ಮನ ನಾಗದೇವನಂ ॥ 981 ॥

**187 ಹೊಳೆಯ ನರಸೀಪುರ, 90 (ಅನುಬಂಧ), [1171]**

ಈ ವೀರಗಲ್ಲಿನಲ್ಲಿ ಕೊಂಗಾಳ್ವರಾಜನಾದ ತ್ರಿಭುವನಮಲ್ಲ ವೀರದುಡ್ಡ ಕೊಂಗಾಳ್ವದೇವನ ಆಜ್ಞಾನುಸಾರವಾಗಿ ತಮ್ಮಡಿಯ ರುದ್ರನು ಮೊಳತೆಯಬೀಡಿನ ಯುದ್ಧದಲ್ಲಿ ಕಾದಿ ಮಡಿದನೆಂದು ಹೇಳಿದೆ.

ತಮ್ಮಡಿಯ ರುದ್ರ

ಎರೆವರ್ಥಿಜನಕೆ ಸುರತರು। ನಿರುತಂ ಕಾಮಿನಿಯರಲ್ಲಿಗಭಿನವ ಕಾಮಂ ॥
ಪರಬಳಕೆ ಭೀಮಸೇನಂ। ಹರಪದಯುಗಭೃಂಗನೆನಿಪ ತಮ್ಮಡಿ ರುದ್ರಂ ॥ 982 ॥

ಕ್ಷುದ್ರತೆಯಿಲ್ಲದೆ ರಣದೊಳ್। ಭದ್ರಗಜಂ ಪರಿದು ತಾಗುವಂತರಿಬಳಮಂ ॥
ರೌದ್ರಾಕಾರದೆ ಕೊಲ್ಗುಂ। ರುದ್ರಂ ಕಾಳಾಗ್ನಿರುದ್ರನಂದದಿನಾಗಳ್॥ ॥ 983 ॥

ಧರಣೀಪತಿ ಕೊಂಗಾಳ್ವಂ। ಗನುವರವಾದೆಡೆಗೆ ಪರಿದು ತಮ್ಮಡಿ ರುದ್ರಂ ॥
ಪರಬಳವನಿಱಿದು ತಱಿದೊಡೆ। ಸುರಕಾಂತೆಯರುಯ್ದು ರವನನತಿಮುದದಿಂದಂ ॥984॥

## 188 ಚಿಕ್ಕನಾಯಕನಹಳ್ಳಿ 43 [1171]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಸಾಮಂತ ಬಿಟ್ಟಿಗ ಅವನ ತಾಯಿ ಶಾಂತಲೆ ಮುಂತಾದವರು ಮದ್ದುವದೇವನಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.

ಶಾಂತಲೆ

ಮರಕತವರ್ಣಮಂ ತರುಣವೇಣುತನುಚ್ಛವಿಯಿಂದೆ ವಜ್ರಮಂ।
ಸುರುಚಿರಮಪ್ಪ ಮುತ್ತೆನಿಪ ದಂತಚಯಂಗಳದೊಂದು ಕಾಂತಿಯಿಂ॥
ದುರಗಸದೃಕ್ಷಮಪ್ಪ ಕಚದಿಂ ಹರಿನೀಲಮನೊಪ್ಪೆ ಹೋಲ್ತುಳಂ।
ತಿರೆ ಸತಿ ರತ್ನದೊಂದೆಣೆಗೆ ವಾರಳೆ ಶಾಂತಲೆನಾರಿ ರೂಪಿನೊಳ್ ॥ 985 ॥

ಸಾಮಂತಬಿಟ್ಟಿಗ

ನಲಿದುಲಿದಟ್ಟಿಕೊಂಡು ಕವಿತರ್ಪ ವಿರೋಧಿಬಲಕ್ಕೆ ಭೀತಿಯಿಂ।
ನೆಲವಲನೆನ್ನದಲ್ಲದಿದು ಪೆರ್ವಲನೆನ್ನದೆ ದೋಃಪ್ರತಾಪದಿಂ॥
ಗಿಲಿಗಿಲಿಗಂಬವಾಡಿಸುವನಾಹವದೊಳ್ ಕಲಿಬಿಟ್ಟಿದೇವನಿ।
ನ್ನೆಲಗಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯಶೌರ್ಯನೊಳ್ ॥ 986 ॥

## 189 ಶಿಕಾರಿಪುರ 150 [1171]

ಈ ವೀರಗಲ್ಲಿನಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋವಿದೇವನ ಆಳಿಕೆಯಲ್ಲಿ ಹೆಲ್ಲಿಗನು ಕಳ್ಳರನ್ನು ಕೊಂದು ಸತ್ತನೆಂದು ಹೇಳಿದೆ.

ಉರವರಿಯಿಂದೆ ದೂರದೊಳೆ ತಾಗಿದ ವೀರಧನುರ್ಧರರ್ಕಳಂ।
ತ್ವರಿತದಿನೆಚ್ಚು ಕೂರ್ಗಣೆಗಳಿಂ ಧರೆಗಿಕ್ಕಿ ಕರಂ ಕಡಂಗಿ ಭೋ॥
ರ್ಗರೆದಿರದೆಯ್ದಿ ಗೇಣ್ಗಳನೆ ಕಿಟ್ಟಿಱಿವಂಕದ ನಾಯಕರ್ಕಳಂ।
ಸುರಿಗೆಯನಾಂತು ಕೊಂದು ಧುರದಲ್ಲಟಿದಂ ಪಡೆಮೆಚ್ಚೆ ಹೆಲ್ಲಿಗಂ ॥ 987 ॥

ಮೆಚ್ಚೆ ಮಗೆಂದಾಗಸದಿಂ। ಚೆಚ್ಚರಮಿಟಿತಂದು ಕೊಂಡುಪೋದರ್ ನಲವಿಂ।
ದಚ್ಚರಸೆಯರಾದರದಿಂ। ದಚ್ಚರಿವಡೆ ಭೂಜನಂಗಳಾ ಹೆಲ್ಲಿಗನಂ ॥ 988 ॥

## 190 ಕಡೂರು 66 [1172]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ಆಚಿರಾಜನು ಬ್ರಹ್ಮಸಮುದ್ರದಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಆಚಿರಾಜನ ತಂದೆ ಕೇಶವ

ಜಗತೀಮಂಡನಪುಂಡರೀಕನಯನಂ ಲಕ್ಷ್ಮೀಯುತಂ ಭೂರಿಸ।
ತ್ವಗುಣಾಧಾರನಿಳಾಧರಂ ವಿಬುಧಲೋಕಾಹ್ಲಾದನಂ ಪಾಪದೈ॥
ತ್ಯಗಣಧ್ವಂಸಿ ದಶಾವತಾರವಿದಿತಂ ನಿತ್ಯಂ ವಿನತ್ಯನ್ವಿತಂ।
ಜಗದೊಳ್ ಕೇಶವದೇವನೊಲ್ದು ಕಳೆವಂ ಸ್ವಾತ್ಮಾನತಕ್ಲೇಶಮಂ ॥ 989 ॥

ಆಚಿರಾಜ

ಶ್ರೀಕುಳಗೇಹಮಂ ಲಸದನಂತ ರಮೇಶನಿವಾಸಮಂ ನತಾ।
ನೇಕಕುಭೃತ್ಕುಳಾವನವಿಶಾರದಮಂ ನರಸಿಂಹರಾಜ್ಯರ॥
ತ್ನಾಕರಮಂ ಸಮೃದ್ಧತೆಯುನೆಯ್ದಿಸಿದಂ ಸಿತಪಕ್ಷದಿಂದುವೋಲ್।
ಶ್ರೀಕರಣಾಗ್ರಗಣ್ಯನೆನಿಪಾಚರಸಂ ವಿಳಸತ್ಕಳಾನ್ವಿತಂ ॥ 990 ॥

ಅಮರ್ದಿಂದಂಬುಜದಿಂ ಸುಧಾಂಶುರುಚಿಯಿಂ ರತ್ನೌಘದಿಂ ಚಂದನ।
ದ್ರುಮನಿರ್ಯಾಸದಿನಂಗಜೇಷುಗಳ ಕೂರ್ಪಿಂ ಕಾಮಿನೀರೋಕದ್ಯ॥
ಕ್ಷಮುದಾಯೋದಿತಪುಣ್ಯದಿಂ ಪಡೆದನಕ್ಕು ಧಾತ್ರನೆಂಬಂದದಿಂ।
ಕಮನೀಯಂ ಬಗೆವಾಗಳಾಚಣನ ರೂಪಾಶ್ಚರ್ಯಸಂಪಾದಕಂ ॥ 991 ॥

ಯುವತೀವ್ರಾತಮನೋವಿಮೋಹನಕರಂ ಶೃಂಗಾರಜನ್ಮಾಕರಂ ।
ಕವಿವರ್ಣ್ಯಂ ವಿಳಸತ್ಕಳಾಧರಸಖಂ ಪ್ರದ್ಯುಮ್ನಗೋತ್ರಂ ರಮೋ ॥
ತ್ಸವಧಾಮಂ ಸುಮನೋವಿನಿರ್ಮಿತಸುಧರ್ಮಂ ತಾನೆನಲ್ಕೀ ಸುಕೇ ।
ಶವಪುತ್ರಂಗೆಸೆವಾಚಿರಾಜವಿಭುವಿಂಗೊಪ್ಪಿರ್ಪುದೇಂ ಚೋದ್ಯಮೋ ॥992॥

ಕಮಳಾನಂದನಕಾರಿ ಚಾರುಕಮಳಪ್ರೋದ್ಭಾಸಿಹಸ್ತಂ ವಿರೋ ।
ಧಿಮದಧ್ವಾಂತವಿಭೇದಿ ಧರ್ಮ್ಮಜನಕಂ ಸನ್ಮಾರ್ಗವಿದ್ಯೋತನಂ ॥
ಪ್ರಮದಾಪೂರಿತಮಿತ್ರಚಕ್ರನಜಡಂ ನಿತ್ಯೋದಯಭ್ರಾಜಿ ಲೋ ।
ಕಮನೆಲ್ಲಂ ಬೆಳಗುತ್ತುಮಿರ್ಕೆ ದೊರೆವೆತ್ತಾದಿತ್ಯನತ್ಯೂರ್ಜಿತಂ ॥993॥

ಹರಿಯೊಳ್ ವಿಕ್ರಾಂತಮಿಂದ್ರೇಜ್ಯನೊಳಱಿವು ಮನೋಜಾತನೊಳ್ ಚೆಲ್ವು ರತ್ನಾ ।
ಕರದೊಳ್ ಗಾಂಭೀರ್ಯಭಾವಂ ರವಿಯೊಳತುಳತೇಜಂ ಸುರೋರ್ವ್ವೀಜದೊಳ್ ನಿ ॥
ರ್ಭರದಾನಂ ತಾಮಿವೊಂದಂದೆಸೆವುವಿನಿತುಪೊಂದಾದುವಾಶ್ಚರ್ಯಮೇನ ।
ಚ್ಚರಿ ಧಾತ್ರಂ ಕೂರ್ತೊಡೆಂಬಂತಖಿಳಗುಣಕಮಾಚಣ್ಣನಾಪಾಸಮಾದಂ ॥994॥

ಪ್ರವರೋದ್ಯತ್ಸತ್ವದಿಂದಂ ಮೃದುವಿಶದತನುಚ್ಛಾಯೆಯಿಂದಂ ಪ್ರಶಸ್ತ ।
ಧ್ರುವಲಕ್ಷ್ಮೀಯೋಗದಿಂದಂ ಕವಿಗೆ ಸುಮುಖಿಮಪ್ಪೊಳ್ಪಿನಿಂದಂ ರಣಪ್ರೋ ॥
ದ್ಭವಶೌರ್ಯಾಟೋಪದಿಂದಂ ಬಗೆಯೆ ನಿಜದೆ ಸದ್ವಾಜಿಯಾಗಿರ್ದ್ದುಮಾಚಂ ।
ಗೆ ವಿಶೇಷಂ ಕೋಡು ಕಲ್ಪದ್ರುಮದ ನಿಮಿರ್ದ ಕೋಡನ್ನನೊಪ್ಪುತ್ತುಮಿರ್ಕುಂ ॥995॥

ಅತಿಕಾಂತಾಕೃತಿ ಲಕ್ಷ್ಮಿ ಪುಣ್ಯವಿಸರಂ ತೇಜಃಪ್ರಭುತ್ವಂ ಗುಣ ।
ಜ್ಞತೆ ದಾನಂ ಶುಚಿತಾಪ್ರಧಾನಚರಿತಂ ಶ್ರೀವಿಷ್ಣುಪಾದಾಂಬುಜಾ ॥
ನತಿ ಧೈರ್ಯಂ ಮತಿತತ್ವಬೋಧಮಿವು ತಾಮೆಂದುತ್ತರಂ ದುರ್ಲ್ಲಭಂ ।
ಕ್ಷಿತಿಯೊಳ್ ಮಾನವರ್ಗಾಚಣಂಗಿನಿತುಮೇಕಾಯತ್ತಮೇಂ ಧನ್ಯನೋ ॥996॥

ಸಿರಿ ವರವಕ್ಷದೊಳ್ ನೆಲಸಿ ಸದ್ವಿಭವಕ್ಕೆ ನಿವಾಸಮಾದಳಂ ।
ಬುರುಹಮುಖಿಪ್ರದೇಶದೊಳನಾರತಮಿರ್ದ್ದು ವಿವೇಕಿಯಾದಳಾ ॥
ಸರಸತಿ ಶುದ್ಧತಾಗುಣಮನಾಚನ ಪೊರ್ದ್ದುಗೆಯಿಂದೆ ಕೀರ್ತಿಸುಂ ।
ದರಿ ಪಡೆದಿರ್ದ್ದಳೆಂದೊಡಱಿಯೆಂ ಪೊಗಟಲ್ ಕೃತಪುಣ್ಯರಾಶಿಯುಂ ॥997॥

ಕನಕಾದ್ರೀಂದ್ರಮನುನ್ನತಿಕ್ಕೆ ವಿಭವಂ ದೇವೇಂದ್ರನಂ ಮೂರ್ತಿ ಕಾ ।
ಮನನಾರ್ತೀವ ಗುಣಂ ದಧೀಚಿ ಬಲಿ ಗುತ್ತಂ ಚಾರುದತ್ತಂಗಮೊಂ ॥
ದಿನಿತಾನುಂ ಮಿಗಿಲೆಂದೊಡೇವೊಗಟ್ಟಪೆಂ ವಿದ್ವಜ್ಜನಾಧಾರನಂ ।
ವಿನಯಾಂಭೋನಿಧಿಯಾಚನಂ ಮನುಮುನಿಪ್ರಖ್ಯಾತಸಂಸ್ತುತ್ಯನಂ ॥998॥

ಅಹಿಪತಿಯಂತೆ ಭೋಗಿ ಶಶಿಯಂತೆ ಕಲಾಧರನೀಶನಂತುಮಾ ।
ಸಹನಮರೇಂದ್ರನಂತೆ ವಿಭವಾನ್ವಿತನುನ್ನತಮೇರು ಸೂರ್ಯನಂ ॥
ತಹಿಮಕರಪ್ರಭಾವನಮರೇಜ್ಯನವೋಲ್ ಬಹುತತ್ವಕೋವಿದಂ ।
ಮಹಿನುತನೆಂದು ಬಣ್ಣಿಪುದು ಸಂತತಮಾಚಣನಂ ಜಗಜ್ಜನಂ ॥999॥

ಅಕಳಂಕಚರಿತಲಕ್ಷ್ಮೀ । ಪ್ರಕಟಯಶೋಗುಣದೆ ಬೆಳಗಿ ನಿಜಕುಲಮಂ ಸು ।
ಪ್ರಕೃತಿ ಸುಪುತ್ರಃ ಕುಲದೀ । ಪಕ ಎಂಬುದನೆನಿಸಿ ನೆಗಟ್ದನಾಚಚಮೂಪಂ ॥1000॥

## 191 ಮೂಡಗಿಹಾಳ್ ಶಾಸನ [1172]

(ಎಪಿಗ್ರಾಫಿಯಾ ಇಂಡಿಕ, XV, 315)

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋಯಿದೇವನ ಆಳಿಕೆಯಲ್ಲಿ ಮಾಳಿಗೆಯ ಪ್ರಭು ಬಿಜ್ಜಯನಾಯಕನು ಎರಡು ಶಿವಾಲಯಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಬಿಜ್ಜಳ

ಲಾಳಂ ಬಾಳ್ಗೊಟ್ಟು ಕೋಳ್ಗೊಟ್ಟುಟಿದನುಟಿದನಾ ಚೇರಮಂ ಬೀರಮಂ ನೇ ।
ಪಾಳಂ ಕಾಡಾಲಯಕ್ಕೆಯ್ದಿದನತಿಭಯದಿಂ ಶೌರ್ಯಸಂಪತ್ತಿಯಿಂ ಪಾಂ ॥
ಚಾಳಂ ಚಾಳಾದನಾಳಾಳೆನಿಸಿ ಬರ್ದುಕಿದಂ ಭೀಮಸಂಗ್ರಾಮಕೇಳೀ ।
ಲೋಳಂ ಚೋಳಂ ದಿಟಂ ಬಂದಪನೆನಲದಟಂ ಬಿಜ್ಜಳಕ್ಷೋಣಿಪಾಳಂ ॥1001॥

ರಾಜಮಹಾಭಿಧಾನಮನೆ ಚಂದ್ರನೊಳಪ್ರತಿಮಪ್ರತಾಪದಾ ।
ರಾಜತೆಯಂ ನಿದಾಘಸಮಯಾರ್ಕನೊಳೂರ್ಜಿತಸಾರ್ವಭೌಮಮೆಂ ॥
ಬೀ ಜಸಮಂ ದಿಶಾಕರಿಯೊಳಲ್ಲದೆ ವೈರಿನೃಪಾಳರಲ್ಲಿ ರಾ ।
ರಾಜಿಸಲೀಯದಿಂತು ನೆಗಟ್ದಂ ವಿಭು ದೋರ್ಬಳಚಕ್ರಿ ಬಿಜ್ಜಳಂ ॥1002॥

ಸೋಯಿದೇವ

ಎನಗಿನಸೋಮಭೂಪನರಿಭೂಪಜಯಾಂಗನೆಯೊಳ್ ನಿರಂತರಂ ।
ಮನವೆಳಸಿರ್ಪನಾಕೆಯಿರಲಾತನ ಸನ್ನಿಧಿಯಲ್ಲಿ ನಿಲ್ವುದಿಂ ॥
ತೆನಗಿದು ಧರ್ಮಮಲ್ಲದುದಱಿಂ ದೆಸೆಯಂತದೊಳಿರ್ಪೆನೆಂದು ದಿ ।
ಗ್ವನಿತೆಯರಲ್ಲಿ ತನ್ನೃಪಯಶೋಂಗನೆ ಮಾಣದೆ ಮಾತನಾಡುವಳ್ ॥1003॥

ವಿನಮಿತಗೌಳಪಾಂಡ್ಯಮಲಯಾಳವರಾಳನೃಪಾಳಜಾಳಮಂ ।
ಡನಮಣಿಮಾಳಿಕಾರುಚಿರಮಂಜರಿಯಿಂದಮೆ ಪುಂಜಮಾಗಿ ರಂ ॥
-ಜನೆವಡೆದಾಗಳೇಂ ಸೊಗಯಿಸಿರ್ಪುದೊ ತನ್ನ ಪದಾರವಿಂದಮೆಂ ।
ದೆನಲಳವಂತುಟಿಂತುಟೆನಿಪಂತುಟೆ ಸೋಮಧರಾಧಿನಾಥನಾ ॥1004॥

ಮಾಳಿಗೆ

ಅಳಕಾಪುರಿಯೆನೆ ಧನದಾ । ವಳಿಯಿಂದಮರಾವತಿಯೆನೆ ವಿಬುಧಾಶ್ರಯದಿಂ ।
ವಿಳಸದ್ಭೋಗಾವತಿಯೆನೆ । ಸಲೆ ಭೋಗಿಗಳಿಂ ಬಬಾಪ್ಪ ಮಾಳಿಗೆ ರಯ್ಯಂ ॥1005॥

ಬಿಜ್ಜಯನಾಯಕ

ಕಳಚುರಿರಾಜರಾಜ್ಯಗೃಹದೀಪಕನೆಂಬ ಮಹತ್ವದೇಟ್ಗೆ ತ।
ನ್ನೊಳೆ ರಿಪುರಾಯದಂಡುಗೆ ಪಡಿಗ್ಗಹನೆಂಬುರುವೀರದೇಟ್ಗೆ ತ॥
ನ್ನೊಳೆ ಬುಧರೀಯೆ ವರ್ಣಕವಿ ಕನ್ನಡಜಾಣನೆನಿಪ್ಪ ಬಲ್ಮೆ ತ।
ನ್ನೊಳೆ ನೆಲಸಲ್ಕುದಾತ್ತನೆನೆ ಬಿಜ್ಜಯನಾಯಕನಿರ್ದನುರ್ವಿಯೊಳ್ ॥1006॥

## 192 ಶಿವಮೊಗ್ಗ 64 [1172]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಸತ್ಯಗಂಗದೇವನು ಕುರುಳಿ ತೀರ್ಥದಲ್ಲಿ ಗಂಗಜಿನಾಲಯವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ವಿನಯಾದಿತ್ಯನೃಪಂ ಸ। ಜ್ಜನರ್ಗಂ ದುರ್ಜನರ್ಗಮಾತ್ಮವಿನಯಂ ತೇಜಂ।
ಜನಿಯಿಸೆ ನಯಮುಂ ಭಯಮುಂ। ವಿನೂತನಾಳ್ದಂ ವಿಶಾಲಭೂಮಂಡಲಮಂ ॥1007॥

ಎರೆಯಂಗಹೊಯ್ಸಳನಳಿಯ ಹೆಮ್ಮಾಡಿಯರಸ

ಇವನಿಂದಂ ಕಂಡೆನೇಟುಂ ಕಡಲ ಕಡೆಯುನೇಟುಂ ಕುಭೃತ್ಕೂಟಮಂ ದಿ।
ಗ್ಧವದಂತಿವ್ರಾತಮಂ ಲೋಕದ ಪವಣನೆನುತ್ತುಂ ಯಶೋಲಕ್ಷ್ಮಿ ಮೆಯ್ವೆ॥
ರ್ಚುವಿನಂ ತನ್ನಣ್ಮು ತನ್ನೊಂದಜಿವಿನಳವು ತನ್ನಾರ್ಪು ತನ್ನೇಟ್ಗೆ ತನ್ನೊಂ।
ದು ವಿಳಾಸಂ ತನ್ನ ಪೆಂಪತ್ತಳಗಮೆನಿಸಿದಂ ಹೆರ್ಮಮಾಂಧಾತಭೂಪಂ ॥1008॥

ವಿಷ್ಣುವರ್ಧನ

ಎಳೆಗೆಸೆವ ಕೋಯತೂರ್ ತ। ತ್ತಳವನಪುರಮಂತೆ ರಾಯರಾಯಪುರಂ ಬ।
ಳ್ವಳಬಳೆದ ವಿಷ್ಣುತೇಜೋ। ಜ್ವಳನದೆ ಬೆಂದುವು ಬಲಿಷ್ಠರಿಪುದುರ್ಗಂಗಳ್ ॥1009॥

ಭುಜಬಳಗಂಗ

ಮಾರಿಟ್ಟಾಶಾಂತಮಂ ಬಳ್ಳದೊಳಳೆದುದಧಿವ್ರಾತಮಂ ತೂಗಿ ಸಂದಾ।
ಮೇರುಕ್ಷೋಣೀಧ್ರಮಂ ತ್ರಾಸಿನೊಳೆಣಿಸಿ ತರಂಗೊಂಡು ನಕ್ಷತ್ರಮಂ ಪೇ॥
ಟಾರಾನುಂ ಬಲ್ಲರೇ ಬಲ್ಲೊಡೆ ಪೊಗಟ್ಗೆಮ ವಿಶ್ವಂಭರಾಭಾರವೀರ।
ಶ್ರೀರಾಮಾಲೀಢವಜ್ರದ್ರುಢಿಮಘನಭುಜಸ್ತಂಭನಂ ಗಂಗ ನಿನ್ನಂ ॥1110॥

## 193 ಹಾಸನ 71 [1173]

ಇದರಲ್ಲಿ ಹೊಯ್ಸಳ ರಾಜನಾದ 2ನೆಯ ಬಲ್ಲಾಳನ ಮಹಾಪ್ರಧಾನ ಶ್ರೀಕರಣದ ಬೂಚಿ ರಾಜನು ಕೋರವಂಗಲದ ಬೂಚೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಶ್ರೀಮದ್ಯಾದವವಂಶವಾರ್ಧಿವಿಳಸತ್ಸಂವರ್ಧನೋದ್ಯತ್ಸುಧಾ ।
ಧಾಮಂ ದೃಪ್ತನೃಪಾಳಜಾಳಜಳಜಾತವ್ರಾತಸಮ್ಮರ್ದನೋ ॥
ದ್ದಾಮಾನೇಕಪನಿಷ್ಪಶಿಷ್ಟ ಜನತಾಕಲ್ಪಾಂಘ್ರಿಪಂ ತಾನೆನಲ್ ।
ಭೂಮೀಪಾಳಕಮೌಳಿರತ್ನಮೆಸೆದಂ ಶ್ರೀವಿಷ್ಣುಭೂಪಾಳಕಂ ॥1111॥

Iನೆಯ ನಾರಸಿಂಹನ ಮಹಿಷಿ ಏಚಲೆ

ರಮಣೀರತ್ನಮನರ್ಥಿಕಲ್ಪಲತೆಯಂ ವಾಗ್ದೇವತಾಜನ್ಮಗೇ ।
ಹಮನೊಳ್ಪಿಂಗೆ ನಿವಾಸಮಂ ಗುಣಗಣಕ್ಕಾವಾಸಮಂ ಪೆರ್ಮೆಗಾ ॥
ರ್ಮಮನಂಗೋದ್ಭವನಾಜ್ಞೆ ಪೆಣ್ಬರಿಜನಾದಂ ತಾಳ್ದಿದಂತಿರ್ದು ಪ ।
ಟ್ಟಮನಾಂತೇಚಲದೇವಿಯಂ ಭುವನದೊಳ್ ಪೋಲ್ವನ್ನರಾರ್ ಕಾಂತೆಯರ್ ॥1112॥

ಬಲ್ಲಾಳ II

ವಿಳಸತ್ಕೂರ್ಮಪದಂ ಫಣಿಪ್ರಭುನಿಭೋದ್ಯದ್ದೀರ್ಘಹಸ್ತಂ ಕುಳಾ ।
ಚಳಧೀರಂ ದಿಗಿಭೋನ್ನತಂ ಭುಜಬಳಾವಷ್ಟಂಭದಿಂ ನೀಳಕುಂ ॥
ತಳೆಯಂ ಸನ್ನುತಪುಣ್ಯೆಯಂ ರುಚಿರಕಾಂಚೀಯುಕ್ತೆಯಂ ಲೀಲೆಯಿಂ ।
ತಳೆದಂ ಸುಸ್ಥಿರಮಾಗೆ ಭೂರಮಣಿಯಂ ಬಲ್ಲಾಳಭೂಪಾಳಕಂ ॥1113॥

ಬಡವರ್ಗೀಯದ ಚಾಗಮಾಜಿಮುಖದೊಳ್ ಬೆನ್ನಿತ್ತ ಶೌರ್ಯಂ ತೊದ ।
ಳ್ಗೆಡೆಯಾದೊಳ್ನುಡಿ ದುರ್ಯಶಕ್ಕೆ ಗುಜಿಯಾಗಿರ್ದೊಳ್ಪು ದುರ್ಮಾರ್ಗಮಂ ॥
ಗೆಡೆಗೊಂಡಾಚರಣಂ ಗಡಂ ತಮಗೆನಲ್ ಚೀಯೆಂಬಿನಂ ಬಾಳ್ದು ನಿ ।
ಗ್ಗಡಿಗಳ್ ಮತ್ತಿನ ಭೂಭುಜರ್ ದೊರೆಯೆ ಪೇಟ್ ಬಲ್ಲಾಳಭೂಪಾಳನೊಳ್ ॥1114॥

ಬೂಚಿರಾಜನ ಹೆಂಡತಿ ಬಾಚಲದೇವಿ

ಪತಿಭಕ್ತಿಯೊಳೆಂದುಮರುಂ । ಧತಿ ಸೊಬಗಿನೊಳೆಸೆವ ರೂಪಿನಿಂದೊಪ್ಪುವ ಪಾ ।
ರ್ವತಿ ವಿಭವದಲ್ಲಿ ಲಕ್ಷ್ಮೀ । ಸತಿ ಬಾಚಲದೇವಿಯೆನಿಸಿ ಜಸಮಂ ಹಡೆದಳ್ ॥1115॥

ಸಿರಿಸತಿ ಗೋವಿಂದನ ಪೇ । ರುರದೊಳ್ ನೆಲಸಿರ್ಪ ತೆಱದೆ ಸೊಬಗಿನೊಳೆಂದುಂ ।
ಸ್ಥಿರಮಾಗಿರೆ ಬಾಚಲೆ ಬೂ । ಚರಸನ ಸರ್ವಾಂಗಲಕ್ಷ್ಮಿ ತಾನಾಗಿರ್ಪಳ್ ॥1116॥

## 194 ಬೇಲೂರು 114 [1173]

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಶ್ರಿತ ಗಳಗೆಯನಾಯಕನು ದೋರ ಸಮುದ್ರದಲ್ಲಿ ಗಳಗೇಶ್ವರದೇವಸ್ಥಾನವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಸ್ವಸ್ತಿ ಶ್ರೀಪ್ರಿಯನರ್ಜುನೋರ್ಜಿತಯಶಂ ವಾಜೀಶಯಾನೋತ್ಸವಂ।
ನ್ಯಸ್ತಾನಂತಸುಭೋಗಭೋಗಿವಿನುತಂ ಶ್ರೀಧರ್ಮರಮ್ಯಂ ಜಯಾ॥
ಭ್ಯಸ್ತಂ ಸೂಕ್ತಸುದರ್ಶನಾಂಕನೆಸೆದಂ ಶ್ರೀವಿಷ್ಣುಸಾಮ್ಯಾನ್ವಯಂ।
ತ್ರಸ್ತಾನ್ಯಾಸುರರಾಜರಾಜವಿನಯಾದಿತ್ಯಾವನೀವಲ್ಲಭಂ ॥1117॥

ಬಲ್ಲಾಳವಿಷ್ಣುವರ್ಧನೋದಯಾದಿತ್ಯರು

ಸಲ್ಲಲಿತವಾಗ್ವಧೂಟೀ। ವಲ್ಲಭರತಿವಿಪುಳಸಕಳಲಕ್ಷ್ಮೀಕಾಂತಾ।
ವಲ್ಲಭರುದಯಂಗೆಯ್ದರ್। ಬಲ್ಲಾಳಂ ಬಿಟ್ಟಿದೇವನುದಯಾದಿತ್ಯಂ ॥1118॥

ನಾರಸಿಂಹ 1

ಬಂದು ಕವಿದರಿಬಳಾಂಬುಧಿ। ನಿಂದುದು ನರಸಿಂಹನೊಂದೆ ಸಬಳದ ಮೊನೆಯೊಳ್।
ಬಿಂದುವಿನಂದದೆ ಮುನಂ। ನಿಂದವೊಲಂಭೋಧಿ ರಾಮನಂಬಿನ ಮೊನೆಯೊಳ್ ॥1119॥

ಗಳಗೆಯ ನಾಯಕನ ತಂದೆ ಮಲ್ಲಪ

ಕಂಟದ ಬಂಟರಾಗಿ ಬುಧಸಂತತಿಗಂ ಪತಿಗಂ ಕುಬುದ್ಧಿಯಿಂ।
ಕಂಟಕರಪ್ಪ ಟುಂಟುಕರದಿರ್ಕೆಮ ಸದ್ಬುಧರ್ಗಿಂದ್ರ ಭುಜದೊಳ್॥
ಟೆಂಟಣಿಸುತ್ತುಮಿರ್ಪ ನಿಜಬುದ್ಧಿಯಿನಾತ್ಮನೃಪಂಗೆ ಕೂಡೆ ನಿ।
ಷ್ಕಂಟಕಮಾಗೆ ಮಾಡಿದನಿಳಾತಳಮೆಲ್ಲಮನೊಲ್ದು ಮಲ್ಲಪಂ॥1120॥

ಗಳಗೆಯನಾಯಕ

ನರಸಿಂಹಭೂಮಿಪಾಳನ। ಕರಾಸಿ ಮುಚ್ಚರಿಪರೆರ್ದೆಯ ಗೂಂಟಂ ವಿದ್ಯಾ।
ಭರಣಂ ತಾನೆನೆ ರಂಜಿಪ। ನರಿಬಿರುದರನಡಸಿ ಪಿಡಿವ ಕೊಳಗಂ ಗಳಗಂ ॥1121॥

ಗಗನಚರ ಕರ್ಣ ಶಿಬಿ ಬಲಿ। ಮಗಧಾಧಿಪರಿಂದಮಮಳದಾನೋದಯದಿಂ।
ಜಗದೊಳ್ ನಾಯಕಗಳಗಂ। ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥1122॥

ಕ್ಷೀರಸಮುದ್ರದಂತೆ ಸಿರಿಗಾಲಯಮಾಗಿ ಧರಿತ್ರಿಗೊಪ್ಪುವೀ ॥
ದೋರಸಮುದ್ರದೊಳ್ ಗಳಗಣಂ ಗಳಗೇಶ್ವರದಿವ್ಯಗೇಹಮಂ ॥
ಸಾರಹರಾದ್ರಿಸನ್ನಿಭಮನೊಲ್ದೆಸೆಯುತ್ತಿರೆ ಮಾಡಿದಂ ಲಸ್ಕ।
ದ್ವೀರನುದಾರಸತ್ಯಮಲಸದ್ಗುಣಹಾರನಿಳಾತಳಸ್ತುತಂ ॥1123॥

## 195 ಕಡೂರು 136 [1173]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಹಿರಿಯೂರ ನಾಳ್ಪ್ರಭು ಬೊಪ್ಪಗೌಡನು ಸೋಮನಾಥದೇವರಿಗೆ ದೊರೆಯಿಂದ ಒಂದು ಗ್ರಾಮವನ್ನು ಪಡೆದು ಬಿಟ್ಟಂತೆ ಹೇಳಿದೆ.

ಎರೆಯಂಗ

ಎಱಗಿದ ಜನಕ್ಕೆ ಪೊಮ್ಮಗಿ। ಲೆಱಗಿದವೋಲ್ ಲೋಕವಟ್ಟಮೆಂನೆ ಪೊಮ್ಮಟಿಯಂ।
ಕಱಿವನುಱದೆಱಗದಹಿತಂ। ಗೆಱಗಿದ ಬಱಸಿಡಿಲೆನಿಪ್ಪನೆಱೆಯಂಗನೃಪಂ ॥1124॥

ವಿಷ್ಣುವರ್ಧನ

ಪಡುವಣ ಮೂಡಣ ತೆಂಕಣ। ಗಡಿಗಳ್ ತನ್ನಾಳ್ದ ನೆಲಕೆ ಮೂಱುಸಮುದ್ರಂ।
ಬಡಗಲ್ ಪೆರ್ದೊಱೆ ತಾಂ ಗಡಿ। ಗಡಿಯಿಲ್ಲಾ ವಿಷ್ಣು ಕಿಡಿಸಿದಹಿತಗ್ಗೆಂತುಂ
॥1125॥

## 196 ಶಿಕಾರಿಪುರ 236 [1174]

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ. ಸೋವಿದೇವನ ಆಳಿಕೆಯಲ್ಲಿ ಕಾದಂಬ ಸೋಮದೇವನ ಪ್ರಧಾನ ಮಾಚರಸನು ಬಂದಣಿಕೆಯಲ್ಲಿ ಬೊಪ್ಪೇಶ್ವರ ದೇವಸ್ಥಾನವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಭರತ ಕ್ಷೇತ್ರ

ಬಾಜಿಸೆ ಡಕ್ಕೆಯಂ ಪ್ರಿಯರ ಮೆಲ್ಲೆರ್ದೆ ತುಂಬಿಗಳಿಂಬುವೆತ್ತಿರಲ್।
ರಾಜಿಸಿ ಪಾಡೆ ಕೆಂದಳಿರೆ ಕೈದಳಮಾಗಿರೆ ಮಂದಮಾರುತಂ ॥
ಯೋಜಿಸೆ ತಾಳಮಂ ರತಿಯುನಾಡಿಸೆ ಮನ್ಮಥನಂತರಂಗದೊಳ್।
ಸಾಜಮೆನಿಪ್ಪುದಲ್ತೆ ಭರತಾಹ್ವಯಮಂ ಭರತೋರ್ವಿಗುರ್ವಿನಿಂ ॥1126॥

## ರಾಯಮುರಾರಿ ಸೋವಿದೇವ

ಕಾಯಲುಮೀಯಲುಂ ನೆಱೆಯದುರ್ವಿಪರಿಂದಡಿಗಟ್ಟಿ ಭೂಮಿಯಂ।
ಜೀಯೆನೆ ಧಾತ್ರಿ ಕಾಯೆನೆ ವಿರೋಧಿಗಳರ್ಥದೆ ತೃಪ್ತಿವೆತ್ತು ಹೋ॥
ಹೋಯೆನೆ ವಂದಿಗಳ್ ಧರೆಯನೊಪ್ಪುವ ಕೋಡಿನೊಳೆತ್ತಿ ತಾಳ್ದಿದಂ।
ರಾಯಮುರಾರಿಯೆಂಬ ಹೆಸರೊಪ್ಪಿರೆ ಸೋಮಮಹೀಶ್ವರೇಶ್ವರಂ ॥1127॥

## ಕಾದಂಬ ಸೋಮದೇವ

ಲೀಲೆಯನಾಗುಮಾಡೆ ಬನವಾಸೆಗೆ ವೀರರಸಂ ಪೊದಟ್ಟಿ ಬಾ।
ಳ್ವೇಲಿಯಿದೆಂಬಿನಂ ಬಳಸಿ ರಕ್ಷಿಸೆ ತನ್ನಯ ತೋಳ ಬಾಳ್ ಜಸಂ॥
ಸಾಲೆ ಬೆಡಂಗುವೆತ್ತ ಪೊಸ ಸುಗ್ಗಿಯನಾರ್ಜಿಸೆ ನಾಡು ನಾಡೆ ಸೌ।
ಖ್ಯಾಲಯಮಾಗೆ ಮಾಡಿದುದು ಸತ್ಯಪತಾಕನ ರಾಜವೈಭವಂ ॥1128॥

## ಮಾಚರಸ

ವಿಜಿಗೀಷು ಸೋಮಪಾದೋ। ಪಜೀವಿ ಸೋಮನೃಪಖಡ್ಗವಲ್ಲೀವಿಳಸ।
ನ್ನಿಜವೀರರಸಂ ಸೋಮ। ಪ್ರಜಾರ್ಣವೋದ್ವೀಚಿ ಮಾಚಿ ಸೊಗಯಿಸಿ ತೋರ್ಪಂ ॥1129॥

ಶರಣೆಂದರೆರ್ದೆಯ ಕೈ ಮ। ಚ್ಚರಿಪದಟರ ಮೊಗದ ಕೈ ಜನಸ್ತುತಮಾಹೇ।
ಶ್ವರತತಿಯ ಮುಗಿದ ಕೈ ಬೇ। ಟ್ಪರ ಪಿಡಿಕೈ ಮಾಚಿಗಂ ಚತುರ್ಭುಜನಾದಂ ॥1130॥

ಗಂಡುಟಿದು ಸಿತಗರೆಲ್ಲಂ। ಪೆಂಡಿರವೋಲ್ ಕುರುಳ ಬೆರಳ ಹುರುಳಂ ಕೊಟ್ಟುಂ।
ಕಂಡುಂ ನಡೆವರ್ ಸಿತಗರ। ಗಂಡಂ ಶ್ರೀಮಾಚಿ ಜಡಿವನಸಿಯನೆನುತ್ತುಂ ॥1131॥

ಸಿತಗರ ಗಂಡನೆಯ್ದಿದನೆನಲ್ ಕಹಳಾರವಮನ್ಯಭೂಭುಜರ್।
ಸತಿಯರ ರೂಪಿನಿಂ ಪಿಡಿದು ಪೆಂಡಿರ ಕೈಗಳನೋಡೆ ಮಂದಿಯೊಳ್॥
ಮತಿ ಮಱೆದಲ್ಲಿ ದಂಪತಿಯೆನಲ್ ಸತಿಯಾಂ ಪತಿಯೆಂದು ಸೂರುಳಲ್।
ಪತಿ ಸತಿ ನಂಬದಂತುಟವರ್ಗಾದುದು ಮಾಚನ ಖಡ್ಗರೋಚಿಯಿಂ ॥1132॥

ತಳ ಹೆಡೆಯಾಗಲಿಕ್ಕಿದ ಸುವರ್ಣದ ಮುದ್ರಿಕೆ ರತ್ನಮಾಗೆ ಸಂ।
ಚಳಿಪುಗುರೆಲ್ಲ ಸಂದೆಸೆವ ದಂತದ ಪಙ್ಕ್ತಿಗಳಾಗೆ ರೌದ್ರದಿಂ॥
ಬಳೆದ ಸುಕೋಪಮೆಂಬುದೆ ವಿಷಂ ತನಗಾಗಲರಾತಿಜೀವಮಂ।
ಘಟಿಲೆನೆ ನುಂಗುತುಂ ನಲಿಯುತಿರ್ದುದು ಮಾಚನ ಬಾಹುಪನ್ನಗಂ ॥1133॥

ನಾಗರಖಂಡ

ತರದಿಂ ಪೊಂಬಾಟೆಗಳ್ ಪಣ್ಗೊಲೆಗಳುಗುವ ಪೆರ್ವಾಡಿನಿಂ ತೆಂಗುಗಳ್ ಕಾ ।
ಯ್ವಿರಿಪಿಂ ಬರ್ಪಂಬುವಿಂ ಮಾವುಗಳೆಸೆವ ರಸಾಸಾರದಿಂ ಕರ್ವುಗಳ್ ಸು ॥
ರ್ವುರು ಸೋಂಕಿಂದೊಕ್ಕ ಸಾಜಿಂ ಬಳೆದು ಬಳಿಕಮಂತೆಲ್ಲಮೊಂದಾಗಿಯಾ ನಾ ।
ಗರಖಂಡಪ್ರಾಂತದೊಳ್ ಕಾಲ್ವರಿಯಿಸೆ ಬೆಳೆಗುಂ ಕೂಡೆ ಕೇದಾರವರ್ಗಂ ॥1134॥

## 197 ಚೆನ್ನರಾಯಪಟ್ಟಣ 146 [1174]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಬೆಕ್ಕನೆಂಬ ಗ್ರಾಮವನ್ನು ನಯಕೀರ್ತಿ ಸಿದ್ಧಾಂತ ಚಕ್ರವರ್ತಿಗೆ ಕೊಟ್ಟಂತೆ ಹೇಳಿದೆ.

ಹೊಯ್ಸಳವಂಶ

ಶ್ರೀಕಾಂತಾಪೀನವಕ್ಷೋರುಹಗಿರಿಶಿಖರೋಜ್ಜೃಂಭಮಾಣಂ ವಿಶಾಳಂ ।
ಲೋಕೋದ್ಯತ್ತಾಪಲೋಪಪ್ರವಣವಿಳಸಿತಂ ವೀರವಿದ್ವಿಣ್ಮಹೀಪಾ ॥
ನೇಕವ್ಯಾಮುಕ್ತಸಂಜೀವನಬಹಳಿತಮುದ್ಯದ್ಗುಣಸ್ತೋಮಮುಕ್ತಾ ।
ನೀಕಂ ನಿಷ್ಕಂಟಕಂ ನಿಶ್ಚಳಮೆನಲೆಸೆಗುಂ ಹೊಯ್ಸಳಕ್ಷತ್ರವಂಶಂ ॥1135॥

ವಿನಯಾದಿತ್ಯ

ಅದಱೊಳ್ ಮೌಕ್ತಿಕದಂತೆ ಪುಟ್ಟಿದನಿಳಾಪಾಳೌಘಚೂಡಾಮಣಿ ।
ತ್ವದಿನುದ್ಯದ್ಗುಣಶೋಭೆಯಿಂ ಸ್ವರುಚಿಯಿಂ ಸದ್ವೃತ್ತರಾರಾಜಿತ ॥
ತ್ವದಿನತ್ಯುನ್ನತಜಾತಿಯಿಂ ಸಮವೆನಲ್ ಸಂಗ್ರಾಮರಂಗಾಗ್ರದೊಳ್ ।
ಮದವದ್ವೈರಿಕುಳಪ್ರತಾಪಿ ವಿನಯಾದಿತ್ಯಂ ಧರಾಧೀಶ್ವರಂ ॥1136॥

ಬಲ್ಲಾಳ II

ರಿಪುರಾಜದ್ರಾಜಸಂಪತ್ಸರಸಿರುಹಶರತ್ಕಾಲಸಂಪೂರ್ಣಚಂದ್ರಂ ।
ರಿಪುಭೂಪಾಳಪ್ರದೀಪಪ್ರಕರಪಟುತರೋದ್ಭೂತಭೂರಿಪ್ರವಾತಂ ॥
ರಿಪುರಾಜನ್ಯೌಘಸೇನಾಜಳಧಿಕಬಳನೌರ್ವಾನಳೋಗ್ರಪ್ರತಾಪಂ ।
ರಿಪುಪೃಥ್ವೀಪಾಳಜಾಳಕ್ಷುಭಿತಯಮನಿವಂ ವೀರಬಲ್ಲಾಳದೇವಂ ॥1137॥

## 198 ಅರಸಿಯಕೆರೆ 138 [1174]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಾಪ್ರಧಾನ ಎರೆಯಣ್ಣನು ನಾರಸಿಂಹ ಪುರದೊಳಗೆ ಪಾಠಶಾಲೆಗಾಗಿಯೂ ವಿದ್ಯಾರ್ಥಿಗಳ ಭೋಜನಕ್ಕಾಗಿಯೂ ಮುರಿಹಿಂಡಿಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ I

ವಿಷ್ಣುವ ಲಕ್ಷ್ಮಿಯ ಕುಲವ। ರ್ಧಿಷ್ಣುವೆನಲ್ ನೆಗಟ್ದನಿಕ್ಷು ಚಾಪನವೋಲ್ ಭ್ರಾ।
ಜಿಷ್ಣುವೆ ಸಿಂಗದ ತೇಜದಿಂ। ಜಿಷ್ಣುವೆ ಪಸರಿಸಿದ ಜಸದ ನರಸಿಂಹನೃಪಂ ॥1138॥

ಎರೆಯಣ್ಣನ ತಂದೆ ದಿವಾಕರ

ಜನದನುರಾಗವಮಂ ಪಡೆದು ಸತ್ಪಥದೊಳ್ ನಡೆಗಲ್ತು ತೇಜದಿಂ।
ದನುದಿನಮೆಯ್ದೆ ಪೆರ್ಚಿ ಕಮಳೋದಯಮಂ ತಳೆದಿರ್ದನಾವನಾ॥
ತನೆ ದಿನಪಂ ದಲೆಂದು ನುಡಿವಾ ನುಡಿಯಂ ತಳೆದಿಂತು ಪುಟ್ಟಿದಂ।
ಮನುನಿಭ ಬೊಬ್ಬಿರಾಜವಿಭುಗಂ ವಧು ಚಾಮವೆಗಂ ದಿವಾಕರಂ ॥1139॥

ಎರೆಯಣ್ಣ

ಎಱಗದ ಗಂಡಮಂಡಳಿಯನಂಡಲೆದಾಳ್ದನ ಪಾದದಲ್ಲಿ ತಂ।
ದೆಱಗಿಪನಾಂತರಂ ನಿಜಭುಜಾಸಿಯೊಳಾಸುರಮಾಗಲಾಜಿಯೊಳ್॥
ಕುಱಿದಱಿಮಾಡಿ ನಾಲ್ದೆಸೆಗಮಿಕ್ಕುವ ನಿಕ್ಕುವಮೆಂಬ ಬಲ್ಪುವೆ।
ತ್ತೆಱಗನ ಗಂಡಡಿಂಡಿಮದ ಡಂಬರಮೊಪ್ಪುವುದೀ ಧರಿತ್ರಿಯೊಳ್ ॥1140॥

**199 ಹಾಸನ 58 [1174]**

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಹೆರಗಿನ ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಜಕ್ಕವ್ವೆ

ಅತಿಶೋಭಾಕರಮಪ್ಪ ವಿಷ್ಣುವಿನ ವಕ್ಷಸ್ಥಾನದೊಳ್ ಲಕ್ಷ್ಮಿಯು।
ನ್ನತಿವೆತ್ತಿರ್ಪವೊಲಿರ್ಕೆ ಕೀರ್ತಿಯುತನೊಳ್ ಶ್ರೀಚಾಮನೊಳ್ ಕೂಡಿ ಸಂ॥
ಗತಸತ್ವರ್ ಬಹುಪುತ್ರರಂ ಪಡೆಯುತುಂ ಜಕ್ಕವ್ವೆ ಚಂದ್ರಾರ್ಕರುಂ।
ಕ್ಷಿತಿಯುಂ ಮೇರುನಗೇಂದ್ರಮುಳ್ಳಿನೆಗಮಿಂ ಭದ್ರಂ ಶುಭಂ ಮಂಗಳಂ ॥1141॥

ಫಲಸ್ತುತಿ

ಇವನೀಯಂದದಿನೆಯ್ದೆ ಪಾಲಿಸಿದವರ್ಗಿಷ್ಟಾರ್ಥಸಂಸಿದ್ಧಿ ಸಂ।
ಭವಿಕುಂ ಕೊಂಡಱಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮಂ॥
ಬಿವಱೊಳ್ ಪೇಸದೆ ಪಾರ್ವರಂ ಗೊರವರಂ ಗೋಬೃಂದಮಂ ಪೆಂಡಿರಂ।
ತವೆ ಕೊಂದಿಕ್ಕಿದ ಪಾಪಮೆಯ್ದುಗುಮವಂ ಬೀೞ್ಗುಂ ನಿಗೋದಂಗಳೊಳ್ ॥1142॥

## 200 ಅರಸಿಯಕೆರೆ 69 [1174]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಕೇತಮಲ್ಲ ಮೊದಲಾದವರು ಅರೆಯ ಶಂಕರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನನ ಮಹಿಷಿ ಲಕ್ಷ್ಮಾದೇವಿ

ಲಕ್ಷ್ಮಾದೇವಿ ಖಗಾಧಿಪ। ಲಕ್ಷ್ಮಂಗೆಸೆದಿರ್ದ ವಿಷ್ಣುಗೆಸೆವಂತೆ ವಲಂ।
ಲಕ್ಷ್ಮಾದೇವಿ ಲಸನ್ಮೃಗ। ಲಕ್ಷ್ಮಾನನೆ ವಿಷ್ಣುಗಗ್ರಸತಿಯೆನೆ ನೆಗೞ್ದಳ್ ॥1143॥

ಬಲ್ಲಾಳ II

ಕುಲಕೆ ಕಳಂಕಮಿಲ್ಲದ ವಿಶುದ್ಧಚರಿತ್ರದ ಕಲ್ಪಭೂಜಮಂ।
ತೊಲತೊಲಗೆಂಬ ದಾನಗುಣದಾಂತರನುಗ್ರಭುಜಾಸಿಧಾರೆಯಿಂ।
ಜಲಕನೆ ಮಾಡಿ ಸಗ್ಗಮನೆ ಮುಟ್ಟಿಸುವರ್ಜುನಸಚ್ಚರಿತ್ರಮು।
ಗ್ಗಲಿಸಿದುದೆಂದು ಬಣ್ಣಿಪುದು ಬಲ್ಲುನೃಪಾಳನನೀ ಜಗಜ್ಜನಂ ॥1144॥

ಕೇತಮಲ್ಲ

ಪುರುಷನಿಧಾನನೆಂದು ಪುರುಷಾರ್ಥಪುರೂರವನೆಂದು ಸತ್ಕವೀ।
ಶ್ವರಜನವಂದ್ಯನೆಂದು ಧರೆ ಬಣ್ಣಿಸುತಿರ್ಪುದು ಕೇತಮಲ್ಲನಂ॥
ಪರಹಿತಖೇಚರಾಧಿಪನನೀ ಕಲಿಕಾಲದ ಕಲ್ಪಭೂಜನಂ।
ವರಗುಣಿ ಮಂತ್ರಿಮಾನವಶಿಖಾಮಣಿಯಂ ಜಸದರ್ಥಿಗಂಡನಂ ॥1145॥

## 201 ತಿಪಟೂರು 93 [1174]

ಈ ನಿಷಿದಿಗಲ್ಲಿನಲ್ಲಿ ಹರ್ಯಲೆ ಸಮಾಧಿವಿಧಿಯಿಂದ ಮುಡಿಪಿದಳೆಂದು ಹೇಳಿದೆ.

ಬರವಂ ಕೇಳ್ದಮರಾವತೀಪುರದ ದೇವೀಸಂಕುಲಂ ಬಂದು ನೂ।
ಪುರಮಂ ಮುತ್ತಿನ ಹಾರಮಂ ಕಟಕಮಂ ಕೇಯೂರಮಂ ವಜ್ರದುಂ॥
ಗುರಮಂ ಮಾಣಿಕದೋಲೆಯಂ ತುಡಿಸಿ ಬೇಗಂ ದೇವಿ ನೀನೇಱು ರಾ।
ಗರಸಂ ಕೆಯ್ಮಿಗಲೀ ವಿಮಾನವಮನೆನುತ್ತುಂ ತಂದವರ್ ಸಾರ್ಚಿದರ್ ॥1146॥

ಏಱೆ ವಿಮಾನಮಂ ಬರೆ ಸುರಾಂಗನೆಯರ್ ನಳಿತೋಳ ಸುಣ್ಬೊಗರ್।
ತೋಱುವಿನಂ ಮಹೋತ್ಸವದೆ ಸೇಸೆಯನಿಕ್ಕೆ ಸುರಾನಕಸ್ವನಂ॥
ಮೀಱೆ ಘನಾಘನಧ್ವನಿಯನೆತ್ತಿದ ಸತ್ತಿಗೆ ಚಂದ್ರಬಿಂಬಮಂ।
ಬೀಱೆ ವಿಲಾಸದಿಂ ಪಿಡಿದು ಚಾಮರಮಿಕ್ಕೆ ಸಮಂತು ಪೊಕ್ಕಳಾ।
ನೀಱೆ ಮಹಾನುಭಾವೆ ಸತಿ ಹರ್ಯಲದೇವಿ ಸುರೇಂದ್ರಲೋಕಮಂ *॥1147॥

* ಇದು ಪಂಚಪಾದವೃತ್ತ.

## 202 ಶ್ರವಣಬೆಳ್ಗೊಳ 240 [ಸು. 1175]

ಇದರಲ್ಲಿ ಭಂಡಾರಿ ಹುಳ್ಳನು ಹೊಯ್ಸಳರಾಜನಾದ 2 ನೆಯ ಬಲ್ಲಾಳನಿಂದ ಕೆಲವು ಗ್ರಾಮಗಳನ್ನು ಪಡೆದು ಗೊಮ್ಮಟದೇವರೇ ಮುಂತಾದ ದೇವರುಗಳಿಗೆ ಬಿಟ್ಟಂತೆ ಹೇಳಿದೆ.

ಗಂಗರಾಜ

ಕದನದೊಳಂದು ನಿನ್ನ ತರವಾರಿಯ ಬಾರಿಗೆ ವೆಂಯ್ಯನೊಡ್ಡಲಾ ।
ಱದೆ ನಳಿದಿನ್ನುಮಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂ ॥
ಬಿದ ಸುದತೀಕದಂಬದರ್ದೆ ಪೌವನಪೋಗಿರೆ ಪುಲ್ಲೆವೆರ್ಚುವೆ ।
ರ್ಚಿದಪನಹರ್ನಿಶಂ ತಿಗುಳದಾಮನರಣ್ಯಶರಣ್ಯವೃತ್ತಿಯಿಂ ॥1148॥

ಬಲ್ಲಾಳ II

ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿರ್ದುಚ್ಚಂಗಿಯುಂ ಮುತ್ತಿ ದು ।
ರ್ಧರತೇಜೋನಿಧಿ ಧೂಳಿಗೋಂಟೆಯುನೆ ಕೊಂಡಾ ಕಾಮದೇವಾವನೀ ॥
ಶ್ವರನಂ ಸಂದೊಡೆಯಕ್ಷಿತೀಶ್ವರನನಾ ಭಂಡಾರಮಂ ಸ್ತ್ರೀಯರಂ ।
ತುರಗವ್ರಾತಮುಮಂ ಸಮಂತು ಪಿಡಿದಂ ಬಲ್ಲಾಳಭೂಪಾಳಕಂ ॥1149॥

## 203 ಕಡೂರು 53 [1175]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಂತ್ರಿ ಆಚಿರಾಜನ ಹೆಂಡತಿ ಬನದವೆ ಬ್ರಹ್ಮಸಮುದ್ರದಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳವಂಶ

ಸ್ವಸ್ತಿ ಸಮಸ್ತವಸ್ತುನಿಚಯಾನ್ವಿತಮಾನತಭೂಭೃದಾಶ್ರಯಂ ।
ವಿಸ್ತೃತವೇಷ್ಟಿತಾವನಿತಳಂ ಪೃಥುಸತ್ವಸಮನ್ವಿತಂ ನಿಜಾ ॥
ಪಾಸ್ತಖಳವ್ರಜಾವಕರಮುಜ್ವಳಕೀರ್ತಿಸುಧಾಂಶುಸಂಭವಂ ।
ಪ್ರಸ್ತುತಮಾಯ್ತು ಹೊಯ್ಸಳನೃಪಾಳಕುಳಾಂಬುಧಿ ನಿತ್ಯಸುಸ್ಥಿತಂ ॥1150॥

ಆಚಿರಾಜ

ತನಗಂ ಯೋಗಂಧರಂಗಂ ಪತಿಹಿತಕೃತಿಯೊಳ್ ಮಚ್ಚರಂ ಮನ್ಮಥಂಗಂ ।
ತನಗಂ ಸತ್ಕಾಮಿನೀಮೋಹನಘನಗುಣದೊಳ್ ಮಚ್ಚರಂ ಸ್ವರ್ದ್ರುಮಕ್ಕಂ ॥
ತನಗಂ ವಂದಿವ್ರಜಪ್ರೀಣನವಿತರಣದೊಳ್ ಮಚ್ಚರಂ ಶೂದ್ರಕಂಗಂ ।
ತನಗಂ ಶೌರ್ಯೋಕ್ತಿಯೊಳ್ ಮಚ್ಚರಮನೆ ನೆಗೞ್ದಿರ್ದಾಚಿಯುಂ ಪೋಲ್ವನಾವಂ ॥1151॥

**204 ಹೊನ್ನಾಳಿ 45 [1175]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಸಿಂದರಾಜನಾದ ಈಶ್ವರ ದೇವರಸನು ಬ್ರಾಹ್ಮಣರಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.

ಬಲ್ಲಾಳ II

ಕಮಠಾಧೀಶಫಣೀಂದ್ರದಿಕ್ಕರಿಗಳಿಂ ತಂತಮ್ಮ ಕೇಳೀವಿಲಾ ।
ಸಮನಃಪ್ರೀತಿಯೊಳಿರ್ಪುದಾಯತಮಹಾಭೂಭಾರಮಂ ತಾಳ್ದುವಾ ।
ಶ್ರಮಮೇಕಿಂತಿನಿತೆಂದು ತಾನೆ ತಳೆಯಲ್ ಸಾಲ್ವೆಂ ದಲೆಂಬಂತೆ ದು ।
ರ್ದಮದೋರ್ದಂಡದೆ ತಾಳ್ದಿದಂ ವಸುಧೆಯಂ ಬಲ್ಲಾಳಭೂಪಾಳಕಂ ॥1152॥

ತೂದಪಿಳ್ಳೆದಂಡಾಧಿಪ

ತೊದಳಿಲ್ಲದೊಂದೆ ನುಡಿ ಲೋ । ಭದೊಳೊಂದದ ಮನಮೆಡಂಬಡಿಲ್ಲದ ಚರಿತಂ ।
ಮದಮಿಲ್ಲದ ಸಂಪದಮೆಂ । ಬಿದು ಸಾಜಂ ತೂದಪಿಳ್ಳೆದಂಡಾಧಿಪನೊಳ್ ॥1153॥

**205 ಶ್ರವಣಬೆಳ್ಗೊಳ 66 [1176]**

ಇದರಲ್ಲಿ ನಯಕೀರ್ತಿಗುರು ಸತ್ತಂತೆಯೂ ಮಂತ್ರಿ ನಾಗದೇವನು ನಿಸಿದಿಗೆಯನ್ನು ಮಾಡಿಸಿ ದಂತೆಯೂ ಹೇಳಿದೆ.

ನಯಕೀರ್ತಿ

ಗುರುವಾದಂ ಖಚರಾಧಿಪಂಗೆ ಬಲಿಗಂ ದಾನಕ್ಕೆ ಬಿಣ್ಪಿಂಗೆ ತಾಂ ।
ಗುರುವಾದಂ ಸುರಭೂಧರಕ್ಕೆ ನೆಗಬ್ದಾ ಕೈಲಾಸಶೈಲಕ್ಕೆ ತಾಂ ॥
ಗುರುವಾದಂ ವಿನುತಂಗೆ ರಾಜಿಸುವಿರುಂಗೋಳಂಗೆ ಲೋಕಕ್ಕೆ ಸ ।
ದ್ಗುರುವಾದಂ ನಯಕೀರ್ತಿದೇವಮುನಿಪಂ ರಾದ್ಧಾಂತಚಕ್ರಾಧಿಪಂ ॥1154॥

**206 ಚಿಕ್ಕಮಗಳೂರು ತಾಲ್ಲೂಕು ಕಳಸಾಪುರ ಶಾಸನ [ಸು. 1176]**

(ಮೈಸೂರು ಶಾಸನ ಇಲಾಖೆಯ ರಿಪೋರ್ಟು, 1923, 7 ನೆಯ ಶಾಸನ)

ಇದರಲ್ಲಿ ಹೊಯ್ಸಳರಾಜನಾದ ಎರಡನೆಯ ಬಲ್ಲಾಳನ ಆಳಿಕೆಯಲ್ಲಿ ದೇವಿಸೆಟ್ಟಿ ಕಟ್ಟಿಸಿದ ವೀರಬಲ್ಲಾಳನ ಜಿನಾಲಯಕ್ಕೆ ದೊರೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಮಃ॥ ಘನಮಾರ್ಗಾನುಗತಂ ಜಗತ್ಪ್ರಣುತಮಿತ್ರಂ ಮಂಡಲಾಗ್ರಪ್ರತಾ।
ಪನಿಯುಕ್ತಂ ರಿಪುಭೂಪ ಸಂತಮಸ ಭೇದಂ ಸಜ್ಜನ ... ॥
ನ ಸಂತೋಷಕರಂ ಸ್ವಬಂಧುಜನ ಚಕ್ರಾಹ್ಲಾದಕಂ ಪುಟ್ಟಿದಂ।
ವಿನಯಾದಿತ್ಯ ನೃಪಾಳಕಂ ಯದುಕುಲೋತ್ತುಂಗೋದಯಾದ್ರೀಂದ್ರದಿಂ ॥1155॥

ಏಚಲೆ

ಚಂ॥ ಹಿಮ ರುಚಿಯುಂ ... ರತಿಯುಂ ಲತೆಯುಂ ಸರಸೀಜಮಂ ಮನೋ।
ರಮಂ ಕುಸುಮಂಗಳಂ ಕದಲಿಯುಂ ಮದನಂ ಬಿದಿಯಾಗಿ ತಾನೆ ತೊ॥
ಯ್ದಮೃತದಿನೆಯ್ದೆ ನಿರ್ಮಿಸಿದನೆನ್ನದೆ ಕೇಳೆಱೆಯುಂಗ...ಭೂ।
ರಮಣನ ಕಾಂತೆಯುಂ ಪೆಱತನೆನ್ನದಿರೇಚಲದೇವಿ ರಾಣಿಯುಂ ॥1156॥

## 207 ಚಿಕ್ಕನಾಯಕನಹಳ್ಳಿ 36 [1177]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಹೆಗ್ಗಡೆ ನಾರಸಿಂಗನೂ ಹೆಗ್ಗಡೆ ಮಂಚಯ್ಯನೂ ಬ್ರಾಹ್ಮಣರಿಗೆ ವರ್ಷಾಶನವಾಗಿ ಹಣವನ್ನು ಕೊಟ್ಟಂತೆ ಹೇಳಿದೆ.

ನಾರಸಿಂಗ

ವಿನಯಾಂಭೋರಾಶಿ ಸತ್ಯಾಸ್ಪದನುಪಚಿತಸತ್ಪುಣ್ಯನೌದಾರ್ಯತುಂಗಂ।
ಕನಕಕ್ಷೋಣೀಧ್ರಧೈರ್ಯಂ ಸುಚರಿತನುದಿತಾರ್ಕಪ್ರಭಂ ವಂದಿಕಲ್ಪಾ॥
ವನಿಜಂ ಕೀರ್ತ್ಯಂಗನಾವಲ್ಲಭನೆನುತೆ ಮಹೋತ್ಸಾಹದಿಂ ಕೂರ್ತು ವಿದ್ವ।
ಜ್ಜನಮೆಲ್ಲಂ ನಾರಸಿಂಹಪ್ರಭುವನನುದಿನಂ ಬಣ್ಣಿಕುಂ ಲೀಲೆಯಿಂದಂ ॥1157॥

ಮಂಚಯ್ಯ

ಉದಿತಾರ್ಕಪ್ರಭನತ್ಯುದಾರಚರಿತಂ ಸತ್ಕೀರ್ತಿಚಂದ್ರಾಂಶು ಸ।
ತ್ಯದ ಬಿತ್ತಾಶ್ರಿತಕಲ್ಪವೃಕ್ಷನಸತೀದೂರಂ ಬುಧಾಧಾರನ॥
ಭ್ಯುದಯಶ್ರೀರಮಣಂ ವಿನೂತಗುಣರತ್ನಾಲಂಕೃತಂ ತಾನೆನಲ್।
ಮುದಮಂ ತಾಳ್ದಿದ ಮಂತ್ರಿ ಮಂಚವಿಭುವಂ ಬಣ್ಣಿಪ್ಪನೇವಣ್ಣಿಪಂ ॥1158॥

ಫಲಸ್ತುತಿ

ಶಾಸನಮಿದೇನಿದೇತೞಿ। ಶಾಸನಮಾರಿತ್ತರೇಕೆ ಸಲಿಸುವೆನೆಂಬಾ।
ಸಾಸಿಗನಾಚಂದ್ರಾರ್ಕಂ। ಪೇಸದೆ ನರಕಂಗಳೊಳಗೆ ತಿಱ್ರನೆ ತಿಱಿಗುಂ ॥1159॥

## 208 ಅರಸಿಯಕೆರೆ 62 [1177]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಹಲುಕೂರ ಮಹಾಪ್ರಭುಗಳು ಮುದ್ದಗೌಂಡ, ನಾರಸಿಂಗಗೌಂಡ ಮುಂತಾದವರು ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ಮಾಳವರಾಜ್ಯಮೂಳಮೆನಿಪಗ್ಗದ ಧಾರೆಯನಾತ್ಮಸೇನೆಯಿಂ ।
ಚಾಳಿಸಿ ಚಕ್ರವರ್ತಿಗೆ ಜಯಂ ಮಿಗೆ ತನ್ನ ಭುಜಪ್ರತಾಪಮಂ ॥
ಪಾಳಿಸಿ ದಿಗ್ಜಯಪ್ರಕಟಕೀರ್ತಿಪತಾಕೆಯನುತ್ತರಾಶೆಯೊಳ್ ।
ಕೀಲಿಸಿದಂ ದಿನೇಶನಗಿದೀಕ್ಷಿಸುವಂತೆಱೆಯಂಗಭೂಭುಜಂ ॥1160॥

ಬಲ್ಲಾಳ I

ಚೇರಮು ಬೀರಮುಂ ಬಿಸುಡು ಪಾಂಡ್ಯ ಕಡಂಗದಿರಂಧ್ರು ರಂಧ್ರುಮುಂ ।
ಪಾರದಿರೊಡ್ಡ ಗೊಡ್ಡಮನದಂ ಬಿಡು ಮಾಳವ ಕಾಳೆಗಕ್ಕೆ ಮೆ ॥
ಯ್ದಾರದೆ ಸಾರೆಲೇ ತಿಗುಳ ನೀಂ ಜಗುಟೆಂಬುದಪಾರವೀರದು ।
ರ್ವಾರಗಭೀರಧೀರತೆಯ ವಿಶ್ರುತಘೋಷಣೆ ಬಲ್ಲುಭೂಪನಾ ॥1161॥

ವಿಷ್ಣುವರ್ಧನ

ಎತ್ತದ ಮುನ್ನಮೆತ್ತಿ ನಡಗೊಳ್ಳದ ಮುನ್ನಮಡುರ್ತು ಕೋಪದಿಂ ।
ಮುತ್ತದ ಮುನ್ನಮರ್ಥಮನೆ ತೆತ್ತಿರಿಮಿತ್ತಿರಿಮಾತ್ಮದುರ್ಗಮಂ ॥
ಮತ್ತೆನವೇಡ ನಿರ್ಗಮುಮಿದೆಂದು ವಿರೋಧಿಗೆ ವೀರಲಕ್ಷ್ಮಿ ಸಾ ।
ಱುತ್ತಿರೆ ವಿಷ್ಣುವಿಕ್ರಮದುಪಕ್ರಮಮಾಕ್ರಮಿಸಿತ್ತು ಲೋಕಮಂ ॥1162॥

ಕಮಳಾಕ್ಷಂ ಪುರುಷೋತ್ತಮಂ ವಿಬುಧಲೋಕಾಹ್ಲಾದನಂ ದ್ವಿಷ್ಟದೈ ।
ತ್ಯಮದಧ್ವಂಸನನಂತಭೋಗಯುತನುರ್ವೀದಾರಧೌರೇಯನು ॥
ತ್ತಮಸತ್ವಾನ್ವಿತನುದ್ಘಯಾದವಕುಳಾಳಂಕಾರಮೆಂದಿಂತು ವಿ ।
ಷ್ಣುಮಹೀಶಂ ಸಲೆ ತಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ ॥1163॥

ನಾರಸಿಂಹ I

ಇದಿರಾದರಿಭೂಪಾಲರ । ಮದದಾನೆಯ ಕೊಂಬನುಡಿದು ದಂತದ ಬಳೆಯಂ ।
ಬಿದುವಿನ ಮುತ್ತಿನ ಹಾರಮು । ನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಹಂ ॥1164॥

## ಬಲ್ಲಾಳ II

ಧರೆಯಂ ವಿಕ್ರಾಂತದಿಂದೊಪ್ಪುವ ನಿಜಭುಜದೊಳ್ ತಾಳ್ದಿ ಮಾಱಾಂತು ನಿಂದಿ ।
ರ್ದರಿಭೂಪಾಳರ್ಕಳಂ ದಿಕ್ತಟದ ಕಡೆವರಂ ತೂಳ್ದಿ ತದ್ವೀರಲಕ್ಷ್ಮೀ ।
ವರನಾದಂ ವೀರಬಲ್ಲುಕ್ಷಿತಿಪತಿ ಶರಣಾಯಾತರಕ್ಷಾಕ್ಷಮಂ ಭಾ ।
ಸುರತೇಜಂ ರಾಜರಾಜಂ ಸಕಲಗುಣಗಣಾಂಭೋಜಿನೀರಾಜಹಂಸಂ ॥1165॥

ತನಗಂ ಕಲ್ಪದ್ರುಮಕ್ಕಂ ವಿತರಣಗುಣದೊಳ್ ಮಚ್ಚರಂ ಶೂದ್ರಕಂಗಂ ।
ತನಗಂ ವಿಕ್ರಾಂತವಿದ್ಯೋತಿತ ಭುಜಬಲದೊಳ್ ಮಚ್ಚರಂ ಮೇರುವಿಂಗಂ ॥
ತನಗಂ ಪೆಂಪುಳ್ಳ ಬಿಣ್ಪಂ ತಳೆದ ಮಹಿಮೆಯೊಳ್ ಮಚ್ಚರಂ ತಾನೆನಲ್ ಧ ।
ನ್ಯನಿಳಾಧೀಶರ್ಕಳೊಳ್ ವಿಶ್ರುತವಿಶದಯಶಂ ವೀರಬಲ್ಲಾಳದೇವಂ ॥1166॥

ಮೂಡಲ್ ಸಂಚಳಿಸಿತ್ತು ಕಂಚಿ ಹಡುವಲ್ ಗೋಳಿಟ್ಟುದಂಭೋಧಿಯೆ ।
ಟ್ಟೋಡಿತ್ತಗ್ಗದ ಚೇರದೇಶಮನಿತುಂ ಪಾಂಡ್ಯಾವನೀಮಂಡಳಂ ॥
ಕಾಡೊಳ್ ಕೂಡೆ ತೆರಳ್ದು ಹೊಕ್ಕಡಗಿದತ್ತುದ್ದಾಮಸಂಗ್ರಾಮದೊಳ್ ।
ಕೋಡಿಟ್ಟಂತು ಬರ್ದುಂಕುವನ್ನರೊಳರೇ ಬಲ್ಲಾಳಭೂಪಾಳನೊಳ್ ॥1167॥

ಘನಶೌರ್ಯಂ ಬಲ್ಲುಭೂಪಂ ನಿಜವಿಜಯಹಯಾರೂಢನಾದಂ ಕಳಿಂಗಂ ।
ವನವಾಸೋದ್ಯುಕ್ತನಾದಂ ತುಳುವನಳವುಗೆಟ್ಟೋಡಿದಂ ಕೊಂಕಣಂ ಭೋಂ ।
ಕೆನೆ ಪುಣ್ಯಾರಣ್ಯಮಂ ಸಂವರಿಸಿದನಗಿದಂ ಗೂರ್ಜರಂ ಮಾಳವಂ ವಿಂ ।
ಧ್ಯನಿಕುಂಜಪ್ರಾಪ್ತನಾದಂ ಜಳಧಿನಿಕಟಮಂ ಚೋಳಿಕಂ ವೇಳೆಗೊಂಡಂ ॥1168॥

ದಿಗಧಿಪರಂ ಪಳಂಚಲೆವ ವಿಕ್ರಮದೇಟ್ಗೆ ನಗಂಗಳೇಱುಮಂ ।
ನೆಗಪಲೊಡರ್ಚುವುಜ್ಜಳದ ತೋಳ್ವಲಮಾ ನೆಗಟ್ದರ್ಕಬಿಂಬಮಂ ॥
ಸುಗಿಯಿಪ ತೀವ್ರತೇಜಮಿವು ತನ್ನೊಳೆ ಸಮ್ಮತಮಾದುವೆಂದೊಡಾ ।
ನೃಗನಹುಷಾದಿಗಳ್ ದೊರೆಯೆ ಬಲ್ಲುನೃಪಾಳನ ಬೀರದೇಟ್ಗೆಯೊಳ್ ॥1169॥

## 2 ನೆಯ ಬಲ್ಲಾಳನ ಮಹಿಷಿ ಬಮ್ಮಲದೇವಿ

ಇಂಗಡಲ ಸುತೆಯ ಪೆಂಪಂ । ಭಂಗಿಸುವ ವಿಲಾಸಮದ್ರಿಜಾತೆಯ ಸೊಬಗಂ ।
ಭಂಗಿಸುವ ಸೊಗಸು ತನಗೆನ । ಲೇಂ ಗಳ ಬಣ್ಣಿಸುವರಳವೆ ಬಮ್ಮಲೆವಧುವಾ ॥1170॥

## ನಾರಸಿಂಹಗೌಂಡ

ಈವ ಗುಣಂ ಬೇಡಲೊಡಂ । ಕಾವ ಗುಣಂ ಭೀತಿಯಿಂದೆ ಮಱೆವುಗಲೆನಸುಂ ।
ಭೂಮಿನುತಮಾಗಿ ತೋರ್ಪುವು । ಭಾವಕನಿಧಿ ನಾರಸಿಂಹಗೌಂಡನೊಳೆಂದುಂ ॥1171॥

ಮುದ್ದಗೌಂಡ

ನೋಡಲ್ಕತ್ತಳಗಂ ಸಹಸ್ರನಯನಂಗಂ ರೂಪು ಮಾರ್ಕೊಂಡು ಮಾ ।
ತಾಡಲ್ಕದ್ಭುತಮಂತರಂಗಮೆನಸುಂ ವಿಕ್ರಾಂತಸತ್ಕೀರ್ತಿ ನೀ ॥
ಳ್ದಾಡಲ್ಕಿಟ್ಟೆಡೆ ಪಾರ್ಥಿವೇಷ್ಟಿತಧರಾಚಕ್ರಂ ದಲೆಂದೊಲ್ದು ಮಾ ।
ತಾಡುತ್ತಿರ್ಪುದು ಮುದ್ದಗೌಂಡನ ಗುಣವ್ರಾತಂಗಳಂ ವಂದಿಗಳ್ ॥1172॥

## 209 ನಾಗಮಂಗಲ 70 [1177]

ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಪಟ್ಟಣಸ್ವಾಮಿ ಸೋಮಿಸೆಟ್ಟಿಯು ಪಟ್ಟಣದಲ್ಲಿ ತಾನು ಕಟ್ಟಿಸಿದ ಪಾರ್ಶ್ವಜಿನಾಲಯಕ್ಕೆ ಭೂಮಿಯನ್ನು ಬಿಟ್ಟನೆಂದು ಈ ಶಾಸನದಲ್ಲಿ ಹೇಳಿದೆ.

ಹೊಯ್ಸಳವಂಶ

ಶ್ರೀಪತಿಜನ್ಮದೀದೆಸೆವ ಯಾದವವಂಶದೊಳಾದ ದಕ್ಷಿಣೋ ।
ರ್ವೀಪತಿಯಪ್ಪನೊರ್ವ ಸಳನೆಂಬ ನೃಪಂ ಸೆಳೆಯಿಂದೆ ಕೋಪನ ॥
ದ್ವೀಪಿಯನೊಂದನೊರ್ವ ಮುನಿ ಪೊಯ್ ಸಳ ಎಂದೊಡೆ ಪೊಯ್ದು ಗೆಲ್ದು ದಿ ।
ಗ್ವ್ಯಾಪಿಯಶಂ ನೆಗಳ್ತೆವಡೆದಂ ಗಡ ಪೊಯ್ಸಳನೆಂಬ ನಾಮದಿಂ ॥1173॥

ಸ್ವಸ್ತಿ ಶ್ರೀಜನ್ಮಗೇಹಂ ವಿಧೃತನಿರುಪಮೋದಾತ್ತತೇಜೋಮಹೌರ್ವಂ ।
ವಿಸ್ತಾರಾಂತಃಕೃತೋರ್ವೀತಳಮವನತಭೂಭೃತ್ಕುಲತ್ರಾಣದಕ್ಷಂ ॥
ವಸ್ತುವ್ರಾತೋದ್ಭವಸ್ಥಾನಕಮಮಲಯಶಶ್ಚಂದ್ರಸಂಭೂತಿಧಾಮಂ ।
ಪ್ರಸ್ತುತ್ಯಂ ನಿತ್ಯಮಂಭೋನಿಧಿನಿಭಮೆಸೆಗುಂ ಪೊಯ್ಸಳೋರ್ವೀಶವಂಶಂ ॥1174॥

ಎರೆಯಂಗ

ಆತಂ ಚಾಳುಕ್ಯಚಕ್ರೇಶನ ಬಲದ ಭುಜಾದಂಡಮುದ್ದಂಡಭೂಪ ।
ವ್ರಾತಪ್ರೋತ್ತುಂಗಭೂಭೃದ್ವಿದಳನಕುಳಿಶಂ ವಂದಿಸಸ್ಯೌಘಮೇಘಂ ॥
ಶ್ವೇತಾಂಭೋಜಾತದೇವದ್ವಿರದಸುರನದೀದುಗ್ಧವಾರಾಶಿಚಂದ್ರ ।
ದ್ಯೋತಪ್ರಸ್ಪರ್ಧಿ ಭಾಭಾಸುರವಿಶದಯಶಂ ರಾಜಮಾಂಧಾತೃಭೂಪಂ ॥1175॥

ವಿಷ್ಣುವರ್ಧನ

ಇನಿತಂ ದುರ್ಗಮುವೈರಿದುರ್ಗಚಯಮಂ ಕೊಂಡಂ ನಿಜಾಕ್ಷೇಪದಿಂ ।
ದಿನಿಬರ್ ಭೂಪರನಾಜಿಯೊಳ್ ತವಿಸಿದಂ ತನ್ನುಗ್ರಬಾಣಾಳಿಯಿಂ ॥
ದಿನಿಬರ್ಗಾನತರ್ಗಿತ್ತನುದ್ಧ್ವಪದಮಂ ಕಾರುಣ್ಯದಿಂ ವಿಷ್ಣುವೆಂ ।
ದನಿತಂ ಲೆಕ್ಕಿಸಿ ನೋಟ್ಪೊಡಬ್ಜಭವನುಂ ವಿಭ್ರಾಂತನಪ್ಪಂ ವಲಂ ॥1176॥

### ನಾರಸಿಂಹ I

ವಿಭವೇಂದ್ರಂ ಖಳವಹ್ನಿ ದಂಡಧರನತ್ಯುದ್ವೃತ್ತದೈತ್ಯಾಧಿಪಂ ।
ಶುಭರತ್ನಾಗರನಾಯಕಂ ನತಜಗತ್ಪ್ರಾಣಂ ಬುಧಶ್ರೀದನೈ ॥
ಶ್ಯಭವಂ ತಾನೆನೆ ಲೋಕಪಾಳತೆಯನೇಕಾಯತ್ತಮಂ ಮಾಡಿ ನಿಂ ।
ದಭಿರೂಪಂ ಸುತನಾದನಲ್ತೆ ನರಸಿಂಹಕ್ಷೋಣಿಪಾಳೋತ್ತಮಂ ॥1177॥

ಅರಿದೈತ್ಯಾಧಿಪವಕ್ಷಮಂ ಖರನಖಾನೀಕಂಗಳಿಂ ಪೋೞ್ದು ಬ ।
ಲ್ಗರುಳಂ ತೋಡಿದ ನಾರಸಿಂಹನೆನಲಕ್ಕುಂ ವೈರಿವೀರಾವನೀ ॥
ಶ್ವರವಕ್ಷಸ್ಥಳಮಂ ಸ್ವಖಡ್ಗನಖರವ್ಯಾಘಾತದಿಂ ಪೋೞ್ದು ಬ ।
ಲ್ಗರುಳಂ ತೋಡುವ ನಾರಸಿಂಹನೃಪನಂ ಸಂಗ್ರಾಮರಂಗಾಗ್ರದೊಳ್ ॥1178॥

### ಬಲ್ಲಾಳ II

ಕೇಳ ವಸಂತಬಾಳಸಹಕಾರದ ತಣ್ಣೆೞಲಾಶ್ರಿತಾಳಿಗಾ ।
ಭೀಳಲಯಾಹಿನಿಷ್ಠುರಘಣೌಘದ ಮೆಯ್ನೆೞಲುದ್ಧತಾರಿಗು ॥
ನ್ಮೀಳಿತಪುಂಡರೀಕದ ನೆೞಲ್ ಜಯಲಕ್ಷ್ಮಿಗೆನಿಪ್ಪ ವೀರಬ ।
ಲ್ಲಾಳನ ತೋಳ ಬಾಳ ನೆೞಲಾದುದು ಧಾತ್ರಿಗೆ ವಜ್ರಪಂಜರಂ ॥1179॥

ಮನುಚಾರಿತ್ರಂ ಚರಿತ್ರಂ ಮನಸಿಜಲಲಿತಾಕಾರಮಾಕಾರಮಬ್ಜಾ ।
ಕ್ಷನ ಮಂತ್ರಂ ಮಂತ್ರಮಿಂದ್ರಾತ್ಮಜನದಟದಟಿಂತೀಶನಾರ್ಪಾರ್ಪು ಭಾಸ್ವಂ ॥
ತನ ತೇಜಂ ತೇಜಮಂಭೋಜಜನಱಿವಱಿವಿಂದ್ರಪ್ರಭಾವಂ ಪ್ರಭಾವಂ।
ತನಗಾತ್ಮಾಯತ್ತಮಿಂತೀಜಗದೊಳೆನಿಸಿದಂ ವೀರಬಲ್ಲಾಳದೇವಂ ॥ 1180 ॥

### ನರಸಿಂಗ ನಾಯಕ

ಮುಂದಿದಿರಾಂತನಂತರಿಪುಸೈನಿಕರಂ ಸಿಡಿಲಂತೆ ಸಿಂಗದಂ।
ತಂತಕನಂತೆ ಸಂಗರದೊಳೋವದೆ ಜೀರಗೆಯೊಕ್ಕಲಿಕ್ಕಿ ಸಾ।
ಮಂತಲಲಾಮನೀ ನೆಗೞ್ದ ತೆಂಕಣರಾಯನೆನಲ್ಕೆನಿಪ್ಪ ಪೆಂ।
ಪಂ ತಳೆದಂ ಪ್ರತಾಪನಿಳಯಂ ಧರೆಯೊಳ್ ನರಸಿಂಗನಾಯಕಂ ॥ 1181 ॥

### ನಯಕೀರ್ತಿ

ಸಸಿಯಿಂದಂಬರಮಬ್ಜದಿಂ ತಿಳಿಗೊಳಂ ನೇತ್ರಂಗಳಿಂದಾನನಂ।
ಪೊಸಮಾವಿಂ ಬನಮಿಂದ್ರನಿಂ ತ್ರಿದಿವಮಾಶೇಷಂ ಮಣಿವ್ರಾತದಿಂ॥
ದೆಸೆವಂತೀನಯಕೀರ್ತಿದೇವಮುನಿಯಿಂ ರಾದ್ಧಾಂತಚಕ್ರೇಶನಿಂ।
ದೆಸೆಗುಂ ಶ್ರೀಜಿನಧರ್ಮಮೆಂದೊಡೆ ಬೞಿಕ್ಕೇವಣ್ಣಿಪೊಂ ಬಣ್ಣಿಪೊಂ ॥ 1182 ॥

ದಾಮನಂದಿ

ಅಮಂದಂ ಪಿತಾಮಹಂ ವೀ। ತಮದಂ ಮದನಾರಿ ಮೂಕನಾವಿಪತಾಕಂ।
ದಮಿತಾನ್ಯವಾದಿಯೆನೆ ಸಂ। ದ ಮಾನನಿಧಿ ದಾಮನಂದಿಮುನಿಸನ್ನಿಧಿಯೊಳ್ ॥ 1183 ॥

## 210 ಬೇಲೂರು 86 [1177]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಾಪ್ರಧಾನ ತಂತ್ರಪಾಳ ಹೆಮ್ಮಾಡಿ ಕೂಡಲೂರಲ್ಲಿ ಹರಿಹರದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಕುಡದಿರ್ದಗ್ಗದ ದಾನಮಿಲ್ಲವನ ಬಾಣಶ್ರೇಣಿಗುಳ್ಳಳ್ಕಿ ಬೆಂ।
ಗುಡದುರ್ವೀಶ್ವರರಿಲ್ಲ ವಿಶ್ರುತಜಯಸ್ತಂಭಂ ಸ್ವನಾಮಾಂಕಿತಂ ॥
ನಡದಾಶಾತಟಮಿಲ್ಲ ಕೀರ್ತಿಭರದಿಂದಾನಂದಮಂ ತಾಳ್ದದೊಂ।
ದೆಡೆಯುಂ ಲೋಕದೊಳಿಲ್ಲೆನಲ್ಕೆ ನೆಗಟ್ದಂ ಶ್ರೀವಿಷ್ಣುಭೂಪಾಳಕಂ ॥ 1184 ॥

ನಾರಸಿಂಹ I

ಜವನ ಪೊಡರ್ಪು ಚಂಡಿಕೆಯ ಕಾಯ್ಪು ಪುರಾರಿಯ ಕಣ್ಣ ಕಿಚ್ಚು ಮಾ।
ಧವನ ಗದಾಭಿಘಾತಮಮರೇಂದ್ರನ ವಜ್ರಭವಾನಲಾರ್ಚಿ ತ॥
ಳ್ತವೊಲೊಗೆತಂದ ದುರ್ಧರತರಪ್ರಬಳಪ್ರಥಿತಪ್ರತಾಪಮಂ।
ಬವರದೊಳೆಯ್ದೆ ಬೀಱುವುದು ಭೂರಿಭುಜಂ ನರಸಿಂಹಭೂಪನಾ ॥ 1185 ॥

ಬಲ್ಲಾಳ II

ಎಳೆವೆಣ್ಣಾ ಧವಳಾತಪತ್ರದ ನೆೞಲ್ ಸಂಪ್ರೀತಿಯೊಳ್ ಕೂಡೆ ಕ।
ಜ್ಜಳಮಂ ಕೂರಸಿ ವೈರಿಕಾಂತೆಯರ ಕಣ್ಣಿಂ ದೂರದೀಡಾಡೆ ಚಾ॥
ಪಳಮಂ ಗೋಮಿನಿ ಬಿಟ್ಟು ಪೇರುರದೊಳೆಂದುಂ ಲೀಲೆಯಿಂದಾಡೆ ದಿ।
ಗ್ವಳಯಾರೂಢಭುಜಪ್ರತಾಪನೆಸೆವಂ ಬಲ್ಲಾಳಭೂಪಾಳಕಂ ॥ 1186 ॥

ತ್ರಿದಶೇಭೇಂದ್ರದ ಬಲ್ಪನಿಂಗಡಲ ಗುಣ್ಪಂ ಪಾರ್ವತೀಸೂತಿಶೈ।
ಲದ ಧೈರ್ಯೋನ್ನತಿಯಂ ಸುಧಾಂಶುವ ಕಲಾಸಂಪತ್ತಿಯಂ ಶಂಕರಾಂ॥
ಗದ ವಿಶ್ವಸ್ತವನೀಯ ವೃತ್ತಿಯನಿಳಾಲೋಕಕ್ಕೆ ತನ್ನಿಂದೆ ಮಾ।
ಟ್ಟುದದೆಂದುಂ ಮಹನೀಯಕೀರ್ತಿ ವಿಭವಂ ಬಲ್ಲಾಳಭೂಪಾಳನಾ ॥ 1187 ॥

ಸದಯಾಂತಃಕರಣಂ ರಣಪ್ರಣಯಿ ವೀರಾಗ್ರೇಸರಂ ಪಾಪಭೀ।
ರು ದಿನಾಧೀಶಲಸತ್ಪ್ರತಾಪನವನೀತಾಪಾಪಹಂ ಕಾಮುಸ॥
ಮ್ಮದರೂಪಂ ಪರಕಾಮಿನೀವಿಷಯನಿಷ್ಕಾಮಂ ಮಿಳದ್ಭಾವನಾ।
ಸ್ಪದನೆಂದುಂ ಗುಣವೃದ್ಧನದ್ಭುತಗುಣಂ ಬಲ್ಲಾಳಭೂಪಾಳಕಂ ॥ 1188 ॥

ಪದುಳಂ ಪಾಳಿಪನೆಳೆಯಂ। ವಿದಿತಗುಣಂ ಸಕಳಜಳಧಿಜಳಮೇಖಳೆಯಂ।
ಮದವದರಿಕರಟಿಸಂಕುಳ। ಬಿದುವಿದಳನಭೀಮಬಾಹು ಬಲ್ಲಾಳನೃಪಂ ॥ 1189 ॥

ತಂತ್ರಪಾಳ ಹೆಮ್ಮಾಡಿ

ಶ್ರುತಶೀಲಂ ಭುವನಾಶ್ರಯಂ ಪರಿಚಯಾವಜ್ಞಾನದೂರಂ ಬುಧ।
ಸ್ತುತಭಾವಂ ವಿನುತಾನವದ್ಯವಿಭವಂ ಸಾಮಾದ್ಯುಪಾಯಪ್ರಗ॥
ಲ್ಭತರಾಭ್ಯುನ್ನತಿ ತಂತ್ರಪಾಳನೆಳೆಯೊಳ್ ಪೆರ್ಮಾಡಿ ತಾಂ ತಾಳ್ದಿದಂ।
ಮತಿಯಂ ಮೈಮೆಯನೊಳ್ಪನಾಚರಣಮಂ ಸಂಪ್ರೀತಿಯಂ ನೀತಿಯಂ ॥ 1190 ॥

ಅಱಿತದ ಮಾತು ನಾಲಗೆಯ ಬಡ್ಡಿಗೆ ಬಾರದ ದೀನಮಾನಸರ್।
ಮಱೆವುಗೆ ಕಾವ ಮಾತು ಮನದೊಳ್ ಪೊಱಪೊಣ್ಮದ ಮಾನಸಿಕ್ಕೆಯಂ॥
ನೆಱಪುವ ಮಾತು ನೀತಿನಿಲಯಕ್ಕೊಳಸಲ್ಲದಮಾತ್ಯವೃತ್ತಿಯಂ।
ಜಱೆವುದು ತಂತ್ರಪಾಳಕಶಿಖಾಮಣಿ ಪೆರ್ಮನ ಕೀರ್ತಿಡಿಂಡಿಮಂ ॥ 1191 ॥

## 211 ಚೆನ್ನರಾಯಪಟ್ಟಣ 209 [1178]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಸೂಜಿಯ ಮಾದೆಯನಾಯಕನು ಬಳ್ಳಿಗಟ್ಟದಲ್ಲಿ ಕುಸುಮೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳವಂಶ

ಶ್ರೀನಾರೀಜನ್ಮಗೇಹಂ ಭುವನವಿನುತಮುದ್ದಾಮಸತ್ವಪ್ರಯುಕ್ತಂ।
ನಾನಾರತ್ನಪ್ರಕೀರ್ಣಂ ಪರಿಮಿಳಿತವರಾನಂತಭೋಗಪ್ರಯೋಗ॥
ಸ್ಥಾನಂ ವಾರಾಶಿಯೆಂತಂತಿರೆ ಗಡ ಧರೆಯೊಳ್ ರಾಜಕಾಂತಿಪ್ರವೃದ್ಧಂ।
ತಾನಾಗುತ್ತಿರ್ಪುದೇಂ ಕೌತುಕಮೆ ಸತತಮೀ ಪೊಯ್ಸಳೋರ್ವೀಶವಂಶಂ ॥ 1192 ॥

ಬಲ್ಲಾಳ II

ನೆಱೆ ಮೂಲೋಕಮುಮೆಯ್ದುದೆಯ್ದೆ ಬಳಸಲ್ ಪಕ್ಷೀಶನುಂ ಲಂಘಿಸಲ್ ।
ನೆಱೆಯಂ ಕೂಟತಟಕ್ಕೆನಿಪ್ಪತುಳಭಾಸ್ವದ್ದುರ್ಗಮಂ ಪಾಂಡ್ಯನ॥
ಟ್ಟಿಱಿಸುಚ್ಚಂಗಿಯ ಬೆಟ್ಟನಶ್ರಮದಿನಾಟಂದಣ್ಣೆಕಲ್ಲಾಡಿದಂ।
ತ್ರಿಜಿಕಲ್ಲಾಡಿದನೇನತಿಪ್ರಬಳನೋ ಬಲ್ಲಾಳಭೂವಲ್ಲಭಂ ॥ 1193 ॥

ಸೂಜಿಯ ಸೋಮ

ತೊಡರ್ವರ ಮಾರಿ ಮೀಱುವರ ಮಿಟ್ಟುಱದಿರ್ಪರ ಬಮ್ಮರಕ್ಕಸಂ।
ಪೊಡರ್ವರತಂಕಂ ಮಲೆದು ಸೈರಿಸದಿರ್ಪರ ಶೂಲಮೆಂಬ ಚೆ॥
ಲ್ವೊಡರಿಸುವಂಕಮಾಲೆಗಳೊಳೊಂದಿರೆ ದಿಗ್ವನಿತಾಳಿಯಟ್ಟಿಱಿಂ।
ಗಡಣದೆ ಪಾಡುಗುಂ ನೆಗಟ್ದ ಸೂಜಿಯ ಸೋಮನನಾಜಿಭೀಮನಂ ॥ 1194॥

ಸೂಜಿಯ ಮಾದ

ಸೇಣಿಗೆ ಮಲೆವರ ಗಂಡಂ। ಸೇಣಿಯನುಱದುೞತೆ ಹಿಂತೆ ಹಟಿವರ ಗಂಡಂ।
ಸೇಣಿಗೆ ಕೂರ್ಪರ ನಂಟಂ। ಸೇಣಿಗೆ ಸನ್ನಾಹನಲ್ತೆ ನಾಯಕಮಾದಂ ॥ 1195 ॥

ಕುಸುಮೇಶ್ವರ ದೇವಸ್ಥಾನ

ವಸುಧಾದೇವಿಯ ಮಕುಟವೊ। ಪೊಸತೊಂದಿಂದ್ರನ ವಿಮಾನಮಿೞಿದುದೊ ದಿವದಿಂ।
ವಸುಮತಿಗೇಂದೆನೆ ಪಿರಿದುಂ। ಕುಸುಮೇಶ್ವರದೇವತಾಲಯಂ ಕಣ್ಗೆಸೆಗುಂ ॥ 1196 ॥

## 212 ರೋಣ ಶಾಸನ [1179]

(ಎಪಿಗ್ರಾಫಿಯಾ ಇಂಡಿಕ, XIX, 226)

ಇದರಲ್ಲಿ ಕಳಚುರ್ಯ ರಾಜನಾದ ಸಂಕಮನ ಆಳಿಕೆಯಲ್ಲಿ ಸಿಂದ ವಂಶದ ವಿಕ್ರಮಾದಿತ್ಯನು ಬಾಚಿಯ ಸಾಹಣಿಯ ಪ್ರಾರ್ಥನೆಯಿಂದ ಚಾಮೇಶ್ವರ ಮಾಳೇಶ್ವರ ದೇವಸ್ಥಾನಗಳಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಸಮುದ್ರ

ಸ್ವಸ್ತಿ ಸಮಸ್ತ ಭೂವಳಯವೇಷ್ಟಿತಮುಜ್ವಳ ಮೌಕ್ತಿಕಾದಿ ಸ।
ದ್ವಸ್ತು ವಿಕೀರ್ಣಮುಚ್ಚಳಿತ ತುಂಗ ತರಂಗ ಸಹಸ್ರ ಮಾಳಿಕಾ॥
ನ್ಯಸ್ತ ವಿಯತ್ತಳಂ ಸೊಗಯಿಸಿರ್ಪುದು ಭಾವಿಸಿ ನೋಡೆ ನಾಡೆ ಲೋ।
ಕಸ್ತುತಮಾಗಿ ಮತ್ಸ್ಯ ಮಕರೋತ್ಕರ ಸಂಸ್ಥಿತ ಘೂರ್ಣಿತಾರ್ಣವಂ॥ 1197 ॥

ಜಳ ಹಸ್ತಿವ್ರಾತ ಹಸ್ತಾಹತಿಯಿನೊಗೆದು ನುಣ್ಮುತ್ತುಗಳ್ ಸೂಸೆ ತೀರ।
ಸ್ಥಳಿಯೊಳ್ ಮೆಯ್ವೆರ್ಚಿ ಮೇಗಣ್ಗೊಗೆದು ತೆರಳೆ ನೂಂಕುತ್ತೆ ಶುಭ್ರಾಭ್ರಮಂ ನಿ॥
ರ್ಮಳ ಕಲ್ಲೋಲೌಘದಿಂದಂ ಗಗನ ತಳಕೆ ತೂಂತಿಟ್ಟವೋಲೀಕ್ಷಿಸಲ್ ಕಂ।
ಗೊಳಿಕುಂ ಭೂಗೋಳಮಂ ಸುತ್ತಿಱಿದತುಳತರಧ್ವಾನಮಂಭೋನಿಧಾನಂ ॥ 1198 ॥

## ಮೇರು ಪರ್ವತ

ಸುರಕಾಂತಾ ರತ ಕೂಜಿತ ಪ್ರತಿರವ ಪ್ರೋಜ್ಜೃಂಭಿತಂ ಕಿನ್ನರೀ।
ವರ ಗೀತಾರವ ಮೋಹಿತ ದ್ವಿಪ ಕುಳಂ ಸಿದ್ಧಾಂಗನಾ ಪಾದ ಪಂ॥
ಕರುಹ ಪ್ರಾಂಚಿತ ಕುಂಕುಮಸ್ಥಗಿತ ಚಂಚಚ್ಚಂದ್ರಕಾಂತೋಪಲಂ।
ಕರವೊಪ್ಪಿರ್ಪುದು ರತ್ನಕೂಟರಮಣೀಯಂ ಮೇರುಧಾತ್ರೀಧರಂ॥ 1199 ॥

## ಕುಂತಳ ದೇಶ

ಪೊಲನೆಲ್ಲಂ ಗಂಧಶಾಲಿಪ್ರಕರ ಪರಿವೃತಂ ನಂದನಶ್ರೇಣಿಯೆಲ್ಲಂ।
ಫಲಭಾರಾನಮ್ರ ಚೂತಾವನಿಜ ವಲಯಿತಂ ದೀರ್ಘಿಕಾನೀಕಮೆಲ್ಲಂ॥
ದಲಿತಾಂಭೋಜಾತ ರೇಣುಸ್ಥಗಿತ ಲಲಿತಮೂರೂರ್ಗಳೆಲ್ಲಂ ಪ್ರಜಾ ಸಂ।
ಕುಲ ಗೋಧಾನ್ಯ ಪ್ರಕೀರ್ಣಾಂಚಿತಮೆನಲೆಸೆಗುಂ ಕುಂತಳೋರ್ವೀವಿಳಾಸಂ ॥ 1200 ॥

## ಕುಂತಳ ಮಧ್ಯ ದೇಶ

ಪಲವುಂ ಗ್ರಾಮಂಗಳಿಂ ಪತ್ತನ ನಿಕರದೆ ಸಂವಾಹನವ್ರಾತದಿಂ ಪೇ।
ಶಲ ಖೇಡವ್ಯೂಹದಿಂ ಖರ್ವಡ ನಗರ ಮಡಂಬೌಘದಿಂ ಕೂಡೆ ಚೆಲ್ವಂ ॥
ತಳೆದ ದ್ರೋಣಾಮುಖಶ್ರೇಣಿಯಿನೆಸೆವ ನದೀ ಜಾಲದಿಂ ಭೂರಿ ಭೂಮಂ।
ಡಳದೊಳ್ ಕಣ್ಗೆಡ್ಡಮಾಗಿರ್ಪುದು ರುಚಿರತೆಯಿಂ ಮಧ್ಯದೇಶಂ ವಿಶೇಷಂ ॥ 1201 ॥

## ಸಂಕಮ ದೇವ

ತತ್ಕುಂತಳಾಧಿಪತಿ ಭಾ। ಸ್ವತ್ಕೀರ್ತಿ ವಿಲಾಸನುದ್ಧತಾರಾತಿ ಮಹೀ।
ಭೃತ್ಕುಲಿಶ ದಂಡನದಟ ಚ। ಮತ್ಕಾರಂ ಶೌರ್ಯಶಾಲಿ ಸಂಕಮದೇವಂ ॥ 1202 ॥

ಬಳವದ್ವಿದ್ವಿಷ್ಟ ಭೂಪಾಳಕರಸುಱಿದೆ ಕಿಟ್ಟಿಕ್ಕಿ ತದ್ರಾಜ್ಯ ಚಿಹ್ನಂ।
ಗಳನುದ್ಯದ್ದೇಶ ಕೋಶಂಗಳನವಯುವದಿಂ ಕೊಂಡು ಸಲ್ಲೀಲೆಯಿಂದಂ॥
ಜಳಧಿವ್ಯಾವೇಷ್ಟಿತೋರ್ವೀವಳಯಮಸಿತುಮಂ ತಾಳ್ದಿದಂ ತನ್ನ ದೋರ್ಮಂ।
ಡಳದೊಳ್ ನಿಶ್ಶಂಕಲಂಕೇಶ್ವರನಮಳಯಶಂ ಸಂಕಮಕ್ಷೋಣಿಪಾಳಂ ॥ 1203 ॥

## ಸಿಂದ ವಂಶದ ಆಚುಗಿ

ಮಲೆಯುಂ ಸಾಧಿಸಿ ಡಾಹಳಾಧಿಪತಿಯಂ ಬೆಂಕೊಂಡು ಮಿಕ್ಕಿರ್ದ ದೋ।
ರ್ಬಲದಿಂದುಪ್ಪಿನ ಕಟ್ಟೆಯಂ ಕವರ್ದು ಸಂಗ್ರಾಮಾಗ್ರದೊಳ್ ಸಂದ ಮ॥
ಯ್ಗ ಲಿಯಾಗಿರ್ದ ಕಡಾರಗಂಗನನಗುರ್ವ್ವರ್ವೇಟ್ವಿನಂ ಕೊಂದು ಭೂ।
ತಲದೊಳ್ ತಾನೆಸೆದಿರ್ದನಾಚುಗಿ ನೃಪಾಲಂ ಸಿಂದವಂಶೋತ್ತಮಂ ॥ 1204 ॥

## ಪೆರ್ಮಾಡಿ ದೇವ

ಘನ ಬಾಹಾ ಬಳದಿಂದೆ ಹೊಯ್ಸಳನ ಮತ್ತೇಭಂಗಳಂ ವಸ್ತು ವಾ।
ಹನಮಂ ಕೊಂಡತಿಧೀರನಂ ತೊಱಹನಂ ಬೆಂಕೊಂಡು ತೂಳ್ದಿಯ್ದಿ ಮು॥
ಟ್ಟಿ ನೆರಂಬಾರದೆ ಕಟ್ಟಿ ತಂದು ಚಲದಿಂ ಚಾಳುಕ್ಯರಾಯಂಗೆ ಕೊ।
ಟ್ಟನನೂನ ಪ್ರಬಳ ಪ್ರತಾಪ ವಿಭವಂ ಪೆರ್ಮಾಡಿ ಭೂಪಾಳಕಂ ॥ 1205 ॥

## ಚಾವುಂಡ ಭೂಪ

ವರ ಹೋಮಾಗ್ನಿಯ ವಾಜಿ ಮಾಂಸಮನಲಂಪಿಂ ಮೆಲ್ವ ಮಾತಂಗ ಭೀ।
ಕರ ಕುಂಭಸ್ಥಿತ ರಕ್ತಪಾನಮನರುತ್ತಾನಂದದಿಂ ಪೀರ್ವ ನಿ॥
ಷ್ಠುರ ನಿಸ್ತ್ರಿಂಶ ನಿಜಾಸಿಯೊಳ್ ನೆರೆದು ದೇವೀ ಸಂಗರಂ ಸಾಧಿಪರ್।
ಧುರದೊಳ್ ಚಿತ್ರಮಿದಲ್ತೆ ಶತ್ರುಮಹಿಪರ್ ಚಾವುಂಡಭೂಪಾಳನಿಂ ॥ 1206 ॥

ಕುಲಶೈಲಂ ರಜತಾದ್ರಿಯಂ ಜಲಧಿ ದುಗ್ಧಾಂಭೋಧಿಯಂ ವಾಹಿನೀ।
ಕುಲಮಿಂದ್ರಾಪಗೆಯಂ ತಮಾಲ ತರು ಕಲ್ಪೋರ್ವಿಜಮಂ ವಿಷ್ಣು ನಿ॥
ರ್ಮಲ ಗಂಗಾಧರನಂದಮಂ ನೆಱೆಯೆ ಪೋಲ್ತಿರ್ಪನ್ನೆಗಂ ಪರ್ವಿತು।
ಜ್ವಲ ಕೀರ್ತಿದ್ಯುತಿ ಲೀಲೆಯಿಂ ತ್ರಿಜಗಮಂ ಚಾವುಂಡಭೂಪಾಲನಾ ॥ 1207 ॥

## ವಿಕ್ರಮಾದಿತ್ಯ

ಪ್ರಜೆಯಂ ಪಾಲಿಸಿ ಧರ್ಮಮಂ ನಿಲಿಸಿ ಶಿಷ್ಟವ್ರಾತಮಂ ಕಾದರಿ।
ವ್ರಜಮಂ ಸೋದು ನಿರಂತರಂ ವಿಪುಳ ಲಕ್ಷ್ಮೀಧಾಮನಾದಂ ಮಹೀ॥
ಭುಜ ಚೂಡಾಮಣಿ ಸಿಂದವಂಶ್ಯನಜಿತಂ ಶ್ರೀ ವಿಕ್ರಮಾದಿತ್ಯನಾ।
ಪ್ತಜನೋದ್ಯನ್ನಿಧಿ ಮಂಡಳೇಶತಿಲಕಂ ಚಾವುಂಡದೇವಾತ್ಮಜಂ ॥ 1208 ॥

## ಬಾಚಿಯ ಸಾಹಣಿ

ಸತ್ಯ ಪರಾಕ್ರಮಂ ಪರಹಿತವ್ರತಿಯೆಂತೆಱಿಕಾಟಿ ವಿಕ್ರಮಾ।
ದಿತ್ಯನ ಬೀಡಿನೊಳ್ ನೆಗಟ್ದನಂತೆ ಜಗನ್ನುತ ವೀರ ವಿಕ್ರಮಾ।
ದಿತ್ಯನ ಬೀಡಿನೊಳ್ ನೆಗಟ್ದನೀ ಸುಭಟಾಗ್ರಣಿಯೆಂದು ಬಣ್ಣಿಕುಂ।
ಭೃತ್ಯ ನಿಧಾನಸಂ ನೆಗಟ್ದ ಬಾಚಿಯ ಸಾಹಣಿಯಂ ಜಗಜ್ಜನಂ ॥ 1209 ॥

**213 ಶಿಕಾರಿಪುರ 96 [1179]**

ಇದರಲ್ಲಿ ಕಳಚುರ್ಯರಾಜನಾದ ಸಂಕಮದೇವನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಸಂಕಮದೇವ

ಗೌಳಗಜಂ ತುರುಷ್ಕತುರಗಂ ವರಸಿಂಹಳನಾಥಮೌಕ್ತಿಕಂ।
ಚೋಳಸುಧಾಂಬರಂ ಮಗಧಕತ್ತುರಿಯಿಂ ಮಳಯೇಶಚಂದನಂ॥
ಲಾಳನ ಬಾಳಕಂ ನೆಱೆಯಿವೆಂದು ಚರರ್ ಸಲೆ ಬಿನ್ನಪಂಗಳಂ।
ಕೇಳಿಸುತಿರ್ಪರೋಲಗದೊಳಂ ವಿಭುಸಂಕಮದೇವಭೂಪನಾ ॥ 1210 ॥

ತೈಲಪದೇವ

ಕದನಕ್ಕುಗ್ರಾರಿಯಣ್ಮಲ್ ತ್ರಿದಶಭುವನಮಂ ಪ್ರೀತಿಯಿಂ ಬಂದು ಕಾಣ್ಬಂ।
ಗೊದವಿರ್ದೈಶ್ವರ್ಯಮಂ ಭೀತರಿಗಸುಗತಿಯಂ ಮಾಳ್ಪನೇ ನೋಟ್ಪೆವೆಂದಂ॥
ಗಿದೆ ದಲ್ ಮಾಳ್ಪಂ ಕಱುತ್ತೆಕ್ಕಲನೃಪತನಯಂ ತೈಲಪಕ್ಷೋಣಿಪಾಲಂ।
ಮುದದಿಂದಂ ಪ್ರೀತಿಯಿಂದಂ ಹೃದಯದ ಕೃಪೆಯಿಂ ನಾಡು ಮೆಚ್ಚಲ್ಕೆ ನಿಚ್ಚಂ॥1211॥

ಏರಹರಸ

ಧುರದೊಳಗೋಡಿದ ರಿಪುನೃಪ। ರರಸಿಯರ ಕಟಾಕ್ಷರುಚಿಯನೀಕ್ಷಿಸರಿನ್ನುಂ।
ಧರೆಯೊಳಗೇಱಹರಸನ ಪೊಸ। ಕರವಾಳಿನ ಬೆಳಗೆ ಪೊಳೆಯಿತೆಂಬತಿಭಯದಿಂ ॥ 1212 ॥

**214 ನಾಗಮಂಗಲ 15 [1179]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ದುಮ್ಮೆಯನಾಯಕನು ಜೆಟ್ಟಿಗದಲ್ಲಿ ಹೇಮೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ವಿನಯಂ ಬುಧರಂ ರಂಜಿಸೆ। ಘನತೇಜಂ ವೈರಿಬಳಮನಳಱಿಸೆ ನೆಗಳ್ದಂ।
ವಿನಯಾದಿತ್ಯನೃಪಾಳಕ। ನನುಗತನಾಮಾರ್ಥನಮಳಕೀರ್ತಿಸಮರ್ಥಂ ॥ 1213 ॥

ನಾರಸಿಂಹ I

ಅವರ್ಗೆ[1] ಮನೋಜನಂತೆ ಸುದತೀಜನಚಿತ್ತಮನಿಱಿಕ್ಕೊಳಲ್ಕೆ ಸಾ।
ಲ್ವವಯವಶೋಭೆಯಿಂದತನುವೆಂಬಭಿಧಾನಮನಾನದಂಗನಾ॥
ನಿವಹಮನೆಚ್ಚು ಮುಯ್ವುನಣಮಾನದೆ ಬೀರರನೆಚ್ಚು ಯುದ್ಧದೊಳ್।
ತವಿಸುವನಾದನಾತ್ಮಭವನಪ್ರತಿಮಂ ನರಸಿಂಹಭೂಭುಜಂ ॥ 1214 ॥

---

1 ವಿಷ್ಣುವರ್ಧನ ಲಕ್ಷ್ಮೀದೇವಿಯರಿಗೆ

ಪಡೆಮಾತೇಂ ಬಂದು ಕಂಡಂಗಮೃತಜಳಧಿ ತಾಂ ಗರ್ವದಿಂ ಗಂಡವಾತಂ।
ನುಡಿವಾತಂಗೇನನೆಂಬೈ ಪ್ರಳಯಸಮಯದೊಳ್ ಮೇರೆಯಂ ಮೀಱಿ ಬರ್ಪಾ॥
ಕಡಲನ್ನಂ ಕಾಳನನ್ನಂ ಮುಳಿದ ಕುಳಿಕನನ್ನಂ ಯುಗಾಂತಾಗ್ನಿಯನ್ನಂ।
ಸಿಡಿಲನ್ನಂ ಸಿಂಗದನ್ನಂ ಪುರಹರನುರಿಗಣ್ಣನ್ನನೀ ನಾರಸಿಂಹಂ ॥ 1215 ॥

ರಿಪುಸರ್ಪದ್ದರ್ಪದಾವಾನಳಬಹಳಶಿಖಾಜಾಳಕಾಳಾಂಬುವಾಹಂ।
ರಿಪುಭೂಪೋದ್ಯತ್ಪ್ರದೀಪಪ್ರಕರಪಟುತರಸ್ಫಾರಜಂಝಾಸಮೀರಂ॥
ರಿಪುನಾಗಾನೀಕತಾರ್ಕ್ಷ್ಯಂ ರಿಪುನೃಪನಳಿನೀಷಂಡವೇತಂಡರೂಪಂ।
ರಿಪುಭೂಭೃದ್ಭೂರಿವಜ್ರಂ ರಿಪುನೃಪಮದವಮಾತಂಗಸಿಂಹಂ ನೃಸಿಂಹಂ ॥ 1216 ॥

ಬಲ್ಲಾಳ II

ಗತಲೀಳಂ ಲಾಳನಾಳಂಬಿತಬಹಳಭಯೋಗ್ರಜ್ವರಂ ಘೂರ್ಜರಂ ಸಂ।
ಧೃತಶೂಳಂ ಗೌಳನುಚ್ಚೈಃಕರಧೃತವಿಲಸತ್ಪಲ್ಲವಂ ಪಲ್ಲವಂ ಚೂ॥
ರ್ಣಿತಚೋಳಂ ಚೋಟನಾದಂ ಕದನವದನದೊಳ್ ಭೇರಿಯಂ ಪೊಯ್ಸೆ ವೀರಾ।
ಹಿತಭೂಭೃಜ್ಜಾಳಕಾಳಾನಳನತುಳಬಳಂ ವೀರಬಲ್ಲಾಳದೇವಂ ॥ 1217 ॥

**214 (ಅ) ದಾವಣಗೆರೆ 44 [ಸು. 1180]**

ಇದರಲ್ಲಿ ಕಳಚುರ್ಯರಾಜನಾದ ಸಂಕಮದೇವನ ಆಳಿಕೆಯಲ್ಲಿ ಮಾದೇವದಂಡನಾಯಕನು ಹರಿಹರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸಮುದ್ರ

ಪರಿಧಾವನ್ಮತ್ಸ್ಯಪುಚ್ಛಾಹತಮಕರಕರಾಸ್ಫಾಳನಾಭೀಳನಕ್ರ।
ಸ್ಫುರಿತೋದ್ಯಚ್ಛಿಂಶುಮಾರಕ್ರಮಣಸಮುದಿತೋಚ್ಚಂಡವಾತಾಭಿಘಾತೋ॥
ದ್ಧುರವೀಚೀಶೀಕರೌಘಸ್ಥಗಿತನಿಖಿಳದಿಙ್ಮಂಡಳಂ ರಂಜಿಕುಂ ಭಾ।
ಸುರಜಂಬೂದ್ವೀಪವೇಳಾವಳಯಿತಬಹುಳಧ್ವಾನರೌದ್ರಂ ಸಮುದ್ರಂ ॥ 1218 ॥

ಮಂದರ

ಸುರವಿದ್ಯಾಧರದಂಪತಿಪ್ರಕರದಿಂ ಚಂದ್ರಾರ್ಕತಾರಾಗಣೋ।
ತ್ಕರಶೋಭಾಂಚಿತಮೇಖಳಾವಳಯದಿಂ ಸತ್ಕಾಂಚನೋದ್ದೀಪ್ತಿಬಂ॥
ಧುರಗೋತ್ರಾಚಳದುನ್ನತಪ್ರತಿಭೆಯಿಂ ಕಲ್ಪಾಂಘ್ರಿಪಾರಾಮವಿ।
ಸ್ತರದಿಂ ರಂಜಿಪುದುಜ್ಜ್ವಳೋರ್ಜಿತಯಶಃಶ್ರೀಸುಂದರಂ ಮಂದರಂ ॥ 1219 ॥

## ಬಿಜ್ಜಳ

ಧರೆಯಂ ವಾರಿಧಿಮೇಖಳೋಲ್ಲಸಿತೆಯಂ ಲೀಲಾಲತಾಪಲ್ಲವಾ।
ಧರೆಯಂ ವಿಸ್ತೃತಪೀನವೃತ್ತಕಠಿನಪ್ರೋತ್ತುಂಗಭೂಭೃತ್ಪಯೋ॥
ಧರೆಯಂ ಬಂಧುರನಂದನಾಳಿವಿಳಸತ್ಪೂಗಪ್ರಕಾಂಡೋದ್ಭಕಂ।
ಧರೆಯಂ ದೋರ್ಬಳಚಕ್ರವರ್ತಿ ತಳೆದಂ ಶ್ರೀ ಬಿಜ್ಜಳೋರ್ವೀಶ್ವರಂ ॥ 1220 ॥

## ಮೈಳುಗಿದೇವ

ಲೋಲಭುಜಾಸಿಘಾತಗಳಿತಾಹಿತಗಂಧಗಜೇಂದ್ರಕುಂಭಮು।
ಕ್ತಾಳಿಯನಂದು ನೀಳನವನೀರದವಾಃಕಣರಾಜಿಗೆತ್ತು ಸ॥
ಲ್ಲೀಲೆಯನಾಂತು ಕರ್ಚಿ ನಲಿವುದ್ಧತಚಾತಕಸಂಘದಿಂದದಾ।
ಭೀಳಮೆನಿಪ್ಪುದಚ್ಚರಿಯೆ ಮೈಳುಗಿದೇವನುದಗ್ರವಿಕ್ರಮಂ ॥1221 ॥

## ಸಂಕಮದೇವ

ವಾರಿಧಿಯಂತಗಾಧಮಹಿಮಾಸ್ಪದನುಂ ಬಹುರತ್ನಶೋಭಿಯುಂ।
ಮೇರುಗಿರೀಂದ್ರದಂತೆ ಕನಕಾನ್ವಿತನುಂ ವಿಬುಧೈಕಸೇವ್ಯನುಂ॥
ವಾರಿಜನಾಭನಂತತುಳವಿಕ್ರಮನುಂ ಕಮಳಾಕ್ಷನೆಂಬುದೀ।
ಧಾರಿಣಿ ಸಂಕಮಾಂಕನರಪಾಲನನೂರ್ಜಿತಪುಣ್ಯಶೀಲನಂ ॥ 1222 ॥

## ಕಾವಣದಂಡನಾಥ

ರಿಪುನಗರಂ ಕರಂ ವಿಜನಮಾಗಿಯುಮರ್ಜುನರಾಜಿರಾಜಿತಂ।
ವಿಪುಳಶಶಾಂಕವಂಶಕನಕಾಂಚಿತಮಂತದೆ ವಿಭ್ರಮಾನ್ವಿತಂ॥
ಚಪಳಭುಜಂಗಭೀಮನಕುಳಾಶ್ರಯಮುದ್ಗತಪುಂಡರೀಕಮಿಂ।
ತುಪಮೆಗೆ ಚಿತ್ರಮಾಯ್ತೆನಿಪುದೀವಿಭುಕಾವಣದಂಡನಾಥನಾ ॥ 1223 ॥

## ಕಾವಣನ ಹೆಂಡತಿ ಕಾಳಲದೇವಿ

ರತಿಯೆಂತಂತೆ ವಿಳಾಸದಿಂ ವಿಭವದಿಂ ಮಾದೇವಿಯೆಂತಂತರುಂ।
ಧೃತಿಯೆಂತಂತೆ ಪತಿವ್ರತಪ್ರಭುತೆಯಿಂ ಚಾತುರ್ಯದಿಂ ಭಾರತೀ।
ಸತಿಯೆಂತಂತೆ ನೆಗಟ್ತೆವೆತ್ತು ಮೆಱೆವಳ್ ಚಾರಿತ್ರದಿಂ ಭಾಗ್ಯದು।
ನ್ನತಿಯಿಂ ಕಾಳಲದೇವಿ ಕಾವಣಚಮೂನಾಥಂಗೆ ಸದ್ರೀತಿಯಿಂ ॥ 1224 ॥

ಕಾವಣನ ಹೆಂಡತಿ ಮಾಳಲದೇವಿ

ಕುರುಳಿಂ ತುಂಬಿಯ ಬಂಬಲಂ ಸರಸಿಜಶ್ರೀಲೀಲೆಯಂ ವಕ್ತ್ರದಿಂ।
ದರಹಾಸದ್ಯುತಿಯಿಂದಮಿಂದುರುಚಿಯಂ ಕೀೞ್ಮಾಡುತಂ ವಿಭ್ರಮೋ॥
ತ್ಕರದಿಂ ಕಾವಣದಂಡನಾಥವಿಪುಳಶ್ರೀವಕ್ಷದೊಳ್ ಲಕ್ಷ್ಮಿ ವಿ।
ಸ್ತರಮಂ ಮಾಳಲದೇವಿ ತಾನೆ ಪಡೆದಳ್ ಸೌಭಾಗ್ಯದಿಂ ಭಾಗ್ಯದಿಂ ॥ 1225 ॥

ತೇಜಚಮೂಪತಿ

ಸೆಡೆದರಡಂಗಿದರ್ ಮಡಿದರೋಡಿದರಟ್ಟಿಗಿದರಳ್ಕಿ ಬಳ್ಕಿದರ್।
ಮಿಡುಕದೆ ಬಿಟ್ಟುರುಳ್ದರೆದೆಗುಂದಿದರುಟ್ಟುದನಿಕ್ಕಿ ಕೆಯ್ದುವಂ॥
ಬಿಡಲನುಗೆಯ್ದರೆಂದರಿನೃಪಾಳಕರಂ ಪೊಡೆ ಸಂಗರಾಗ್ರದೊಳ್।
ತೊಡರ್ದಪರಾರುದಾತ್ತಕಲಿತೇಜಚಮೂಪನೊಳುಗ್ರಕೋಪನೊಳ್ ॥ 1226 ॥

ಬನವಾಸೆ ನಾಡು

ವನರುಹಷಂಡದಿಂ ಬೆಳೆದ ಶಾಳಿವನಂಗಳಿನುರ್ವಿ ಪಣ್ತ ಕ।
ರ್ಬಿನ ಘನಪಾಳಿಯಿಂ ವಿಪುಳನಾಗಲತಾವೃತಪೂಗಪೂಗದಿಂ॥
ಘನಸಹಕಾರಸತ್ಫಳಭರಾನತನಂದನರಾಜಿಯಂ ಕರಂ।
ಬನವಸೆನಾಡು ರಯ್ಯಮೆನಲೊಪ್ಪುವುದೀ ವಿಷಯಾಂತರಾಳದೊಳ್ ॥1227 ॥

**215 ಚಿಕ್ಕಮಗಳೂರು 77 [1180]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ಖಾಂಡೆಯದ ಮಾರ್ಕಂಡೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ತದಪತ್ಯನಹಿತಮಹಿಭೃ। ನ್ಮದವತ್ಕರಿನಿಕರಕರಟನಿಕಟೋತ್ಕಟದಾ।
ನದಮಿತಕರಾಳನಖಮುಖ। ನುದಾರವಿಕ್ರಾಂತಸಿಂಹನಿವನೆಱೆಯಂಗಂ ॥ 1228 ॥

ನಾರಸಿಂಹ I

ಆನತರಿಪುವರ್ಗದುರ್ಗಂ। ತನಗೆ ವಿಹಾರಸ್ಥಳಂ ವ್ವಿಷದ್ದ್ವಿರದಘಟಾ।
..ವಧದ ಕೇಳಿಗಂ ಗೊ। ತ್ತೆನೆ ನೆಗಟ್ದಂ ಸಿಂಹದಂತೆ ನರಸಿಂಹನೃಪಂ ॥ 1229 ॥

ಬಲ್ಲಾಳ II

ಬಿಲ್ಲೊಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ।
ಬಲ್ಲಂ ರಾಮಂ ನದೀಜಂ ಕಲಶಜನಿಜಂ ಬಲ್ಲನಿಂದ್ರಾತ್ಮಜಾತಂ॥
ಬಲ್ಲಂ ಕೇಳಿಂದು ಬಲ್ಲಾಳನೆ ಕಲಿಗಳ ದೇವಂ ಜಗಂ ಮೆಚ್ಚೆ ಬಿಲ್ಲೊಳ್।
ಬಲ್ಲಂ ಮತ್ತಿಲ್ಲ ಬಿಲ್ಲರ್ ಬಿರುದರಿದೆ ವಲಂ ಡಂಗುರಂ ಧಾತ್ರಿಗೆಲ್ಲಂ ॥ 1230 ॥

## 216 ಚಿಕ್ಕನಾಯಕನಹಳ್ಳಿ 35 [ಸು. 1180]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಮಂಡಳಿಕ ಬಲ್ಲರಸನು ಭೀಮೇಶ್ವರದೇವರಿಗೆ ಭೀಮಸಮುದ್ರವನ್ನು ಬಿಟ್ಟಂತೆ ಹೇಳಿದೆ.

ಸಾಮಂತಬಿಟ್ಟಿಗನ ತಾಯಿ ಶಾಂತಲೆ

ನುಡಿದೊಡೆ ಮಂದರಾಚಲದೊಳಬ್ಜಭವಂ ಬರೆದಕ್ಕರಕ್ಕಮಿ।
ರ್ಮುಡಿ ನಿನಗೀವೆನೆಂದೊಡೆ ಭವಂ ಕುಡಲಿತ್ತ ಬರಕ್ಕದಂತು ನಾ॥
ಲ್ವಡಿ ಶರಣಾರ್ಥಿಗಂಜದಿರಿಮೆಂದೊಡೆ ವಜ್ರದ ಕೋಟೆಗಂ ಪದಿ।
ರ್ಮಡಿಯೆನೆ ಕಾಂತೆ ಶಾಂತಲೆ ಜಸಂಬಡೆದಿರ್ದಳಿಳಾತಳಾಗ್ರದೊಳ್ ॥1231 ॥

ಸಾಮಂತಬಿಟ್ಟಿಗ

ಒಟ್ಟಜೆಯುಂ ನುಡಿವಹಿತರ। ನಿಟ್ಟೆಲ್ವಂ ಮುಱಿದು ತೇದು ಚಟ್ಟನ ಪುತ್ರಂ।
ಕಟ್ಟಾಯುದ ಕಣೆಯುಹಿತಘ। ರಟ್ಟಂ ಸಾಮಂತಬಿಟ್ಟಿಗಂ ಬೊಟ್ಟಿಡುವಂ ॥ 1232 ॥

ಬಲ್ಲರಸ

ಕಡುಂಗಲಿ ಬಲ್ಲಂ ಧುರದೊಳ್। ತೊಡರ್ದಂಗಾಕೃಷ್ಣನನ್ನನೀಶ್ವರನನ್ನಂ।
ಸಿಡಿಲನ್ನಂ ಕಲ್ಪಾಂತದ। ಕಡಲನ್ನಂ ಭೀಮನನ್ನನರ್ಜುನನನ್ನಂ ॥ 1233 ॥

## 217 ತಿರುಮುಕೂಡಲು ನರಸೀಪುರ 106 [1180]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ತಿರುಮುಕೂಡಲ ಅಗಸ್ತ್ಯೇಶ್ವರ ದೇವರಿಗೆ ತುಂಬಲಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳವಂಶ

ಸಳನೆಂಬಂ ಜಿನಮುನಿ ಹೊಯ್। ಸೆಳೆಯಿಂದಂ ಪುಲಿಯನೆಂದೊಡೇಗೊಂಡುಮಹೀ।
ತಳವಾವೆನೆ ಪೊಯ್ಯಲ್ ಪೊ। ಯ್ಸಳವೆಸರಂ ತಾಳ್ದುದಿತ್ತ ಯಾದವವಂಶಂ ॥ 1234 ॥

ನಾರಸಿಂಹ I

ತತ್ತನಯಂ ಯಾದವವಂ। ಶೋತ್ತಮನವದಾತಕೀರ್ತಿ ಸಾಹಸಧನನು।
ದ್ವೃತ್ತ ವಿರೋಧಿನೃಪಾಳಕ। ಮತ್ತದ್ವಿಪಸಿಂಹನೆನಿಸಿದಂ ನರಸಿಂಹಂ ॥ 1235 ॥

## 218 ಚೆನ್ನರಾಯಪಟ್ಟಣ 220 [ಸು. 1180]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಂಧಿವಿಗ್ರಹಿ ನಾರಾಯಣನು ಶಿವಪುರದ ರಂಗನಾಥ ದೇವಾಲಯವನ್ನು ಜೀರ್ಣೋದ್ಧಾರಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ I

ತತ್ತನಯಂ ರಿಪುಭೂಭೃ। ನ್ಮತ್ತದ್ವಿರದನಘಟಾವಿಪಾಟನಪಟುಲೀ।
ಲೋತ್ತಮಕರಾಸಿನಖರನು। ದಾತ್ತಬಳಪ್ರಥಿತಸಿಂಹನಾ ನರಸಿಂಹಂ ॥ 1236 ॥

ನಾರಾಯಣ

ಶ್ರೀಯುದಯಂ ಪ್ರಭಾವದೆಸಕಂ ಪ್ರಭುಶಕ್ತಿಯುಳುರ್ಕೆ ನಿಶ್ಚಳೋ।
ಪಾಯದ ಮೈಮೆ ವಾಗ್ವಿಭವದುನ್ನತಿ ಧರ್ಮದ ಪೆರ್ಮೆ ಶೀಲದ॥
ತ್ಯಾಯತಿ ಕೂಡೆ ನೀರ್ಪುವಡೆದೊಳ್ದೊಡವೆಂಬಿನವೊಪ್ಪೆ ಮಂತ್ರಿನಾ।
ರಾಯಣನೊಪ್ಪುವಂ ವಿನಯಭೂಷಣನೂರ್ಜಿತಕೀರ್ತಿವಲ್ಲಭಂ ॥ 1237 ॥

## 219 ಶ್ರವಣಬೆಳ್ಗೊಳ 71 [ಸು. 1180]

ಈ ಅಸಮಗ್ರ ಶಾಸನದಲ್ಲಿ ಕೆಲವರು ಜೈನಗುರುಗಳ ಸ್ತುತಿಯಿದೆ.

ವರ್ಧಮಾನಮುನಿ

ಸುರನದಿಯ ತಾರಹಾರದ। ಸುರದಂತಿಯ ರಜತಗಿರಿಯ ಚಂದ್ರನ ಬೆಳ್ಪಿಂ।
ಪಿರಿದು ವರವರ್ಧಮಾನರ। ಪರಮತಪೋಧನರ ಕೀರ್ತಿ ಮೂಜಿುಂ ಜಗದೊಳ್
॥1238॥[1]

1. ಪಂಪರಾಮಾಯಣ, 1, 15

## 220 ಕಡೂರು ತಾಲ್ಲೂಕು ಕೆರೆಸಂತೆಯ ಶಾಸನ [ಸು. 1181]

(ಮೈಸೂರು ಶಾಸನ ಇಲಾಖೆಯ ರಿಪೋರ್ಟು, 1925, 64ನೆಯ ಶಾಸನ)

ಇದರಲ್ಲಿ ಹೊಯ್ಸಳರಾಜನಾದ ವೀರಬಲ್ಲಾಳನ ಆಳಿಕೆಯಲ್ಲಿ ವಿಷ್ಣುಸಮುದ್ರದ ಮಹಾಜನಗಳು ಸಿದ್ಧೇಶ್ವರ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ನಾರಸಿಂಹ I

ಕಂ॥ಅಂತೆನಿಸಿದ ವಿಷ್ಣು ಮಹೀ। ಕಾಂತನ ತನಯಂ ನಯಾನುರೂಪೋಪಾಯಂ॥
ಸಂತತ ಭುಜಪ್ರತಾಪಾ। ಕ್ರಾಂತಪರಂ ನಾರಸಿಂಹನಾಹವ ಸಿಂಹಂ ॥ 1239 ॥

### ಬಲ್ಲಾಳನ ಮಹಿಷಿ ಕೇತಲದೇವಿ

ಮ॥ ಪಡೆದಳ್ ಸುಗ್ಗಲದೇವಿ ಮುನ್ನೆ ಜಯಸಿಂಹೋರ್ವೀಶನೊಳ್ ಸಾಮ್ಯಮಂ
ಪಡೆದಳ್ ಶಾಂತಲದೇವಿ ಮತ್ತೆ ತೊದಳೇಂ ಶ್ರೀ ವಿಷ್ಣು ಭೂಪಾಲನೊಳ್॥
ಪಡೆದಳ್ ಕೇತಲದೇವಿ ವಲ್ಲಭನೊಳೀ ಬಲ್ಲಾಳ ಭೂಪಾಳನೊಳ್।
ಪಡೆದರ್ ಮೂವರೊಳಿಂತುಟೀಯರಸಿಯರ್ ಸೌಭಾಗ್ಯ ಭಾಗ್ಯಂಗಳಂ ॥1240॥

### ವಿಷ್ಣುಸಮುದ್ರ

ಚಂ॥ ಕುಡಿದು ಘಟೋದ್ಭವಂ ತವಿಸದಾ ರಘುವಂಶನ ತೀವ್ರ ಬಾಣದಿಂ।
ದುಡುಗದ ದೇವ ಮಾನವ ಬಲಂ ಕಡೆಯಲ್ ಕದಡೆಬ್ಬಿ ಭಂಗಮಂ॥
ಪಡೆಯುದಪೇಯ ವಾರಿ ಪರಿಪೂರಿತಮಪ್ಪಿದನಂತ ಶಯ್ಯೆಯೊಳ್।
ಪೊಡೆಯುಲರಾತನಿರ್ಪಮರವಾರಿಧಿಯೆಂಬುದು ವಿಷ್ಣುವಾರಿಧಿ ॥ 1241 ॥

ಕಂ॥ ವನಧಿಯುನಗಸ್ತ್ಯನಾಪೋ। ಶನಮಂ ಮಾಡಿದೊಡೆ ಬಳಿಕದೊಂದಂಬುಧಿಯಂ॥
ವನಜಭವಂ ಸಮೆದನೊ ಪೇ। ೞೆನೆ ವಿಷ್ಣುಸಮುದ್ರಮದು ಸಮುದ್ರಮನಿೞಿಕುಂ ॥ 1242 ॥

ಅಲವಣಮರಾಕ್ಷಸಾಶ್ರಯ। ವಿಲುಳಿತವದನೇತ್ರ (?) ಬಾಡಬಾನಳಮೆಸೆಗುಂ॥
ಕಲಿಯುಗ ವಿಷ್ಣುಸಮುದ್ರಂ। ಜಲಧರ ವಿಲುಳಿತ ವಿಹಂಗ ಮಂಗಳ ಚರಿತಂ ॥ 1243 ॥

## 221 ಶಿಕಾರಿಪುರ 197 [1181]

ಇದರಲ್ಲಿ ಕಳಚುರ್ಯರಾಜನಾದ ಆಹವಮಲ್ಲನ ಆಳಿಕೆಯಲ್ಲಿ ಸಾಮಂತ ಶಂಕರನು ಮಾಗುಂಡಿಯಲ್ಲಿ ಮಾಡಿಸಿದ ರತ್ನತ್ರಯಬಸದಿಗೆ ವಸುಧೈಕಬಾಂಧವ ರೇಚರಸನು ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಜಂಬೂದ್ವೀಪ

ವಾರ್ವಳಯನಿಕರವೆಂಬಾ। ನೀರ್ವೇಲಿಯ ನಡುವೆ ನೆಱೆದು ಜಂಬೂಚಿಹ್ನಂ।
ಸಾರ್ವಿನಮೀಪ್ಸಿತಫಳಮಂ। ಪಾರ್ವಿನಮೆಳೆಗಿಂಬಿದಾಯ್ತು ಜಂಬೂದ್ವೀಪಂ ॥ 1244 ॥

ಚಾಳುಕ್ಯರು

ಕ್ರಮದಿಂ ವಿಕ್ರಮದಿಂ ದಾ। ನಮನೋಹರವೃತ್ತಿಯಿಂ ಚಳುಕ್ಯನೃಪಾಳೋ।
ತ್ತಮರಾತ್ಮಕೀರ್ತಿಯಾಭೂ। ರಮಣಿಗೆ ಮುತ್ತುಗಳ ತೊಡವೆನಲ್ ಪ್ರಿಯರಾದರ್ ॥ 1245 ॥

ಬಿಜ್ಜಳ

ಅಸಿಲತೆ ಕೂಡೆ ಗಂಡುಮಗುಟ್ಟಿದ್ದ ತ್ತಹಿತಾವನಿಪಾಳಭೂಮಿ ಪೆ।
ಣ್ಮಸಗಿದುದ್ಧಂಜದಾಂತವರೊಳಾಸುರಕಾಂತೆಯುರ್ಗಾಂತ ಬೇಟಮು।
ಬ್ಬಸಮೆನಿಸಿತ್ತು ಕಾದಿದೆಡೆ ನೆತ್ತರ ಜೌಗಿನೆ ಕೇಸೊಱಿಂತೆಯುಂ।
ಪಸರಿಸಿತೆಂದು ಬಂದು ಶರಣೆಂಬುದು ಬಿಜ್ಜಳನುಂ ದ್ವಿಷಜ್ಜನಂ ॥ 1246 ॥

ಬಳೆದಂತಾ ಬಿಜ್ಜಳಂಗೇನದಟೆಸೆದುದೊ ಪೇಟ್ ಸಿಂಹಳಾಧೀಶ್ವರಂ ಬೆ।
ತ್ತಳಿಗಂ ನೇಪಾಳಕಂ ಘಟ್ಟಿವಳನಡಪದಾಳ್ ಕೇರಳಂ ಗುರ್ಜರಂ ಕ॥
ಮ್ಮಳಿಗಂ ಮತ್ತಾ ತುರುಷ್ಕಂ ಕುದುರೆವೆಸದವಂ ಲಾಳನಾದಚ್ಚುಳಾಯ್ತುಂ।
ಹೆಳೆಯಂ ಪಾಂಡ್ಯಂ ಕಳಿಂಗಂ ಕರಿಪರಿಚರನಾಗಾಳ್ವೆಸಂಗೆಯ್ಯೆ ನಿಚ್ಚಂ ॥ 1247 ॥

ರಾಯಮುರಾರಿ ಸೋಯಿದೇವ

ಕ್ರಮದಿಂ ಕರ್ಣಾಟವಮಂ ಕುಂತಳಮನೊಲವಿನಿಂ ತಿಳ್ದಿ ತಟಿಕ್ಕೈಸಿ ರಮ್ಯಾಂ।
ಗಮನಿಂಬಿಂ ಬಿಂಬಿಪೊಳ್ಸಂ ಪಡೆದು ಪೃಥುಲಲಾಟಕ್ಕೆ ಕಾಂಚೀಪ್ರದೇಶ ॥
ಕ್ಕೆ ಮನಂಬೆತ್ತೆಯ್ದೆ ರಾಗಂಬುದಿದ ಕರಸರೋಜಾತಮಂ ನೀಡಿಯಾರಾ।
ಯಮುರಾರಿಕ್ಷೋಣಿಪಂ ಮೇದಿನಿಯನಿನಿಸುವಂದೇಕಭೋಗ್ಯಕ್ಕೆ ತಂದಂ ॥ 1248 ॥

ಸಂಕಮ

ಸಂಕನ ಕೀರ್ತಿಪ್ರಭೆಯಿಂ। ದಂ ಕಾಮಿನಿ ಭೂಮಿ ಗೌರರುಚಿಯಿಂದೆಸೆದೇಂ।
ಶಂಕಿನಿಯಾದಳೊ ಗೀತಾ। ಲಂಕೃತನಾನಾವಿನೋದವಿಳಸಿತಗತಿಯಿಂ ॥ 1249 ॥

## ರೇಚರಸ

ಕಳುಚುರ್ಯಕ್ಷಿತಿಪಾಳರಾಜ್ಯಲತೆ ಪರ್ವಲ್ ತನ್ನ ದೋಶ್ಶಾಖೆಯಂ।
ವಿಳಸನ್ಮಂದರಸಾನುಗಂ ವಿಬುಧಸೇವ್ಯಂ ವಿಸ್ಮೃತಚ್ಛಾಯನ॥
ಸ್ಫಳಿತೌದಾರ್ಯವಿಳಾಸಭಾಸಿ ಸಮನಸ್ಸಂಪೂರ್ಣನುದ್ಯದ್ಯಶಃ।
ಫಳದಿಂ ರೇಚಣದಂಡನಾಥನೆಸೆದಂ ಲೋಕೈಕಕಲ್ಪದ್ರುಮಂ ॥ 1250 ॥

ಜಿನನಂ ತನ್ನ ಮನಂ ಮನಃಪ್ರಕೃತಿಯಂ ಸದ್ವಿದ್ಯೆಯಾವಿದ್ಯೆಯಂ।
ತನುವಂತಾತನುವಂ ವಿಳಾಸಮದನುದ್ಯಲ್ಲಕ್ಷ್ಮಿಯಾಲಕ್ಷ್ಮಿಯಂ॥
ವಿನುತೌದಾರ್ಯಮದಂ ಜಗಂ ಜಗಮನಿಂಬಿಂ ಕೀರ್ತಿಯಾಲಿಂಗಿಸಲ್।
ಜನವಂದ್ಯಂ ವಿಭು ರೇಚಿರಾಜನೆಸೆದಂ ಚಾರಿತ್ರರತ್ನಾಕರಂ ॥ 1251 ॥

ಕವಿತತಿ ಬಲ್ಮೆಗೋಲಗಿಸೆ ಕಾಮಿನಿಯರ್ ಸೊಬಗಿಂಗೆ ಸೋಲೆ ಬೇ।
ಟ್ಟಿವರ್ಗಳುದಾರವೃತ್ತಿಗೊಲವಿಂ ನರಶಾಸನಮಾಗೆ ರಾಜ್ಯಮು॥
ದ್ಭವದಿನೊಡರ್ಚೆ ಜೈನಸಮಯಾಂಬುಧಿ ಕೀರ್ತಿಸುಧಾಂಶುವಿಂ ಪೊದ।
ಳ್ಕಿವಡೆಯೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ ॥ 1252 ॥

ನಡೆದ ನೆಲಂ ರಣೋರ್ವರೆಯೊಳಂತನಿತುಂ ತನಗಜ್ಜಪಜ್ಜರಿಂ।
ಪಡೆದ ನೆಲಂ ದಲೆಂಬನಸಿಗನ್ಯನೃಪಾಳರನಿಕ್ಕದುಂತೆ ಕಿ॥
ಟ್ಟೊಡೆ ಕಡುದೋಸಮೆಂಬನಸಹಂ ಮಿಗೆ ಬೆಂಗುಡೆ ಪತ್ತೆ ತಾನೆ ಬೆಂ।
ಗುಡುವವೊಲೆಂಬನೇನದಟನೋ ಕಲಿರೇಚಣದಂಡನಾಯಕಂ ॥ 1253 ॥

ಅನುಪಮದಾನಶೌರ್ಯರಣಶೌರ್ಯಮನೇವೊಗಟ್ಟಿಪ್ಪೆನಾಂ ದ್ವಿಷ।
ಜ್ಜನಪರೊಳೊಂದುವಚ್ಚರಸೆಯಗ್ಗೆ ಸಯಂಬರಮಾಗೆ ಸಗ್ಗದೊಳ್॥
ಜನಿಯಿಸಿತಿಂದ್ರಭೂರುಹಕೆ ತೋರಣದಿಂ ತವಿಲೆಂಬುದೆಯ್ದೆ ಮೇ।
ದಿನಿ ವಸುಧೈಕಬಾಂಧವಚಮೂಪತಿರೇಚಣನೇಂ ಕೃತಾರ್ಥನೋ ॥ 1254 ॥

ಪೆಡೆವಣಿ ಶೇಷನೊಳ್ ಸರಸಿಜೋದರನಂಬುಧಿಯೊಳ್ ಮೃಗಾಂಗಮಂ।
ದುಡುಪನೊಳದ್ರಿಜಾರ್ಧಮಭವಾಂಗದೊಳಾಮದಲುಬ್ಧಭೃಂಗಮಿ॥
ರ್ಪೆಡೆ ದಿಗಿಭಂಗಳೊಳ್ ಕುಜುಪುದೋರ್ಪಿನೆಗಂ ಜಗಮಂ ಮುಸುಂಕಿತಿಂ।
ಗಡಲೆನೆ ಕೀರ್ತಿ ರೇಚನೆಸೆದಂ ಜಸದಿಂ ವಸುಧೈಕಬಾಂಧವಂ ॥ 1255 ॥

ಶ್ರೀವಚ್ಛಂ ಸಿರಿಯಿಂ ಸಮೃದ್ಧನೆಸೆವಾ ನಾಗಾಂಬಿಕಾಸೂನು ಭೋ।
ಗಾವಾಸಂ ವಸುಧೈಕಬಾಂಧವನುದಾರಂ ಸ್ತುತ್ಯಗೌರೀಸುಖ॥
ಶ್ರೀವಿಷ್ಟಂ ವೃಷಭಧ್ವಜಪ್ರಿಯತಮಂ ನಾರಾಯಣಾತ್ಮೋದ್ಭವಂ।
ಭಾವಂಬೆತ್ತಿರೆ ಚೆಲ್ವನೆಂದೆನಿಸಿದಂ ಶ್ರೀರೇಚಿದಂಡಾಧಿಪಂ ॥ 1256 ॥

## ನಾಗರಖಂಡ

ಕುಸುಮರಜಂ ರಸಾವಳಿ ತಳಿರ್ ಸೊವಡಾಡುವ ಕೀರಜಾಳವೆಂ।
ಬೆಸಕದೆ ಚೆಲ್ವುವೇಱಿದ ನೆಲಂ ನೆಲೆವೆರ್ಚಿದ ಪೂಗೊಳಂ ಬಿಸು॥
ರ್ಪೆಸಗದ ನುಣ್ಪೆಸಿಲ್ ಸುೞಿವ ಕಮ್ಮೆಲರೀಕ್ಷಿಸೆ ಹಚ್ಚನೊಪ್ಪುವಾ।
ಗಸಮೆಸೆಯಲ್ಕೆ ನಾಡೆಸೆವುದಿಂತು ಬಸಂತದ ಸೃಷ್ಟಿಯೆಂಬಿನಂ ॥ 1257 ॥

## ಕದಂಬಸೋಮನೃಪ

ನಿನಗಂತಾ ಕಾಮನೀಗಳ್ ಕೆಳೆಯನೆನಿಪುದಂ ತೋರ್ಪವೋಲೆಮ್ಮನೆಚ್ಚಿ।
ಚ್ಚು ನಿತಾಂತಂ ನಿನ್ನ ಪಾದಕ್ಕೆಱಗಿಪನೆನುತುಂ ಕಾಂತೆಯರ್ ಜೋಲೆ ಕಾಲ್ಗಾ॥
ನನಕಾಶ್ಮೀರದ್ರವಂ ಪತ್ತಿದ ನಿಗಳದ ಚಂಗಾಳ್ವನಂಗಕ್ಕೆ ಸೇವಾ।
ಜನಿತಾರಾಗಂಬೊಲಾಗಳ್ ಮೆಱೆವುದನುದಿನಂ ಸೋಮಭೂಮೀಶಪಾದಂ ॥ 1258 ॥

ಮುನಿದೊಡೆ ಸೋಮಭೂಪನೆಮಗಿರ್ಪೆಡೆಯಾ ಬನವಾಸೆಯುಂತದಿಂ।
ತನಿತುಮದೀಗಳಾತನ ಭುಜಾಸಿಲತಾವೃತಮಾಯ್ತು ಪೊಕ್ಕು ಸಿ॥
ಲ್ಕಿನೊಳಿರೆ ಪೊಲ್ಲದೆಂದಹಿತರೋಡಿ ಸಮುದ್ರದ ವೇಳೆಗಂಡು ತಾ।
ಮನುಮಿಸಿ ವೇಳೆಗೊಂಡು ಸುಖಮಿರ್ಪರಿದೇನದಟಿಂಗೆ ನೋಂತನೋ ॥ 1259 ॥

ಬಿರುದರ್ ಭೀತೋರ್ವಿಪಾಳರ್ ಮದನಪರವಶೀಭೂತೆಯರ್ ವಿದ್ಯೆಯುಳ್ಳರ್।
ಶರಣೆಂದರ್ ಸೇವಕರ್ ಬೇಟ್ಟವರೆನಿಪಿವರ್ಗೊಲ್ದಿವನೀಸೋಮಭೂಮೀ॥
ಶ್ವರನೆಂದುಂ ರಾಗದಿಂ ಸಂಗರಮನಭಯಮುಂ ಬೇಟಮುಂ ತುಷ್ಟಿಯುಂ ಸ।
ಯ್ತಿರಮಂ ಸಂಪ್ರೀತಿಯುಂ ಬೇಟ್ಪುದನೆಸೆ ಜನವೌದಾರ್ಯದಿಂ ವರ್ಯನಾದಂ ॥ 1260 ॥

## ಸೋಮನೃಪನ ಹೆಂಡತಿ ಲಚ್ಚಲದೇವಿ

ತೋಳ ತೊಡರ್ಪು ಮಚ್ಚಿಪೆರ್ದೆವತ್ತುಗೆ ಚುಂಬಿಸುವಿಂಬು ಸೋಮಭೂ।
ಪಾಳನೊಳೇಕಭೋಗ್ಯಮೆನಿಸಲ್ ತನಗಾಗಿರಲಾ ಸ್ಥಳಂಗಳಂ॥
ಪಾಳಿಪ ಕಾಪು ಬೀರಸಿರಿ ಲಕ್ಷ್ಮಿ ಸರಸ್ವತಿಯೆಂದೆ ಸೈರಿಪಳ್।
ಮೇಳಿಸಲೀವಳೇ ಪೆಱರನೆಂದೆನೆ ಲಚ್ಚಲದೇವಿಯೊಪ್ಪುವಳ್ ॥ 1261 ॥

## ಸೋಮನೃಪನ ಪೂರ್ವಿಕ ಬೊಪ್ಪ

ಈ ಬೊಪ್ಪಂ ದೇವಕಿಗಾ। ದಾ ಬೊಪ್ಪಂ ತಪ್ಪದಪ್ಪನಱಿದೆಂ ಕೀರ್ತಿ।
ಶ್ರೀ ಬಾಯ್ದೆಱೆದೊಡೆ ಕಾಣ। ಲ್ಕೀ ಬಂದುದೆ ಭುವನನಿಕರಮೆನೆ ಪೆಸರ್ವಡೆದಂ ॥1262॥

ನಗೆಯಲ್ತೇ ಎಮೆಯಿಕ್ಕುತಿರ್ದ ಹದಿನೆಂಟಕ್ಕೋಹಿಣೀಸೇನೆಗಂ।
ದುಗುರಿಂ ಸತ್ತ ಹಿರಣ್ಯಕಾಕ್ಷಕನೆನಿಪ್ಪಂಗಂದದೇಂ ಬಿಟ್ಟ ಕ॥
ಣ್ಗ ಗಿದಂತಾಭಯದಿಂದೆ ಬೇದ ಮದನಂಗಂದಾಮಹಾಭಾಗರ।
ಣ್ಮಗೆಯೆಂದೀವಿಭು ಬೊಪ್ಪದೇವನಲೆವಂ ಸತ್ವಾಧಿಕಾನ್ಯೌಘಮಂ ॥ 1263 ॥

ಕದನಕ್ರೀಡೆಯೊಳುಳ್ಳ ನಿನ್ನ ದಯೆಯೇಕಿಂತೊರ್ಮೆಯುಂ ತೋಱದೀ।
ಮದನಕ್ರೀಡೆಯೊಳುಟ್ಟುದಂ ಮಱೆದೊಡಂ ನೀವೊರ್ಕೊಡಂ ನಾಣ ಪು॥
ತ್ತುದಲೊಂದಿರ್ದೊಡಮಿತ್ತೊಡಂ ತಲೆಯುನೇ ಸಂಪ್ರೀತಿಯುಂ ತೋಱೆಯೆಂ।
ದೊದವಿಂ ಮೇಳಿಸೆ ಕಾಂತೆಯರ್ ಮೆಱೆವನೀ ಶ್ರೀಬೊಪ್ಪಭೂಪಾಳಕಂ ॥ 1264 ॥

ಸಾಮಂತಶಂಕರ

ದಿನಮೆಲ್ಲಂ ದಾನಕೇಳೀಸಮಯಮೆ ತನಗೆಂದೆಂಬಿನಂ ನೀತಿಯೆಲ್ಲಂ।
ತನಗೆಂದಾಗಿರ್ದುವೆಂದೆಂಬಿನಮರಿಕುಳಮೆಲ್ಲಂ ಸ್ವಖಡ್ಗಾಹತಂ ಶಾ॥
ಕಿನಿಯರ್ಗೆಂದಾದುದೆಂದೆಂಬಿನಮೊಡಮೆಯದೆಲ್ಲಂ ಜಗತ್ಪೋಷಣಕ್ಕೆಂ।
ಬಿನಮಾ ಸಾಮಂತಶಂಕಂ ನೆಗೞ್ದನೆಳೆಗಮಾತಂಕಮಾಗಲ್ಕೆ ತನ್ನಿಂ ॥ 1265 ॥

ಶಂಕರನು ಮಾಡಿಸಿದ ಜಿನಗೃಹ

ಪ್ರತಿಬಿಂಬಂ ಪದಘಾತಮಂ ಕಳೆವುದಾರಂಗಕ್ಕೆ ಕಂಭಕ್ಕೆ ಹೃ।
ದ್ಗತಮಂ ಮಾಟ್ಪುದು ಸಾಲಭಂಜಿಕೆಗಳಂ ಚಿತ್ರಿಪ್ಪುದಾಭಿತ್ತಿಸಂ॥
ತತಿಯುಂ ಜಂಗಮಚಿತ್ರದಿಂದೆನೆ ಜನಂ ಸಾಮಂತಶಂಕಂ ಜಗ।
ನ್ನುತಮಂ ಮಾಡಿಸಿದಂ ಜಿನೇಂದ್ರಗೃಹಮಂ ಮಾಗುಂಡಿಯೊಳ್ ರಾಗದಿಂ ॥ 1266 ॥

## 222 ಕುರುಗೋಡು ಶಾಸನ [1181]

(ಎಪಿಗ್ರಾಫಿಯಾ ಇಂಡಿಕ XIV, 270)

ಇದರಲ್ಲಿ ಸಿಂದರಾಜನಾದ ರಾಚಮಲ್ಲನ ಆಳಿಕೆಯಲ್ಲಿ ಬೇಚರಸನು ಕುರುಗೋಡಿನಲ್ಲಿ ದೇವಸ್ಥಾನ ವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಶಂಭುಸ್ತುತಿ

ಹಿಮವದ್ಧಾತ್ರೀಧರೇಂದ್ರಾತ್ಮಜೆ ಕಿಱು ಪೆಱೆಯುಂ ನೋಡೆ ಜೂಟಸ್ಥಮಂ ತಾಂ।
ಕಮನೀಯಾಲೋಕದಿಂ ತನ್ನಯ ಪೆಱೆನೊಸಲೊಳ್ ನೀಳ್ದ ಬೆಳ್ದಿಂಗಳಿಂ ಪೂ।
ರ್ಣವೆಂಯಾಗಲ್ ದೇವ ಬಾಲೇಂದುವ ಕಳೆಯಂತಿಪೂರ್ಣೇಂದುವಿಂದಾದುದೆಂಬು।
ತ್ತಮಮುಗ್ಧತ್ವಕ್ಕೆ ಮೆಚ್ಚಿರ್ದತಿಶಯಮಹಿಮಂ ಶಂಭು ರಕ್ಷಿಕ್ಕೆ ನಮ್ಮಂ ॥ 1267 ॥

ಬಲ್ಲಕುಂದೆ

ಜಳಧಿವ್ಯಾವೇಷ್ಟಿತೋರ್ವೀಮಹಿಳೆಗೆ ವಿಳಸಲ್ಲೋಳಭಾಳಸ್ಥಳೀಕುಂ।
ತಳದೇಶಂ ತಾನೆನಿಪ್ಪಂತಿರಲೆಸೆವ ಲಸತ್ಕುಂತಳಕ್ಷೋಣಿಗುಂದ್ಯ।
ತ್ರಿಳಕಂ ತಾಂ ಬಲ್ಲಕುಂದಾವಿಷಯಮಧಿಕಲಕ್ಷ್ಮೀಸಮಾಸೇವಿತಂ ಭೂ।
ಲಲನಾಲೀಲಾವಿಳಾಸಸ್ಫುರಿತಕಬರಿಕಾಕುಂದದಂತೊಪ್ಪಿ ತೋರ್ಕುಂ ॥ 1268 ॥

ಊರೂರ್ದಪ್ಪದೆ ಪೂತ ಚೂತಲತೆಯಿಂ ಮತ್ತಾಳಿಯಿಂ ಶಾಳಿಯಿಂ।
ದೂರೂರ್ದಪ್ಪದೆ ಗಂಗರಿಂ ಕುಡಿಯರಿಂ ಶ್ರೀಮಂತರಿಂ ಕಾಂತರಿಂ॥
ದೂರೂರ್ದಪ್ಪದೆ ದೇವತಾನಿಳಯದಿಂ ಸದ್ಭಕ್ತರಿಂ ಚೆಲ್ವುವೆ।
ತ್ತೂರೂರ್ದಪ್ಪದೆ ಬಲ್ಲಕುಂದೆ ನಡುನಾಟ್ ಸಂತಂ ಬಸಂತಂ ಕರಂ ॥ 1269 ॥

ಕುರುಗೋಡ ದುರ್ಗ

ಕೆಲಬಲದ ಜಲದ ದುರ್ಗಂ।ಗಳನಲೆವುದು ನೆರೆಯ ಹೊರೆಯ ತರುಗಿರಿದುರ್ಗಂ।
ಗಳನಿಱಿಸಿ ತನ್ನ ಮೆಱೆವುದು। ಕುಲಗಿರಿ ಕುಱುಗೋಡ ದುರ್ಗಮಾರ್ಗಂ ದುರ್ಗಂ ॥ 1270 ॥

## 223 ಕುರುಗೋಡು ಶಾಸನ [ಸು. 1181]

(ಎಪಿಗ್ರಾಫಿಯಾ ಇಂಡಿಕ XIV, 279)

ಇದರಲ್ಲಿ ಸಿಂದರಾಜನಾದ ರಾಚಮಲ್ಲನ ಹೆಸರಿನಲ್ಲಿ ಪ್ರತಿಷ್ಠಿತವಾದ ಲಿಂಗಕ್ಕೆ ದತ್ತಿಯನ್ನು ಆರೋ ಬಿಟ್ಟಂತೆ ತೋರುತ್ತದೆ.

ಕುರುಗೋಡು

ನಾರದನ ತೆಱದೆ ಸರದಿಂ। ತಾರಾಪಥದಂತೆ ರಾಜಹಂಸಾನ್ವಿತದಿಂ।
ಕ್ಷೀರಾಬ್ಧಿಶಯನನುರದವೊ। ಲಾರಮೆಯಿಂ ತುಱುಗಿ ಪೊಱವೊಟಲ್ ಸೊಗಯಿಸುಗುಂ ॥ 1271 ॥

ಭರದಿಂದೌರ್ವಾನಳಂ ತನ್ನೊಳಗಣ ಜಲಮಂ ಪೀರ್ವನೆಂದಬ್ಧಿನಾಥಂ।
ಪಿರಿದೊಂದಾಶಂಕೆಯಿಂದೀಪುರದೊಳೆ ನವರತ್ನಂಗಳಂ ಬಯ್ತನೆಂಬಂ॥
ತಿರಲಿರ್ಕುಂ ಕ್ಷತ್ರರತ್ನಂ ಚತುರಯುವತಿರತ್ನಂ ಸ...ರತ್ನಂ।
ವರರತ್ನಂ ವೀರರತ್ನಂ ಸುಜನಪುರುಷರತ್ನಂ ಗಜಾಶ್ವಾದಿರತ್ನಂ ॥ 1272 ॥

ರಾಚಮಲ್ಲ

ವರಮಾರ್ಗಂ ಶ್ರೀನಿಸರ್ಗಂ ವಿನಯವಿನತಭರ್ಗಂ ಜಿತಾರಾತಿವರ್ಗಂ।
ಸ್ಥಿರಕಾರ್ಯಂ ಮೇರುಧೈರ್ಯಂ ಸುಜನವನಜಸೂರ್ಯಂ ಮಹೀಪಾಲವರ್ಯಂ॥
ಸ್ಮರರೂಪಂ ಸಪ್ರತಾಪಂ ಕೃತರಿಪುನೃಪತಾಪಂ ಕಲಾಳೀಕಲಾಪಂ।
ಧರೆಗೆಲ್ಲಂ ರಾಚಮಲ್ಲಂ ಕುಡುತುಮಿರಲೆ ಬಲ್ಲಂ ಯಶಶ್ರೀಗೆ ನಲ್ಲಂ ॥ 1273 ॥

ರೇಚಿರಾಜ

ರಾಜಚ್ಛ್ರೀಸ್ವಾಮಿದೇವಂಗನುವಶೆ ಗುಣಿ ಸಾವಿತ್ರಿಗಂ ಪುಟ್ಟಿದಂ ಶ್ರೀ।
ಭಾಜಂ ತಿಗ್ಮಾಂಶುತೇಜಂ ಗತಭಯಹೃದಯಾಂಭೋಜನಾಪುಣ್ಯಬೀಜಂ॥
ಭ್ರಾಜತ್ಕಾಂತಾಮನೋಜಂ ವಿಬುಧವಿಬುಧಭೂಜಂ ಯಶಶ್ರೀಸಮಾಜಂ।
ನೈಜೋನ್ಮಂತ್ರಾಬ್ಧಿರಾಜಂ ಸುವಿಭವಸುಮನೋರಾಜನೀರೇಚಿರಾಜಂ ॥ 1274 ॥

## 224 ಶ್ರವಣಬೆಳ್ಗೊಳ 327 [1181]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯ ಹೆಂಡತಿ ಆಚಿಯಕ್ಕನು ಬೆಳ್ಗೊಳದಲ್ಲಿ ಪಾರ್ಶ್ವನಾಥಬಸ್ತಿಯನ್ನು ಕಟ್ಟಿಸಿದಂತೆಯೂ ಅದಕ್ಕೆ ದೊರೆ ಒಂದು ಗ್ರಾಮವನ್ನು ಬಿಟ್ಟಂತೆಯೂ ಹೇಳಿದೆ.

ಬಲ್ಲಾಳ II

ರಿಪುಭೂಪಾಳೇಭಸಿಂಹಂ ರಿಪುನೃಪನಳಿನಾನೀಕರಾಕಾಶಶಾಂಕಂ।
ರಿಪುರಾಜನ್ಯೌಘಮೇಘಪ್ರಕರನಿರಸನೋದ್ಧೂತವಾತಪ್ರಪಾತಂ॥
ರಿಪುಧಾತ್ರೀಶಾದ್ರಿವಜ್ರಂ ರಿಪುನೃಪತಿತಮಸ್ತೋಮವಿಧ್ವಂಸನಾರ್ಕಂ।
ರಿಪುಪೃಥ್ವೀಪಾಳಕಾಳಾನಳನುದಯಿಸಿದಂ ವೀರಬಲ್ಲಾಳದೇವಂ ॥ 1275 ॥

ಭರದಿಂದಂ ತನ್ನ ದೋರ್ಗರ್ವದಿನೊಡೆಯರಸಂ ಕಾಯ್ದು ಕಾದಲ್ಕಣಂ ಪೂ।
ಣ್ದಿರೆ ಬಲ್ಲಾಳಕ್ಷಿತೀಶಂ ನಡೆದು ಬಳಸಿಯುಂ ಮುತ್ತೆ ಸೇನಾಗಜೇಂದ್ರೋ॥
ತ್ಕರದಂತಾಘಾತಸಂಚೂರ್ಣಿತಶಿಖರದೊಳುಚ್ಚಂಗಿಯೊಳ್ ಸಿಲ್ಕಿದಂ ಭಾ।
ಸುರಕಾಂತಾದೇಶಕೋಶವ್ರಜಜನಕಹಯೌಘಾನ್ವಿತಂ ಪಾಂಡ್ಯಭೂಪಂ ॥ 1276 ॥

ಚಂದ್ರಮೌಳಿ

ವರತರ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿಚಂದ್ರಂ ಸಮು।
ದ್ಧುರಸಾಹಿತ್ಯಲತಾಲವಾಲನೆಸೆದಂ ನಾನಾಕಲಾಕೋವಿದಂ॥
ಸ್ಥಿರಮಂತ್ರಂ ದ್ವಿಜವಂಶಶೋಭಿತನಶೇಷಸ್ತುತ್ಯನುದ್ಯದ್ಯಶಂ।
ಧರೆಯೊಳ್ ವಿಶ್ರುತಚಂದ್ರಮೌಳಿಸಚಿವಂ ಸೌಜನ್ಯಜನ್ಮಾಲಯಂ ॥ 1277 ॥

## ಆಚಿಯಕ್ಕ

ಘನಬಾಹಾಬಹಳೋರ್ಮಿಭಾಸಿತೆ ಮುಖವ್ಯಾಕೋಚಪಂಕೇಜಮುಂ।
ಡನೆ ದೃಜ್ಮೀನವಿಲಾಸೆ ನಾಭಿವಿತತಾವರ್ತಾಂಕೆ ಲಾವಣ್ಯ ಪಾ॥
ವನವಾಸ್ಸಂಭೃತೆ ಚಂದ್ರಮೌಳಿವಧುವೀಶ್ರೀಯಾಚಿಯಕ್ಕಂ ಜಗ।
ಜ್ಜನಸಂಸ್ತುತ್ಯೆ ಕಳಂಕದೂರೆ ನುತೆ ಗಂಗಾದೇವಿ ತಾನಲ್ಲಳೇ॥ 1278 ॥

ಹರಿಣೀಲೋಚನೆ ಪಂಕಜಾನನೆ ಘನಶ್ರೋಣಿಸ್ತನಾಭೋಗಭಾ।
ಸುರೆ ಬಿಂಬಾಧರೆ ಕೋಕಿಳಸ್ವನೆ ಸುಗಂಧಶ್ವಾಸೆ ಚಂಚತ್ತನೂ॥
ದರಿ ಭೃಂಗಾವಳಿನೀಳಕೇಶೆ ಕಳಹಂಸೀಯಾನೆಯೀ ಕಂಬುಕಂ।
ಧರೆಯಪ್ಪಾಚಲದೇವಿ ಕಂತುಸತಿಯಂ ಸೌಂದರ್ಯದಿಂದೇಳಿಪಳ್ ॥ 1279 ॥

ಗೌರಿ ತಪಂಗಳಂ ನೆಗಟ್ದು ತಾಂ ನೆರೆದಳ್ ಗಡ ಚಂದ್ರಮೌಳಿಯೊಳ್।
ನಾರಿಯರ್ಗಿನ್ನದೇಸೊಬಗು ಪೇಟ್ ಪಲವುಂ ಭವದೊಳ್ ನಿರಂತರಂ॥
ಸಾರತಪಂಗಳಂ ಪಡೆದು ತಾಂ ನೆರೆದಂ ಗಡ ಚಂದ್ರಮೌಳಿ ಗಂ।
ಭೀರೆಯೆನಿಪ್ಪ ತನ್ನನೆನಿಪಾಚಲೆವೋಲ್ ಸೊಬಗಿಂಗೆ ನೋಂತರಾರ್ ॥ 1280 ॥

## ಚೆಂದವ್ವೆ

ಆತನ ಸತಿಗೆ ಸಿತಾಂಬುಜ। ಶೀತಾಂಶುಶರತ್ಪಯೋದವಿಶದಯಶಃ ಶ್ರೀ।
ಧೌತಧರಾತಳೆಗಖಿಳವಿ। ನೀತೆಗೆ ಚೆಂದವ್ವೆಗಬಲೆಯರ್ ದೊರೆಯುಂಟೇ ॥ 1280 ಅ॥

ಇಂದುಮುಖಿ ಮೃಗವಿಲೋಚನೆ। ಮಂದರಗಿರಿಧೈರ್ಯೆ ತುಂಗಕುಚಯುಗೆ ಭೃಂಗೀ।
ಬೃಂದಶಿತಿಕೇಶವಿಳಸಿತೆ। ಚೆಂದವ್ವೆ ವಿನೂತೆಯಾದಳಖಿಳೋರ್ವರೆಯೊಳ್ ॥ 1281 ॥

## ಕಾಳವ್ವೆ

ಸರಸಿರುಹವದನೆ ಘನಕುಚೆ। ಹರಿಣಾಕ್ಷಿ ಮದೋತ್ಕಕೋಕಿಳಸ್ವನೆ ಮದವ।
ತ್ಕರಿಪತಿಗಮನೆ ತನೂದರಿ। ಧರೆಯೊಳ್ ಕಾಳವ್ವೆ ರೂಪಿನಾಗರಮಾದಳ್ ॥ 1282 ॥

## ಆಚಿಯಕ್ಕನ ಮಗ ಸೋಮ

ವರಲಕ್ಷ್ಮೀಪ್ರಿಯವಲ್ಲಭಂ ವಿಜಯಕಾಂತಾಕರ್ಣಪೂರಂ ವಿಭಾ।
ಸುರವಾಣೀಹೃದಯಾಧಿಪಂ ತುಹಿನತಾರಕ್ಷೀರವಾರಾಶಿಪಾಂ॥
ಡುರಕೀರ್ತೀಶನುದಗ್ರದುರ್ಧರತುರಂಗಾರೂಢರೇವಂತನು।
ದ್ಧುರಕಾಂತಾಕಮನೀಯಕಾಮನೆಸೆದಂ ಶ್ರೀಸೋಮನೀ ಧಾತ್ರಿಯೊಳ್ ॥ 1283 ॥

## 225 ಶಿಕಾರಿಪುರ 119 [1181]

ಇದರಲ್ಲಿ ಕಳಚುರ್ಯರಾಜನಾದ ಆಹವಮಲ್ಲನ ಪ್ರಧಾನ ಕೇಶವರಾಜ ಮುಂತಾದವರು ಬಳ್ಳಿಗಾವೆಯ ಗವರೇಶ್ವರದೇವರಿಗೆ ಅಪುತ್ರಿಕಮೃತಕಧನವನ್ನು ಬಿಟ್ಟಂತೆ ಹೇಳಿದೆ.

ರೇಚಣ ದಂಡನಾಥ

ವೈರಿನೃಪಾಳಪಟ್ಟಮಹಿಷೀವರಪಾಂಡುರಗಂಡಕಾಂತಿಯಿಂ।
ಸ್ವೈರಣೆಗೆಟ್ಟು ಚಾತಕಕುಳಂ ಹಿಮದೀಧಿತಿಯೆಂದು ಷಟ್ಪದಂ॥
ಚಾರುಸಿತಾಬ್ಜಮೆಂದು ಕಳಹಂಸಕುಳಂ ಬಿಸಕಾಂಡಮೆಂದು ಸಂ।
ಚಾರಿಸಿ ಲೋಕಮಂ ನಗಿಸುಗುಂ ವಿಭುರೇಚಣದಂಡನಾಥನಾ ॥ 1284 ॥

ಸೋವಣಚಮೂಪ

ಪರಹಿತವೃತ್ತಿಯೊಳ್ ಶಿಬಿ ಪರಾರ್ಥದೊಳಾ ರವಿನಂದನಂ ನೃತಾ।
ದರತೆಗೆ ಧರ್ಮನಂದನನನೆ ಮುಂ ತೊಣೆಯಪ್ಪೊಡದಕ್ಕುಮಲ್ಲದಾ॥
ಪರಹಿತವೃತ್ತಿಗಂ ವಿತರಣೋನ್ನತಿಗಂ ವರಸತ್ಯವಾಣಿಗಂ।
ದೊರೆಯೆನಲಾರೊ ಸೋವಣಚಮೂಪತಿಯಂತಿರಿಳಾತಳಾಗ್ರದೊಳ್ ॥ 1285 ॥

ಕೇಶವಚಮೂಪ

ಮಲೆವವರಿಲ್ಲ ಗಂಡೆಸೆವರಿಲ್ಲಿದಿರಪ್ಪವರಿಲ್ಲ ತೇಜಮೆಂ।
ದುಲಿವವರಿಲ್ಲ ಟೆಂಟಣಿಪರಿಲ್ಲುಱದಿರ್ಪವರಿಲ್ಲ ಕಾಯ್ದು ಬಂ॥
ದಲೆವವರಿಲ್ಲ ತನ್ನ ಬಿರುದಲ್ಲದೆ ಕಬ್ಬದ ಗೀತದಲ್ಲಿ ಮಾ।
ರ್ತಲೆಯುವರಿಲ್ಲ ಕೃಷ್ಣವಿಭುಕೇಶವದೇವಚಮೂಪರಾಜ್ಯದೊಳ್ ॥ 1286 ॥

ತಿಕ್ಕರಾಜ

ಬಲ್ಮೆಯ ಮಾತಿನೊಳೇಂ ಕಲಿ। ಕಲ್ಮಪರಹಿತಂಗೆ ತಿಕ್ಕರಾಜಂಗುಱಿದೀ।
ಪುಲ್ಮಾನಸರಂ ದೊರೆಯೆನೆ। ಕಲ್ಮಾಣಿಕದಂತುಟೆಂದೊಡೆಂತಂತೆ ದಿಟಂ ॥ 1287 ॥

## 226 ಬೇಲೂರು 137 [1182]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಆದಿಗೌಂಡನು ಒಂದೂರನ್ನು ಕಟ್ಟಿಸಿ ಅದರಲ್ಲಿ ಆದಿಮಲ್ಲಿಕಾರ್ಜುನ ದೇವಾಲಯವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ಸಕಳಕಳಾಪರಿಪೂರ್ಣಂ। ಸಕಳೋರ್ವೀನಯನಸುಖದನಕಳಂಕಂ ತಾ।
ನಕುಟಿಳನಪೂರ್ವನವಶೀ। ತಕರಂ ಬಲ್ಲಾಳದೇವನುದಯಂಗೆಯ್ದಂ ॥ 1288 ॥

ಶನಿವಾರದಂದೆ ಪಾಂಡ್ಯಾ। ವನಿಪನ ಸಪ್ತಾಂಗಮೆಯ್ದೆ ಸಿದ್ಧಿಸಿದುದಱಿಂ।
ಶನಿವಾರಸಿದ್ಧಿವೆಸರಂ। ಜನಪತಿ ಬಲ್ಲಾಳದೇವನೆಸೆದಿರೆ ತಳೆದಂ ॥ 1289 ॥

ಬೊಪ್ಪದಂಡನಾಥ

ಮಲೆನಾಡಂ ತುಳುನಾಡನಗ್ಗದ ಬಯಲ್ನಾಡಂ ಲಸಚ್ಚೋಳಮಂ।
ಡಲಮಂ ಪೆರ್ದೊಱೆ ಮೇರೆಯಾಗೆ ಬಡಗಲ್ ಶ್ರೀವಿಷ್ಣುಭೂಪಂಗೆ ಭೂ॥
ತಲಮಂ ಸಾಧಿಸಿ ಕೊಟ್ಟು ಮಾಣ್ದು ರಣದೊಳ್ ಮಾಱಾಂತರಂ ಕೊಂದ ದೋ।
ರ್ಬಲದಿಂ ದ್ರೋಹಘರಟ್ಟನೆಂದು ಪೆಸರ್ವೆತ್ತಂ ಬೊಪ್ಪದಂಡಾಧಿಪಂ ॥ 1290 ॥

ಆದಿಗೌಂಡ

ಹಸಿದರ ಮೊಗಮಂ ನೋಡಂ। ಹಸಿವುಂ ನೀರಟ್ಕೆಯಿಲ್ಲ ಕಂಡೊಡೆ ತನ್ನಂ।
ವಸುಮತಿಗೆನಿಪ ಮಹಾಪ್ರಭು। ವಸುಧೆಯೊಳಾರ್ ಕಾಣ್ಬರಾದಿಗೌಂಡಂಗೆಣೆಯಂ
॥1290 ಅ॥

ಹಸುಗೂಸುಗಳ್ಗೆ ಹಾಲಂ। ಹಸಿದರ್ಗ್ಗನ್ನಮುಮನಟ್ಕಱಿಂದಂ ನಿಚ್ಚಂ।
ಹಸಗಾಲದೊಳಂ ಸಲಿಸುವ। ಬೆಸನದಿನಾರಾದಿಗೌಂಡನಂ ಪೋಲ್ವನ್ನರ್ ॥ 1291 ॥

ಕೆಱೆಯಂ ಕಟ್ಟಿಸುತಿರ್ಪುದು। ಮಱಿವಂಟಿಗೆಯಿಡಿಸುತಿರ್ಪುದೆಸೆವಾರವೆಯಂ।
ನೆಱೆ ಮಾಡಿಸುವುದುಮಲ್ಲದೆ। ಪೆಱತೊಂದಿಲ್ಲಾದಿಗೌಂಡನುಜ್ಜುಗಮೆಂದುಂ ॥ 1292 ॥

## 227 ಚೆನ್ನರಾಯಪಟ್ಟಣ 150 [1182]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಹೆಂಡತಿ ಆಚಲದೇವಿ ಶ್ರವಣಬೆಳ್ಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಂತೆ ಹೇಳಿದೆ.

ಬಲ್ಲಾಳ II

ಹೆಸರುಚ್ಚಂಗಿಯ ಕೋಟೆಯು। ನಸದೃಶಭುಜಬಳದೆ ಮುನ್ನೆ ಕೊಂಡರಸುಗಳಾರ್।
ಅಸಹಾಯಶೂರ ಶನಿವಾ। ರಸಿದ್ಧಿ ಗಿರಿದುರ್ಗಮಲ್ಲ ಬಲ್ಲಾಳನವೋಲ್ ॥ 1293 ॥

ಏಕಾಂಗವೀರಶೂದ್ರಕ। ನಾಕಾರಮನೋಜನರ್ಥಿಸುರತರು ತುರಗಾ।
ನೀಕವರವತ್ಸರಾಜನ। ನೇಕಪಭಗದತ್ತನಲ್ತೆ ಬಲ್ಲಾಳನೃಪಂ ॥ 1294 ॥

ಚಂದ್ರಮೌಳಿ

ಭರತಾಗಮತರ್ಕವ್ಯಾ। ಕರಣೋಪನಿಷತ್ಪುರಾಣನಾಟಕಕಾವ್ಯೋ।
ತ್ಕರವಿದ್ವಜ್ಜನನುತನೆನೆ। ಸ್ಥಿರಪುಣ್ಯಂ ಚಂದ್ರಮೌಳಿಮಂತ್ರಿಲಲಾಮಂ ॥ 1295 ॥

**228 ನಾಗಮಂಗಲ 32 [1183]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತರು ಭರತಿಮಯ್ಯ ಬಾಹುಬಲಿ ದಂಡನಾಯಕರು ಅಣುವಸಮುದ್ರದಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಅರಿನೃಪರಂ ತಡಂಗಡಿದು ಬೇಲಿಯನಿಕ್ಕಿ ಪಟುಪ್ರತಾಪಮು।
ರ್ಬಿರೆ ತಳಕಾಡನೀಡುಗಡಿದಳ್ಕುಱೆ ಸುಟ್ಟು ತುರಂಗದಂಘ್ರಿಸಂ॥
ಚರಣದಿನುತ್ತು ವೀರರಸದಿಂ ಹದನಾಗಿರೆ ಕೂಡೆ ಬಿತ್ತಿದಂ।
ಸುರುಚಿರಕೀರ್ತಿಯಂ ನೃಪಶಿಖಾಮಣಿ ಸಾಹಸಗಂಗಹೊಯ್ಸಳಂ ॥ 1296 ॥

ಭರತದಂಡನಾಥ

ಬೆಸನಂ ಬಲ್ಲಾಳಭೂಪಂ ಬೆಸಸೆ ಭರತದಂಡಾಧಿಪಂ ರಾಗದಿಂ ವಾ।
ಯುಸುತಂ ರಾಮಾಜ್ಞೆಯಿಂದಂ ನಡೆವ ತೆಱದೆ ಬೀಟಿಸ್ಕೊಂಡು ಸಾಮಗ್ರಿಯಿಂದಂ॥
ದಸುಹೃದ್ದೇಶಂಗಳಂ ಕೇಸುರಿಗೆ ನೆಱೆಯೆ ಬಿಟ್ಟಂತೆ ನಿಷ್ಕಂಟಕಂ ಭೂ।
ಪ್ರಸರಂ ತಾನಾಯ್ತುಧೀಶಂಗೆನಿಸಿ ಪಗೆಯ ಚಿಂತಿಲ್ಲದಂತಾಗೆ ಕೊಂಡಂ ॥ 1297 ॥

ಬಾಹುಬಲಿದಂಡನಾಥ

ಕುದುರೆಯನೇಱಲಂಕವಣೆಗಂಘ್ರಿಯನೊಯ್ಯನೆ ನೀಡೆ ವೈರಿಗಳ್ ।
ಕದನಪರಾಙ್ಮುಖರ್ ಪರಿದು ಬೆಟ್ಟಮನೇಱದರುಟ್ಟುದಿಕ್ಕಿದರ್ ॥
ನದಿಗಳೊಳಟ್ಟಿರಂಗುಳಿಗಳಂ ನೆಱೆ ಕರ್ಚಿದರೆಯ್ದೆ ಹುತ್ತನೇ ।
ಱದರಿದು ದಂಡನಾಥಭರತಾತ್ಮಜಬಾಹುಬಲೀಶಪೌರುಷಂ ॥1298॥

**229 ಅರಸಿಯಕೆರೆ 79 [1183]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಅರಸಿಯಕೆರೆಯ ಕೊಯ್ಲಾಳ್ಗಳು ಕೊಯ್ಲಾಳೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ಕಮಠಂ ಕಂದಮಹೀಂದ್ರನಾಳಮುದಿತಾಶಾಸಂಕುಳಂ ತದ್ದಳಂ ।
ಕಮನೀಯೋನ್ನತದಿಗ್ಗಜಂ ಮಧುಕರಂಬೊಲ್ ಶೋಭಿಪೀ ದೈತ್ಯಶ ॥
ತ್ರುಮಹೀಭೃನ್ನುತಕರ್ಣಿಕಾಕುವಳಯಕ್ಕಾ ತನ್ನ ಷೀಯೂಷಹ ।
ಸ್ತಮೆ ತಾನಾಶ್ರಯಮೆಂದೊಡೇವೊಗಟ್ಟುದೋ ಶ್ರೀವೀರಬಲ್ಲಾಳನಂ ॥1299॥

ಕೇತಯ್ಯ

ಮದವದ್ವೈರಿಬಳಪ್ರಭೇದಿ ಸುಮನಸ್ಸಂದೋಹಸೇವೋನ್ನತಾ ।
ಸ್ಪದನುದ್ಯದ್ಗುರುವಾಕ್ಯನೀತಿಚರಿತಂ ಕಾತ್ಯಾಯನೀಕಾಂತಸ ॥
ತ್ಪದನೀರೇರುಹಪೂಜನಾರತನೆನಲ್ಕೀಧಾತ್ರಿಯೊಳ್ ಶಕ್ರನಂ ।
ದದೆ ಪೆಂಪಂ ತಳೆದಿರ್ದನುದ್ಧವಿಭವಂ ಕೇತಯ್ಯನತ್ಯೂರ್ಜಿತಂ ॥1300॥

ಕೊಯ್ಲಾಳ್ಗಳು

ಸ್ಥಿರರೇ ಮೇರುಗೆ ಸನ್ನಿಭರ್ ಗುಣಿಗಳೇ ಧರ್ಮಾತ್ಮಜಪ್ರಖ್ಯರೀ ।
ವರೆ ಮಿತ್ರಾತ್ಮಜಪಾಟಿಗಳ್ ಕಲಿಗಳೇ ದೇವೇಂದ್ರಪುತ್ರಂಗವರ್ ॥
ದೊರೆಗಳ್ ಶೌಚಿಗಳೇ ನದೀಜನೆ ಸಮಂ ಗುಣ್ಪುಳ್ಳರೇ ಸಾಗರಂ ।
ನಿರುತಂ ಪಾಸಟಿಯೆಂದೊಡೇವೊಗಟ್ಟುದೋ ಕೊಯ್ಲಾಳ್ಗಳೊಂದಂದಮಂ ॥1301॥

ಜಲಮಂ ಕಾಂತೆಯುರಾರ್ತು ದಾಂಟುವೊಡವರ್ ಗೇಣಂತರಕ್ಕಣ್ಮರೀ ।
ನೆಲದೊಳ್ ಚೋದ್ಯಮಿದೇನೊ ಕೇಳುಗುರ ಮೂನೂರ್ವರ್ಕಳೊಳ್ ಕೂಡಿ ನಿ ॥
ರ್ಮಲೆ ಕೀರ್ತ್ಯಂಗನೆಯುಂಬುಧಿಪ್ರಕರಮಂ ದಾಂಟಿರ್ದು ದಿಗ್ದಂತಿಸಂ ।
ಕುಲದಂತಾಗ್ರದೊಳೆಯ್ದೆ ನರ್ತಿಸುತುಮಿರ್ಪಳ್ ಗಾಳುವಿಂತಾವಳೋ ॥1302॥

ಶರಣೆನೆ ಕಾವರ್ ಬೇಡಿದೊ । ಡಿರದೀವರ್ ವೈರಿಸಂಕುಳಂ ಬಂದೆಡಜಿಲ್ ।
ಧುರದೊಳ್ ಗೆಲ್ವರೆನಲ್ಕೀ । ಧರೆಯೊಳ್ ಕೊಯ್ಲಾಳ್ಗಳಂದಮುಪಮಾತೀತಂ ॥1303॥

**230 ತರೀಕೆರೆ 15 [1184]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ಚಿಕ್ಕಬಮ್ಮಲದೇವಿಗೆ ಶಾಂತ್ಯರ್ಥವಾಗಿ ಯೋಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಪೆರ್ದೊಱೆ ಸೇತು ಪಶ್ಚಿಮಪಯೋನಿಧಿ ಮೂಡಪಯೋಧಿ ಮೇರೆಯಾ।
ಗಿರ್ದ ಧರಿತ್ರಿಯಂ ತನಗೆ ತೋಳ್ವಲದಿಂ ನೆಱೆ ಮಾಡಿ ದುಷ್ಟರಂ॥
ಮರ್ದಿಸಿ ತುಷ್ಟಿಯಂ ಪಡೆದು ಶಿಷ್ಟಜನಪ್ರಕರಕ್ಕೆ ರಾಮನಂ।
ತಿರ್ದನಪಾರಪೌರುಷಮ ತನ್ನೊಳೊಡಂಬಡೆ ವಿಷ್ಣುವರ್ಧನಂ ॥1304॥

ಬಲ್ಲಾಳ II

ಆ ದಂಪತಿಗೆ ತನೂಭವ। ನಾದಂ ರಿಪುನೃಪತಿಮುಕುಟಘಟ್ಟಿತಪದಲ।
ಕ್ಷ್ಮೀದಯಿತನಧಿಕಬಳನುದಿ। ತೋದಿತಪುಣ್ಯಪ್ರಭಾವನೀ ಬಲ್ಲಾಳಂ ॥1305॥

**231 ಅರಸಿಯಕೆರೆ 88 [1184]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಜ್ಞಾನುಸಾರವಾಗಿ ರಾಜಾಧ್ಯಕ್ಷದ ಹೆಗ್ಗಡೆ ರೇವಣ್ಣ ಮುಂತಾದವರು ಬ್ರಹ್ಮದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬ್ರಹ್ಮದೇವರು

ಕತ್ತುರಿಗಂಪು ಕೈಸುರಿಗೆ ಹೊನ್ನೊಱೆ ಹಟ್ಟಿಗೆ ಸಣ್ಣ ಗಗ್ಗರಂ।
ಮುತ್ತಿನ ದಂಡೆ ತೋಳಮಣಿ ಬಯ್ತಲೆ ನೆಯ್ದಲೆ ತೂಲಜನ್ನುರಂ॥
ಬೆತ್ತದ ಸೆಂಡುಕೋಲ್ ಮೊರೆವ ದಂತದ ಪಾವುಗೆ ಭೃಂಗದೋಲೆ ಮೆ।
ಯ್ವೆತ್ತಿರೆ ರಾತ್ರಿಯೊಳ್ ಸುಱಿವ ಬ್ರಹ್ಮಯನೀಗೆಮಗಿಷ್ಟಸಿದ್ಧಿಯಂ ॥1306॥

ಬಲ್ಲಾಳ II

ಕಲಿಕಾಲಕ್ಷತ್ರಪುತ್ರಪ್ರಬಳತರದುರಾಚಾರಸಂದೋಹದಿಂದಂ।
ಹೊಲೆ ಹೊದ್ದಲ್ ಹೇಸಿ ಬೇಸತ್ತಳವಱಿದ ಮಹೀಕಾಂತೆಯಂ ರಕ್ಷಿಸಲ್ಕಾ॥
ಜಲಜಾಕ್ಷಂ ತಾನೆ ಬಂದಿಂತವತರಿಸಿದವೋಲ್ ವೀರಬಲ್ಲಾಳಭೂಪಂ।
ಕುಲಜಾತ್ಯಾಕಾರಭಾರಂ ನೃಪವರನುದಯಂಗೆಯ್ದನಾಶ್ಚರ್ಯಶೌರ್ಯಂ ॥1307॥

**232 ಹೂಲಿಯ ಶಾಸನ [ಜಿ. 1104, 1162, 1184]**

(ಎಪಿಗ್ರಾಫಿಯಾ ಇಂಡಿಕ, XVIII, 190)

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಅವನ ಪ್ರಧಾನ ಅನಂತ ಪಾಲರಸನ ಆಜ್ಞಾನುಸಾರವಾಗಿ ಸಿಂಗರಸನು ಪೂಲಿಯ ಅಂಧಾಸುರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

## ಕಾಳಾಮುಖರ್

ಈ ಮಹಿಯೊಳ್ ನೆಗಟ್ದರ್ ವಿ । ದ್ಯಾ ಮಹಿಮೋನ್ನತಿಯೊಳುಗ್ರ ತಪದೊಳ್ ಮುಕ್ತಿ॥
ಶ್ರೀಮುಖಮಣಿಮುಕುರರ್ ಕಾ । ಳಾಮುಖರೇನಃಪರಾಙ್ಮುಖರ್ ಮುನಿವರ್ಯರ್
॥1308॥

## ಜ್ಞಾನಶಕ್ತಿಮುನಿ

ರುಚಿರೋದ್ಯದ್ರತ್ನರೋಚಿಸ್ತಬಕ ವಿಲಸಿತಾನೇಕ ಭೂಪಾಲ ಚೂಡಾ ।
ನಿಚಯ ಪ್ರೋದ್ಘೃಷ್ಟ ಪಾದದ್ವಯನುಪಗತ ಸಾರಸತ್ವಂ ನೂತ್ನಕರ್ಮೋ ॥
ಪಚಯಾಂಭೋರಾಶಿ ಕಾಲಾನಲನಖಿಲ ಮುನೀಂದ್ರೋತ್ತಮಂ ಮೋಕ್ಷಲಕ್ಷ್ಮೀ ।
ಕುಚ ಕುಂಭಾಲಂಕೃತೋರಸ್ಥಳನಮಳ ಯಶಂ ಜ್ಞಾನಶಕ್ತಿವ್ರತೀಂದ್ರಂ ॥1309॥

ಏಕಱಿಯಿರೆ ಬಹು ತರ್ಕ । ವ್ಯಾಕರಣಂ ಜ್ಞಾನಶಕ್ತಿ ಪಂಡಿತದೇವ ॥
ಗ್ಗೇಕಾಕ್ಷರಮೆಂದು ಮಹೀ । ಲೋಕಂ ಬಣ್ಣಿಸುವುದವರ ಮಹಿಮೋನ್ನತಿಯಂ
॥1310॥

## ಅವನ ಶಿಷ್ಯ ತತ್ಪುರುಷ

ಅವರಣುಗಿನ ಶಿಷ್ಯರಿಳಾ । ಪ್ರವರರ್ ಗುಣಗಣ ಸಮನ್ವಿತರ್ ನಾನಾ ಶಾ ॥
ಸ್ತ್ರವಿದರ್ ತತ್ಪುರುಷರ್ ದಿ । ಗ್ವಿವರಂಗಳನಮಳ ಕೀರ್ತಿಯಿಂ ಧವಳಿಸಿದರ್ ॥1311॥

## ಪೂಲಿ

ವನಧಿ ಪರೀತ ಭೂತಳ ವಿಳಾಸವತೀ ಮುಖದಂತೆ ತೋರ್ಪ ಚೆ ।
ಲ್ವಿನ ಕಣಿ ಬೆಳ್ವಲಕ್ಕೆ ತಿಲಕಾಕೃತಿಯಿಂದೆಸೆದಿರ್ಪ ಪೂಲಿಯೋ ॥
ನನಿಮಿಷರಾಜನಿರ್ಪ ಪುರವೋ ಫಣಿರಾಜನ ರಾಜಧಾನಿಯೋ ।
ಮನುಜನಿವಾಸಮಲ್ಲದೆನಿಸಲ್ ನೆಱೆಗುಂ ಪೆಱತೊಂದು ಶೋಭೆಯಿಂ ॥1312॥

ಅದು ವೇದಂಗಳ ತಾಯ್ಮನೆ । ಯದು ನಾನಾ ತರ್ಕದಿರ್ಕೆದಾಣಂ ಕೇಳಂ ॥
ತದು ಶಾಸ್ತ್ರಂಗಳ ಕಣಿಯೆನಿ । ಸಿದುದವನೀಚಕ್ರದೊಳಗೆ ಪೂಲಿಗ್ರಾಮಂ ॥1313॥

ಆರಮೆ ಪಣ್ತೆಱಗಿದ ಸಹ । ಕಾರಮೆ ಭೋರೆಂದು ಮೊರೆಯುತಿರ್ಪಳಿನೀ ಝಂ ॥
ಕಾರಮೆ ಸುಗಂಧ ಕುಸುಮಾ । ಸಾರಮೆ ಪೊಱವೊಟಲೊಳೆಂದೊಡೇವಣ್ಣಿಪುದೋ
॥1314॥

ಸುರಸಿಲಯುಂಗಳೀಶನ ದಿನೇಶನ ಪಾದ ಯುಗಕ್ಕೆ ಭಕ್ತರ ।
ಪ್ಪರನವರಿರ್ಪ ಶಾಶ್ವತಪದಕ್ಕಡರ್ದೇಱಿಸಲೆಂದು ಸಾರಮಾ ॥
ಗಿರೆ ಬಿದಿ ಕಟ್ಟಿದೊಂದು ಪಥಮೆಂಬವೊಲಂಬರಮಂ ತಱುಂಬಿ ಭಾ ।
ಸುರತರ ಶಾತಕುಂಭ ಕಳಶಂಗಳಿನೊಪ್ಪುಗುಮೆಂತು ನೋೞ್ಪೊಡಂ ॥1315॥

ಅಖಿಳ ಮಹೀದೇವರ್ ಶತ । ಮಖನಂ ತಣಿಪಲ್ಕೆ ಕೂಡೆ ಮಾಡುತ್ತಿರೆ ಕಾ॥
ರ್ಮುಖದವೊಲೆಸೆಗುಂ ನಾನಾ।ಮುಖಧೂಮಸ್ತೋಮದಿಂದಮೆಂದುಂ ವ್ಯೋಮಂ ॥
॥1316॥

ಹೂಲಿಯ ಸಾಸಿರ್ವರ್

ವಿಪುಳಾಚಾರರಗಣ್ಯಪುಣ್ಯನಿಳಯರ್ ಲೋಕೈಕಪೂಜ್ಯರ್ ಕಳಾ ।
ನಿಪುಣರ್ ಶಾರದ ನೀರದೋಪಮಯಶರ್ ಶಿಷ್ಟೇಷ್ಟವರ್ಗಾಮರಾಂ ॥
ಘ್ರಿಪರುದ್ವೃತ್ತವಿರೋಧಿಸಾಧನಹರರ್ ಶ್ರೀ ಕೇಶವಾದಿತ್ಯ ದೇ ।
ವಪದಾಂಭೋರುಹ ಭೃಂಗರೆಂದು ಪೊಗೞ್ಗುಂ ಸಾಸಿರ್ವರಂ ಭೂತಳಂ ॥1317॥

## 233 ಅರಸಿಯಕೆರೆ 127 [1185]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಪೆರ್ಗಡೆ ಸಂಕಣ್ಣನು ಪಲ್ಲವ ಪುರದಲ್ಲಿ (ತಳಿರೂರು) ಶಂಕರೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ತದಪತ್ಯಂ ಸಕಳಗುಣಾ । ಸ್ಪದನಸುಹೃನ್ನೃಪತಿನಿಕರಮುದರದನಿಘಟಾ ।
ಬಿದುವಿದಳನಮಾರುತಿಯೆನಿ । ಸಿದನೇಚಲದೇವಿಯೆಱೆಯನೆಱೆಯಂಗನೃಪಂ ॥1318॥

ವಿಷ್ಣುವರ್ಧನ

ಅಂತಾ ಮೂವರೊಳುರ್ವರಾಭರಣದೊಳ್ ನಿಂದೊಪ್ಪಿದಂ ವಿಷ್ಣುಭೂ ।
ಕಾಂತಂ ಪೆರ್ದೊಱೆ ಮೇರೆಯಾದವನಿಯಂ ತಾನಾಳ್ದನಾತ್ಮೀಯಮಾ ॥
ಶಾಂತಕ್ಕುಜ್ವಳಕೀರ್ತಿ ಪರ್ವುವಿನೆಗಂ ನಾನಾಗ್ರಹಾರಸ್ಫುರ ।
ತ್ಕಾಂತಿಪ್ರೋಜ್ವಳಿತಾಮರಾಲಯತಟಾಕಶ್ರೇಣಿಯಂ ಮಾಡಿದಂ ॥1319॥

ನಾರಸಿಂಹ I

ಒಗೆದಂ ಲೋಕದ ಸಯ್ಪು ಸಮ್ಮನಿಸೆ ಸರ್ವೋರ್ವೀತಳಾಳಂಕರಿ ।
ಷ್ಣುಗೆ ವೈರಿಕ್ಷಿತಿಪಾಲಜಿಷ್ಣುಗೆ ನಿಜಾಮ್ನಾಯಾಬ್ಧಿವರ್ಧಿಷ್ಣುಗಾ ।
ವಗಮಾಶಾಪರಿಪೂರಿತೋಜ್ವಳಯಶೋಭ್ರಾಜಿಷ್ಣುಗಾಭೂಪವಿ ।
ಷ್ಣುಗೆ ಪುತ್ರಂ ನರಸಿಂಹದೇವನತುಳಪ್ರೌಢಪ್ರತಾಪೋದಯಂ ॥1320॥

## ಬಲ್ಲಾಳ II

ವಿನಯಾದಿತ್ಯನಿನುಳ್ಳರಲ್ದೆಱಗಪೃಥ್ವೀಪಾಳನಿಂ ಕಂಪನಾ ।
ಳ್ದು ನೃಪಾಗ್ರೇಸರನಪ್ಪ ವಿಷ್ಣುವಿನ ಕೆಯ್ಯೊಳ್ ತಳ್ತು ತನ್ನಾರಸಿಂ ॥
ಹನ ಶೌರ್ಯಕ್ಕನುರಾಗಮಂ ಪಡೆದು ಪೆಂಪಿಂ ಪೊಯ್ಸಳಾಮ್ನಾಯಕೋ ।
ಕನದಂ ನಿತ್ಯನಿವಾಸಮಾಯ್ತು ಸಿರಿಗೀ ಬಲ್ಲಾಳಭೂಪಾಳನಾ ॥1321॥

ವಿಜಯಾಕೃಷ್ಟಿಗೆ ತೋಳ ಬಾಳ ಪೊಗರಾಯ್ತಾಲೇಖ್ಯಯಂತ್ರಾಕ್ಷರಂ ।
ಭುಜಗೋತ್ರಾಚಲವೊಂದೆ ತಾಳ್ದಿತಖಿಳಕ್ಷ್ಮಾಚಕ್ರಮಂ ವಕ್ತ್ರಪಂ ॥
ಕಜದೊಳ್ ಭಾರತಿ ನರ್ತಿಪಳ್ ಮುದದೆ ವಕ್ಷೋರಂಗದೊಳ್ ಸಂತತಂ ।
ನಿಜದಿಂದಂ ಸಿರಿಯಿರ್ಪಳೇವೊಗಟ್ಟುದೋ ಬಲ್ಲಾಳಭೂಪಾಳನಾ ॥1322॥

ಭುವನಾಳೋಕಾಭಿರಾಮಂ ದಿಗವನಿತಳಪೂರ್ಣಾರ್ಜುನಶ್ಲೋಕನಾತ್ಮೋ ।
ತ್ಸವಕೃದ್ದಿಗ್ಜೈತ್ರಯಾತ್ರಾಜಿತನೃಪತಿಶತಾನೀಕನಾಭಾಸಮಾನ ॥
ಸ್ತವಪುಶ್ರೀವತ್ಸಸಲ್ಲಕ್ಷಣನೆನೆ ನಿಜಸಾಮರ್ಥ್ಯದಿಂದಾದ್ಯಧಾತ್ರೀ ।
ಧವರಂ ತಾಂ ತನ್ನೊಳುಜ್ಜೀವಿಸಿ ಪೆಸರ್ವಡೆದಂ ವೀರಬಲ್ಲಾಳದೇವಂ ॥1323॥

ಧರೆ ತೇರ್ ದಿಕ್ಕುಂಭಿ ಯುಗ್ಮಂ ರವಿಶಶಿವಳಯಂ ಗಾಲಿಗಳ್ ಮೇರು ಬಿಲ್ ನೀ ।
ಳ್ದುರಗೇಂದ್ರಂ ಮೌರ್ವಿ ಕೃಷ್ಣಂ ಕಣೆ ಶಿಖಿಯಲಗಾ ವಾಯು ಪಿಳ್ಕಗೆ ರುದ್ರಂ ॥
ಸುರಸೈನ್ಯಂ ಕೂಡೆ ಸುಟ್ಟಂ ತ್ರಿಪುರಮನಳವಿಂದಂದು ಬಲ್ಲಾಳನಿಂದು ।
ದ್ಧುರತೇಜಂ ವೈರಿದುರ್ಗೋತ್ಕರಮನಡಸಿ ಸುಟ್ಟಂ ಪ್ರತಾಪತ್ರಿಣೇತ್ರಂ ॥1324॥

ಉಂಡಿಗೆ ಸಾಧ್ಯಮಾಯ್ತು ಹಿಮದಿಂ ಸಲೆ ಸೇತುವರಂ ಸಮಸ್ತಭೂ ।
ಮಂಡಲವೊಲ್ಲದುದ್ಧತರ ನೆತ್ತಿಯ ಬತ್ತಿವೊಲಾಯ್ತು ತೀವ್ರರು ॥
ಜ್ಮಂಡಲಮಂ ದಿಟಂ ಮಿಗುವ ತೇಜದ ದಳ್ಳುರಿ ಕೀರ್ತಿದಿಗ್ವಧೂ ।
ಮಂಡನಹಾರಮಾಯ್ತುದು ನೃಪೇಂದ್ರಗುಣಂ ಚಲದಂಕರಾಮನಾ ॥1325॥

## ಸಂಧಿವಿಗ್ರಹಿ ಕೇಶಿರಾಜ

ಬರೆದುದು ಕೀರ್ತಿ ದಿಗ್ವಳಯಭಿತ್ತಿಯನೋವದೆ ಬಾರಿಸಿತ್ತು ಭಾ ।
ಸುರರುಚಿಯಿಂದೆ ಚಂದ್ರಮನ ಚಂದ್ರಿಕೆಯಂ ಸಲೆ ಮುದ್ರಿಸಿತ್ತು ಸಾ ॥
ಗರಪರಿವೇಷ್ಟಿತಾವನಿಯನೆಂದೊಡದೇವೊಗಟ್ದಪ್ಪೆ ಸಂದ ಸಾ ।
ಕ್ಷರನಿಧಿ ಸಂಧಿವಿಗ್ರಹಿಲಲಾಮುನನಗ್ಗದ ಕೇಶಿರಾಜನಂ ॥1326॥

ಪೆರ್ಗಡೆ ಸಂಕಣ್ಣ

ಕುಲದೊಳ್ ಶೀಲದೊಳೀಶಭಕ್ತಿಯೊಳನೂನೈಶ್ವರ್ಯದೊಳ್ ಮಿಕ್ಕ ವಾ।
ಗ್ಬಲದೊಳ್ ಸತ್ಯದೊಳೋಜೆಯೊಳ್ ಸಕಲವಿದ್ಯಾಪ್ರೌಢಿಯೊಳ್ ಧೈರ್ಯದೊಳ್॥
ಚಲದೊಳ್ ಚಾಗದೊಳುರ್ವರಾತಳದೊಳಿಂದಾರಯ್ವೊಡಿಂತೀಗುಣಾ।
ವಲಿಯಿಂ ಪೆರ್ಗಡೆಸಂಕಣಂಗೆ ಸರಿ ಯಾರ್ ಪೇಟನ್ಯಮಂತ್ರೀಶ್ವರರ್॥1327॥

ಸಂಕಣ್ಣನ ಹೆಂಡತಿ ಮಾಳವ್ವೆ

ಕಂಪಿಂ ಸೊಂಪಿಂ ಪೆಂಪಿಂ। ಪೊಂಪುೞಿವಡೆದಿರ್ದ ಮೆಲ್ಪಿನೊದವಿದ ಗುಣದಿಂ।
ಗುಂಪಿಲ್ಲದೆ ಪಡೆದಳ್ ಪತಿ। ಗಿಂಪಂ ಮಾಳವ್ವೆ ಮಾಲತೀಮಾಲೆಯವೋಲ್॥1328॥

ಪಲ್ಲವಪುರ

ಬಳಸಿದ ನಂದನಂಬಿಡಿದ ಪೂರ್ಣತಟಾಕದಿನಂತದಂ ಪುದುಂ।
ಗೊಳೆ ಮದಗಂಧಶಾಲಿವನದಿಂ ಬಿಡದೊಪ್ಪುವ ಕರ್ವುದೋಂಟದಿಂ॥
ದೊಳಗೆ ಪೊದಟ್ವಿ ದೇವಕುಲಸಂಕುಲದಿಂ ದ್ವಿಜಸೌಧಗೇಹದಿಂ।
ದೆಳೆಗೆಸೆದತ್ತು ಪಲ್ಲವಪುರಂ ವಸುಧಾತಳರತ್ನನೂಪುರಂ॥1329॥

ಒಂದೆಡೆ ವೇದನಾದಮಯಮೊಂದೆಡೆ ವಾದವಿನೋದರಮ್ಯಮು।
ತ್ತೊಂದೆಡೆ ವಿಸ್ಮೃತಸ್ಮೃತಿವಿಭೂಷಿತಮೊಂದೆಡೆ ತಂತ್ರಸೇವ್ಯಮಿ॥
ನ್ನೊಂದೆಡೆ ಶಬ್ದಶಾಸ್ತ್ರಪರಿಭಾವಿತಮೆಂಬಿನೆಗಂ ವಿದಗ್ಧತಾ।
ಮಂದಿರಮಾಯ್ತು ಪಲ್ಲವಪುರಂ ದ್ವಿಜಪಾವನಮಗ್ರಹಾರದೊಳ್॥1330॥

**234 ಬೇಲೂರು 119 [ಸು. 1185]**

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಹನ್ನವಣದ ನಕರಂಗಳು (ವರ್ತಕರು) ನಕರೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಯಾದವಕುಳಪೂರ್ವಾದ್ರಿಯೊ। ಳಾದಿತ್ಯನಿದೊರ್ವನೆನಿಸಿ ತನ್ನಯ ತೇಜಂ।
ಮೇದಿನಿಗೆ ತೊಳಗೆ ಕಲಿವಿನ। ಯಾದಿತ್ಯನತಿಪ್ರತಾಪಯುತನುದಯಿಸಿದಂ॥1331॥

ಎರೆಯಂಗ

ಎಱೆಯಂಗಂ ಗಂಡಗುಣ। ಕ್ಕೆಱೆಯಂ ಗಂಗಾಸರಿತ್ಸಮಪ್ರಥಿತಯಶ।
ಕ್ಕೆಱೆಯಂಗಂಗಾರ್ ಸಮನೆಸಿ। ಪೆಱೆಯಂಗಂ ಗರ್ವಿತಾಂತಕಂ ತತ್ತನಯಂ॥1332॥

## ವಿಷ್ಣುವರ್ಧನ

ಗಡಿ ಮೂಡಲ್ ಕಂಚಿ ತೆಂಕಲ್ ಪೆಸರೆಸಕದ ಕೊಂಗಿತ್ತ ವಾರಾಶಿತೀರಂ ।
ಪಡುವಲ್ ತತ್ಕೃಷ್ಣವೇಣ್ಣಾನದಿ ಬಡಗೆನೆ ದುರ್ವೃತ್ತರಂ ತೋಳ ಬಾಳಿಂ ॥
ಕಡಿದಾದಂ ಗುಡ್ಡೆಯಿಟ್ಟುರ್ವರೆಗಿದು ಸತತಂ ಸೀಮೆಯೆಂಬಂತು ಬಲ್ಪಿಂ ।
ದೆಡೆಗೊಂಡಂ ವಿಕ್ರಮಕ್ರೀಡೆಯಿನೆಸೆಯೆ ಧರಾಚಕ್ರಮಂ ವಿಷ್ಣುಭೂಪಂ ॥1333॥

## ನಾರಸಿಂಹ 1

ಅರಿನೃಪಶಿಶುಹೃದ್ವಿದಳನ । ಕರಾಳಕರವಾಳಮುಖರನಖರನೃಸಿಂಹಂ ।
ಪರರದನಿಸಂಘಸಿಂಹಂ । ನರಸಿಂಹಂ ವಿಪುಳವಿಕ್ರಮಂ ತತ್ತನಯಂ ॥1334॥

ನೆಲನಂ ಮುನ್ನಲೆದುದ್ಧತಾಸುರನಿಕಾಯಂ ಬದ್ಧರೋಷಾನ್ವಿತಂ ।
ಕಲಿಕಲ್ಕಪ್ರಭವರ್ಕಳಾಗೆ ಧರಣೀಸಂರಕ್ಷಣಾರ್ಥಂ ಭುಜಾ ॥
ಬಲಯುಕ್ತಂ ಕಲಿಕಾಲದೊಳ್ ನಿಖಿಳವಿದ್ವಿಡ್ದೈತ್ಯವಿಧ್ವಂಸಕಂ ।
ಕಲಿ ಪನ್ನೊಂದನೆಯಂ ಮುರಾರಿ ನೆಗಟ್ದಂ ಬಲ್ಲಾಳಭೂಪಾಳಕಂ ॥1335॥

ಧರೆಯೊಳ್ ಮುನ್ನೆ ನರೇಂದ್ರನೆಂಬೆಸಕದಾಚೋಟಿಂಗೆ ಕೋಳ್ವೋಗದೆಂ ।
ಬರಿದಂ ನಚ್ಚಿನ ದೇವದುರ್ಗಮನದಂ ದಾಟಿಟ್ಟು ಪಾಂಡ್ಯಾವನೀ ॥
ಶ್ವರಸಾಮ್ರಾಜ್ಯಸಮೇತವೊಟ್ಟಜೆಯಿನೀತಂ ಕೊಂಡನುಚ್ಚಂಗಿಯಂ ।
ಪರದುರ್ಗತ್ರಿಪುರತ್ರಿಣೇತ್ರನದಟಂ ಬಲ್ಲಾಳ ಭೂಪಾಳಕಂ ॥1336॥

## ದೇವೇಂದ್ರವ್ರತಿ

ಪಡೆದು ಮಡಗುವರ ಗಂಡಂ । ಪಿಡಿದ ಚಲಕ್ಕೆಯ್ದೆ ಬಲ್ಪುಗುಂದದ ಗಂಡಂ ।
ಪೊಡರ್ವ ಪರಸಮಯಿಗಿವನೋ । ಗಡಿಸದ ಯಮದಂಡಮೆನಿಸಿದಂ ದೇವೇಂದ್ರಂ ॥
॥1337॥

## ಈಶಾನಶಕ್ತಿವ್ರತಿ

ಶ್ರೀಮತ್ಸತ್ಯಂ ದೃಢತ್ವಂ ಶಮೆ ದಮೆ ದಯೆ ವಾತ್ಸಲ್ಯಧರ್ಮಂ ಸ್ವಭಾವಂ ।
ತಾಮೀತಂಗೀತನಂ ಪೋ ಕಲಿಮಲಿನಮಣಂ ಪೊರ್ದಿತಿಲ್ಲೆಂಬಿನಂ ತ ॥
ನ್ನೀವರ್ಮಾಗಂ ವಿಶ್ವಲೋಕಸ್ತುತಮೆನಿಸುವಿನಂ ಪುಣ್ಯಪಾತ್ರಂ ಸುವಿದ್ಯಾ ।
ಧಾಮಂ ದೇವೇಂದ್ರನಿಂ ನೇರ್ಗಿಱಿಯನೆಸೆವನೀಶಾನಶಕ್ತಿವ್ರತೀಶಂ ॥1338॥

ಯತಿಮೂರ್ತಿಯ ಬಲಿ ತಾಪಸ । ಸುತನುವ ಸುರಧೇನು ವರ್ಣವೇಷದ ನಿಧಿ ವಿ ।
ಶ್ರುತಮುನಿರೂಪದ ಪರುಸಂ । ಕ್ಷಿತಿಯೊಳಗೀಶಾನಶಕ್ತಿ ದಾನವಿನೋದಂ ॥1339॥

## 235 ಅರಸಿಯಕೆರೆ 39 [1185]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಬಿಟ್ಟಿಯಣ್ಣನು ಎತ್ತಿಸಿದ ಬೀರೇಶ್ವರ ದೇವಸ್ಥಾನಕ್ಕೆ ಕುರುವಕ್ಕದ ಎಕ್ಕಟಿಗಂಗರಕ್ಕರು ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂ।
ಚರಣಪ್ರೌಢಮುದಾತ್ತವಿಕ್ರಮಗುಣೋದ್ಯತ್ಪುಂಡರೀಕಾಂಕಸೌಂ॥
ದರಮಾಗಿರ್ಪುದಱಿಂದೆ ಪದ್ಮವನದಂದಂ ಭಾವಿಸಲ್ ವಿಷ್ಣುಭೂ।
ವರನಿರ್ಪಾಪುರಮುಂ ಸುರೇಂದ್ರಪುರಮುಂ ವಿದ್ವಿಟ್ಪುರಾನೀಕಮುಂ॥1340॥

ಇನತೇಜನಿಂದಿರಾವರ। ನಿನಜಸಮೋದಾರನಿಂದ್ರನಿಭವಿಭವನಿಳಾ।
ಜನವಿನುತನಿದ್ಧಸತ್ಕೀ। ರ್ತಿನಿಧಾನಂ ವಿಷ್ಣುಭೂಪನಂಗಜರೂಪಂ॥1341॥

ಬಲ್ಲಾಳ II

ಫಣಿನಾಥಂ ಪಾಟಿ ಭೋಗಕ್ಕಮರಪತಿ ಸಮಂ ರೂಪಸಂಪತ್ತಿಗಬ್ಜೇ।
ಕ್ಷಣನುದ್ಯದ್ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾವಿಶೇಷ।
ಕ್ಕೆಣೆ ಧೀರೋದಾತ್ತಚಿತ್ತಕ್ಕಮಮ ಸರಿ ದಶಾಸ್ಯಾರಿ ದಾನಕ್ಕೆ ಮತ್ತಂ।
ತೊಣೆ ಕರ್ಣಂ ತಾನೆನಲ್ಕೀವಸುಧೆಯೊಳೆಸೆದಂ ವೀರಬಲ್ಲಾಳಭೂಪಂ॥1342॥

ಇಳೆ ಶುದ್ಧಸ್ಫಟಿಕೋಪಳಸ್ಥಗಿತಮಾಶಾಮಂಡಳಂ ದಿಗ್ವಧೂ।
ಕುಳವೇಣೀಕುಸುಮೋಪಹಾರರಚಿತಂ ನಾಕಂ ನಿಳಿಂಪೇಶನಿ॥
ರ್ಮಳಶುಂಡಾಳರದಪ್ರಭಾಧವಳಿತಂ ತಾರಾಪಥಂ ತಾರಕೋ।
ಜ್ವಳಿತಂ ತಾನೆನೆ ಕೊರ್ಬಿ ಪರ್ಬಿತು ಜಸಂ ಬಲ್ಲಾಳಭೂಪಾಳನಾ॥1343॥

ಅಂಗರಕ್ಕ

ಧುಂರದೊಳಿದಿರ್ಚಿದ ಪಗೆವರ। ನುರವಣೆಯಿಂ ಗೆಲ್ವ ತಕ್ಕು ರಿಪುಗಳ ಕುಟಿಲೋ।
ತ್ಕರಮಂ ನೆಗೞ್ಚಿ ಪತಿಯಂ। ಗರಕ್ಷೆಯಂ ಮಾೞ್ಪುದಂಗರಕ್ಕಂಗೆ ನಿಜಂ॥1344॥

## 236 ಬೇಲೂರು 72 [ಸು. 1185]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಬೇಲೂರು ಚೆನ್ನಕೇಶವ ದೇವಸ್ಥಾನದಲ್ಲಿ ಜಾಳಾಂದರ, ಬಾಗಿಲುವಾಡ, ಅಡಿಗೆಯಮನೆ, ಉಗ್ರಾಣ, ಪ್ರಾಕಾರ, ವಾಸುದೇವಸರಸ್ಸು, ಇವುಗಳನ್ನು ಮಾಡಿಸಿದಂತೆ ಹೇಳಿದೆ.

ಬಲ್ಲಾಳ II

ಎಸೆಯಲ್ ಜಾಳಕಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾ ।
ಣಸು ಕೊಟ್ಟಾರಮುದಗ್ರವಪ್ರಮುದವಾಸಂ ವಾಸುದೇವಾಖ್ಯತೀ ॥
ರ್ಥಸರಂ ಶ್ರೀವಿಜಯಾದಿಶಬ್ದ ವಿಳಸನ್ನಾರಾಯಣಂಗೊಲ್ದು ಕ ।
ಲ್ವೆಸದಿಂ ತೆಂಕಣ ಚಕ್ರಿ ಮಾಡಿಸಿದನೀಬಲ್ಲಾಳಭೂಪಾಳಕಂ ॥1345॥

ಅಗಲಿಂ ಪಾತಾಳಮೆಂಟುಂ ದೆಸೆಗಳಗಲದಿಂದುದ್ದದಿಂ ವ್ಯೋಮಮಿಂತಿ ।
ರ್ವಗಿಯಾಗಲ್ ಪೆರ್ಚಿ ಮೂಱುಂ ಭುವನದೊಳೆಸೆವುಚ್ಚಂಗಿಯಂ ಕೊಂಡ ಗಂಡಂ ॥
ಪಂಗುಟ್ಟಿಂ ಪಾಂಡ್ಯಂ ಶರಣ್ಬೊಕ್ಕೊಡೆ ಕರುಣೆಸಿ ತದ್ರಾಜ್ಯಮಂ ಕೊಟ್ಟು ಮೂಱುಂ ।
ಜಗದೊಳ್ ವಿಖ್ಯಾತಿವೆತ್ತಂ ಹರಣಭರಣದಿಂ ವೀರಬಲ್ಲಾಳದೇವಂ ॥1346॥

## 237 ಬೇಲೂರು 175 [1186]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ದಂಡನಾಥ ವೀರಯ್ಯನು ದೊರೆಯ ಹೆಸರಿನಲ್ಲಿ ಒಂದಗ್ರಹಾರವನ್ನು ಮಾಡಿ ಅಲ್ಲಿ ಕೆರೆಗಳನ್ನು ಕಟ್ಟಿಸಿ ದೇವಸ್ಥಾನಗಳನ್ನು ನಿರ್ಮಿಸಿ ಅವಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ನೆರೆದಾಂತ ಕೋಟಿಭಟರೊಳ್ । ಪರಿದೊರ್ವನೆಯುಮ್ಮದೂರ ಧುರದೊಳ್ ಧರೆಯ ।
ಚ್ಚರಿವಡೆ ನೆತ್ತರ ಕಡಲಂ । ಪರಿಯಿಸಿದಂ ಬಾಲಲೀಲೆಯೊಳ್ ಬಲ್ಲಾಳಂ ॥1347॥

ಚೋಳಂ ಮುತ್ತಿರೆ ಪನ್ನೆರಟ್ಬರಿಸಕಂ ಕೋಳ್ಪೋಯ್ತು ತಾಂ ಪೋದನೆಂ ।
ಬಾಳಾಪಂಬೆರಸಾರ್ದದೊಂದು ಮೊಟಿನಂ ಮೇಲ್ ಪೆರ್ಚುವುಚ್ಚಂಗಿಯಂ ॥
ಹೇಳಾಸಾಧ್ಯಮದಾದುದೇದು ದಿವಿಜರ್ ಚೋದ್ಯಂಬಡುತ್ತೀಯೆ ಬ ।
ಲ್ಲಾಳಾಳ್ದಂ ಗಿರಿದುರ್ಗಮಲ್ಲವೆಸರಂ ಬಲ್ಲಾಳಭೂಪಾಳಕಂ ॥1348॥

ಕಡುವೇಗಿ ಧರ್ಮಗುಣಮಂ । ಬಿಡುವುದು ಖರದೂಷಣಾನ್ವಿತಂ ಮೊದಲೆಯುಂ ।
ಪಡೆದುದು ಬಲ್ಲಾಳನ ದಿಟ । ನುಡಿಯೊಳ್ ಪಡಿಯಾಗಲಾರ್ಪುದೇ ರಾಮಶರಂ
॥1349॥

ವೀರಯ್ಯನ ತಾಯಿ ಗಂಗಾದೇವಿ

ರತಿಯುಂ ರೂಪಿಂದಂ ಪಾ । ರ್ವತಿಯುಂ ಸೊಬಗಿಂದೆ ಮೈಮೆಯಿಂದಂ ಸಿರಿಯುಂ ।
ಸತಿ ಗಂಗಾದೇವಿಯರುಂ । ಧತಿಯುಂ ಪತಿಭಕ್ತಿಯಿಂದೆ ನೂರ್ಮಡಿ ಮಿಗುವಳ್
॥1350॥

ವೀರಯ್ಯನ ಅಣ್ಣ ಅಚ್ಯುತ

ಅಚ್ಯುತಭಾವನಾಪರಿಣತಾಚ್ಯುತನಚ್ಯುತಪುಣ್ಯಮೂರ್ತಿ ಸಂ।
ದಚ್ಯುತರಾಜನೀತಿ ವಿನಯೋನ್ನತಿ ಸಜ್ಜನದಾನಮಾನಜಾ॥
ತಾಚ್ಯುತಕೀರ್ತಿ ಲಕ್ಷ್ಮಿ ವಿಜಯಂ ಯದುರಾಜನ ಮಂತ್ರಿಗೀಗಳಿಂ।
ತಚ್ಯುತದೇವನೆಂಬ ಪೆಸರಾದುದಿದಲ್ಲದೆ ದೇಸೆಗಾದುದೇ॥1351॥

ವೀರಯ್ಯ

ನೆನೆದ ಮನಂ ಕೃತಾರ್ಥಮಿರದಟ್ಟಿಯೆ ನೋಡುವ ಕಣ್ ಕೃತಾರ್ಥಮೊ।
ಲ್ದನುನಯದಿಂದೆ ಕೀರ್ತಿಸುವ ಜಿಹ್ವೆ ಕೃತಾರ್ಥಮುದಾತ್ತವೃತ್ತನಂ॥
ಧನದಳಿಪಿಂದೆ ತನ್ನನೊಸೆದರ್ಥಿಸುವರ್ಥಿಜನಂ ಕೃತಾರ್ಥಮೆಂ।
ದೆನೆ ವಿಭುವೀರದೇವನೆ ಕೃತಾರ್ಥನೆನಿಪ್ಪುದಿದಾವ ವಿಸ್ಮಯಂ॥1352॥

ಇರ್ಮಡಿ ವಾಚಸ್ಪತಿಗೆ ಪ। ದಿರ್ಮಡಿ ಭಟ್ಟಿಗೆ ವಿನೂತಚಾಣಕ್ಯಂಗಂ।
ನೂರ್ಮಡಿ ಮಂತಣದೊಳ್ ಸಾ। ಸಿರ್ಮಡಿ ಯೌಗಂಧರಾಯಣಂಗೀ ವೀರಂ॥1353॥

ಕಮಠಾಂಘ್ರಿ ಮೀನನಯನಂ। ಕಮಳಾನನಮಮಳಜೀವನಂ ವಿಪುಳಫಳಂ।
ಸಮನಿಸೆ ಕಟ್ಟಿಸಿದಂ ತ। ತ್ಕ್ರಮಮುಮರ್ದೆಸೆವಂತು ಕನ್ನೆಗೆಱೆಯಂ ವೀರಂ॥1354॥

ಸುರಗಿರಿ ಶರನಿಧಿ ತನ್ನೊಳ್। ಪಿರಿದುಂ ಮಚ್ಚರಿಪುದುದ್ದಗುಣ್ಪೆಂದವನೊ।
ತ್ತರಿಪಂ ಸುಮಂತ್ರಿವೀರಂ। ಸುರಭವನತಟಾಕದಿಂದಮಿದು ಮಂತ್ರಫಳಂ॥1355॥

**238 ಹೊನ್ನಾಳಿ 35 [1187]**

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಆಜ್ಞೆಯಿಂದ ಚಟ್ಟನಾಯಕನು ತುರುಗೋಳಿನಲ್ಲಿ ಕಾದಿ ವೀರಸ್ವರ್ಗವನ್ನು ಪಡೆದನೆಂದು ಹೇಳಿದೆ.

ಚಟ್ಟನೃಪಾಳಕಂಬೆರಸು ಪಾಂಡ್ಯನುಮೋವದೆ ನೇಲಿವರ್ತಿಯಂ।
ತೊಟ್ಟನೆ ಪಾಯ್ದು ಜೀವಧನಮೆಲ್ಲಮನಾಗಳೆ ಕೊಂಡು ಪೋಗೆ ಬೆ॥
ನ್ನಟ್ಟಿ ತೆರಳ್ಚಿ ತಳ್ತಿಱಿದು ಪೆರ್ವಡೆಯಂ ತುಱುವಂ ಮಗುಳ್ಚಿ ತಾಂ।
ಚಟ್ಟೆಯನಾಯಕಂ ಪದೆದು ಮೆಚ್ಚಿಸಿದಂ ಸುರಕನ್ಯೆಯರ್ಕಳಂ॥1356॥

ಮಲ್ಲನೃಪಾಲಕಂ ಬೆಸಸೆ ಪೆರ್ಗಡೆಮಲ್ಲನ ಪುತ್ರನಾಜಿಯೊಳ್।
ತಲ್ಲಳಮಪ್ಪಿನಂ ಪಗೆಗೆ ಸಜ್ಜನೆ ಕಿಟ್ಟಿಲಗಿಂ ತುರಂಗಮಂ॥
ಬಿಲ್ಲಣೆಯಂ ಕಱುತ್ತಿಱಿದು ಚೆಚ್ಚರಮಾ ತುಱುವಂ ಮಗುಳ್ಚಿ ತಾ।
ನಿಲ್ಲದೆ ಚಿಕ್ಕ ಚಟ್ಟನಮರಾಂಗನೆಯರ್ಕಳೊಳೊಲ್ದು ಕೂಡಿದಂ॥1357॥

ಕಂಡದೊಳಿಂಡೆಯಾಡಿ ಬಿಸುನೆತ್ತರೊಳೋಕುಳಿಯಾಡಿ ಪೆರ್ಚಿ ಮಾ।
ರ್ಕೊಂಡೊಡನೆಚ್ಚ ಪೂಣಿಗರ ಪಂದಲೆಯುಂ ಪೊಡೆಸೆಂಡನಾಡಿದೊ॥
ಳ್ಗಂಡನಿವಂ ದಲೆಂದು ಪೊಸ ಮುತ್ತಿನ ಸೇಸೆಯನಿಕ್ಕಿ ಕೂಡೆ ಕೈ।
ಕೊಂಡೊಡನೊಯ್ದರಚ್ಚರಸೆಯರ್ ಕಲಿಚಟ್ಟನನಾಜಿರಂಗದೊಳ್ ॥1358॥

## 239 ಚಿಕ್ಕನಾಯಕನಹಳ್ಳಿ 9 [1187]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಬೂದಿಹಾಳ ಮಾಚಿಗೌಡ ಕೇತಗೌಡರು ಧರ್ಮೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಶಿವಸ್ತುತಿ

ಪತ್ತಿರೆ ಗಂಗೆಯು ಪನಿಗಳ್। ಮುತ್ತಿನ ಬಾಸಿಗವಿುದೆನಿಸಿ ವಾಸುಗಿ ಸುಖದಿಂ।
ಸುತ್ತಿರ್ದ ಜೂಟದಾ ದೇ। ವೋತ್ತಮನೆಮಗೊಸೆದು ಕುಡುಗೆ ಸುಖಸಂಪದಮಂ

॥1359॥

ವಿಷ್ಣುವರ್ಧನ

ಕೊಂಡಂ ತಳಕಾಡಂ ಕೆ। ಯ್ಕೊಂಡಂ ಮೇಲೆತ್ತಿ ಕೊಂಗನವಯುವದಿಂದಂ।
ಕೊಂಡಂ ವಿಷ್ಣುವೆ ಚೋಳನ। ಮುಂಡಳಿಕರ ಮುಂಡೆಗೊಂಡು ತನುವುಂಡಳಮಂ॥
॥1360॥

ಸಾಮಂತ ಬಿಟ್ಟಿದೇವ

ಪಲತೆಱದ ಹೊಯ್ಲು ರಂಜಿಸೆ। ಪಲತೆಱದೋಜೆಗಳ ತತಿಯೊಳಾಸನಗತಿಯೊಳ್।
ಪಲತೆಱದ ಮುಷ್ಟಿಯೊಳ್ ನಿ। ರ್ಮಲಮೆನೆ ತಿಳಿಪಲ್ಕೆ ಬಿಟ್ಟಿದೇವಂ ಬಲ್ಲಂ ॥1361॥

## 240 ತೊರಗಲ್ಲಿನ ಶಾಸನ [1187]

(ಇಂಡಿಯನ್ ಆಂಟಿಕ್ವರಿ XII, 96)

ಇದರಲ್ಲಿ ಬರ್ಮಭೂಪಾಲನ ಹೆಂಡತಿ ಸುಗ್ಗಲದೇವಿ ತಾನು ಪ್ರತಿಷ್ಠಿಸಿದ ಸುಗ್ಗಲೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಭೂದೇವಿ

ಶರಧಿತರಂಗಮಾವರಿಸಿದಂಬರಮುನ್ನತಮೇರುಭೂಧರಂ ।
ಗುರುಕುಚಮಬ್ಜಷಂಡಮನುರಾಗಮನಾರ್ಜಿಸುವಾನನಂ ಲಸ ॥
ತ್ಪುರನಿಚಯಂ ವಿಭೂಷಣಮೆನಲ್ ಪರಿರಾಜಿಪ ನಂದನಾತಿವಿ ।
ಸ್ತರತೆಯನಾಂತು ವಿಶ್ವಧರಣೀವಧು ಶೋಭಿಸುಗುಂ ನಿರಂತರಂ ॥1362॥

ತೊರಗಲೆದೇಶ

ನೆಱೆದ ಕವುಂಗು ಬಗ್ಗಿಸುವ ಕೋಗಿಲೆ ತಳ್ತೆಲೆವಳ್ಳಿ ಸುತ್ತಲುಂ ।
ತುಱುಗಿ ತಳಿರ್ತ ಮಾಮರನಿಕಾಯಮುಗುರ್ವಿನ ಕರ್ವುದೋಂಟಮಿಂ ॥
ತಱಿಕೆಯ ಚಾರುನಂದನವನಾವಳಿ ರಾಜಿಸೆ ಶೋಭೆವೆತ್ತುದೀ ।
ತೊಱಗಲೆ ಭೂತನಾಥವಿಭುವಿಂ ಬಳಸಿರ್ಪ ಮಲಪ್ರಹಾರಿಯಿಂ ॥1363॥

ಬರ್ಮನ ತಂದೆ ಭೂತರಸ

ಕೇಳ್ವನ ಕಿವಿಯೊಳ್ ಗೂಂಟಮು । ನಾಟ್ವಿನೆಗಂ ಬೆಟ್ಟಿತೆನಿಸುವೊಟ್ಟಜಿವಿರುದಿಂ ।
ದೇಟ್ವಿರೆಲಕ್ಕೆಯೊಳದಟು । ರ್ವೇಟ್ವಿನೆಗಂ ನಿಗಳವಿಕ್ಕಿದಂ ಭೂತನೃಪಂ ॥1364॥

ಬರ್ಮಭೂಪಾಲ

ಟೆಂಟಣೆಸುತ್ತುಮಿರ್ಪರಿನೃಪಾಳರ ಹಿಂಡ ನಿಜಾಸಿದಂಡದಿಂ ।
ಕಂಟೆಯುಬಾರದೊಳ್ ಸುಟಿಸಿ ಪಾಣೆಯುಬಾರದ ನೀರನೂಡಿ ನಿ ॥
ಷ್ಕಂಟಕಮಾಗೆ ಮಾಡಿ ಪಡೆದಂ ಸಲೆ ದಂಡಿನ ಗೋವನೆಂಬುದಂ ।
ಬಂಟರ ಬಲ್ಲಹಂ ನೆಗಟ್ದಿ ಬಲ್ಲಹರೊಳ್ ಕಲಿಬರ್ಮಭೂಭುಜಂ ॥1365॥

ಅರಿಭೂಪಾಳಕರೊಡ್ಡಿದಲ್ಲಿ ದಿಟದಿಂ ಪುಣ್ಯಾಂಗನಾನೀಕಸೌಂ ।
ದರಮಂ ಕಂಡೆಡೆಯಲ್ಲಿ ವಂದಿನಿಕರಂ ಕೆಯ್ಯಾಂತೊಡಂತಲ್ಲಿ ನಿ ॥
ರ್ವರವೀರಂ ಶುಚಿ ದಾನಿ ಶೂದ್ರಕನೊಳಾಗಾಂಗೇಯನೊಳ್ ಕರ್ಣನೊಳ್ ।
ಸರಿಸಂ ದಂಡಿನ ಗೋವ ಬರ್ಮಮಹಿಪಂ ವಿಶ್ವಂಭರಾಭಾಗದೊಳ್ ॥1366॥

## 241 ಮುತ್ತಗೆಯ ಶಾಸನ [1189]

(ಎಪಿಗ್ರಾಫಿಯಾ ಇಂಡಿಕ XV, 34)

ಇದರಲ್ಲಿ ಸೇವುಣರಾಜನಾದ ಭಿಲ್ಲಮನ ಮಂತ್ರಿಗಳಾದ ಪೇಯಿಯ ಮತ್ತು ಮಲ್ಲ ಎಂಬವರು ಲಕ್ಷ್ಮೀನರಸಿಂಹ ದೇವರಿಗೆ ಗ್ರಾಮುವನ್ನು ಬಿಟ್ಟಂತೆ ಹೇಳಿದೆ.

## ನರಸಿಂಹದೇವರು

ಶ್ರೀನರಸಿಂಹದೇವನಸುರೇಂದ್ರವಿಶಾಲಕಠೋರರೌದ್ರವ ।
ಕ್ಷೋಣಗಪಾಟನೋಗ್ರನಖವಜ್ರನಶೇಷಸುರಾಳಿಮೌಳಿಮಾ ॥
ಳಾನವರತ್ನರಂಜಿತಪದಾಂಬುರುಹದ್ವಯನುದ್ಧಭಕ್ತಸಂ ।
ತಾನಮನೊಲ್ದು ರಕ್ಷಿಸುತುಮಿರ್ಕೆ ಜಗತ್ರಯರಕ್ಷಣಕ್ಷಮಂ ॥1367॥

## ಸಮುಂದ್ರ

ಎನಸುಂ ಕಣ್ಗೆಯ್ದೆ ಚೆಲ್ವಂ ಪಡೆವುದು ವಿಚಳತ್ಘೂರ್ಮಪಾಠೀನಸಂಘ ।
ಟ್ಟನಪಾಥೋದಂತಿದಂತಾಹತಮಕರಕರಕ್ಷೋಭಸಂಜಾತಕಲ್ಲೋ ॥
ಲನಿಕಾಯಕ್ಷಿಪ್ತಮುಕ್ತಾನಿಕರಮುರುತರೋಡ್ಡೀನಫೇನವ್ರಜಾಸ್ಫಾ ।
ಲನರೌದ್ರಸ್ಫಾರಧೀರಾರವವಿಜಿತಘನಧ್ವಾನಮಂಭೋನಿಧಾನಂ ॥1368॥

## ಜಂಬೂದ್ವೀಪ

ಆಜಳಧಿಪರಿವೃತಂ ರಾ । ರಾಜಿತವರವಸ್ತುವಿಸ್ತೃತಂ ಸಕಲಕಲಾ ।
ಭ್ರಾಜಿತವಿಶ್ರುತವಿಬುಧಸ । ಮಾಜಂ ಸೊಗಯಿಪುದು ನೆಗಟ್ದ ಜಂಬೂದ್ವೀಪಂ ॥1369॥

## ಮೇರು

ಗಗನಪ್ರೋಚ್ಚುಂಬಿನಾನಾಮಣಿಗಣವಿಳಸತ್ಕೂಟಕೋಟಿಪ್ರಭಾಭಾ ।
ಸಿ ಗಳನ್ಮಂದಾರಪುಷ್ಪಪ್ರಕರಸುರಭಿಗಂಧಿಸ್ಥಳೀಸಂಚರದ್ದೇ ।।
ವಗಣಂ ಕಣ್ಗೆಯ್ದೆ ಚೆಲ್ವಂ ಪಡೆವುದು ವರವಿದ್ಯಾಧರೀಚಾರುವೀಣಾ ।
ಪ್ರಗತಪ್ರಸ್ತುತ್ಯಮಂದ್ರಧ್ವನಿಲಲಿತದರೀರುಂದ್ರಹೇಮಾಚಳೇಂದ್ರಂ ॥1370॥

## ಕುಂತಳದೇಶ

ಶ್ರೀಮಜ್ಜನಲಲಿತಂ ಸುಮು । ನೋಮಾಳಾರಮ್ಯಮುದ್ಧವಸ್ತುವ್ರಜಶೋ ।
ಭಾಮಂಡನಮೆಣೆಯೆನಿಪುದು । ಭೂಮಹಿಳೆಯ ಕುಂತಳಕ್ಕೆ ಕುಂತಳದೇಶಂ ॥1371॥

## ಭಿಲ್ಲಮು

ಚತುರಂಭೋರಾಶಿವೇಳಾವಳಯಿತವಸುಧಾಚಕ್ರಮಂ ವಿಕ್ರಮಶ್ರೀ ।
ಯುತನಾತ್ಮೋದ್ದಂಡಚಂಡಪ್ರಥಿತಪೃಥುಭುಜಾದಂಡದೊಳ್ ನೂತ್ನರತ್ನೋ ॥
ರ್ಜಿತರಾಜಚ್ಛಾರುಕೇಯೂರದವೊಲೆಸೆದಿರಲ್ ತಾಳ್ದಿದಂ ಪಾದಪದ್ಮಾ ।
ನತಶತ್ರುಕ್ಷತ್ರಜಾಳಂ ಯದುಕುಳತಿಳಕಂ ಭಿಲ್ಲಮಕ್ಷೋಣಿಪಾಳಂ ॥1372॥

ಪೇಯಿಯ

ಹರನುರಿಗಣ್ಣ ಕಾಯ್ಪು ಸಿಡಿಲೆಟ್ಟಿರಮುರ್ಬಿಪ ಬಾಡಬಾಗ್ನಿಯು ।
ರ್ವ್ವರಮುಱಿಯಟ್ಟಿ ಕೊಳ್ವ ಕುಳಿಕಾಹಿಯ ಕೋಳ ಪೊಡರ್ಪ್ಪು ಲೋಕಭೀ ॥
ಕರತರಕಾಳಕೂಟದ ವಿಗುರ್ವಿಪ ಕೂಟಮೆನಿಪ್ಪುದಾಂತ ದು ।
ರ್ದ್ಧರರಿಪುಸಂಕುಳಕ್ಕೆ ವಿಭು ಪೇಯಿಯಸಾಹಣಿಯುಗ್ರವಿಕ್ರಮಂ ॥1373॥

ಮಲ್ಲ

ಮಾರಿಯ ಮೂರಿ ರಕ್ಕಸನ ರೌದ್ರತೆ ನಂಜಿನ ಪುಂಜಮುಗ್ರಕಂ ।
ಠೀರವದೆಟ್ಟಿರಂ ಸಿಡಿಲ ಕಾಯ್ಪು ಕೃತಾಂತನ ಕೋಪದುರ್ಬ್ಬು ಮಾ ॥
ರಾರಿಯ ಭಾಳನೇತ್ರಶಿಖಿ ಸಂಗರರಂಗದೊಳಾಂತು ನಿಂದ ವೀ ॥
ರಾರಿಗೆ ಸಂತತಂ ನೆಗೞ್ದ ಸಾಹಣಿಮಲ್ಲನ ಬಾಹುವಿಕ್ರಮಂ ॥1374॥

ಶಂಕರಾರ್ಯ

ಬಗೆ ಸಾಹಿತ್ಯರಸಪ್ರಪೂರ್ಣವಿಪುಳಸ್ರೋತಂ ಶ್ರುತಂ ವಾಗ್ವಧೂ ।
ಟಿಗೆ ಕೈಗನ್ನಡಿ ಸೂಕ್ತಿ ಸೂನೃತಸುಧಾವಾರಾಶಿಮುಕ್ತಾಳಿ ನಾ ॥
ಲಗೆ ಸಾರಸ್ವತಪೀಠಮಾರ್ಪು ವರಪ್ರವ್ರಾತವಿದ್ವಜ್ಜನಾ ।
ಳಿಗೆ ಕಲ್ಪದ್ರುಮುಮೆಂದು ಧಾತ್ರಿ ಪೊಗೞ್ಗುಂ ಶ್ರೀಶಂಕರಸ್ವಾಮಿಯಂ ॥1375॥

**242 ಅರಸಿಯ ಕೆರೆ 241 (ಅನುಬಂಧ) [1189]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಗಣಪಯ್ಯನು ದೇಮಯ್ಯನ ಹಳ್ಳಿಯಲ್ಲಿ ಮಲ್ಲಿಕಾರ್ಜುನ ದೇವಸ್ಥಾನವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಮಲೆಯುಂ ಸಾಧಿಸಿ ಮಾಣ್ದನೇ ತಳವನಂ ಕಾಂಚೀಪುರಂ ಕೋಯತೂರ್ ।
ಮಲೆನಾಡಾ ತುಳುನಾಡು ನೀಲಗಿರಿಯಾ ಕೋಳಾಲಮಾ ಕೊಂಗು ನಂ ॥
ಗಲಿಯುಚ್ಚಂಗಿ ವಿರಾಟರಾಜನಗರಂ ವಲ್ಲೂರಿವೆಲ್ಲಂ ಸ್ವದೋ ।
ರ್ಬ್ಬಲದಿಂ ಲೀಲೆಯೆ ಸಾಧ್ಯಮಾಧುವೆಣೆಯಾರ್ ವಿಷ್ಣುಕ್ಷಮಾಪಾಳನೊಳ್ ॥1376॥

ಬಲ್ಲಾಳ II

ಇದು ಸರ್ವಗ್ರಾಸಂಗೊ । ಳ್ವುದು ಭಾಸ್ವದ್ರಾಜಮಂಡಳಂಗಳನಿಂ ಮೋ ॥
ಕ್ಷದ ದೆಸೆಯಿಲ್ಲೆಂಬಿನವಿೂ । ಯದುಪತಿ ಬಲ್ಲಾಳ ಬಾಹುರಾಹುವಿಚಿತ್ರಂ ॥1377॥

## 243 ಅರಸಿಯ ಕೆರೆ 93 [1189]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ರಾಜಧಾನಿಯಾದ ಅರಸಿಯಕೆರೆಯಲ್ಲಿ ಬಲ್ಲಾಳೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಯದುವಂಶಕಲ್ಪವೃಕ್ಷದೊ । ಳೊದವಿದ ನಿಜಶಾಖೆ ತಾನೆನಲ್ಕುದಯಿಸಿದಂ ।
ಸದಮಳಕೃಷ್ಣವಿಳಾಸಂ । ಮುದದಿಂ ಭುವನೈಕವೀರವಿನಯಾದಿತ್ಯಂ ॥1378॥

2ನೆಯ ಬಲ್ಲಾಳನ ಮಹಿಷಿ ಉಮಾದೇವಿ

ಲಲನಾನಿರ್ಮಿತಿಕೌಶಲಂ ಪಲವು ಕಾಲಕ್ಕಬ್ಜಜಂಗಿಂದು ಸ ।
ತ್ಫಲಮಾಯ್ತುತ್ತಮರೂಪೆಯಂ ವಿಮಳೆಯಂ ಬಲ್ಲಾಳವಿಶ್ವಂಭರೇ ॥
ಶಲಸತ್ಕಾಮಿನಿಯಂ ಬುಧಾಳಿಗನಿಶಂ ಕೂರ್ತೀವುಮಾದೇವಿಯಂ ।
ಲಲನಾರತ್ನಮನುದ್ಧಕೀರ್ತಿಯುತೆಯಂ ಪೆತ್ತುತ್ತಮಪ್ರೌಢಿಯಿಂ ॥1379॥

## 244 ನಾಗಮಂಗಲ 93 [1190]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಮಹದೇವನು ಕಲಿದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಶಿವಸ್ತುತಿ

ಶ್ರೀಮದ್ಬಾಳೇಂದುಲೇಖಾವಳಯುವಳಯಿತವ್ಯೋಮಗಂಗಾತರಂಗ ।
ಸ್ತೋಮೋದ್ದಾಮಾಭಿರಾಮಾತುಳಕಪಿಳಜಟಾಜಾಳಕಂ ಕೀರ್ತಿಲಕ್ಷ್ಮೀ ॥
ಧಾಮಂ ಭಕ್ತವ್ರಜಕ್ಕಾಯುಮವನವಿಚಳಿತಂ ಶ್ರೀಯುಮಂ ಮಾಳ್ಕಧೀಶಂ ।
ಸೋಮೇಶಂ ಸ್ನಿಗ್ಧಗೌರೀಸ್ತನಕಳಶರುಚಿವ್ಯಾಪಿವಾಮಾರ್ಧದೇಹಂ ॥1380॥

ವಿಷ್ಣುವರ್ಧನ

ಪೊಡೆವ ಬಱಿಸಿಡಿಲ ಕಾಳನ । ಕುಡುದಾಡೆಯು ಹರನ ನೊಸಲ ಕಣ್ಣ ಪೊಡರ್ಪಂ ।
ಪಡೆವುದು ಸಮರದೊಳೆಡಱಿದ । ಕಡುಗಲಿಗಳ ಕಣ್ಗೆ ಬಿಟ್ಟಿದೇವನ ಸಬಳಂ ॥1381॥

## 245 ಕಡೂರು 156 [1191]

ಇದರಲ್ಲಿ ಹೊಯ್ಸಳ ರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಮಹಾಮಾಂಡಳಿಕ ಆಸಂದಿಯ ನಾರಸಿಂಗದೇವನ ಸೇವಕನಾದ ಮಸಣಯ್ಯನು ದತ್ತಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಗನ ತಂದೆ ಬಮ್ಮಭೂಪ

ಅರಿವರ್ಗಂ ರೌದ್ರಮಾರ್ಗಂಬೆರಸು ದಶಶಿರಾಕಾರದಿಂದಾಜಿಗಣ್ಮಲ್ ।
ಶಿರಮಂ ತದ್ವೇಗದಿಂದಂ ದಶರಥತನಯಂ ಪಾಱಲೆಚ್ಚಂತೆ ಮಾಱಾಂ ॥
ತರಿಯಂ ಕಣ್ಣಂಬಿನಾತಂ ರಿಪುಶಿರಮುರುಳಲ್ ಗಂಗವೀರಾರ್ಜುನಂ ಸಂ ।
ಗರಧೀರಂ ಧಿಪ್ಪೆನೆಚ್ಚಂ ಜಯವಧು ನಲವಿಂ ನರ್ತಿಸಲ್ ಬಮ್ಮಭೂಪಂ ॥1382॥

ನಾರಸಿಂಗ

ಅರಿಭೂಪಾಳಶಿರಂಗಳಿಂದೆ ಸೊರೆಯಂ ತದ್ಬಾಹುಸಂದೋಹದಿಂ ।
ಕರೆಯಂ ದಂಡಿಗೆಮಾಡಿ ಬೆನ್ನೆಸೆವ ಬೀಮಿಂ ತಂತಿಯಂ ಕಟ್ಟಿ ತ ॥
ದ್ಧುರದೊಳ್ ಪಾಡುತುಮಿರ್ಪಳೊಲ್ದು ನಲವಿಂ ಶ್ರೀಕಾಂತೆಯಾನಂದದಿಂ ।
ಧರಣೀಶೋತ್ತಮನಾರಸಿಂಹನೃಪನಂ ಸದ್ಭಾವದಿಂ ಸಂತತಂ ॥1383॥

ಕದನಕ್ರಾಂತ ವಿರೋಧಿಭೂಪತಿಗಳಂ ಕೊಂದಿಕ್ಕಿದಾಬಾಹುವಿಂ ।
ಮದಮಾತಂಗದ ಕೊಂಬನುರ್ಚಿ ಬಳೆಯಂ ತನ್ಮೌಕ್ತಿಕಾಹಾರಮಂ ॥
ಚದುರಿಂದಂ ತುಡಿಸುತ್ತುಮಿರ್ಪನು ಜಯಶ್ರೀಕಾಂತೆಗಂ ಕಾಂತೆಗಂ ।
ಮುದದಿಂ ಶ್ರೀನರಸಿಂಹಭೂಪತಿಯೆನಲ್ಕೇವಣ್ಣಿಪೆಂ ಶೌರ್ಯಮಂ ॥1384॥

## 246 ಹಾಸನ ತಾಲ್ಲೂಕು ಸೋಂಪುರದ ಶಾಸನ [ಸು. 1191]

(ಮೈಸೂರು ಶಾಸನ ಇಲಾಖೆಯ ರಿಪೋರ್ಟು, 1926, 25 ನೆಯ ಶಾಸನ)

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ದೋರಸಮುದ್ರದ ನಗರ ಜಿನಾಲಯಕ್ಕೋಸ್ಕರ ವಜ್ರನಂದಿ ಸೈದ್ಧಾಂತ ದೇವರಿಗೆ ನಾಡಗೌಂಡುಗಳು ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಕಂ॥ ಮೂವರರಸುಗಳೊಳಂ ತಾಂ। ಭಾವಿಸೆ ಮಧ್ಯಮನದಾಗಿಯುಂ ನೃಪ ಗುಣ ಸ॥
ದ್ಭಾವದಿನುತ್ತಮನಾದಂ। ಭಾವಿ ಭವದ್ಭೂತ ಜಿಷ್ಣು ವಿಷ್ಣು ನೃಪಾಳಂ ॥1385॥

ಬಲ್ಲಾಳ II

ಮ॥ ರಣರಂಗಾಂಗಣ ಶೂದ್ರಕಂ ನಡೆದೊಡಿಂತುಚ್ಚಂಗಿ ನುಚ್ಚಾಯ್ತು ತತ್।
ಕ್ಷಣದಿಂ ನೋಡೆ ವಿರಾಟರಾಜ ಪುರಮೊರ್ತುರ್ಗತ್ತಾಯ್ತು ಮುನ್ನಾಂತ ಸೇ॥
ವುಣರಾಪೋಶನ ಮಾತ್ರಕಂ ನೆಱೆದರಿಲ್ಲೆಂದಂದು ಬಲ್ಲಾಳ ದೋ।
ರ್ಗುಣಮಂ ಬಣ್ಣಿಸಲಣ್ಣ ಬಲ್ಲವರದಾರೀ ಭೂರಿ ಭೂಚಕ್ರದೊಳ್ ॥1386॥

## 247 ಹಿಪ್ಪರಿಗೆ ಶಾಸನ [1192]

ಈ ಶಾಸನವು[1] ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಹಿಪ್ಪರಿಗೆ ಎಂಬ ಗ್ರಾಮದ ಕಲ್ಲಿನಾಥ ದೇವಸ್ಥಾನದಲ್ಲಿದೆ. ಇದರಲ್ಲಿ, ಸೇವುಣ ರಾಜನಾದ ಭಿಲ್ಲಮನ ಆಳಿಕೆಯಲ್ಲಿ ಸರ್ವಾಧಿಕಾರಿ ಮಲ್ಲೆಯ ಸಾಹಣಿಯೂ ಮಹಾ ಮಂಡಲೇಶ್ವರ ಗೋಣರಸ ಮುಂತಾದವರೂ ಕಲ್ಲಿನಾಥ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಕುಂತಳ ದೇಶ

ಕಂ॥ ಅಂತೆನಿಸಿದಮರ ಗಿರಿಯಿಂ। ದಂ ತೆಂಕಣ ದೆಸೆಯೊಳೆಸೆವ ಭಾರತ ವರ್ಷಾ।
ಭ್ಯಂತರದೊಳಿಳಾಕಾಂತೆಯ। ಕುಂತಳಮೆನೆ ಚೆಲ್ವನಾ[ದಾ]ಯ್ತು ಕುಂತಳ ದೇಶಂ ॥1387॥

ಹಿಪ್ಪರಿಗೆ

ಆ ಪುರವರದುದ್ಯಾನಂ। ಶ್ರೀ ಪದದಿಂ ಮೆಱೆವ ದಿವಿಜ ಭವನದೆ ಜಂಬೂ।
ದ್ವೀಪಕ್ಕೆ ಶೋಭೆಯಿತ್ತಪು। ದಾಪೊಟ್ಟುಂ ದೇವ ಭೋಗಿ ಮುನಿ ಸಂಕುಳದಿಂ ॥1388॥

## 248 ಅರಸಿಯಕೆರೆ 2 [1194]

ಇದರಲ್ಲಿ ಹೊಯ್ಸಳ ರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಜವನೆಯ ಮಾವಂತನು ಕೋಳಿಗುಂದದಲ್ಲಿ ವಿನಾಯಕನ ಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

---

[1] ಇದರ ಪ್ರತಿಯನ್ನು ಶ್ರೀಮಾನ್ ಪಡಗಾನೂರು ದ್ವೈಪಾಯನಾಚಾರ್ಯ ಜಹಗೀರ್‌ದಾರ್ ರವರು ಕಳುಹಿಸಿಕೊಟ್ಟಿದ್ದಾರೆ.

ಹೊಯ್ಸಳವಂಶ

ಸ್ವಸ್ತಿಶ್ರೀಯಿರ್ಪುತ್ತಮು । ವಾಸ್ತು ಜಗಜ್ಜನಮನೋಹರಂ ಸುಜನಜನ ।
ಪ್ರಸ್ತುತ್ಯಂ ವಿಶದಯಶೋ । ವಿಸ್ತಾರಿತಮೆಸೆವುದಮಮ ಹೊಯ್ಸಳವಂಶಂ ॥1389॥

ಬಲ್ಲಾಳ II

ಪುದಿದಿರ್ದಟ್ಟಳಿ ಪೆರ್ಚಿದಾಳ್ವೆಱೆಯಗುರ್ವಾಗಿರ್ದ ಮೇಲ್ಗೊತ್ತಳಂ ।
ಕದನಕ್ಕದ್ಭುತಮಪ್ಪ ಡೆಂಕಣಿ ಕರಂ ಗುಣ್ಪುಳ್ಳಗುಟ್ ಕಾದಿ ಹೋ ।
ಗದೆನಿಪ್ಪಗ್ಗದ ದುರ್ಗದೊಂದು ಬಲದಿಂದಂ ಜೈತುಗಂ ಕಾದೆ ಬೇ ।
ಗದೆ ಕೊಂಡಂ ಕಲಿ ಲೊಕ್ಕಿಗೊಂಡಿಯನದಂ ಬಲ್ಲಾಳಭೂಪಾಳಕಂ ॥1390॥

## 249 ಅರಸಿಯುಕೆರೆ 150 [1195]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಾವಂತ ಕಾಟಯ್ಯ ಮುಂತಾದವರು ಮುದವಡಿಯೂರ ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ.

ವಿಷ್ಣುವರ್ಧನ

ಜಾರನೆ ವಜ್ರಿ ವಹ್ನಿ ಸುಡುವೋಜೆಯನುಳ್ಳವನರ್ಕಜಂ ಮಹಾ ।
ಕ್ರೂರನೆ ನಿಷ್ಕೃಪಂ ನಿರುತಿ ಬಾಡವಪೀಡಿತನಬ್ಧಿ ಸಂಚಳಂ ॥
ಮಾರುತನರ್ಥತತ್ಪರನೆ ವಿತ್ತಪನೀಶ್ವರನಾಳ್ದನೆಂದು ಲಕ್ಷ್ಮಿ ಸಂ ।
ಚಾರಿಸಿ ನೋಡಿ ಕೂಡಿದಳು ವಿಷ್ಣುವಿನೊಳ್ ಬಗೆಗೊಂಡು ನಲ್ಮೆಯಿಂ ॥1391॥

## 250 ಹೊನ್ನಾಳಿ 51 [1195]

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಆಜ್ಞಾನುಸಾರವಾಗಿ ಕಲ್ಲೆಯನಾಯಕನು ಶತ್ರುಗಳೊಡನೆ ಕಾದಿ ವೀರಸ್ವರ್ಗವನ್ನು ಪಡೆದಂತೆ ಹೇಳಿದೆ.

ಮಲ್ಲಿನೃಪಾಳಕಂ ಬೆಸಸೆ ಮಚ್ಚರದಿಂದಮೆ ಅಟ್ಟಿಪಳ್ಳಿಯಾ ।
ಬಲ್ಲಣೆಯುಂ ಕಱುತ್ತಿಱಿದಿದಿರ್ಚಿದರಂ ತವೆ ಕೊಂದು ಸೇನೆಯೊಳ್ ॥
ತಲ್ಲಳಮಂ ತಗುಳ್ಚಿ ಕಟಿ ಪಲ್ಲಟವಾಗಿರೆ ಪೊಯ್ದು ವೈರಿಯುಂ ।
ಕಲ್ಲೆಯನಾಯಕಂ ಕರಮೆ ಮೆಚ್ಚಿಸಿದಂ ಸುರಕನ್ಯೆಯರ್ಕಳಂ ॥1392॥

ತರತರದಿಂದವಾರ್ದಿಸುವ ಪೊಯ್ವಿಡುವೌಂಕುವ ನೂಂಕುವಾಂಕೆಗೊ ।
ಳ್ವರನದಟಿಂ ಕಱುತ್ತಿಱಿದು ಸಂಗರದೊಳ್ ಜವನೊಕ್ಕಲಿಕ್ಕಿದಂ ॥
ತಿರೆ ನೆಱೆ ಮಾಡಿದಂಗರಿಕ ಕಲ್ಲೆಯನಾಯಕನಂ ಮಹೋತ್ಸವಂ ।
ಬೆರಸಿದಿರ್ಗೊಂಡರಚ್ಚರಸೆಯರ್ಕಳಿದೇಂ ಕಲಿಯೋ ವಿಳಾಸಿಯೋ ॥1393॥

## 251 ಬೇಲೂರು 375 (ಅನುಬಂಧ), [1195]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಮಹದೇವನು ಈಶ್ವರ ಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳ ಎಂಬ ಹೆಸರು

ಸಳನೆಂಬನಾಗೆ ಯಾದವ। ಕುಳದೊಳ್ ಪುಲಿ ಪಾಯೆ ಕಂಡು ಮುನಿಪುಲಿಯಂ ಪೊಯ್॥
ಸಳ ಎನೆ ಪೊಯ್ದುದಱಿಂ ಪೊ। ಯ್ಸಳವೆಸರವನಿಂದಮಾಯ್ತು ತದ್ವಂಶಜರೊಳ್ ॥1394॥

ವಿನಯಾದಿತ್ಯ

ವಿನಯಂ ಪ್ರತಾಪಮೆಂಬೀ । ಜನನಾಥೋರ್ಜಿತ ಚರಿತ್ರ ಯುಗದಿಂ ಜಗದೊಳ್ ॥
ಜನ ನಯನಮೆನಿಸಿ ನೆಗಟ್ದಂ । ವಿನಯಾದಿತ್ಯಂ ಸಮಸ್ತಭುವನಸ್ತುತ್ಯಂ ॥1395॥

ಬಲ್ಲಾಳ II

ಆ ವಿಭುವಿನ ಪಟ್ಟ ಮಹಾ । ದೇವಿಗೆ ಸದ್ಗುಣ ಚರಿತ್ರದಿಂದಂ ಸೀತಾ ॥
ದೇವಿಗೆ ಮಿಗಿಲಾದೇಚಲ । ದೇವಿಗೆ ಬಲ್ಲಾಳದೇವನುದಯಂಗೆಯ್ದಂ ॥1396॥

ಮಹದೇವ

ಸಹವಾಸಿ ಪ್ರವರಂ ಮಹಾ ಭರತ ಶಾಸ್ತ್ರಾಂಭೋಜಿನೀ ಪ್ರೋಲ್ಲಸ ।
ನ್ಮಿಹಿರಂ ಗೌತಮಗೋತ್ರ ವಾರ್ಧಿ ವಿಲಸತ್ಪೂರ್ಣೇಂದು ವರ್ಣಂ ತ್ರಯೀ ॥
ಮಹಿತಂ ವಿಶ್ವಜನಾಗ್ರಗಣ್ಯನನವದ್ಯಾಪಾರ ಪುಣ್ಯೋದಯಂ ।
ಮಹದೇವಂ ಮನವೊಲ್ದು...ಮ ಮಹೇಶಸ್ಥಾಪನಂ ಮಾಡಿದಂ ॥1397॥

## 252 ಹೊನ್ನಾಳಿ 37 [1196]

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಅಂಗರಕ್ಷಕ ಗಟ್ಟಿಯ್ಯನು ತುರುಗೋಳಿನಲ್ಲಿ ಕಾದಿ ಸ್ವರ್ಗಸ್ಥನಾದಂತೆ ಹೇಳಿದೆ.

ತೊಟ್ಟೆನಲುಮ್ಮಾಬಾಯಿಯ । ಕಟ್ಟಾಳ್ಗಳ್ ಕುದುರೆವೆರಸು ತುಱುಗೊಳೆ ಕೆಟ್ಟಾ ।
ಗಟ್ಟಿಯನಾಯಕನುಱದಿಱಿ । ದೊಟ್ಟಜೆಯಿಂದಾಂತವಂ ಮಗುಟ್ಚಿದನಾಗಳ್ ॥1398॥

ಬೊಪ್ಪಾದೇವಿಸಮೇತಮಿರ್ದು ಬೆಸಸಲ್ ಮಲ್ಲಕ್ಷಮಾಪಾಲನಿಂ ।
ತೊಪ್ಪಂಬೆತ್ತಿದಿರಾಂತ ವೈರಿಬಲಮಂ ಬೆಂಕೊಂಡು ತೀವ್ರಾಸಿಯಿಂ ॥
ತೊಪ್ಪೆಂದೋವದೆ ಪೊಯ್ದು ನಂಗರಿಕರೊಳ್ ಬಲ್ಲಾಳ್ ಕರಂ ಗಟ್ಟಿಯಂ ।
ಬಾಪ್ಪೆಂದೀ ಧರೆ ಬಣ್ಣಿಸಲ್ಕೆ ಪಡೆದಂ ಸ್ವರ್ಗಾಪವರ್ಗಂಗಳಂ ॥1399॥

ಭರದಿಂ ಮಲ್ಲೆಯನಾಯಕಪ್ರಿಯಸುತಂ ಗಟ್ಟಯ್ಯನುಗ್ರಾಜಿಯೊಳ್ ।
ತುರಗಂ ಮುತ್ತಿದೊಡಿಕ್ಕಿ ತತ್ತುರಗಮಂ ಬಲ್ಲಾಳ್ಗಳಂ ಖಡ್ಗದಿಂ ॥
ಕರುಳುಂ ಕಂಡಮುಮಾಲಿ ಸೂಸುವಿನೆಗಂ ಶ್ರೀರಂಗ ಗೋವಿಂದೆನು ।
ತ್ತುರುತೇಜಂ ಪೊಡೆದಪ್ಸರೋಗಣಯುತಂ ವೈಕೊಂತಮಂ ಪೊರ್ದಿದಂ ॥1400॥

## 253 ಹೊನ್ನಾಳಿ 38 [1196]

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಅಂಗರಕ್ಷಕ ಮೈಲೆಯನಾಯಕನು ಉಮ್ಮಾ-ಬಾಯಿಯ ದಾಳಿಯಲ್ಲಿ ಕಾದಿ ಸತ್ತನೆಂದು ಹೇಳಿದೆ.

ಉಮ್ಮಾಬಾಯಿಯ ದಾಟಿಯ । ದೊಮ್ಮೆಯೆ ಕವಿತಂದೊಡೆಯ್ದಿ ಸಂಗರದೆಡೆಯೊಳ್ ।
ಉಮ್ಮಳಿಯಪ್ಪಿನಮರಿಬಳ । ವಮ್ಮಿ ಕಱುತ್ತಿಱಿದನುಱದೆ ನಾಯಕಮೈಲಂ ॥1401॥

ತೊಡೆ ಕಡಿವೋಪಿನಂ ಬರಿಯೆರಟ್ಕಿಲನೊಮ್ಮೆಯೆ ಚೆಕ್ಕೆವೋಪಿನಂ ।
ನಡು ಬಿಳಿವೋಪಿನಂ ತಲೆ ಕಣಕ್ಕೆನಲಾಗಳುರುಳ್ದು ಪೋಪಿನಂ ॥
ತೊಡರ್ದರನೋವದಂಗರಿಕಮೈಲೆಯನಾಯಕನಾತ್ಮಖಡ್ಗದಿಂ ।
ಕಡುಗಲಿ ಪೊಯ್ದು ಪೊಯ್ದಿರದೆ ಮೆಚ್ಚಿಸಿದಂ ಸುರಕನ್ಯೆಯರ್ಕಳಂ ॥1402॥

ಭಾಸುರಕೀರ್ತಿವೆತ್ತೆಸೆವ ಮಲ್ಲನೃಪಾಳಕನಂಗರಕ್ಕನಾ ।
ಕೇಸವನಾಯಕಪ್ರಿಯಸುತಂ ಕಲಿಮೈಲೆಯನಾತ್ಮಖಡ್ಗದಿಂ ॥
ದಾಸುರಮಪ್ಪಿನಂ ರಿಪುತುರಂಗಬಲಂಗಳನಿಕ್ಕಿ ಗೆಲ್ಲದಿಂ ।
ಸಾಸಿಗನೊಳ್ಪುವೆತ್ತಮರಕಾಮಿನಿಯರ್ಕಳೊಳೊಲ್ದು ಕೂಡಿದಂ ॥1403॥

**254 ಅರಸಿಯಕೆರೆ 23 [1197]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ತಂತ್ರಪಾಳ ಮಹಾದೇವನು ಬೀಚೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಚೋಳನ ಜೂಬು ಮಾಳವನ ಗೋಟ್ಬುರಿ ಚೇರನನಟ್ಟಿ ತಿಂಬ ಮಾ ।
ಕಾಳಿ ವರಾಳನಂ ತುೞಿವ ಗಂಧಗಜಂ ಖಚನಳ್ಪೆಯಂಬು ನೇ ॥
ಪಾಳನ ಬೆನ್ನ ಚೆಮ್ಮಟಿಗೆಯೀ ನಡೆತಂದನೆ ವೀರವಿಷ್ಣುಭೂ ।
ಪಾಳಕನೆಂಬ ಸಂಭ್ರಮಮೆ ವೈರಿನೃಪಾಳರ ಮಂಡಲಂಗಳೊಳ್ ॥1404॥

**255 ಬೇಲೂರು 77 [1198]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಚಂದಿಸೆಟ್ಟಿ ಬಾಚಲೇಶ್ವರ ದೊಳಗೆ ಹರಿಹರ ದೇವಾಲಯವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ತುಳುದೇಶಂ ಚಕ್ರಗೊಟ್ಟಂ ತಳವನಪುರಮುಚ್ಚಂಗಿ ಕೋಳಾಲಮೇಟುಂ ।
ಮಲೆ ವಲ್ಲೂರ್ ಕಂಚಿ ಕೊಂಗರ್ಬಿಸುವ ಹಡಿಯಘಟ್ಟಂ ಬಯಲ್ನಾಡು ನೀಳಾ ॥
ಚಳದುರ್ಗಂ ರಾಯರಾಯೋತ್ತಮಪುರಿ ತೆರೆಯೂರ್ ಕೋಯತೂರ್ ಗೊಂದವಾಡಿ ।
ಸ್ಥಳಮಂ ಭ್ರೂಭಂಗದಿಂ ಕೊಂಡತುಳಭುಜಬಳಾಟೋಪನೀ ವಿಷ್ಣುಭೂಪಂ ॥1405॥

ಬಲ್ಲಾಳ II

ನೃಗನಹುಷನಳಭಗೀರಥ । ಸಗರಪುರೂರವಯುಧಿಷ್ಠಿರಾದಿನೃಪಾಳ ।
ರ್ಗಗಣಿತಮಹಿಮಂ ನೂರ್ಮಡಿ । ಮಿಗೆವಂದಂ ನಿಜಚರಿತ್ರದಿಂ ಬಲ್ಲಾಳಂ ॥1406॥

ಅಸುಹೃತ್ಪಾಂಡ್ಯನೃಪಾಳರಕ್ತಜಳದಿಂ ನೀರೂಡಿ ಸುಜೃಂಭಿನಂ ।
ಮಸೆದಂ ಬಿಲ್ಲಮುಮಸ್ತ್ರಶಾಣತಳದೊಳ್ ಘೋರೆಂಬಿನಂ ಜೈತುಗಿ ॥
ಪ್ರಸೃತಾಸ್ಯಾಂಬುಜಕೋಶದೊಳ್ ಕಿೞಿಪುವಂ ಘಣ್ಮೆಂಬಿನಂ ಕೂರ್ಪು ದ।
ಳ್ಪಿಸೆ ಬಲ್ಲಾಳನೃಪಾಳಕಂ ನಿಜಭುಜಪ್ರೌಢಪ್ರತಾಪಾಸಿಯಂ ॥ 1407 ॥

## 256 ಸೊರಬ 140 [1198]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಮಹದೇವದಂಡನಾಯಕನು ಎರಗಜಿನಾಲಯವನ್ನು ಮಾಡಿಸಿ ಶಾಂತಿನಾಥನನ್ನು ಪ್ರತಿಷ್ಠಿಸಲು, ಎಕ್ಕಲರಸ ಮುಂತಾದವರು ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ಭುವನಂ ಭೂಚಕ್ರಚಕ್ರಾಯುಧನೆನೆ ನೆಗಟ್ದಂ ವೀರಬಲ್ಲಾಳನುರ್ವೀ।
ಸ್ತವನೀಯಪ್ರಾಂಶುಮತ್ಸ್ಯಚ್ಛವಿ ಸುಚರಿತಕೂರ್ಮೋದಯಂ ಸಾರಸೌಕ॥
ರ್ಯವಿಳಾಸಂ ವಿಕ್ರಮ ಶ್ರೀನರಹರಿ ಪರಮಂತ್ರಿಕ್ರಮಂ ರಾಮರಾಮೋ।
ತ್ಸವರಾಮಾನಂದಿ ವಿದ್ಯಾಸುಗತನತಿಕಲಿಪ್ರಾಭವಪ್ರೌಢತೇಜಂ ॥ 1408 ॥

ಬಲವದ್ಬಲ್ಲಾಳನುಗ್ರಾಹವಪಟಹರವಂ ಕರ್ಣಮಂ ತಾಗೆ ವಿದ್ವಿ।
ಟ್ಕುಲಕಾಂತಾಕರ್ಣಪತ್ರಂ ಕೆಡೆವುದಣಕಮಲ್ತೊಂದೆ ಕೇಳ್ ವಿಸ್ಮಯಂ ಕ॥
ಣ್ಮಲರಿಂ ಬಾಷ್ಪಾಂಬು ಕೆಯ್ಯಿಂ ಕಡಗಮಡಿಗಳಿಂ ನೂಪುರಂ ವಕ್ತ್ರದಿಂ ಸುಯ್।
ತಲೆಕಟ್ಟಿಂ ಮಾಲೆವೂವಾಕೆಗಳ ಗಳಕದಿಂ ಬೀೞ್ವುದುತ್ತಾರಹಾರಂ ॥ 1409 ॥

ಜಿತಧಾತ್ರೀಚಕ್ರಚಕ್ರಾಧಿಪ ನೃಪವರ ಬಲ್ಲಾಳ ಕೇಳ್ ನಿನ್ನೊಳಾಂತು।
ದ್ಧತವೀರಾರಾತಿಯೂಥಂ ವಿಗತವಿಭವಮಾಗಿರ್ದೊಡಂ ರಂಜಿಕುಂ ವಿ॥
ಶ್ರುತನಾನಾವಾಹಿನೀಸಂಕುಲಪರಿಗತಶೋಭಾನುಕೂಲ್ಯಂ ಸದಾಸೇ।
ವಿತರಾಜದ್ರಾಜವಂಶಂ ಸಕಲಕವಿನಿಕಾಯಸ್ವನಾಕೀರ್ಣಕರ್ಣಂ ॥ 1410 ॥

ಎನಸುಂ ತೀವ್ರಪ್ರತಾಪಕ್ಕಗಿದು ದಿನಕರಂ ಮಿತ್ರನಾಗಿರ್ದಪಂ ನೆ।
ಟ್ಟನೆ ರಾಜಂ ರಾಜನಾಮಂ ತನಗೆ ಪಗೆಯೆನಿಪ್ಪಮ್ಮಳಂ ಪೆರ್ಚಿ ಕಂದಿ॥
ರ್ಪನವಂ ಮತ್ತಾವನಣ್ಮಂ ಮೆಱೆವನದಟಿನಿಂ ತೋರ್ಪನಾವಂ ಮಹೋಗ್ರಾ।
ರಿನೃಪಾಳಂ ವಿಶ್ವಭೂಚಕ್ರದೊಳಿಲೆ ಚಲದಿಂ ವೀರಬಲ್ಲಾಳ ನಿನ್ನೊಳ್ ॥ 1411 ॥

ಆನೊಲವಿಂದೆ ಬಣ್ಣಿಸದೊಡೇಂ ಗಳ ದಕ್ಷಿಣಚಕ್ರಿ ಯುದ್ಧದೊಳ್।
ತಾನಸಹಾಯಶೂರನೆನಿಪುನ್ನತಿಯಂ ರಿಪುರಾಯಸೇವುಣಾ॥
ನೂನಗಜಾಶ್ವಸದ್ಭಟಬಲಂಗಳನಳ್ಕಿಱದೊಂದೆ ಮೆಯ್ಯೊಳೊಂ।
ದಾನೆಯೊಳೊಕ್ಕಲಿಕ್ಕಿದ ಪರಾಕ್ರಮದುನ್ನತಿ ತಾನೆ ಹೇೞದೇ ॥ 1412 ॥

ಬನವಾಸಿ ದೇಶ

ಪಲವುಂ ಪೂರ್ಣತಟಾಕದಿಂ ಬೆಳೆದ ನಾನಾಶಾಳಿಕೇದಾರದೊ।
ಳ್ಪೊಲದಿಂ ವಾರಿಜಷಂಡದಿಂ ಪರಿಮಳಭ್ರಾಂತಾಳಿಮಾಳೋದ್ಧಪು॥
ಷ್ಪಲತಾಸಂಕುಳದಿಂ ಫಳೋನ್ನಮಿತಚೂತಾದಿಕ್ಷಮಾಜಂಗಳಿಂ।
ನೆಲೆಯಾಗಿರ್ಪುದು ಮನ್ಮಥಂಗೆ ಬನವಾಸೀದೇಶಮತ್ತೆತ್ತಲುಂ ॥ 1413 ॥

ಉದ್ಧರೆಯಪುರ

ಸರಸಿಜವಕ್ತ್ರದಿಂ ಕುಮುದಲೋಚನದಿಂ ವಿಳಸಲ್ಲತಾಂಗದಿಂ।
ಸುರುಚಿರಪಲ್ಲವಾಧರದಿನಾಶುಕಭಾಷಣದಿಂದೆ ಮಲ್ಲಿಕಾ॥
ಪರಿಮಳದಿಂ ಮದಾಳಿಕುಳಕುಂತಳದಿಂ ವನಲಕ್ಷ್ಮಿ ರೂಪನು।
ದ್ಧರೆಯ ಪುರೋಪಕಂಠವನದೊಳ್ ಪಡೆದೊಪ್ಪುವಳಾವಕಾಲಮುಂ ॥ 1414 ॥

ಎರಗ

ಮಱೆದುಂ ಪರಸತಿಯುಗ್ರ। ಟ್ಕಱೆಯೊಳಚ್ಯುತನಲ್ಲದನ್ಯದೈವಕ್ಕಾರ್ಪಂ।
ಪಱೆಯಿಪ ನಿಜಧನಲೋಭ।ಕ್ಕೆಱಗನೆಱಗನೆಱಗನೆಱಗನೃಪನೆನೆ ನೆಗಳ್ದಂ ॥1415॥

ಎಕ್ಕಲರಸ

ಜವನಂ ಜಕ್ಕುಲಿಪಂ ಕಡಂಗಿ ಸಿಡಿಲಂ ಮಾರ್ಕೊಳ್ವನಾಭೀಳಕಾ।
ಳವಿಷೋಗ್ರಾಹಿಯನೆತ್ತಿ ಮಾರಿಡುವನೌರ್ವಜ್ವಾಳೆಯಂ ಮುಟ್ಟಿಪಂ॥
ತವಿಪಂ ತೀವ್ರನಿಶಾಟದಗ್ಗಳಿಕೆಯಂ ತಾನೆಂದೊಡಿಂದುರ್ಕಿ ನಿ।
ಕ್ಕುವಮಾರಾಂತಪರೆಕ್ಕಲಕ್ಷಿತಿಪನಂ ಸಂಗ್ರಾಮರಂಗಾಗ್ರದೊಳ್ ॥ 1416 ॥

ದವರೂಪಂ ರಿಪುಕಾನನಕ್ಕೆ ಪವಿರೂಪಂ ಶತ್ರುಶೈಲಕ್ಕೆ ಬಾ।
ಡವರೂಪಂ ದ್ವಿಷದರ್ಣವಕ್ಕೆ ನಿಜತೀವ್ರಾತ್ಯುಗ್ರಕೋಪಪ್ರರೂ॥
ಪವೆನಲ್ ಪೊಂಗಿ ಕಡಂಗಿ ನಿಂದತುಳಬಾಹಾಗರ್ವದಿಂದಾಂಪರಾ।
ರವನೀಪಾಳಕರೆಕ್ಕಲಕ್ಷಿತಿಪನಂ ಸಂಗ್ರಾಮರಂಗಾಗ್ರದೊಳ್ ॥ 1417 ॥

ಇಂ ಬೆಸಗುಳ್ಳುದೇನೊ ಸುಭಟೋತ್ತಮನೆಕ್ಕಲದೇವನಿಷ್ಟರೊಳ್।
ನಂಬುಗೆದಪ್ಪಿದಂದು ಪರಕಾಂತೆಯೊಳೊಲ್ದೊಡಗೂಡಿದಂದು ಲೋ॥
ಭಂಬಿಡಿದರ್ಥದತ್ತಳಿಪಿದಂದಿದಿರಾಂತೊಡೆ ಕೊಲ್ಲದಂದು ಕೇ।
ಳಂಬುಧಿ ಮೇರೆಯಿಂ ತೊಲಗುಗುಂ ತಳರ್ಗುಂ ನೆಲೆಯಿಂ ಸುರಾಚಳಂ ॥ 1418 ॥

ತಕ್ಕತನಕ್ಕೆ ಮಿಕ್ಕ ಪರಕಾಮಿನಿಯರ್ಕಳನೆಮ್ಮ ತಂಗೆಯೆ।
ಮ್ಮಕ್ಕನೆನುತ್ತೆ ನಂಬೆ ಮೊಱೆಗೊಂಡೊಡಗೂಡುವ ಸಾಧುಗಳ್ಪರೇ॥
ತಕ್ಕುಪಯೋಗ್ಯವಾಮುಹಿಪರೇಂ ಗಳ ಪೋಲ್ವರೆ ಶೌಚದೇೞ್ಗೆಯಿಂ।
ದೆಕ್ಕಲಭೂಪನಂ ಪರವಧೂವಿನುತೋದರಪದ್ಮಗರ್ಭನಂ ॥ 1419 ॥

ಗತಿ ಭಾವಂ ಚಾರಿ ಸೂತ್ರಂ ನಿಱಿಸಳವಿ ಬಳಂ ಕಾಣ್ಕೆ ಬಲ್ಪೋಜೆ ಕಾಯ್ಪು।
ನ್ನತಿ ಗಾಢಂ ಲಾಗು ಬೇಗಂ ತೆಱಪು ಪಸರಮಾರಯ್ಕೆ ತೇರೈಕೆ ಕೂರ್ಪಂ॥
ಕಿತಮಾಕಾರಂ ತಡಂ ಕಿತ್ತಡಮೆನಿಪ ಭೃಗುಪ್ರೌಢಿಯಿಂ ಕೊಲ್ವನುಗ್ರಾ।
ಹಿತನಂ ಮಾಱಂಕಮುಂ ಮಾರ್ಮಲೆದೊಡೆ ಚಲದಿಂದೆಕ್ಕಲಕ್ಷೋಣಿಪಾಳಂ ॥ 1420 ॥

### ಬೊಪ್ಪ

ಎರೆದಾದರ್ಥಾರ್ಥಿಚಯಕ್ಕೆ ಕಲ್ಪಕುಜಮಿರ್ಪಂತಿರ್ಪನಂ ಬೊಪ್ಪನಂ।
ವರವಂಶಾಂಬುಧಿವರ್ಧನಕ್ಕೆ ಶಶಿಯಿರ್ಪಂತಿರ್ಪನಂ ಬೊಪ್ಪನಂ॥
ನಿರವದ್ಯಾಚರಣಕ್ಕೆ ತೀರ್ಥಕರನಿರ್ಪಂತಿರ್ಪನಂ ಬೊಪ್ಪನಂ।
ಧರೆ ಬಣ್ಣಿಪ್ಪುದುದಾತ್ತಕೀರ್ತಿವನಿತಾಕಂದರ್ಪನಂ ಬೊಪ್ಪನಂ ॥ 1421 ॥

### ಸೋಮಚಮೂಪ

ಸೂರಿಚಕೋರಸೋಮನನವದ್ಯಕಳಾಗಮಸೋಮನುದ್ಧತೋ।
ಗ್ರಾರಿಸರೋಜಸೋಮನತಿನಿರ್ಮಳವಂಶಪಯೋಧಿಸೋಮನಾ॥
ಚಾರವನಪ್ರವರ್ಧನವಸಂತಕಸೋಮನಶೇಷಭವ್ಯಹೃ।
ತ್ಕೈರವಸೋಮನೆಂದೆನಿಪ ಸೋಮಚಮೂಪನಿದೇನುದಾತ್ತನೋ ॥ 1422 ॥

### ರಾಮಚಮೂಪ

ಪರಸೇನಾಜಯವಿಕ್ರಮೋನ್ನತಿಯೊಳಾದಂ ಭೀಮನುಂ ರಾಮನುಂ।
ಧರಣೀಸ್ತುತ್ಯಕಳಾವಿಳಾಸದೊದವಿಂದಾಸೋಮನುಂ ರಾಮನುಂ॥
ವರನಾರೀಜನಮೋಹನಾಕೃತಿಯೊಳುದ್ಯತ್ಕಾಮನುಂ ರಾಮನುಂ।
ಸರಿಯೆಂದೀ ಜಗಮೆಯ್ದೆ ಬಣ್ಣಿಪುದು ಕೀರ್ತಿಪ್ರೇಮನಂ ರಾಮನಂ ॥ 1423 ॥

### ಕೇಶವ

ಶ್ರೀರಾಮನನನುಜನೆನಿಸಿದ। ನಾರಾಮಚಮೂಪನನುಜನುರುಲಕ್ಷ್ಮಣವಿ।
ಸ್ತಾರಸುಮಿತ್ರಾಧಿಕಪು। ಣ್ಯಾರಾಮಂ ಕೇಶವಂ ಜಗಜ್ಜನವಿನುತಂ ॥ 1424 ॥

ಎರೆದಂದಾಗಳೆ ಮಾಣಿಪಂ ಬುಧವಿಪತ್ಸಂಕ್ಲೇಶವಂ ಕೇಶವಂ।
ಬಿರುದಿಂದಾಂತರನೆಯ್ದಿ ಪಂ ಸ್ಫುರದರಣ್ಯೋದ್ದೇಶವಂ ಕೇಶವಂ॥
ಶರಣಾಗೆಂದೊಡೆ ನೀಡುವಂ ಬಹಳಬಾಹಾಪಾಶಮಂ ಕೇಶವಂ।
ಚಿರಕೀರ್ತಿಪ್ರಭೆಯಿಂ ಬೆಳಪ್ಪನಖಿಳಾಶಾಕಾಶವಂ ಕೇಶವಂ ॥ 1425 ॥

### ಮಹದೇವಮಂತ್ರಿ

ಮಱಸಿ ಪರಾರ್ಥಮಂ ತೆಗೆವ ಮೇಳಿಸಿ ಪೊರ್ದಿ ಪರಾಂಗನಾರತ।
ಕ್ಕೆಱಗುವ ನಂಬಿದಾಳ್ದನಿರೆ ಮತ್ತೆ ಪತಿತ್ವಮನಾಸೆಗೆಯ್ದು ಬೇ॥
ಸಱನುಸಿರ್ವನ್ಯಮಂತ್ರಿನಿಕರಕ್ಕದಟಿಂ ತೊಡರಿಕ್ಕಿದಂ ಗಡೇ।
ನಱಿಯಿರೆ ಸಾಮಿವಂಚಕರ ಗಂಡನನೀ ಮಹದೇವಮಂತ್ರಿಯುಂ ॥ 1426 ॥

ಪರವಧು ರಂಭೆಗಂ ರತಿಗಮುಗ್ಗಳವೊಪ್ಪುವೊಡಂ ಪರಾರ್ಥಮೀ।
ಶ್ವರಸಖನರ್ಥದಿಂ ವರುಣನರ್ಥದಿನೂರ್ಜಿತಮಾಗಿ ಬರ್ಪೊಡಂ॥
ಪರನೃಪನೊಲ್ದುಮನ್ನಿಸುವೊಡಂ ಪಿರಿದೀವೊಡಮತ್ತ ಚಿತ್ತಮೋ।
ಸರಿಸದಿದೇಂ ಮಹತ್ವದೊದವೋ ಮಹಿಯೊಳ್ ಮಹದೇವಮಂತ್ರಿಯಾ ॥ 1427 ॥

ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀ।
ಶಹಿತಾತ್ಮಂ ಸುಪ್ರಬುದ್ಧೋದ್ಧವನೆನಿಪವನುಂ ತಾನಕಾರ್ಯಪ್ರಯುಕ್ತಂ॥
ಮಹಿಯೊಳ್ ಪೋಲ್ವನ್ನನಾವಂ ತನಗೆನೆ ನೆಗೞ್ದಂ ವಿಶ್ವಲೋಕಪ್ರಸಿದ್ಧಂ॥
ಮಹದೇವಂ ಮಂತ್ರಿಮುಖ್ಯಂ ಮನುಮುನಿಚರಿತಂ ಮಂತ್ರಯುದ್ಧಪ್ರವೀಣಂ ॥ 1428॥

ಗೆಡೆಗೊಂಡಂ ಧನ್ಯನೊಲ್ದೋಲಗಿಸಿದನೆ ಕೃತಾರ್ಥಂ ಮನಂಬೆತ್ತು ಮೆಯ್ಯಾ।
ರ್ದೊಡನುಂಡಂ ಪುಣ್ಯಪುಂಜಂ ಪೊರೆವ ನೃಪನೆ ನೈರ್ಮಲ್ಯಧರ್ಮಾನುಸಂಗಂ॥
ನುಡಿಗಲ್ತಂ ವಿಶ್ವವಿದ್ವಜ್ಜನವಿನುತಕಳಾಪ್ರೌಢನೆಂದಂದು ತನ್ನೊಳ್।
ಪಡಿಯಾವಂ ಮಂತ್ರಿವರ್ಯಂ ಬುಧನಿಧಿ ಮಹದೇವಂಗೆ ಮತ್ತೊರ್ವನನ್ನಂ ॥ 1429 ॥

ಮತಿ ಕೃತಿಗಳ್ಗೆ ದೃಷ್ಟಿಯೆನಿಸಿರ್ಪುದು ತನ್ನಯ ಸೂಕ್ತಿಶಕ್ತಿ ಭಾ।
ರತಿಗೆ ವಿವೇಕಮಂ ಕಲಿಸುವೋಜುವೊಲಿರ್ಪುದು ಚಾರುಸತ್ಕಳಾ॥
ಜ್ಞತೆ ಚತುರಾನನಂಗಱಿವನೀವೆಱವಟ್ಟೆನಿಸಿರ್ಪುದೆಂದು ವಂ।
ದಿತತಿ ನಿರಂತರಂ ಪದೆದು ಬಣ್ಣಿಪುದೀ ಮಹದೇವಮಂತ್ರಿಯಂ ॥ 1430 ॥

ಮಹದೇವನ ಹೆಂಡತಿ ಲೋಕಲದೇವಿ

ಅತನು ಮನಃಪ್ರಿಯಂ ರತಿಗೆ ಲಕ್ಷ್ಮಿಗೆ ಭಾವಿಪೊಡೊರ್ವ ಗೋವಳಂ।
ಪತಿ ಗಿರಿರಾಜಪುತ್ರಿಗೆ ಮರುಳ್ಗೆಱೆಯಂ ವರನೆನ್ನ ಕಾಂತನ॥
ಚ್ಯುತನತಿಸೇವ್ಯನೂರ್ಜಿತಕಳಾಧರನೆಂದಿಱಿಕೆಯ್ವಳೀ ಮಹಾ।
ಸತಿ ಮಹದೇವಮಂತ್ರಿಯ ಮನಃಪ್ರಿಯೆ ಲೋಕಲದೇವಿ ಸಂತತಂ ॥ 1431 ॥

ಚತುರತೆಗಾದ ಸೈಪು ಸುಚರಿತ್ರತೆಗಾದ ಪೊಡರ್ಪು ಜೈನದು।
ನ್ನತಿಕೆಗೆ ಸಾರ್ದ ಪುಣ್ಯಮಭಿಮಾನಕೆ ತಳ್ತ ಮಹತ್ವಮೀ ಜಗ॥
ನ್ನುತಮಹದೇವಮಂತ್ರಿಯ ಮನಃಪ್ರಿಯೆ ಲೋಕಲದೇವಿ ನಿನ್ನ ಸ।
ತ್ಪತಿಹಿತದಿಂದಮಾಯ್ತೆನಲದೇವೊಗೞ್ವೆಂ ನಿಜಸದ್ಗುಣಂಗಳಂ ॥ 1432 ॥

ಕುಲಭೂಷಣವ್ರತಿ

ತನಗಾದಂ ಪರಿಚಾರಿಕಾಕೃತಿ ಯಶಶ್ರೀ ಚಾರುಚಾರಿತ್ರಕಾ।
ಮಿನಿ ರಾಜಚ್ಚಮರೀಜಕಾಂತೆ ಮನೆಗಾದಿರ್ಪಾಕೆ ನಿಚ್ಚಂ ದಯಾಂ॥
ಗನೆ ವಾಗ್ವಲ್ಲಭೆ ಬುದ್ಧಿವಾನಸೆ ಕರಂ ಭಾಸ್ವತ್ತಪೋಲಕ್ಷ್ಮಿ ಸ।
ಜ್ಜನಮಾಗಲ್ ಕುಲಭೂಷಣವ್ರತಿವರಂ ಸ್ತ್ರೀರಾಜ್ಯದಿಂ ರಾಜಿಪಂ ॥ 1433 ॥

ಸಕಲಚಂದ್ರ

ಶ್ರೀವನಿತೆಗೆ ಮೊಗಮಿತ್ತು ತ। ಪೋವನಿತೆಗೆ ಮೆಯ್ಯನೊಡ್ಡಿ ಮುಕ್ತ್ಯಂಗನೆಯಂ।
ಭಾವಿಸುವ ಬಮ್ಮಚಾರಿಯ। ನೇವೊಗಟ್ಟುದೊ ಸಕಲಚಂದ್ರಭಟ್ಟಾರಕರಂ ॥ 1434 ॥

## 257 ನಾಗಮಂಗಲ 47 [1199]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ಮಂಡಲಸ್ವಾಮಿ ಬೆಳ್ಳೂರಲ್ಲಿ ಮಂಡಲೇಶ್ವರ ದೇವಾಲಯವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಮಂಡಲಸ್ವಾಮಿ

ರವಿಸುತನೊಂದು ನನ್ನಿ ಪವಮಾನತನೂಜನದೊಂದು ಬಲ್ಪು ವಾ।
ಸವಸುತನೊಂದು ವಿಕ್ರಮದನುಕ್ರಮಮಶ್ವಿನಿದೇವಪುತ್ರರೊಂ ॥
ದವಿಚಳಮಪ್ಪ ಶಸ್ತ್ರದ ನೆಗಟ್ತೆಯ ಶಾಸ್ತ್ರದ ಪೆರ್ಮೆ ತನ್ನೊಳೊ।
ಪ್ಪುವುದೆನೆ ಪಾಂಡವಪ್ರತಿಮನಲ್ಲನೆ ಮಂಡಲಸಾಮಿ ಲೋಕದೊಳ್ ॥ 1435 ॥

ದಿಕ್ಕರಿಯ ಕರಟತಟಮಂ। ಜಕ್ಕುಲಿಸಿದುದಮರನಗಮನಡರ್ದುದು ಹರಹಾ।
ಸಕ್ಕೆ ಸೆಣಸಿದುದು ದೆಸೆಯಂ। ಮಿಕ್ಕುದು ಮಂಡಲನ ಕೀರ್ತಿ ಮಹಿಮೋನ್ನತಿಯಿಂ ॥1436॥

ಮಂಡಲೇಶ್ವರ ದೇವಾಲಯ

ತಳದಿಂದಂ ಕಳಶಂಬರ। ಮಳವಡೆ ಕಲ್ವೆಸದ ಚೆಲ್ವು ಬೆಳ್ಳೂರೊಳ್ ಮಂ।
ಡಳಸಾಮಿ ಮಾಡಿಸಿದ ಮಂ। ಡಳೇಶ್ವರದ ಸರಿಗೆ ಬರ್ಪ ದೇಗುಲಮೊಳವೇ ॥ 1437 ॥

## 258 ತಾಡಪತ್ರಿ ರಾಮೇಶ್ವರ ದೇವಸ್ಥಾನದ ಶಾಸನ [1199]

(ದಕ್ಷಿಣ ಇಂಡಿಯಾ ಶಾಸನಗಳು, IV, ಸಂಖ್ಯೆ 798)

ಇದರಲ್ಲಿ ಮಹಾಮಂಡಲೇಶ್ವರ ಉದಯಾದಿತ್ಯದೇವನು ತನ್ನ ರಾಜಧಾನಿ ತಾಟಿಪಾರಪುರದಲ್ಲಿರುವ ಚಂದ್ರನಾಥ ಪಾರ್ಶ್ವನಾಥ ದೇವರ ಬಸದಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

## ಜಂಬೂದ್ವೀಪ

ನವರತ್ನ ಭರಿತ ಜಳಚರ। ನಿವಹ ಪರಿಕ್ಷುಭಿತ ಬಹಳ ಕಲ್ಲೋಳ ರವ॥
ಪ್ರವಿಘೂರ್ಣಮಾನ ಲವಣಾ। ರ್ಣವ ಪರಿವೃತಮೆನಿಪುದುಂಟು ಜಂಬೂದ್ವೀಪಂ
॥ 1438 ॥

## ತಾಟಿಪಾರಪುರ

ಆ ಜನಪದಕ್ಕೆ ತಲೆ ಸಲೆ। ರಾಜಾಶ್ರಯಮೆನಿಸಿ ತಾಟಿಪಾಱ ಪುರಂ ವಿ॥
ಭ್ರಾಜಿಸುಗುಮುಮರ ಪನ್ನಗ। ರಾಜ ಪುರಕ್ಕೆಣೆಯೆನಿಪ್ಪ ಮಹಿವೋನ್ನತಿಯಿಂ ॥1439॥

ಪೆನ್ನೆ ನಿಸರ್ಗದಿಂದೆವಲಿಬನ್ನೆ(?)ಯನೂನ ಜಲಪ್ರವಾಹ ಸಂ।
ಪನ್ನೆ ನದಿ ನದ ಪ್ರಕರದೊಳ್ ಕಡು ಚೆನ್ನೆ ತಟೀ ಮಹೀರುಹೋ ॥
ತ್ಪನ್ನ ಫಳಾವಿಪನ್ನೆ ನಿಜ ನಿರ್ಮಳಿನೋದಕದಿಂ ಪ್ರಸನ್ನೆಯಿಂ।
ದುನ್ನತಿವೆತ್ತು ತೋರ್ಪ ನದಿ ತತ್ಪುರಮಂ ಬಳಸಿರ್ಪುದೆತ್ತಲುಂ॥ 1440 ॥

ಫಳ ಪುಷ್ಪೋಪೇತ ನಾನಾ ತರು ಲತೆಗಳಿನುತ್ಫುಲ್ಲ ನೀರೇಜ ಷಂಡಂ।
ಗಳಿನತ್ಯುದ್ದಂಡ ಕೂಜತ್ಪಿಕ ಶುಕ ಕುಳದಿಂ ಗಂಧಶಾಳೇಯ ವಪ್ರಾ ॥
ವಳಿಯಿಂ ಪುಂಡ್ರೇಕ್ಷು ವಾಟಂಗಳಿನುಪವನದಿಂ ಪೂರ್ಣ ವಾಪೀ ತಟಾಕಂ।
ಗಳಿನಾಶಾಮಂಡಳಂ ತತ್ಪುರವರದ ಬಹಿರ್ಭಾಗದೊಳ್ ನಾಡೆ ರಯ್ಯಂ ॥ 1441 ॥

ವಿಳಸದ್ಬ್ರಹ್ಮಪುರಂಗಳಿಂ ವಿವಿಧ ಕೂಟೋತ್ತುಂಗ ದೇವಾಲಯಂ।
ಗಳಿನತ್ಯಾಯತ ರಮ್ಯ ಹರ್ಮ್ಯ ತತಿಯಿಂ ನಾನಾ ಸ್ಫುರದ್ರತ್ನ ಸಂ ॥
ಕುಳ ರಾಜ ದ್ವಿಪಣಿ ಸ್ಥಳಂಗಳಿನನೇಕಾಕೀರ್ಣ ಪಣ್ಯಾಂಗನೋ।
ಜ್ಜ್ವಳ ಸೌಧಂಗಳಿನಾವಗಂ ಸೊಗಯಿಸಿರ್ಕುಂ ತತ್ಪುರಾಭ್ಯಂತರಂ ॥ 1442 ॥

## ಸೋಮಿ ದೇವ

ಅರಿಭೂಭೃತ್ಕುಂಭಿ ಕುಂಭಸ್ಥಳ ವಿಗಳಿತ ರಕ್ತಾರ್ದ್ರ ಮುಕ್ತಾಫಳಾಳಿ।
ಸ್ಫುರಿತೋದ್ಯದ್ರುಂಗವಲ್ಲೀ ವಿಳಸಿತ ರಣರಂಗಾಂಗಣೋದ್ವೃತ್ತ ಬಾಹಾ ॥
ಪರಿಘಾವಿರ್ಭೂತ ವೈಕುರ್ವಣ ವಿವಿಧ ಭುಜ ಪ್ರೇತ ಭೇತಾಳ ಭೂತೋ।
ದ್ಧುರತಾ ಜೇಗೀಯಮಾನಾರ್ಜಿತ ನಿಜ ವಿಜಯಂ ಸೋಮಿದೇವಕ್ಷಿತೀಶಂ ॥ 1443 ॥

## ಉದಯಾದಿತ್ಯ

ಮದವದ್ವೈರಿನೃಪಾಳ ಸೈನ್ಯ ತಿಮಿರ ಪ್ರಧ್ವಂಸನಂಗೆಯ್ದು ಪೆ।
ರ್ಚಿದ ರಾಗಂ ನಿಜ ಮಂಡಳಕ್ಕೆಸೆಯೆ ದಿಕ್ಚಕ್ರಾಂತಮಂ ತನ್ನ ತೇ॥
ಜದಗುರ್ವಿಂ ಸಮಱುತ್ತುಮಭ್ಯುದಯಮಂ ಕೈಕೊಂಡ ಸಯ್ಪಿಂದಮಿಂ।
ತುದಯಾದಿತ್ಯ ಕುಮಾರನಪ್ರತಿಹತೋದಗ್ರ ಪ್ರತಾಪೋದಯಂ ॥ 1444 ॥

ಪ್ರತ್ಯರ್ಥಿ ನೃಪತಿ ಬಳ ತಿಮಿ। ರಾತ್ಯಯಮಂ ಮಾಳ್ಪ ತೇಜದಿಂ ಸೋಮಿನೃಪಾ ॥
ಪತ್ಯನೆನಿಸಿದ ಕುಮಾರಂ। ಪ್ರತ್ಯಕ್ಷಂ ತಾನೆ ನೋಟಿಪ್ಪುದುದಯಾದಿತ್ಯಂ ॥ 1445 ॥

ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಕಾನೀನನಂ ದಾನದೊಳ್।
ಹರಿಯಂ ವಿಕ್ರಮಶಕ್ತಿಯೊಳ್ ಯಮಜನಂ ಸತ್ಯೋಕ್ತಿಯೊಳ್ ತೀವ್ರ ಭಾ ॥
ಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯದೊಳ್ ಹೇಮ ಭೂ ।
ಧರಮಂ ಧೈರ್ಯದೊಳೆಯ್ದೆ ಪೋಲ್ವನುದಯಾದಿತ್ಯೋರ್ವರಾವಲ್ಲಭಂ ॥ 1446 ॥

ಉದಯಾದಿತ್ಯ ಕುಮಾರಂ। ಕದನದೊಳಿದಿರಾದ ಮದವದಹಿತ ಮಹೀಭೃ ॥
ತ್ಸುದತಿಯರ ವದನ ವನಜ। ಕ್ಕದವಟಲಂ ಮಾಡುವಂದಮಿದು ಬಿಸವಂದಂ ॥ 1447 ॥

ಅವನ ಹೆಂಡತಿ ರಾಜಲದೇವಿ

ಆ ನೃಪನ ವನಿತೆ ಸಕಲ ಕ। ಲಾನಿಧಿ ಸೌಭಾಗ್ಯ ಭೋಗಭಾಗಿನಿ ಶಶಿ ಬಿಂ ॥
ಬಾನನೆ ರಾಜಲದೇವಿ ಯ। ಶೋನಂದನ ವನ ವಸಂತಲಕ್ಷ್ಮಿಯೆನಿಪ್ಪಳ್ ॥ 1448 ॥

ಬಾಹುಬಲಿ ವ್ರತಿ

ಅಲ್ಲಿ ನೆಗಟ್ಟೆವೆತ್ತ ಯತಿ ಸಂಕುಳದೊಳ್ ಪಿರಿದುಂ ಪ್ರಸಿದ್ಧರೆಂ ।
ದೆಲ್ಲರುಮೆಯ್ದೆ ಕೂರ್ತು ಪರಿಕೀರ್ತಿಸೆ ಬಾಹುಬಲಿವ್ರತೀಂದ್ರರು ॥
ತ್ಫುಲ್ಲ ಸರೋಜನೇತ್ರರನವದ್ಯ ಚರಿತ್ರರಮೋಘ ಸಂಭವಾ।
ಪಲ್ಲತಿಕಾ ಲವಿತ್ರರೆನೆ ವರ್ತಿಸಿದರ್ ವಸುಧಾತಳಾಗ್ರದೊಳ್ ॥ 1449 ॥

**259 ತಿಪಟೂರು 123 ಅ [1200]**

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಮಹದೇವಸೆಟ್ಟಿ ಶಿವಾಲಯ ವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟನೆಂದು ಹೇಳಿದೆ.

ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ

ಸೆಳೆನಡುವಿನುರುಳಿಗುರುಳಿನ। ತೊಳಪಧರದ ಬೆಳಪ ಕಣ್ಗಳಬ್ಜಾನನದೀ।
ಕಳಶಕುಚದ್ವಯದಾಕೆಯೆ। ವಿಳಸಿತವಾದರಸಿ ಕೆಳೆಯಬರಸಿಯೆ ತನಗಂ ॥ 1450 ॥

ನಾರಸಿಂಹ I

ವಿಸಸನದೊಳ್ ಕಿಟಿಪ್ಪೊಡೆ ನಿ। ನ್ನಸಿಲತೆ ವೈರಿಗಳ ಹೃದಯದೊಳ್ ನಾಂಟಿ ತಳಿರ್ ।
ಪಸರಿಸಿ ಬೆನ್ನೊಳ್ ಬೆಳೆವುದು। ಪೊಸತೊಂದಚ್ಚರಿ ನೃಸಿಂಹ ಭಾವಿಸೆ ಜಗದೊಳ್॥1451॥

## 260 ಶಿಕಾರಿಪುರ 186 [1200]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ತ್ರಿಲೋಚನದೇವನು ತಾಣ ಗುಂದೂರಿನಲ್ಲಿ ಮಾಧವದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ತಾಣಗುಂದೂರು

ಆರವೆಯಿಂ ಪೊದಟ್ದ್ದಿ ಗಿಳಿವಿಂಡುಗಳಿಂ ಕಳಮಾಲಯಂಗಳಿಂ ।
ವಾರಿಜಷಂಡದಿಂ ಬಹುತಟಾಕದಿನುದ್ಘಲತಾಗೃಹಂಗಳಿಂ ॥
ಚಾರುವನಂಗಳಿಂ ಬೆಳೆದ ಕೆಯ್ವೊಲದಿಂ ಸೊಗಯಿಪ್ಪ ತಾಣಗುಂ ।
ದೂರತಿಶೋಭಿಕುಂ ಸಿರಿಯ ಕಣ್ಬೊಲದಂತೆ ಧರಾತಳಾಗ್ರದೊಳ್ ॥ 1452 ॥

ಅಂಗಭವಂ ಸಂಗಡಿಗಂ। ತಿಂಗಳೆ ಪೊಂಗೊಡನಪಾರಸುಧೆ ನೀರೂಟಂ।
ಪಿಂಗದ ಮಧು ವನಪಾಳಂ। ಸಂಗಡಿಸಲ್ ಬೆಳೆದುದೆಂಬುದೇನಚ್ಚರಿಯೇ ॥ 1453 ॥

## 261 ಚೆನ್ನರಾಯಪಟ್ಟಣ 205 [ಸು. 1200]

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ನಡೆದ ಗೋಗ್ರಹಣ ದಲ್ಲಿ ಕೇತಮಲ್ಲನು ಕಾದಿ ಸ್ವರ್ಗಸ್ಥನಾದನೆಂದು ಹೇಳಿದೆ.

ಅರಸರ ದಾಟಿ ಮುತ್ತಿದೆಡೆಯೊಳ್ ತಱಿಸಂದಿದಿರಾಗಿ ತಾಗಿ ತ।
ಳ್ತಿಱಿದು ಪಲಂಬರಂ ತಗುಳ್ದು ಕೋಳ್ಸೆಱೆಯುಂ ತುಱುವಂ ಮಗುಟ್ಚಿ ಚೆ ॥
ಚ್ಚರಮಿದಿರಾದ ವೀರಭಟರಂ ತಱಿದಿಕ್ಕಿಯೆ ತನ್ನದೊಂದು ದೋ।
ರ್ಬಲದೊಳೆ ಕೇತಮಲ್ಲ ಸುರಲೋಕಮನೆಯ್ದಿದನಾಜಿರಂಗದೊಳ್ ॥ 1454 ॥

ಸುರದುಂದುಮೆಯೆಸೆಯುತ್ತಿರೆ। ಸುರಕನ್ಯೆಯರೊಲ್ದು ಚಾಮರಂಗಳನಿಕ್ಕಲ್।
ಕರಮೆಸೆವ ಸುರವಿಮಾನದೊ। ಳಿರಲುಯ್ದರ್ ಕೇತಮಲ್ಲನಾಯಕನಸುವಂ ॥ 1455 ॥

## 262 ಶ್ರವಣಬೆಳ್ಗೊಳ 314 [ಸು. 1200]

ಇದರಲ್ಲಿ ಜಿನವರ್ಮನು ಕಂಖರಿವಾದ್ಯದಲ್ಲಿ ಚತುರನೆಂದು ಸೂಚಿಸಿದೆ.

ಜಿನವರ್ಮನ ಕಂಖರಿಯು। ಧ್ವನಿ ಕಿವಿವುಗೆ ದುರ್ಜನಂಗೆ ಭಯಮುಂ ಸುಜನಂ।
ಗನುರಾಗಮುಮುದಯಿಸುಗುಂ। ಘನನಾದದಿನೆಂತು ಹಂಸೆಗಂ ನವಿಲಿಂಗಂ ॥ 1456 ॥

## 263 ಅರಸಿಯಕೆರೆ 130 [ಸು. 1200]

ಇದರಲ್ಲಿ ರೇವಣನು ತಳಿರೂರಗ್ರಹಾರದಲ್ಲಿ ವಿಷ್ಣುದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.

ರೇವಣ

ಪರಹಿತದೊಳ್ ಚಲಮಂತಾ। ಸುರಗೃಹಮಂ ಮಾಡಿ ಕೀರ್ತಿವಡೆಯಲ್ ಚಲಮು।
ರ್ವರೆಯೊಳ್ ಬುಧರಂ ದ್ವಿಜರಂ। ಪೊರೆವೆಡೆಯೊಳ್ ರೇವಣಂಗೆ ಚಲಮೆಸೆದಿರ್ಕುಂ
॥ 1457 ॥

ವನನಿಧಿಪರಿವೃತವಿಶ್ವಾ। ವನಿತಳದೊಳಗಿದು ವಿಚಿತ್ರಮೆಂಬಂದದೆ ಸ।
ಜ್ಜನವಿನುತರೇವಣಾರ್ಯ್ಯಂ। ಮನುಚರಿತಂ ವಿಷ್ಣುಭವನಮಂ ಮಾಡಿಸಿದಂ ॥ 1458 ॥

## 264 ಬೇಲೂರು 361 (ಅನುಬಂಧ) [ಸು. 1200]

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಜ್ಞಾನುಸಾರವಾಗಿ ಅರಹಲ್ಲ, ಮದ್ದ ಎಂಬ ಸಹೋದರರು ಹಾನಿಯ ಕೋಟೆಯ ಯುದ್ಧದಲ್ಲಿ ಕಾದಿ ಮಡಿದರೆಂದು ಹೇಳಿದೆ.

ತೊಡೆ ಕಡಿವೋಗೆ ಕತ್ತು ಬಿಡೆ ಕಿಬ್ಬರಿಯಿಬ್ಬಗಿಯಾಗೆ ಪೇರುರಂ।
ಪಡಿದೆಱೆದಂತೆ ಬಾಯ್ದೆಱೆಯೆ ನೆತ್ತರ ಸುಟ್ಟುಱೆ ಮಂದಮುಪ್ಪಿನಂ ॥
ಕಡಿತಲೆಯಿಂ ಸಿಡಿಲ್ ಪೊಡೆವವೋಲ್ ಪೊಡೆದಿಕ್ಕಿದರಾಂತ ಬೀರರಂ ।
ತೊಡರ್ದರಹಲ್ಲನಾಯಕನುಮಾತನ ತಮ್ಮನೆನಿಪ್ಪ ಮದ್ದನುಂ ॥ 1459 ॥

ಹಾನಿಯ ಕೋಟೆಯು ಬವರದೊ। ಳೇನುಂ ಸೆರಗಿಲ್ಲದಿಱಿದು ಮದ್ದಂ ದಿವಿಜಾ।
ಸ್ಥಾನಕ್ಕೆ ಪೋಗೆ ಪಗೆಯುಂ। ತಾನುಂ ತಳ್ತಿಱಿದು ಪೋದನೆಸೆವರಹಲ್ಲಂ ॥ 1460 ॥

ಪೆಣದ ಬಣಂಬೆ ನೆತ್ತರ ಕಡಲ್ ಕಿಱುಗಂಡದರಾಸಿ ಸುತ್ತಲುಂ।
ಕಣಕೆನೆ...ದ ಪಂದಲೆಯು... ಮರುಳ್ ಪಱೆಗುಟ್ಟೆ ಕಂಡದಿಂ॥
ಕುಣಿವರಿವೀರರಟ್ಟೆ ಕರಮದ್ಭುತಮಾಗಿರೆ ಯೋಗಿನೀ ಗಣ।
ಕ್ಕುಣಿಸಿನ ತಾಣಮಾದುದರಹಲ್ಲನ ಮದ್ದನ ಗೆಲ್ದ ಕೊಳ್ಗುಳಂ ॥ 1461 ॥

## 265 ಅರಸಿಯಕೆರೆ 216 (ಅನುಬಂಧ), [ಸು. 1200]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಎರಹಿಸೆಟ್ಟಿ ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

## ವಿಷ್ಣುವರ್ಧನ

ಪರ ಮಂಡಳದಿಂ ರಕ್ಷಿಸಿ। ಪರಿವಾರಮನಾತ್ಮ ಧಾತ್ರಿಯಂ ಭೂಸುರರ್ಗಂ॥
ಸುರ ಪೂಜೆಗಮಿತ್ತನದಾರ್। ದೊರೆ ವಿಷ್ಣು ನೃಪಂಗೆ ಬಳದೊಳಂ ದಾನದೊಳಂ ॥1462॥

## ಬಲ್ಲಾಳ II

ಕರಿಗಳ್ ಪಣ್ಣಿದ ಪೊನ್ನ ಪಣ್ಣುಗೆಯವೊಂದೇಟಿಂಟು ನೂಱಿಟ್ಟಿ ಪೆ।
ರ್ದೆರೆಗಳ್ ಮೆಯ್ವುಡೆದಂದದಿಂ ಕವಿವ ಜಾತ್ಯಶ್ವಂಗಳೇಟಿಂಟು ಸಾ॥
ಯಿರಮಸ್ತ್ರದ್ಯುತಿ ತಳ್ತ ಪಾಯ ದಳವೊಂದೇಟಿಂಟು ಲಕ್ಕಂ ತೆರ।
ಳ್ತರೇ ಹುಃ ಸೇವುಣರಂ ಪಡಲ್ವಡಿಸನೇ ಬಲ್ಲಾಳನೊಂದಾನೆಯಿಂ ॥ 1463 ॥

ಅರಸುಗಳೆಂಬವರ್ ಬವರದೊಳ್ ಸೆರಗಿಂ ಪೆಱಗಿರ್ಪ ಬುದ್ಧಿಯಿಂ।
ದರ ನೆಲೆಯೆಂದು ಮಾಡಿ ಪೆಱರಂ ಪೆಱರಿಂದಮೆ ಗೆಲ್ವರಲ್ಲದಿಂ ॥
ತಿರೆ ಪೆಱಗಾಗೆ ತನ್ನ ಬಲಮನ್ಯ ಬಲಂ ಬೆಱಗಾಗಲೊಂದೆ ಸಿಂ ।
ಧುರದೊಳೆ ಗೆಲ್ವರೇ ಪಗೆಯನಾರ್ ಸಮನಿಂತಸಹಾಯಶೂರನೊಳ್ ॥ 1464 ॥

## ಶಿವಶಕ್ತಿ

ಕುಮತಮನೊಳ್ಪುವೆತ್ತ ನುಡಿಯಿಂ ಸೆಱೆ ಭಂಗಿಸಿ ಪೆಂಪುವೆತ್ತ ಶೈ।
ವಮನಿಳೆಯೊಳ್ ಪ್ರತಿಷ್ಠಿಸಿ ಪರಾಕ್ರಮದಿಂದಮಿದಿರ್ಚೆ ತನ್ನ ವಿ ॥
ಕ್ರಮದೊಳದಿರ್ಪ ತಾನೆ ಪಡೆದಂ ಸಮಯ ಪ್ರತಿಪಾಳಕ ಪ್ರಭು।
ತ್ವಮನೆಲೆ ಪಾಟಿಯಾರೊ ಶಿವಶಕ್ತಿಯೊಳೀ ಮಹದೇವ ಜೀಯನೊಳ್ ॥ 1465 ॥

## ಚಂದ್ರ ಭೂಷಣ

ಪ್ರತಿಮಾ ಲಕ್ಷಣ ಯುಕ್ತನೆಂದು ವಿದಿತ ಪ್ರಾಸಾದ ಸಲ್ಲಕ್ಷಣಾ।
ನ್ವಿತನೆಂದೀಶ ಪದಾರ್ಚನಾ ವಿಧಿ ವಿಧಾನ ಪ್ರೌಢನೆಂದನ್ಯ ದು॥
ರ್ಮತ ನಿರ್ಮೂಳಕನೆಂದು ಧಾತ್ರಿ ಪೊಗಟ್ಟುಂ ಕಾಳಾಮುಖಸ್ವಾಸಕ್ತೋ।
ದ್ಯತನಂ ಸದ್ಗುಣ ಚಂದ್ರ ಭೂಷಣನನುದ್ಯದ್ದಾನಿಯಂ ಮಾನಿಯಂ ॥ 1466 ॥

## ರಾಜವೂರ್

ಮದನಂಗೆ ರಾಜವೂರ್ ಸುಖ। ಸದನಂ ಬೆಳೆದಿರ್ಪ ಕಟಮೆಯಿಂ ಕೆಯ್ವೊಲದಿಂ॥
ಪುದಿದೊದವಿದ ಬನದಿಂ ತುಂ। ಬಿದ ಕೆಱೆಯಿಂ ಫಳಿತಮಾದ ತೆಂಗಿಂ ಕೌಂಗಿಂ ॥ 1467 ॥

**266 ಬೇಲೂರು 140 [1200]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬೆಸಕನ ಮಾರವ್ವೆ ಶಾಂತಲೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ಎಱಗದವಂದಿರ ತಲೆಗಳ। ನೆಱಗಿಪನೆಱಗಿಪನರಾತಿಲಕ್ಷ್ಮಿಯನಿದಿರಿಂ।
ಗೆಱಗದ ಬಲ್ಪಿಂದಂ ತನ। ಗೆಱಗಿಪನೆಱೆಯಂಗನತುಳವಿಜಯಶ್ರೀಯಂ ॥ 1468 ॥

ವಿಷ್ಣುವರ್ಧನ

ಅವರೊಳ್ ಮಧ್ಯಮನಾಗಿಯುಂ ಧರಣಿಯಂ ಪೂರ್ವಾಪರಾಂಭೋಧಿಯೆ।
ಯ್ದುವಿನಂ ಕೂಡೆ ನಿಮಿರ್ಚುವೊಂದು ನಿಜನಿಷ್ಪ್ರತ್ಯೂಹವಿಕ್ರಾಂತದು ॥
ದ್ಭವದಿಂದುತ್ತಮನಾದನುತ್ತಮಗುಣಭ್ರಾಜಿಷ್ಣು ಲಕ್ಷ್ಮೀವಧೂ।
ಧವನುದ್ವೃತ್ತವಿರೋಧಿದೈತ್ಯಮಥನಂ ಶ್ರೀವಿಷ್ಣುಭೂಪಾಳಕಂ ॥ 1469 ॥

**267 ಕಡೂರು 36 [1203]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ದಂಡನಾಯಕ ಅಮೃತಯ್ಯನು ಜಿನಾಲಯವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ಜಯಜಾಯಾಪ್ರಿಯವಲ್ಲಭಂ ಸಕಳಭೂಭೃನ್ಮಸ್ತಕನ್ಯಸ್ತಪಾ ।
ದಯುಗಂ ದೋರ್ಬಲದೃಪ್ತನಪ್ರತಿಮನತ್ಯೌದಾರ್ಯನತ್ಯೂರ್ಜಿತೋ ॥
ದಯನತ್ಯದ್ಭುತವಿಕ್ರಮಂ ರಿಪುಬಳಪ್ರಧ್ವಂಸನಿಶ್ಶೇಷನಿ ।
ರ್ದಯನಿಸ್ತ್ರಿಂಶನಿರರ್ಗಳಂ ನಿಯಮದಿಂ ಬಲ್ಲಾಳಭೂಪಾಳಕಂ ॥ 1470 ॥

ಕಾಳೆಗದೊಳ್ ನಿಶಾತಕರವಾಳಹತಕ್ಕೆ ಹತಪ್ರಭರ್ ಮಹೀ।
ಪಾಳಕರೋಡಿ ಪೊಕ್ಕು ಗಹನಾಂತರದೊಳ್ ಕ್ಷುಧೆಯಳ್ವೆ ವನ್ಯಭೂ॥
ಜಾಳದೊಳಿರ್ದ ಹಣ್ಗಳನೆ ಹಣ್ಣೆನಲಮ್ಮದೆ ಕಾಯಿ ಕಾಯಿ ಬ ।
ಲ್ಲಾಳನೃಪಾಳ ಎಂಬಿದನೆ ಪಂಬಲಿಸಿರ್ದರರದೇಂ ಪ್ರತಾಪಿಯೋ ॥ 1471 ॥

ಚಟ್ಟ

ಮಾರಿಟ್ಟಂಬರಮಂ ಸುರಾಚಲಮನೊರ್ಕೈಸಿಟ್ಟು ದಿಂಕಿಟ್ಟು ತ।
ತ್ಪಾರಾವಾರಮನಂತುಮಿಂತುಮಳೆದುಂ ಮುಂ ತೂಗಿಯುಂ ಪೋಗಿಯುಂ॥
ಪಾರಂಗಂಡವರುಂಟು ಪೋಲಿಪೊಡೆ ಪೆಂಪಿಂ ಬಿಣ್ಪಿನಿಂ ಗುಣ್ಪಿನಿಂ।
ದಾರುಂ ಪೋಲಿಪರುಂಟೆ ವೈರಿಪೃತನಾಸಂಘಟ್ಟನಂ ಚಟ್ಟನಂ ॥ 1472 ॥

ಬಂದೆರೆದಂಗೆ ಕೊಟ್ಟು ಸಲೆ ವೈರಿಗೆ ಬೆಂಗುಡನೆಂದುಮೆಂಬಿದಾ।
ವಂದಮೊ ತನ್ನೊಳಿಲ್ಲ ಭಯಮಾಭಯಮಂ ಪಗೆಗೀವನುಂತೆ ಚಿ॥
ತ್ರಂ ದಲೆನುತ್ತೆ ಮತ್ತೆ ಪೊಗಟ್ಟುಂ ವಸುಧಾತಳಮಟ್ಟಿಜಿಂದೆ ನಿ।
ರ್ಗುಂದದ ಚಟ್ಟನಂ ರಿಪುಘರಟ್ಟನನಿಂದುಲಲಾಟಪಟ್ಟನಂ ॥ 1473 ॥

ಅಮೃತ

ಗುಣಿ ಗಂಭೀರಂ ಪ್ರಸಿದ್ಧಂ ಪತಿಹಿತನದಟಂ ಧಾರ್ಮ್ಮಿಕಂ ಗೋತ್ರಚಿಂತಾ।
ಮಣಿ ಧೀರಂ ದಾನಿ ದಕ್ಷಂ ಪಟು ಶುಭಮತಿ ಪುಣ್ಯಾಧಿಕಂ ಮಂತ್ರಿಚೂಡಾ ॥
ಮಣಿ ಸೇವ್ಯಂ ಸೌಮ್ಯರಮ್ಯಾಕೃತಿ ಕಲಿ ಕುಲಜಂ ಸಚ್ಚರಿತ್ರಂ ಸಭಾಭೂ।
ಷಣರತ್ನಂ ಸತ್ಯಭಾಷಾನಮಿತನಮಿತದಂಡಾಧಿಪಂ ಕೀರ್ತಿವೆತ್ತಂ ॥ 1474 ॥

ಅಮುಮ ಜಗಕ್ಕೆ ತನ್ನ ನುಡಿಯೊಂದಮೃತಂ ನಗೆವೆತ್ತ ನೋಟಮೊಂ।
ದಮೃತಮುದಾರಮೊಂದಮೃತಮಾದರಮೊಂದಮೃತಂ ವಿವೇಕಮೊಂ॥
ದಮೃತಮೆನಲ್ಕೆ ಹೊಯ್ಸಳನೃಪಾಳನ ರಾಜಿತರಾಜ್ಯದಲ್ಲಿಯೊಂ।
ದಮೃತಮೆನಿಪ್ಪ ಮಂತ್ರಿಯಮೃತಂಗಮೃತಂ ಸಮನಾಗಲಾರ್ಪುದೇ ॥ 1475 ॥

**268 ಶಿಕಾರಿಪುರ 225 [1203]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಅಧಿಕಾರಿ ಮಲ್ಲಿಸೆಟ್ಟಿ ಮುಂತಾದವರು ಬಂದಣಿಕೆಯ ಶಾಂತಿನಾಥದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾಗರಖಂಡ

ಧರಣೀಕಾಂತೆಯ ಮುಖದಂ। ತಿರೆ ಬನವಾಸೆನಾಡು ರಂಜಿಸುವುದದ ಜಿೊಳ್ ನಾ।
ಗರಖಂಡಂ ತಿಲಕದವೊಲ್। ಪರಿಶೋಭಿಪುದಾವಕಾಲಮುಂ ಸಿರಿಯೊದವಿಂ ॥1476॥

ಊರೂರ್ ನಂದನದಿಂ ಲತಾಭವನದಿಂದೂರೂರ್ ತಟಾಕಂಗಳಿಂ।
ದೂರೂರ್ ತಳ್ತೆಲೆವಳ್ಳಿಯಿಂ ಕೊಳಗಳಿಂದೂರೂರ್ ಫಲೋರ್ವ್ವೀಜದಿಂ॥
ದೂರೂರ್ ಕರ್ಬಿನ ತೋಂಟದಿಂ ಕಟಿವೆಯಿಂದೂರೂರ್ ಪ್ರಜಾವ್ರಾತದಿಂ।
ದೂರೂರ್ ದೇವಗೃಹಂಗಳಿಂ ವಿಬುಧರಿಂದೂರೂರ್ ಕರಂ ರಂಜಿಕುಂ ॥ 1477 ॥

ಬಾಂಧವನಗರ (ಬಂದಣಿಕೆ)

ಪರಲೊಳ್ ಪರುಸಂ ಧೇನೂ। ತ್ಕರದೊಳ್ ಸುರಧೇನು ನಂದನದೊಳಮರಕುಜಂ।
ಕರಮೆಸೆವಂತಿರೆ ಸಲೆ ನಾ। ಗರಖಂಡದೊಳೆಸೆವುದೆಸೆವ ಬಾಂಧವನಗರಂ ॥ 1478 ॥

ಅದು ಬಳಸಿರ್ದ ನಂದನದಿನಂಬುಜಷಂಡದಿನೊಳ್ಗ ವುಂಗಿನಿಂ।
ಪ್ರದಿದೆಲೆವಳ್ಳಿಯಿಂ ಬೆಳೆದ ಶಾಳಿಯಿನೊಪ್ಪುವ ಕೋಂಟೆಯಿಂ ಸಮಂ।
ತೊದವಿದ ಲಕ್ಷ್ಮಿಯಿಂ ವಿಭವದಿಂ ವಿಳಸಜ್ಜನದಿಂ ಸುದೇವಗೇ।
ಹದ ಕಡುಚೆಲ್ವಿನಿಂದಮಳಕಾಪುರಮಂ ನಗುತಿರ್ಪುದೊರ್ಮೆಯುಂ ॥ 1479 ॥

## ಮುದ್ದಸಾಮಂತ

ಕವಿಗಳ ಮುದ್ದನಾಶ್ರಿತರ ಮುದ್ದನನಾಥರ ಮುದ್ದನಿಷ್ಟರ।
ಪ್ಪವರ್ಗಳ ಮುದ್ದನರ್ಥಿಗಳ ಮುದ್ದನೆಡರ್ ನೆಲೆಗೊಂಡ ಶಿಷ್ಟಬಾಂ॥
ಧವರೆಸೆವೊಂದು ಮುದ್ದನೆನಸುಂ ಪರಿವಾರದ ಮುದ್ದನಂಗನಾ।
ನಿವಹದ ಮುದ್ದನೆಯ್ದೆ ಸಲಿಪಂ ಪ್ರಭುಮುದ್ದನಿಳಾತಳಾಗ್ರದೊಳ್ ॥ 1480 ॥

## ಸೋಮುಗವುಂಡ

ಜಲದ ನೆಲೆ ಚಾಗದಾಗರ। ಮಲಘುಗುಣಂಗಳ ನಿಧಾನಮಜಿಶದ ತವರು।
ಜ್ವಲಕೀರ್ತಿಯ ಕರುವೆನಿಪಂ। ಸಲೆ ಹಲರಿಂದಬ್ಬಲೂರ ಸೋಮುಗವುಂಡಂ ॥ 1481 ॥

## ಶುಭಚಂದ್ರ

ಮಳಿನತೆಯಿಲ್ಲದ ಕುಂದಂ। ತಳೆಯದೆ ಸಲೆ ರಾಹುಪೀಡೆಯೆಯ್ದದ ದೋಷಾ।
ವಳಿಯೊಳ್ ಚರಿಯಿಸದಸ್ತಾ। ಚಳಕೆಳಸದ ಚಂದ್ರನೆನಿಸುವಂ ಶುಭಚಂದ್ರಂ ॥ 1482 ॥

## ಮಲ್ಲದಂಡಾಧಿಪ

ಕಡಿವಂ ಮಾಜಾಂತರಂ ಬೇಗದೆ ಕರಗಿಸುವಂ ಶತ್ರುಸೈನ್ಯಂಗಳಂ ಸಂ।
ಗಡಕೆಲ್ಲಂ ಧೈರ್ಯವರ್ಣಕ್ರಮಮನೆಸೆಯೆ ತಾಂ ತೋಱುವಂ ಕೀರ್ತಿಯಚ್ಚಂ॥
ಕಡುಚೆಲ್ವಪ್ಪಂತಿರಚ್ಚೊತ್ತುವನಖಿಳದಿಶಾದಂತಿದಂತಂಗಳೊಳ್ ನೋ।
ಟಿಪ್ಪೊಡೆ ಸಂತಂ ಕಮ್ಮಟಕ್ಕಂತೊಡೆಯನೆನಿಸುವಂ ಮಲ್ಲದಂಡಾಧಿನಾಥಂ ॥ 1483 ॥

## ಸೂರ್ಯಚಮೂಪ

ಆಳಱಿ ವಿರೋಧಿಸಂತಮಸಮಳ್ಕಿರೆಯಾಟವಿಕೋದ್ಧ ಕೈರವಂ।
ಸಲೆ ಪೊದಟ್ಟಿಯ್ದೆ ಸಜ್ಜನಬಿಸಂ ಪ್ರವಿಕಾಸಮನೆಯ್ದೆ ರಾಗಮ॥
ಗ್ಗಳಿಸಿರೆ ಮಿತ್ರಚಕ್ರಚಯದೊಳ್ ಬೆಳಪಂ ನುತವಿಶ್ವಧಾತ್ರಿಯಂ।
ಸುಲಲಿತಮೂರ್ತಿ ಕೀರ್ತಿನಿಧಿ ಸೂರ್ಯಚಮೂಪತಿ ಸೂರ್ಯನಂದದಿಂ ॥ 1484 ॥

## 269 ಹೊನ್ನಾಳಿ 7 [1204]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ಬೂವನು ಕುರುವದ ರಾಮನಾಥ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬೂವ

ಅದಟಿಂದಾಂತ ಪದಾತಿಯೆಂಬ ಮಲೆಯೊಳ್ ಕ್ರೂರಾರಿಯೆಂಬುದ್ಧತೋ।
ನ್ಮದದಂತಿವ್ರಜಂ ನಿಜೋನ್ನತಚಲತ್ತೀವ್ರಾಸಿಯೆಂಬಂಕುಶ॥
ಕ್ಕೆ ದಿಟಂ ತಾಂ ಬಸಮಾಗಿಸಿಂತು ಜಯಮೆಂಬಾಲಾನದೊಳ್ ಕಟ್ಟುವಂ।
ಪದುಳಂ ತಾನೆನಲಾಂಪರಾರ್ ಸಮರದೊಳ್ ಸಾಮಂತಬೂವಾಂಕನೊಳ್ ॥ 1485 ॥

ಬೋವಿಸೆಟ್ಟಿ

ಶುಭಚರಿತಂ ಪರಾರ್ಥನಿಧಿ ಸತ್ಯಗುಣಾನ್ವಿತನಿಕ್ಷುಚಾಪಸ।
ನ್ನಿಭನಭಿಮಾನಮೂರ್ತಿ ವಿನಯಾಭರಣಂ ರಣಧೀರನುನ್ನತಂ॥
ಸುಭಗನನೂನದಾನನಿಧಿ ತಾನೆನೆ ಸಂದ ನೆಗಟ್ತೆವೆತ್ತ ನಾ।
ಟ್ಟಭುತೆಯ ಬೋವಿಸೆಟ್ಟಿಯೆಸೆದಂ ನಿಸದಂ ವಸುಧಾತಳಾಗ್ರದೊಳ್ ॥ 1486 ॥

## 270 ತರೀಕೆರೆ 42 [1205]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ನಾಗಗಾವುಂಡನು ಅಮ್ರುತೇಶ್ವರ ದೇವರಿಗೆ ಗ್ರಾಮವನ್ನು ಬಿಟ್ಟನೆಂದು ಹೇಳಿದೆ.

ಹೊಯ್ಸಳರ ಧ್ವಜ

ಅಲಗಿಂ ಸಿಂಗಮನಿಱಿದನ। ಕಲಿತನಮಂ ನಗುವ ತೆಱದೆ ಮೆಱೆವುದು ಸೆಳೆಯಿಂ।
ಪುಲಿವೊಯ್ದ ಕುಱುಪು ಪೊಯ್ಸಳ। ಕುಲತಿಲಕನ ಮತ್ತಗಜದ ಟಕೆಯದೊಳೀಗಳ್
॥ 1487 ॥

ವಿನಯಾದಿತ್ಯ

ಅನಿತೊಂದುನ್ನತಿವೆತ್ತ ಪೊಯ್ಸಳಕುಳಂ ಪೂರ್ವಾದ್ರಿಯಂ ಪೋಲ್ವಿನಂ।
ವಿನಯಾದಿತ್ಯನೃಪಾಲನುದ್ಭವಿಸಿದಂ ಭೂಲೋಕದಾದಿತ್ಯನೆಂ॥
ಬಿನೆಗಂ ಕಟ್ಟಿಲೆ ಕೂಡೆ ಕಣ್ಗೆ ಕವಿದತ್ತನ್ಯಾವನೀಶರ್ಗೆ ತೊ।
ಟ್ಟೆನೆ ಕೆಯ್ಕೊಂಡುದಲರ್ಕೆಯಂ ಕುವಳಯಂ ಮತ್ತಾತನಿಂ ಕೌತುಕಂ ॥ 1488 ॥

### ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ

ಕೆಳೆ ನಡೆಯಿಂ ಕಳಹಂಸೆಗೆ। ಕೆಳೆ ನುಡಿಯಿಂ ಕೋಕಿಳಕ್ಕ ಸೋಗೆಗೆ ಮುಡಿಯಿಂ।
ಕೆಳೆ ಕೆಳೆಯಬ್ಬರಸಿಯೆ ತ। ತ್ಕುಳವಧುವಾದಳ್ ತದೀಯಸುತನೆಱೆಯಂಗಂ ॥ 1489 ॥

### ಎರೆಯಂಗ

ಚಲದೆಱೆಯಂಗೆ ಚಾಗದೆಱೆಯಂಗೆ ಜಸಕ್ಕೆಱೆಯಂಗೆ ಮಿಕ್ಕ ದೋ।
ರ್ವಲದೆಱೆಯಂಗೆ ವೀರದೆಱೆಯಂಗೆ ಕುಲೋನ್ನತಿ ತನ್ನೊಳೊಪ್ಪುವೇ॥
ಚಲೆಯೆಱೆಯಂಗೆ ಕೀರ್ತಿಯೆಱೆಯಂಗೆಱೆಯಂಗನೃಪಂಗೆ ನಂದನಂ।
ಜಲಧಿಪರೀತಭೂವಲಯವರ್ಧನನಂಕದ ವಿಷ್ಣುವರ್ಧನಂ ॥ 1490 ॥

### ವಿಷ್ಣುವರ್ಧನ

ಬಿಟ್ಟಿಗನಾಹವಾಂಗಣಕೆ ಜಟ್ಟಿಗನೆತ್ತಿದೊಡತ್ತ ಕಾಂಚಿ ಬೆಂ।
ಗೊಟ್ಟುದು ಕೊಂಗು ಕೂಡೆ ನೆಲೆವಿಟ್ಟುದು ಮಿಕ್ಕ ವಿರಾಟಕೋಟೆ ಕೂ॥
ಗಿಟ್ಟುದು ಕೋಯತೂರ್ ಕೆದಱಿ ಕೆಟ್ಟುದು ರೂಢಿಯ ಚಕ್ರಗೊಟ್ಟಮಿಂ।
ಬಿಟ್ಟುದು ಕೆಯ್ದುವಿಕ್ಕಿ ಕಡಲೊಳ್ ಪಡಲಿಟ್ಟುದು ಸಪ್ತಕೊಂಕಣಂ ॥ 1491 ॥

### ನಾರಸಿಂಹ I

ನರಸಿಂಹಂ ನರಸಿಂಹನಂತೆ ಮುನಿಸಿಂ ಮಾಱಾಂತ ವೀರಾರಿಭೂ।
ಪರನಣ್ಮುಟ್ಟಿನೊಳಿಂತು ಕಂಡೊಡೆ ಬಱಿಕ್ಕಮ್ಮಮ್ಮ ಪೋಟ್ಡಿಕ್ಕಿ ಪೇ॥
ರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ ಬ।
ಲ್ಗರುಳಂ ಕೋದೆಟಲಿಕ್ಕಿ ಬೀರಸಿರಿಗೆತ್ತಂ ತೋರಣಂಗಟ್ಟನೇ ॥ 1492 ॥

### ಬಲ್ಲಾಳ II

ಶುಂಡಾಳಂ ಮದಮುಳ್ಳ ಚೋಳನಳವಿಂದಾಸಿಂಹಳಂ ಸಿಂಹಮು।
ದ್ದಂಡಂ ಸೇವುಣನಾವಗಂ ಶರಭಮಿಂತೀಮೂವರಂ ರಾಯರಂ॥
ತುಂಡಂ ಮುಂಡಾದೊಳಾಟಿ ಪೊಯ್ಯುದಿರನಾನೇಂಪೇಟ್ದಿಪೆಂ ರಾಯಭೇ।
ರುಂಡಂ ರಾಯರ ಚಕ್ರವರ್ತಿ ರಣದೊಳ್ ಬಲ್ಲಾಳಭೂಪಾಳಕಂ ॥ 1493 ॥

ಉರಿಯೆಂತಂತಟ್ಟೆಯುಂ ಸುಟ್ಟುರಿಸಿ ನೆಗೆಯೆ ನೆತ್ತರ್ ಮಹೀಚಕ್ರದೊಳ್ ಕ।
ಗ್ಗರಿಕೆಂತಂತೆತ್ತಲುಂ ಪಂದಲೆ ಪಡಲಿಡೆ ಧಂಧಂಧಗಿಲ್ ಭುಘರ್ಭುಗಿಲ್ ಘಂ॥
ಘರಿಲೆಂದೇನಳ್ಳಿತೋ ಸೇವುಣಬಳವನಮುಂ ವೀರಬಲ್ಲಾಳಕೋಪೋ।
ದ್ಧುರದಾವೋಗ್ರಾನಳಂ ಶಾತ್ರವನೃಪತಿಮೃಗವ್ರಾತಮಟ್ಟಾಡುವನ್ನಂ ॥ 1494 ॥

ನಾಗ

ಅರಿಸಾಮಂತಕುಳಾಕುಳಾಚಳದಳದ್ದಂಭೋಳಿ ದಂಭೋಳಿನಿ।
ಷ್ಠುರಸಾಮಂತಗಜೇಂದ್ರಯೂಥವಿದಳನ್ನಾಗಾರಿ ನಾಗಾರಿಭೀ॥
ಕರಸಾಮಂತನಿಕಾಯದೈತ್ಯಬಳವತ್ಕಂಸಾರಿ ಕಂಸಾರಿಸಂ।
ಗರರಂಗಕ್ಕಹಿವೈರಿವೈರಿಯೆನಿಪಂ ಸಾಮಂತನಾಗಾರ್ಜುನಂ ॥ 1495 ॥

ನಾಗನ ಮಗ ಕೇತ

ಛಟಛಟ ಛಟ್ಟಟಚ್ಛಟ ಎನಲ್ ಮುಱಿದತ್ತಿದಿರಾಂತ ಬೀರರಂ।
ಘಟಿಘಟಿ ತಾಗೆ ನುರ್ಗಿದುದು ಕೋಟಿಲುಗಳ್ ನೆಳಿಲುಂ ನೆಡಿಲ್ಲೆನಲ್॥
ಭಟರನನೇಕರಂ ಭರದೆ ಸೀಳ್ದುದು ಸಜ್ಜಿನೆ ಸಜ್ಜಿನಲ್ ಮದೋ।
ತ್ಕಟಮಿದೆ ಕೇತನೆಂಬ ಕಲಿನಾಗಗವುಂಡನ ಗಂಧವಾರಣಂ ॥ 1496 ॥

ಧರಣೀದರ್ಪಿಷ್ಠ ಸಾಮಂತಕರುರದಲಗುದ್ದಂಡವಿದ್ವಿಷ್ಟಸಾಮಂ।
ತರ ಸೇನಾವಾರ್ಧಿಯಂ ಗೋಳಿಡೆ ಕದಡುವ ಮಂಥಾಚಲಂ ಧೂರ್ತಸಾಮಂ॥
ತರ ಬೇರಂ ಕಿಟ್ಟು ವಾರಾಶಿಯೊಳಲೆವಸುರಂ ಮಚ್ಚರಂದೋರ್ಪ ಸಾಮಂ।
ತರನಾಟಂದೊತ್ತಿ ಗೋಣಂ ನುಲಿದು ಬಿದಿರ್ವ ಮಾಕಾಳಿ ಸಾಮಂತಕೇತಂ ॥ 1497 ॥

## 271 ಶಿಕಾರಿಪುರ 317 [ಸು. 1205]

ಇದರಲ್ಲಿ ಏಚಣನು ಗೊಗ್ಗವೆಂಬ ಗ್ರಾಮದಲ್ಲಿ ಒಂದು ಜಿನಾಲಯವನ್ನು ಎತ್ತಿಸಿದನೆಂದು ಹೇಳಿದೆ.

ಏಚಣ

ಊರೊಳ್ ತಪ್ಪದೆ ಬಸದಿಯು। ನೋರಂತಿರೆ ಮಾಡಿ ಬೆಳಗವತ್ತಿಯ ನಾಡಂ।
ಧಾರಿಣಿಗೆ ನೆಗಟ್ದ ಕೊಪಣ। ಕ್ಕೋರಗೆಮಾಡಿದನುದಾರನಿಧಿಯೇಚರಸಂ ॥ 1498 ॥

ಏಚಣನ ಹೆಂಡತಿ ಸೋವಲದೇವಿ

ಎಱಿಯನ ದೈವಮಾವುದದು ತನ್ನಯ ದೈವಮುದಾವುದಾತನೊಳ್।
ನೆಱಿದ ಗುಣೋನ್ನತಿಕ್ಕೆಯದು ತನ್ನಯ ಮಿಕ್ಕ ಗುಣೋನ್ನತಿಕ್ಕೆ ಕ॥
ಣ್ದೆಱಿದುದದಾವ ಧರ್ಮಮಧಿನಾಥನೊಳಂತದೆ ತನ್ನ ಧರ್ಮಮೆಂ।
ದೆಱಿಕದೆ ಮಂತ್ರಿಯೇಚಣನ ವಲ್ಲಭೆ ಸೋವಲದೇವಿ ಭಾವಿಪಳ್ ॥ 1499॥

ನಗೆ ನಗೆವೊಗಮಂಬುಜಮಂ। ಮಿಗೆ ಮೃಗವೀಕ್ಷಣಮನೀಕ್ಷಣಂ ಮೃಗಧರನಂ।
ತೆಗಟಿ ಮುಖಕಾಂತಿ ಚೆಲ್ವಂ। ತ್ರಿಗುಣಿಸಿದುದು ನಿನ್ನ ರೂಪು ಸೋವಲದೇವೀ ॥1500॥

## 272 ಅನುರಾವತಿ ಶಾಸನ [1206]

(ದಕ್ಷಿಣ ಇಂಡಿಯಾ ಶಾಸನಗಳು, IV, ಸಂಖ್ಯೆ 558)

ಇದರಲ್ಲಿ ಹೊಯ್ಸಳರಾಜನಾದ 3ನೆಯ ಬಲ್ಲಾಳನ ಸೇನಾಧಿಪ ದಾಮುದಂಡನಾಯಕನು ಹೆಂಜೇರ ನೊಣಂಬೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ದಾಮುದಂಡನಾಯಕನ ವಂಶಾವಳಿ

ಕರಮೊಪ್ಪಿರ್ಪುದು ಧಾತ್ರಿಯೊಳ್ ಕರಡಿಕಲ್ ನಾಡಂತದರ್ಕಾಸ್ಯದಂ।
ತಿರೆ ಶೋಭಿಪ್ಪುದು ನಂದವಾಡಿಗೆಯೆನಿಪ್ಪೊಂದಗ್ರಹಾರಂ ಧರಾ।
ಮರ ಮುಖ್ಯಂ ನರಸಿಂಹದೇವ ಘಳಿಸಂ ತಾನಲ್ಲಿ ಪೆಂಪುಳ್ಳನಾ।
ಪುರುಷಂಗಾದ ತನೂಭವಂ ಬಹುಕಳಾ ಲಕ್ಷ್ಮೀಧರಂ ಶ್ರೀಧರಂ ॥ 1501 ॥

ನೆಗಟ್ದಾ ಶ್ರೀಧರದೇವನೆಂಬಧಿಕ ಪುಣ್ಯಂಗಾದ ಪುತ್ರಂ ಸಮು।
ಸ್ತ ಗುಣವ್ರಾತ ಸಮೇತನಪ್ಪ ಮಹದೇವಂ ತನ್ಮಹಾದೇವ ಮಂ॥
ತ್ರಿಗೆ ಕಂಜೋದರ ಮೂರ್ತಿಯಪ್ಪ ಮಗನಾದಂ ಮಲ್ಲಿದೇವಂ ಬಟಿ।
ಕ್ಕೊಗೆದಂ ಮಲ್ಲರಸಂಗೆ ಬೆಟ್ಟರಸನೆಂಬೀ ನಂದನಂ ನಲ್ಮೆಯಿಂ ॥ 1502 ॥

ಬೆಟ್ಟರಸನ ಮಗ ದಾಮು

ಮಾಧವದಂಡನಾಥನನುಜಂ ವಿಭುಕೇಶವ ಮಲ್ಲಿದೇವಂ ದಂ।
ಡಾಧಿಪರಗ್ರಜಂ ನೆಗಟ್ದ ಮಾಣಿಕದೇವನ ತಂದೆ ಮಾಯಿದೇ॥
ವೀ ಧವನೊಳ್ಪುವೆತ್ತೆಸೆವ ಲಕ್ಷ್ಮಿಯ ನಂದನನೆಂದು ಬಣ್ಣಿಕುಂ।
ಶ್ರೀಧರಮೂರ್ತಿಯುಂ ವಿಶದ ಕೀರ್ತಿಯನೀ ಧರೆ ದಾಮುರಾಜನಂ ॥ 1503 ॥

## 273 ಕಡೂರು 149 [1206]

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಹರಹನು ಬಲ್ಲೇಶ್ವರ ದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ I

ಕುಲಜನೆ ಯಾದವಾನ್ವಯಶಿರೋಮಣಿ ಬೇಟ್ಟವರ್ಗೀವನೇ ವಧೂ।
ತಿಲಕೆಯೆನಿಪ್ಪ ಲಕ್ಷ್ಮಿಯ ಮಗಂ ಕಡುಚೆಲ್ವನೆ ಲೋಕಮೆಲ್ಲಮಂ॥
ಸಲೆ ನಿಲೆ ಕಾವ ವಿಷ್ಣುವಿನ ಪುತ್ರಕನೆಂದೊಡೆ ಬಣ್ಣಿಸಲ್ಕೆ ಭೂ।
ವಲಯದೊಳಾರ್ಪರಾರೊ ನರಸಿಂಹನೃಪಾಳಕನಂ ನಿರಂತರಂ ॥ 1504 ॥

ಹರಹ

ತುರಗದ ಖುರಪುಟವಾದ್ಯಂ। ಬಿರುದರ ಕೂರಲಗಿನೆಸೆವ ನಾದಮೆ ತಾಳಂ।
ನರರಟ್ಟೆಯ ಪೆಕ್ಕಣದಿಂ। ಕರಮೆಸೆದುದು ಹರಹನಿಱಿದ ರಣಭೂಮಿಕೆಯೊಳ್ ॥1505॥

ಕೇಳೆಲೆ ಸಾಹಣಿ ಹರಹನ। ಕಾಳೆಯ ದನಿಗೇಳಲೊಡನೆ ವೈರಿಸಮೂಹಂ।
ಬಾಳನವಧರಿಸದಾತ್ಮಗ। ಳಾಳಿಯ ತಡವರಿಸಿ ಭಯದೆ ನೋಡುತ್ತಿರ್ಕುಂ ॥1506॥

## 274 ಅರಸಿಯಕೆರೆ 40 [1208]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಕಳಿಕಟ್ಟಿಯ ಪ್ರಜೆ ಗಾವುಂಡುಗಳು ಬಿಟ್ಟಯ್ಯನಿಗೆ ಉಂಬಳಿಯನ್ನು ಕೊಟ್ಟಂತೆ ಹೇಳಿದೆ.

ಕಳಿಕಟ್ಟಿ

ಶೀವಿದ ಚೆನ್ನನಪ್ಪ ಕೆಱೆಯೊಪ್ಪುವ ಕಾತ ಕವುಂಗು ಸುತ್ತಲುಂ।
ಶ್ರೀವನಲಕ್ಷ್ಮಿ ಕಣ್ದೆಱೆದವೋಲ್ ಬೆಳೆದಿರ್ದ ಸುಗಂಧಶಾಲಿಯಿಂ॥
ದೀ ವಸುಧಾತಳಾಗ್ರದೊಳು ರಮ್ಯಮೆನಲ್ ಕಳಿಕಟ್ಟಿ ನಾಡೆಯುಂ।
ದೇವಗೃಹಂಗಳಿಂದೆಸೆದು ಶೋಭಿಸುತಿರ್ದುದು ನೋೞ್ಪೊಡೂರ್ಗಳೊಳ್ ॥1507॥

## 275 ಸೊರಬ 28 [1208]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ನೇಮಿಸೆಟ್ಟಿ ಕೊಡಕಣಿಯಲ್ಲಿ ಶಾಂತಿನಾಥ ಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಭರತಕ್ಷೇತ್ರ

ಅಂಬುಧಿಕಮಲಾಕರದೊಳ್। ಜಂಬೂದ್ವೀಪಾಬ್ಜದೊಂದು ಕರ್ಣಿಕೆಯೆನಿಕುಂ।
ಪೋಬೆಟ್ಟದಱಿಂ ತೆಂಕಲ್। ಚೆಂಬೆತ್ತೆಸೆಟಿನಿಪ್ಪುದಲ್ತೆ ಭರತಕ್ಷೇತ್ರಂ ॥ 1508 ॥

ಬನವಾಸದೇಶ

ಭರತಶ್ರೀಭೂಷಣದಂ। ತಿರೆ ಕುಂತಣದೇಶವಲ್ಲಿ ನಾಯಕಮಣಿಯಂ।
ಕುರುತರಶೋಭಾವಿಭ್ರಮು। ಕರಮೆನೆ ಬನವಾಸದೇಶವೊಳ್ಪಂ ಪಡೆಗುಂ ॥ 1509 ॥

ಬಲ್ಲಾಳ II

ಉದಯಿಸಿದನಮೃತವಾರ್ಧಿಯೊ। ಳುದಯಂಗೆಯ್ದುಮರಭೂಜವೆಂಬಿನೆಗಂ ಚೆ।
ಲ್ವೊದವಿರೆ ಬಲ್ಲಾಳನೃಪಂ। ಯದುಕುಲದೊಳ್ ವಿಶದಕೀರ್ತಿ ದಾನಾಭರಣಂ ॥1510॥

ಧುರರಂಗಂ ನೃತ್ಯರಂಗಂ ಪರನೃಪತಿಕಪಾಲಾಳಿ ತಾಳಾಳಿ ನಕ್ತಂ।
ಚರಿಯರ್ಕಳ್ ಪಾಡುವರ್ ತದ್ವಿಜಯರುಹಯಶಂ ದುಂದುಭಿಧ್ವಾನಮಾಗು॥
ತ್ತಿರೆ ವಿದ್ವಿಷ್ಟಾವನೀಪಾಳಕನಿಕರದ ರುಂಡಂಗಳಿಂ ತಾಂಡವಾಡಂ।
ಬರಮಂ ಮಾಟಿಪ್ಪೊಳ್ಪಿನಿಂ ನಟ್ಟವಿಗನೆನಿಸಿದಂ ವೀರಬಲ್ಲಾಳಭೂಪಂ ॥ 1511 ॥

ಪಗೆವರ ಪೆಂಡಿರ ಕಣ್ಣಿಂ। ದೊಗೆದಂಜನಪಂಕಿತಾಂಬುವಿಂದಂ ಬೆಳಕಂ।
ಮಿಗುವುದು ವಿಚಿತ್ರಮಿಂತಿದು। ಜಗದೊಳ್ ಬಲ್ಲಾಳಭೂಪನಿಜವಿಶದಯಶಂ ॥1512॥

ಮಸಣಗಾವುಂಡ

ವನವಾಸದೇಶಭೂಷಣ। ನೆನಿಪಂ ಗಾವುಂಡಮಂಡನಂ ದಿಕ್ಕಾಂತಾ।
ಸ್ತನಮಂಡಳಪರಿಶೋಭಿತ। ಘನತರತೇಜಃಪ್ರಕಾಶಘುಸೃಣಂ ಮಸಣಂ ॥ 1513 ॥

ಕೀರ್ತಿಗಾವುಂಡ

ದ್ಯುನದೀಪ್ರೋತ್ತುಂಗರಂಗದ್ಬಹಳಲಹರಿಕಾಂದೋಳನೋದ್ಭೂತಸಂಘಾ।
ತನಮೇರೂದ್ಯಲ್ಲತಾಂತಾವಳಿವಳಯಿತಡಿಂಡೀರಪಿಂಡಪ್ರಭಾವುಂ॥
ಡನಪಾಂಡುಪ್ರೌಢಕೀರ್ತಿಪ್ರಸರವಿಸರಿತೋರ್ವೀನಭಶ್ಚಕ್ರದಿಕ್ಚ।
ಕ್ರನಿಕಾಯಂ ತಾನೆನಿಪ್ಪೊಂದೆಸಕದಿನೆಸಬುಂ ಕೀರ್ತಿಗಾವುಂಡನಾದಂ ॥ 1514 ॥

ಆರ್ತೀವ ದಾನಿಯಂ ಧರೆ। ಕೀರ್ತಿಕುಮಭಿಮಾನಮೂರ್ತಿಯಂ ಘನತೇಜ।
ಸ್ಫೂರ್ತಿಯನೀಪ್ರಭುಮಂಡನ। ಕೀರ್ತಿಯನಂಗಭವಮೂರ್ತಿಯಂ ಪ್ರಿಯದಿಂದಂ
॥1515॥

ಮಹಾದೇವಚಮೂಪ

ವಿತತೈಶ್ವರ್ಯನುಮಾಧಿನಾಥವಿಭವಂ ರಾಜಪ್ರಿಯಂ ವಾಹಿನೀ।
ಪತಿ ಭೋಗೀಶ್ವರಭೂಷಣಂ ನುತವೃಷಾಂಕಂ ಕೇಶವಪ್ರೇಮವಿ॥
ಶ್ರುತನೆಂಬೊಳ್ಪಿನಸುಂ ವಿರಾಜಿಸೆ ಮಹಾದೇವಂ ಮಹಾದೇವನೆಂ।
ಬ ತದೀಯಾಂಕಮನನ್ವಿತಾರ್ಥಮೆನಲರ್ಥವ್ಯಕ್ತಿಯುಂ ಮಾಡಿದಂ ॥ 1516 ॥

ಸುಮನೋಭೂಧರರಾಜಿತಂ ವಿಪುಳಶಾಖಂ ಬಂಧುರಸ್ಕಂಧಮೂ।
ರ್ತಿ ಮಹೀಜಾತವರಂ ಸುಪತ್ರನಿಚಯಸ್ತುತ್ಯಂ ಧರಾಶೇಖರಾಂ।
ಘ್ರಿ ಮಹೋದಾರಿ ದಲೆಂಬ ತನ್ನೆಸಕದಿಂದಂ ಭವ್ಯಕಲ್ಪಾವನೀ।
ಜಮೆನಿಪ್ಪಂ ವಿಬುಧಸ್ತುತಂ ವಿಭು ಮಹಾದೇವಂ ಚಮೂಪೋತ್ತಮಂ ॥ 1517 ॥

ಕವಿರಿಪು ಗುರು ಗುರುರಿಪು ಭೃಗು। ವವರೇವರೆನಲ್ ಧರಿತ್ರಿ ಕವಿಗುರುಜನತೋ।
ದ್ಭವವೊದವೆ ಮಂತ್ರಗುಣವೊ। ಪ್ಪವುದು ಮಹಾದೇವದಂಡನಾಥೋತ್ತಮನೊಳ್
॥ 1518 ॥

## 276 ಚೆನ್ನರಾಯಪಟ್ಟಣ 243–44 [1209]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಾಪ್ರಧಾನ ಕೇಶಿರಾಜನು ಬೆಳುಗಲಿಯನ್ನು ಕೇಶವಪುರವೆಂಬ ಅಗ್ರಹಾರಮಾಡಿ ಕೆರೆಗಳನ್ನು ಕಟ್ಟಿಸಿ ಕೇಶವ ದೇವಾಲಯವನೆತ್ತಿಸಿ ಅದಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸಳ

ಸಳನೆಂಬೊಂ ಯಾದವೇಂದ್ರಂ ಶಶಕಪುರದ ವಾಸಂತಿಕಾದೇವಿಯಂ ನಿ।
ಶ್ಚಳಮಂತ್ರಂ ಮಾಣದಾರಾಧಿಸೆ ಬನದೊಳಗಾಭೀಳಶಾರ್ದೂಳಮಾಭೂ॥
ತಳನಾಥಂಗೆಯ್ದೆ ಕಂಡಾಜಿನಮುನಿ ಸೆಳೆಯಂ ಕೊಟ್ಟು ಶಾರ್ದೂಳಮಂ ಪೊಯ್।
ಸಳ ಎಂದಂ ಪೊಯ್ದೊಡಾತಂಗೆಸೆದುದು ಜಗದೊಳ್ ಪೊಯ್ಸಳೋರ್ವೀಶನಾಮಂ
॥ 1519 ॥

ಎರೆಯಂಗ

ಆ ವಿನಯಾದಿತ್ಯನ ಸುತ। ನೀವಸುಧಾತಳದ ಕಲ್ಪತರು ವಂದಿಜನ।
ಕ್ಕೀವೆಡೆಯೊಳ್ ಮಱೆವೊಕ್ಕೊಡೆ। ಕಾವೆಡೆಯೊಳ್ ಖಚರನೆನಿಸಿದಂ ನೃಪತಿಲಕಂ
॥ 1520 ॥

## ಎರೆಯಂಗನ ಮಹಿಷಿ ಏಚಲೆ

ಎಱೆಯಂಗದೇವನರಸಿಯು। ನಱಿಯಂ ಪೊಗೞಲ್ ಫಣೇಂದ್ರನುಂ ಸುರಪತಿಯುಂ।
ನೆಱೆಯಂ ನೋಡಲ್ ಸೊಬಗಿನ। ನೆಱವುಂ ರೂಪಿನ ಬೆಡಂಗುಮಾಸತಿಗಧಿಕಂ ॥ 1521 ॥

## ವಿಷ್ಣುವರ್ಧನ

ಅವರೊಳ್ ವಿಷ್ಣುನೃಪಾಳಂ। ಭುವನಾಧಿಪನಾದನಾದಿರಾಜರ ಚರಿತ।
ಕ್ಕವನೊರೆಗಲ್ಲಾದಂ ತ್ರೈ। ಭುವನಾಂತರ್ವರ್ತಿಕೀರ್ತಿವಲ್ಲಭನಾದಂ ॥ 1522 ॥

ನೆಟ್ಟನೆ ಬಿಟ್ಟಿದೇವನೊಳಿದಿರ್ಚಿದರಾತಿನೃಪಾಳನಾವನುಂ।
ಕೆಟ್ಟನೆ ಕಂಡು ತನ್ನೊಡಮೆಯೆಲ್ಲಮನೋವದೆ ಕೊಟ್ಟು ಪೊಣ್ದು॥
ವಿಟ್ಟಿಗಮಿರ್ದನಿರ್ದನೆ ನಿಜಾನ್ವಯರಾಜ್ಯದೊಳೆಂದರಾತಿಗಳ್।
ಬಿಟ್ಟು ವಿರೋಧಮಂ ಬಿಡದೆ ಕಾಲ್ವಿಡಿದೆಂದುದುಗೆಯ್ವರಾಗಳುಂ ॥ 1523 ॥

## ನಾರಸಿಂಹ I

ಆ ನರಸಿಂಹನೃಪಾಲಕ। ನಾನಲರಾತಿನೃಪರಿಲ್ಲ ಭೂತಳದೊಳ್ ಕೈ।
ಯಾನಲಧನರ್ಕಳಿಲ್ಲೆನೆ। ತಾನಿಱಿವಂ ಪಿರಿದನೀವನಿಭರಿಪುಶೌರ್ಯಂ ॥ 1524 ॥

## ಬಲ್ಲಾಳ II

ಅವಿಧೇಯಕ್ಷೋಣಿಭೃತ್ಸಂತತಿ ಸಮರದೊಳಾವೀರಬಲ್ಲಾಳಧಾತ್ರೀ।
ಧವನೊಳ್ ಮಾಱಾಂತು ನಿಂದಂದವನ ಭುಜಭುಜಂಗೋಗ್ರದಂಷ್ಟ್ರಾಭಖಡ್ಗ॥
ಪ್ರವಿಘಾತಾಭೀಳಕಾಯೋತ್ಥಿತರುಧಿರಜಳಾಸಕ್ತನಕ್ತಂಚರೀನೃ।
ತ್ಯವಿಳಾಸಾಳೋಕನಪ್ರೀತಿಯನೊದವಿಸದೇ ನಾರದಂಗಂ ಜವಂಗಂ ॥ 1525 ॥

## ನಾರಸಿಂಹ II

ದಿವಿಜೇಂದ್ರೇಭಕ್ಕೆ ಕೊಂಬುರ್ವರೆಯ ತಮಮನೆಟ್ಟಿಟ್ಟುವರ್ಕಂಗೆ ತೇಜಂ।
ತವದುರ್ಕಂ ತಾಳ್ದಿ ಕೂರ್ಪಿಂದೆಸೆವ ಮಿಸುಪ ವಜ್ರಕ್ಕೆ ಬಲ್ಪುಗ್ರದೈತ್ಯಾ॥
ಟವಿಯಂ ತನ್ನಿಚ್ಛೆಯಿಂ ತಳ್ತಳುರ್ವ ಬಗೆಯು ಭರ್ಗಂಗೆ ಭಾಳಾಂಬಕಂ ಪು।
ಟ್ಟುವವೋಲ್ ಬಲ್ಲಾಳರಾಯಂಗತುಳಭುಜಬಳಂ ಪುಟ್ಟಿದಂ ನಾರಸಿಂಹಂ ॥1526॥

ನರಸಿಂಹರಾಯನುದ್ಧತ। ಕರಾಸಿಗಗನಾಹಿ ನುಂಗುವುದು ಸಂಗರದೊಳ್।
ನರತುರಗಕರಿಕಳಂಕಾ। ಕರಮೆನಿಪರಿರಾಯವಿಪುಳವಿಧುಮಂಡಳಮಂ ॥ 1527 ॥

ನಾರಸಿಂಹನ ಸೋದರಿ ಸೋವಲದೇವಿ

ಹರಿಯೊಡವುಟ್ಟಿದಂದಿನ ಸುಭದ್ರೆಯೊ ರುಕ್ಮಿಯ ತಂಗೆಯಾದಳಾ ।
ಸಿರಿಯೆನೆ ಸಂದ ರುಕ್ಮಿಣಿಯೊ ಮದ್ರನೃಪಾನುಜೆಯಾದ ಮಾದ್ರಿಯೋ ॥
ನಿರುಪಮಮಪ್ಪ ರೂಪವತಿ ಸಚ್ಚರಿತಾನ್ವಿತೆಯೆಂದು ಬಣ್ಣಿಕುಂ ।
ಧರೆ ನರಸಿಂಹರಾಯನೊಡವುಟ್ಟಿದ ಸೋವಲದೇವಿರಾಣಿಯುಂ ॥ 1528 ॥

ತೋಳೆ ಪೊದಟ್ಟು ನೀಳ್ದ ವಿಟಪಂ ಕರಶಾಖೆಗಳಳ್ಳೆಗೊಂಬಿನೊಂ ।
ದೋಳಿ ತಳಂ ವಿರಾಜಿಪ ತಳಿರ್ ನಖರಂ ಕುಸುಮಾಳಿ ಪೂಣ್ದು ಸ ॥
ಲ್ಲೀಲೆಯಿನೀವ ಕಾಂಚನಮೆ ತಳ್ತಿಡಿದಿರ್ದ ಫಲೌಘಮಾಗೆ ಬ ।
ಲ್ಲಾಳನ ಪುತ್ರಿ ಕಲ್ಪಕುಜದಂದದೆ ಸೋವಲದೇವಿ ಕೊಟ್ಟಪಳ್ ॥ 1529 ॥

ಕೇಶಿರಾಜ

ದಿಗಿಭವ್ರಾತದೊಳಿಂದ್ರದಂತಿ ದಿಗಧೀಶವ್ರಾತದೊಳ್ ಶಕ್ರನ ।
ಬ್ಧಿಗಳೊಳ್ ಪಾಲ್ಗಡಲದ್ರಿಸಂಕುಲದೊಳಸ್ವಪ್ನಾದ್ರಿ ದೇವರ್ಕಳೊಳ್ ॥
ನಗಜಾವಲ್ಲಭನಿರ್ಪ ಪೆಂಪುವಡೆದಿರ್ಪಂ ಹೊಯ್ಸಳೋರ್ವೀಶಮಂ ।
ತ್ರಿಗಳೊಳ್ ಕೇಶವದಂಡನಾಯಕನನೂನಶ್ರೀಗಧಿಷ್ಠಾಯಕಂ ॥ 1530 ॥

ಜಲನಿಧಿಯುಂ ಜಕ್ಕುಲಿಸುವ । ಕುಲನಗಮುಂ ನಗುವ ಕೆಱೆಗಳಂ ದೇಗುಲಮುಂ ।
ಕಲಿಯುಗಕಾನೀನಂ ಬೆ । ಳ್ಗಲಿಯೊಳ್ ಕೇಶವಚಮೂವರಂ ಮಾಡಿಸಿದಂ ॥ 1531 ॥

ನಿಖಿಳಚಮೂಪರ ನುಡಿ ಜಳ । ಲಿಖಿತಂ ಕೇಶವಚಮೂವರಂ ಚತುರಚತು ।
ರ್ಮುಖನಾಡಿದ ನುಡಿಯೆ ಶಿಲಾ।ಲಿಖಿತಂ ಬಲ್ಲಾಳಭೂಮಿಪಾಳನ ಸಭೆಯೊಳ್
॥ 1532 ॥

## 277 ಶಿಕಾರಿಪುರ 196 [1212]

ಈ ನಿಸಿದಿಗಲ್ಲಿನಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಜಕ್ಕವ್ವೆ ಸನ್ಯಾಸನ ವಿಧಿಯಿಂದ ಜೀವವನ್ನು ತೊರೆದು ಸ್ವರ್ಗಸ್ಥೆಯಾದಂತೆ ಹೇಳಿದೆ.

ಸಲೆ ಮೋಹಧ್ವಾಂತದಿಂದಂ ಮುಗಿದ ಹೃದಯನೀರೇಜಮಂ ಜೈನವಾಕ್ಯಾ ।
ಮಲಭಾನುಜ್ಯೋತಿಯಿಂದಂ ವಿಕಚಿಸಿಯುದಱೊಳ್ ದೇವದೇವೇಶನಂ ನಿ ॥
ಶ್ಚಲಮಾಗಿರ್ದಾ(ತ್ಮ) ಸಂತೋಷದೊಳೆ ಜಿನಪನಂ ಜಾನಿಸುತ್ತಾ ಲತಾಕೋ
ಮಲೆ ಬಿಟ್ಟಳ್ ಜಕ್ಕಿಯಕ್ಕಂ ತನುವನುೞಿದರಾರ್ ಪೋಲ್ವರೆಂಬಂತು ತನ್ನಂ
॥ 1533 ॥

ನೆಱೆಯೆ ಮುನೀಂದ್ರರುಂ ಪೊಗೞ್ವಿಣಂ ತಲೆದೂಗೆ ಪರಿಗ್ರಹಂಗಳಂ ।
ತೊಱೆದು ಗೃಹೀತಸನ್ಯಸನದಿಂ ನಿಜಬಾಂಧವಮೋಹಪಾಶಮಂ ॥
ಪಱಿದು ಸುವೃತ್ತೆ ಜಕ್ಕಲೆ ಮಹಾಸತಿ ಚಿತ್ತಮನಾಪ್ತತತ್ವದೊಳ್ ।
ನಿಱಿಸಿ ಸಮಾಧಿಯಿಂ ನೆಱೆಯೆ ಸಾಧಿಸಿದಳ್ ಸುರಲೋಕಸೌಖ್ಯಮಂ ॥ 1534 ॥

ತಳರ್ದಿರದೇಕಪಾರ್ಶ್ವನಿಯಮಸ್ಥಿತಿ ದೃಷ್ಟಿ ಸುನಾಸಿಕಾಗ್ರದಿಂ ।
ಕಳಿವೆಡೆ ಬಲ್ಪು ಬಳ್ಕಿರದೆ ಮೆಯ್ ಮಿಡುಕಾಡದೆ ಜೈನಭಕ್ತಿ ಸಂ ॥
ಚಳಿಸದೆ ಮಾಣದುಚ್ಚರಿಸಿ ಪಂಚಪದಂಗಳನಾತ್ಮತತ್ವದೊಳ್ ।
ನೆಲಸಿದ ಸತ್ಸಮಾಧಿವಿಧಿ ಜಕ್ಕಲೆನಾರಿಗಿದೆಕ್ಕಲಾವಣಂ ॥ 1535 ॥

ತತ್ವಮನಾಜಿನೇಂದ್ರಮತದಿಂ ತಿಳಿದುಜ್ವಳಮಾದ ಶುದ್ಧದೃ ।
ಷ್ಟಿತ್ವಗುಣಾರ್ಕನಿಂದಲರೆ ಶೀಲಗುಣವ್ರತವಾರಿಜಾಳಿ ಮಿ ॥
ಥ್ಯಾತ್ವತಮಸ್ತಮಂ ಪರೆಯೆ ಸತ್ಪಥವರ್ತಿನಿಯಾಗಿ ಶುದ್ಧಸಂ ।
ವಿತ್ವದಿನೆಯ್ದಿದಳ್ ನೆಗೞ್ದ ಜಕ್ಕಲೆನಾರಿ ಸುರೇಂದ್ರಲೋಕಮಂ ॥ 1536 ॥

ಲಲಿತಪತಿವ್ರತಾಚರಣಚಾರುನದೀಸಲಿಲಪ್ರವಾಹದಿಂ ।
ಕಲಿಮಲಮಂ ಕಟಲ್ಚಿ ನಿಜನಿರ್ಮಳಕೀರ್ತಿಲತಾವಿತಾನಮಂ ॥
ಬಳೆಯಿಸಿ ಶೀಲಶಾಲಿವನಮಂ ಪರಿವರ್ಧಿಸಿ ಪುಣ್ಯನಂದನಂ ।
ಗಳನೆ ನಿಮಿರ್ಚಿ ಜಕ್ಕಲೆ ವಲಂ ಪಡೆದಳ್ ಸುಮನೋವಿಭೂತಿಯಂ ॥ 1537 ॥

ಪರಿಕಿಸಿ ಸದ್ಬುಧರ್ ಪೊಗೞೆ ತನ್ನ ಚರಿತ್ರಗುಣಾಂಕಮಾಲೆಯಂ ।
ವಿರಚಿಸಿ ಸುಪ್ರಬಂಧಮನೆ ದಿಕ್ಕುಳಭಿತ್ತಿಗಳೊಳ್ ತೆರಳ್ಚಿ ಮುಂ ॥
ಬರೆದುದನೀಗಳಾ ದಿವಿಜಲೋಕದೊಳೊಪ್ಪುವ ಲೇಖಜಾಳದೊಳ್ ।
ಬರೆಯಿಪೆನೆಂದು ಜಕ್ಕಲೆಮಹಾಸತಿಯೇಱಿದಳಲ್ತೆ ಸಗ್ಗಮಂ ॥ 1538 ॥

## 278 ಸೊರಬ 276 [1215]

ಇದರಲ್ಲಿ ಸೇವುಣರಾಜನಾದ ಸಿಂಹಣನ ಆಳಿಕೆಯಲ್ಲಿ ಅವನ ಅಧಿಕಾರಿಗಳೊಳಗೆ ಪಲವರು ಕುಪ್ಪಟೂರು ಕೋಟಿನಾಥ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಕುಪ್ಪಟೂರು

ಅಳಿಗಿಳಿವಿಂಡಿನಿಂದುಲಿವ ನಂದನದಿಂ ಕಳಹಂಸಮತ್ತಕೋ ।
ಕಿಳಕಳನಾದದಿಂದೆಸೆವಲಗ್ಗೊಗಳನಿಂ ಬೆಳೆದೊಪ್ಪಿ ತೋರ್ಪ ಕೆ ॥
ಯ್ವೊಲನಿನನೇಕರತ್ನ ಮಣಿಕೂಟದಿನೊಪ್ಪುವ ದೇವತಾಲಯಂ ।
ಗಳಿನುಱೆ ಕುಪ್ಪಟೂರ್ ಕರಮೆ ರಂಜಿಸುಗುಂ ಧರಣೀತಳಾಗ್ರದೊಳ್ ॥ 1539 ॥

ಸಿಂಹಣ

ಚಲದಿಂ ಧಾತ್ರಿಯೊಳುಳ್ಳ ಭೂಭುಜರುಮಂ ದೋರ್ವಿಕ್ರಮೋದ್ಯಚ್ಛಿಖೋ ।
ಜ್ವಳನಿಂದಂ ನೆಱೆ ಸುಟ್ಟು ವೈರಿಲಲನಾವೈಧವ್ಯಮಂ ಮಾಡಿ ಕುಂ ॥
ದಲತಾಂತೋಜ್ವಳಕೀರ್ತಿಯಂ ಮೆಱೆದು ಪಾರಾವಾರಪರ್ಯಂತ ಮಾ ।
ರ್ತಲೆಯಿಲ್ಲೆಂಬ ನೆಗಟ್ತೆವೆತ್ತನತುಳಂ ಶ್ರೀಸಿಂಹಣೋರ್ವೀಶ್ವರಂ ॥ 1540 ॥

## 279 ಹೊನ್ನಾಳಿ 48 [1216]

ಈ ವೀರಗಲ್ಲಿನಲ್ಲಿ ಸೇವುಣರಾಜನಾದ ಸಿಂಹಣದೇವನ ಆಳಿಕೆಯಲ್ಲಿ ಸಿಂದರಾಜನಾದ ಈಶ್ವರ ದೇವರಸನ ಆಜ್ಞೆಯಿಂದ ಚಿಣ್ಣಯ್ಯನು ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ.

ಮಾದನಬಾಗಂ ಬೇಡರ್ । ಭೇದಿಸಿ ಪಾಯ್ದುಱಿದು ತುಱುಗಳಂ ಕೈಕೊಂಡೀ ।
ಪೋದರೆನೆ ಮುಳಿದ ಜವನಂ । ತಾದಂ ಬೆನ್ನಟ್ಟಿ ಪಟ್ಟಸಾಹಣಿ ಚಿಣ್ಣಂ ॥ 1541 ॥

ಭರದಿಂದಂ ಪರಿದೆಯ್ದಿ ಬೇಡವಡೆಯುಂ ಕಂಡಾರ್ದು ಬೆಂಕೊಂಡು ತ ।
ತ್ತುರಗಂ ವಾಯುಜವಾಧಿಕಂ ಪರಿಯಿಸುತ್ತುಂ ಕುತ್ತಿ ಕೊಂದಿಕ್ಕಿ ತ ॥
ಚ್ಚಿರಮಂ ತಾಂ ಪೊಡೆಸೆಂಡನಾಡೆ ಪದಪಿಂದಾಳ್ದಂ ಕರಂ ಮೆಚ್ಚಲ ।
ಚ್ಚರಿಯಾಗಲ್ ತುಱುವಂ ಮಗುಟ್ಚಿ ಪಗೆಯಂ ಪರ್ದಿಂಗೆ ಬಿರ್ದಿಕ್ಕಿದಂ ॥1542॥

## 280 ಬೇಲೂರು 136 [1217]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಶಿವನಯ್ಯನು ಶಿವನಯ್ಯನಹಳ್ಳಿಯಲ್ಲಿ ಶಿವಲಿಂಗೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಯಾದವವಂಶ

ಸಿರಿಗೆ ತವರ್ಮನೆ ವಿಷ್ಣುಗೆ । ಪರಮೋತ್ಸವಭೂಮಿ ನಿರ್ಮಳಂ ವಿಸ್ತೀರ್ಣಂ ।
ನಿರತಂ ಪಾಲ್ಗಡಲೊಳ್ಪಿಂ । ಪೊರೆದುದು ಗಂಭೀರಮಾದ ಯಾದವವಂಶಂ ॥1543॥

ವಿನಯಾದಿತ್ಯ

ವಿನಯಂ ಪ್ರತಾಪಮೆಂಬೀ । ಜನನಾಥೋಚಿತಚರಿತ್ರಯುಗದಿಂ ಜಗಮಂ ।
ಜನನಯನಮೆನಿಸಿ ಪೊರೆದಂ । ವಿನಯಾದಿತ್ಯಂ ಸಮಸ್ತಭುವನಸ್ತುತ್ಯಂ ॥1544॥

ಎರೆಯಂಗ

ಆತಂಗತಿಮಹಿಮಂ ಹಿಮ । ಸೇತುಸಮಾಖ್ಯಾತಕೀರ್ತಿ ಮೂರ್ತಿಮನೋಜಂ ।
ಪಾತಿತಸಂಗರರಿಪುನೃಪ । ಜಾತಂ ತನುಜಾತನಾದನೆಱೆಯಂಗನೃಪಂ ॥1545॥

## 281 ಕಡೂರು 129 [1218]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಿಷಿ ಬೈಚಲದೇವಿ ಪ್ರಸನ್ನಮಾಧವ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ವರಕೂರ್ಮಂಗಮಹೀಶ್ವರಂಗಮಖಿಳಾಶಾದಂತಿಗಂ ದುರ್ವಹಂ ।
ಪಿರಿದುಂ ಭೂಭರಮೆಂದು ತನ್ನ ಭುಜದೊಳ್ ಕೇಯೂರಮಂ ತಾಳ್ದುವಂ ॥
ತಿರೆ ಸರ್ವೋರ್ವರೆಯಂ ದಯಾಪರತೆಗಾಯೌಚಿತ್ಯಮೆಂಬಂತೆ ಸಾ ।
ದರದಿಂ ತಾಳ್ದಿದನಪ್ರತರ್ಕ್ಯಮಹಿಮಂ ಬಲ್ಲಾಳಭೂಪಾಳಕಂ ॥1546॥

ಅರಿಭೂಭೃದ್ಗಿರಿದುರ್ಗಸಂಗಭಿದುರಜ್ವಾಳಾನಳಂ ವೈರಿಭೀ ।
ಕರನಾನಾವನದುರ್ಗನಿರ್ಗತರುವದ್ದಾವಾನಳಂ ಶತ್ರುಬಂ ।
ಧುರಮಾದ್ಯಜ್ಜಳದುರ್ಗವರ್ಗಮಹದುಗ್ರೌರ್ವಾನಳಂ ತಾನೆನಲ್ ।
ದೊರೆ ಬಲ್ಲಾಳನೃಪಾಳಭೈರವತರಪ್ರೋದ್ಯತ್ಪ್ರತಾಪಾನಳಂ ॥1547॥

ಪರಭೂಪಾಳಬಳೋಗ್ರವಾರಿನಿಧಿಯಂ ಪ್ರೋಚ್ಚಂಡದೋರ್ದಂಡಮಂ ।
ದರದಿಂದೋವದೆ ಮಾಡಿ ತಾಂ ಪ್ರಮಥನಪ್ರಾರಂಭಮಂ ಭದ್ರಸಿಂ ॥
ಧುರಜಾತ್ಯಶ್ವಸಮೂಹಮಂ ಘನತರಶ್ರೀಯಂ ಜಯಶ್ರೀಯನಿಂ ।
ತು ರಣಪ್ರಾಂಗಣರಂಗದೊಳ್ ಪಡೆದನಾಬಲ್ಲಾಳಭೂಪಾಳಕಂ ॥1548॥

ರತಿಯಂ ಬೈಚಲದೇವಿ ಪುಷ್ಪಶರನಂ ಬಲ್ಲಾಳನಾಭೂಮಿಭೃ ।
ತ್ಸುತೆಯಂ ಬೈಚಲದೇವಿ ಚಂದ್ರಧರನಂ ಬಲ್ಲಾಳನಂಭೋರುಹ ।
ಸ್ಥಿತೆಯಂ ಬೈಚಲದೇವಿ ಚಕ್ರಧರನಂ ಬಲ್ಲಾಳನನ್ಯೋನ್ಯಸಂ ।
ಗತಿಯಿಂ ಪೋಲ್ವರೆನಲ್ಕದೇವೊಗಳ್ವುದೋ ಸೌಭಾಗ್ಯಸಂಪತ್ತಿಯಂ ॥1549॥

ಮಾಧವಪುರ

ಕ್ಷೀರಾಂಭೋನಿಧಿಯಂ ತಟಾಕನಿಕರಂ ಕಲ್ಪಾಂಘ್ರಿಪೋದ್ಯಾನಮಂ।
ಚಾರೂದ್ಯಾನವನಂ ಮುನಿಪ್ರಕರಮಂ ವಿಪ್ರವ್ರಜಂ ಲಕ್ಷ್ಮಿಯಂ॥
ಪೌರಸ್ತ್ರೀನಿವಹಂ ಕುಳಾದ್ರಿಕುಳಮಂ ಪ್ರಾಸಾದಸಂದೋಹವಿ।
ಸ್ತಾರಂ ಪೋಲ್ತಿರೆ ಸಂದ ಮಾಧವಪುರಂ ಸಂತಂ ಬಸಂತಂ ಕರಂ ॥ 1550 ॥

ಪುದಿದೆತ್ತಂ ದೋರೆವಣ್ಗಾಯ್ಗೊನೆಯಿನೊಲೆವ ಪೊಂಬಾಟಿ ಪೆಣ್ದುಂಬಿಗಳ್ ಮು।
ತ್ತಿದ ಚೆನ್ನೆಯ್ದಲ್ಗೊಳಂ ಬೇರ್ವಿಡಿದು ತುದಿವರಂ ತೋರವಣ್ಪೇಱಿದೊಳ್ವ॥
ಕ್ಕೆ ದಳತ್ಪದ್ಮಾಕರಂ ಬಿಣ್ಗೊನೆದಳೆದೆಳಗೌಂಗಚ್ಚನೀರ್ಗಾಯ್ಗಳಂ ಪೇ।
ಱಿದ ಚೆಂದೆಂಗೋಳಿಯುಂ ಮಾಧವಪುರವರದುದ್ಯಾನದೊಳ್ ಕುಂದವೆಂದುಂ॥1551॥

ಮಾಧವ

ಭುವನನುತೇಂದಿರೋನ್ನತಘನಸ್ತನಕುಂಕುಮಪಂಕರಾಗಪ।
ಲ್ಲವಿತವಿಶಾಲವಕ್ಷನಖಿಳಾಮರಚಾರುಕಿರೀಟಕೋಟಿಸಂ ॥
ಭವಕಿರಣೌಘಕೇಸರಿತಪಾದಪಯೋಜಯುಗಂ ಪ್ರಸನ್ನ ಮಾ।
ಧವನಭಿವಾಂಛಿತಾರ್ಥಫಲವಂ ಕುಡುತಿರ್ಕೆ ಜಗಕ್ಕೆ ಸಂತತಂ ॥ 1552 ॥

**282 ಸಾಗರ 15 [1218]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬಾಳೆಯಮ್ಮ ವೆರ್ಗಡೆ ಕಲಿಸೆಯಲ್ಲಿ ಸೋಮನಾಥ ದೇವಸ್ಥಾನವನ್ನು ಕಟ್ಟಿಸಿದನೆಂದು ಹೇಳಿದೆ.

ಬಾಳೆಯಮ್ಮ

ನಿಸ್ಸಾಣಧ್ವನಿತಂಬಟಸ್ಫುಟಧಡಂಧಂನಾದಭೀತರ್ ಪಲರ್।
ನಿಸ್ಸತ್ವರ್ ಬಿಸುಟೋಡಿ ನಾಡ ನಗರೀಭಂಡಾರಮಂ ಪೆಂಡಿರಂ॥
ಸುಸ್ವಸ್ಥರ್ ಗಿರಿಗಹ್ವರಸ್ಥರದಟರ್ ಮಾಱಾಂತು ತತ್ಖಡ್ಗದಿಂ।
ಸುಸ್ವಸ್ಥರ್ ಕೆಲರೆಂಬ ಕೌತುಕಮಿದೇಂ ಪ್ರೋದ್ದಾಮನೋ ಬಾಳೆಮಂ ॥ 1553 ॥

ಸೂಸುವ ನೆತ್ತರುಣ್ಮುವ ನೆಣಂ ಪೊಱಪೊಣ್ಮುವ ಕೋಟಿಮ್ಮಿದುಳ್ ಪೊದ।
ಟ್ದಾಸುರಮಾಗೆ ಸೋರ್ವ ಕರುಳಾ ಕರುಳ್ಗಾಟಿಪ ಬಳ್ಳು ಬಳ್ಳುವಂ॥
ಸೋಸುವ ವೀರರಟ್ಟೆ ಭಟರಟ್ಟೆಯನಟ್ಟುವ ಭೂತಕೋಟಿಯಿಂ।
ದಾಸುರಮಾಯ್ತು ಮಂಡಳಿಕಬಾಳೆಗನಾಂತಿಱಿದಾಹವಾಂಗಣಂ ॥ 1554 ॥

ಮೂಳೆಯ ಸನ್ನೆಗಾಳೆವಿಡಿಯಲ್ ನೊರೆನೆತ್ತರನೀಂಟಿ ಸೊಕ್ಕಿ ಕ।
ಣ್ಣಾಲಿಯ ಮಾಲೆಸೂಡಿ ಬಲುಗಂಡದ ದಂಡೆಯನೊಪ್ಪೆ ಕಟ್ಟಿಕೊಂ॥
ಡಾಳಿಸಿಯುಟ್ಟು ಪಂದೊವಲನಾಹವದೊಳ್ ನಲಿದಾಡಿ ಪಾಡಿದರ್।
ಸೂಳೆಮರುಳ್ಗಳುಗ್ಗಡಿಸಿ ಹೆಗ್ಗಡೆಬಾಳೆಗನಂಕಮಾಲೆಯಂ ॥ 1555 ॥

ಅದಟರ ಗಂಡನಂಜದರ ಗಂಡನದಿರ್ಪರ ಗಂಡನಾಜಿಗ।
ಳ್ಕದ ಮದವದ್ವಿರೋಧಿಗಳ ಗಂಡನುದಗ್ರರ ಗಂಡನದ್ಭುತಾ॥
ಸ್ಪದಕದನಪ್ರಚಂಡನೊಳುಗಂಡನೆರಟ್ಟಿಡೆ ಮೆಚ್ಚಿ ಗಂಡನೆಂ।
ಬುದು ಕದನೋಗ್ರಮಂಡಳಿಕಬಾಳೆಗನಗ್ಗದ ಕಾಹಳಾರವಂ ॥ 1556 ॥

ತೊಡರ್ದರನೊತ್ತಿ ತೊಂಡರನವುಂಕಿ ಕಡಂಗುವರಂ ಕಟಲ್ಚಿ ವಾ।
ರ್ಪಡೆಯು ವಿರೋಧಿಯಂ ತವಿಸಿ ಮೀಱಿದರಂ ಮುಱಿದಾಂತುದಗ್ರರಂ॥
ಕಡೆಕಳಕಿಕ್ಕಿ ಗಂಡಗಳಗತ್ತರಿ ಬಾಳೆಮಮುಂಡಲೀಕ ತಾಂ।
ಪಡೆದನಪಾರಶೌರ್ಯಮಹಿಮೋನ್ನತಿಯಂ ವಸುಧಾತಳಾಗ್ರದೊಳ್ ॥ 1557 ॥

## 283 ಸೊರಬ 224 [1218]

ಈ ವೀರಗಲ್ಲಿನಲ್ಲಿ ಕಾದಂಬಚಕ್ರವರ್ತಿ ಮಲ್ಲಿದೇವರಸನ ಆಳಿಕೆಯಲ್ಲಿ ಬಿನವನು ಕಳ್ಳರೊಡನೆ ಕಾದಿ ಸತ್ತನೆಂದು ಹೇಳಿದೆ.

ತಾಗಿದೊಡೆ ಮುಳಿದು ಕಳ್ಳರ್। ಪೋಗದೆ ನಿಲ್ ನಿಲ್ಲೆನುತ್ತೆ ಕವಿತರೆ ಬಿನವಂ।
ರಾಗಿಸಿ ಬೊಬ್ಬಿಱಿದಲ್ಲದೆ। ನಾಗಂಗಳ ಕಂಡ ಗರುಡನಂತಾಂತಿಱಿದಂ ॥ 1558 ॥

ಜವನುಂಡು ಕಾಱಿದಂದದಿ। ನವಂದಿರಂ ಕೊಂದು ಬಿನವ ತಾಂ ಬಸವಟಿಯು।
ಲ್ಕವನಂ ವಿಮಾನದೊಳ್ ವಾ। ಸವನ ಪುರಕ್ಕೊಯ್ದರಮರಗಣಿಕೆಯರೊಲವಿಂ ॥1559॥

## 284 ನಾಗಮಂಗಲ 29 [1219]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ಮಲ್ಲನಾಯಕನು ನಾನಲಕೆರೆಯ ಮಲ್ಲಿಕಾರ್ಜುನದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಬಲ್ಲಾಳ II

ಘನಕೂರ್ಮೋತ್ಪೃಷ್ಠಪಾಂಸುಪ್ರಚಯಶಯನದಿಂದೆದ್ದು ಶೇಷಸ್ಫಟಾಕಾ।
ನನದೊಳ್ ತಾನಾಡಿ ದಿಕ್ಕುಂಜರನಿಬಿಡದೃಢಸ್ಕಂಧಮಂ ನೆರ್ಮಿ ಗೋತ್ರಾ॥
ವನಿಭೃತ್ಕುಂಜಂಗಳೊಳ್ ಸಂಚರಿಸಿ ಪದುಳಮಿರ್ದಪ್ಪುದುದ್ದಾಮದೊಳ್ ಕುಂ।
ಭಿನಿಯೀಗಳ್ ವೀರಬಲ್ಲಾಳನ ವಿಜಯಭುಜಾಳಾನದೊಳ್ ಲೀಲೆಯಿಂದಂ ॥ 1560॥॥

### ಬಲ್ಲಾಳನ ಮಹಿಷಿ ಪದ್ಮಲೆ

ಕುಲದೊಂದುನ್ನತಿ ರೂಪಿನೊಂದತಿಶಯಂ ಸೌಭಾಗ್ಯದೊಂದುದ್ಭವಂ।
ಸಲೆ ಸಂಪತ್ತಿಯೊಳೊಂದಿದೊಂದಧಿಕಪುಣ್ಯಂ ಧಾತ್ರಿಯುಂ ತನ್ನ ತೋ।
ಳ್ವಲದಿಂದಾಳ್ವ ಸುಪುತ್ರನಂ ಪಡೆದ ಸೈಪೇನುಂಟೊ ಪೇಟ್ವಿಂದು ಪ।
ದ್ಮಲಮಾದೇವಿಯೊಳಲ್ಲದೀ ಯದುನೃಪಾಳಪ್ರೇಯಸೀವರ್ಗದೊಳ್ ॥ 1561 ॥

ಮಲ್ಲನಾಯಕ

ಇದಿರೊಳೆ ಪಣ್ತ ಕಲ್ಪಕುಜದಾರವೆಯಿಂತಿದೆ ಬೇಡುವಂಗೆ ಮೆ।
ಚ್ಚದೆ ಬಲಗರ್ವಮಂ ನುಡಿವವಂಗೆ ಕೃತಾಂತನ ಕಾಲದಂಡಮಿಂ॥
ತಿದೆ ಶರಣೆಂಬವಂಗೆ ಖಚರೇಶ್ವರನಾರ್ಪಿದೆ ನೋಟ್ಪುದೆಂದು ಮಾ।
ಣದೆ ಮೆಱೆಗುಂ ಪ್ರತಾಪನಿಧಿ ಮಲ್ಲನ ಬೀರದ ಕಾಹಳಾರವಂ ॥ 1562 ॥

**285 ಅರಸಿಯಕೆರೆ 77 [1219]**

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ವಸುಧೈಕಬಾಂಧವ ರೇಚರಸ, ಮೊದಲಾದವರು ಅರಸಿಯಕೆರೆಯಲ್ಲಿ ಸಹಸ್ರಕೂಟ ಜಿನಬಿಂಬವನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಯಾದವ ವಂಶ

ಶ್ರೀರಾಮಾವಸಥಂ ಜಗಜ್ಜನನುತಂ ಗೋತ್ರಾಸ್ಪದಂ ಭೂರಿಗಂ।
ಭೀರಂ ಸತ್ವಸಮನ್ವಿತಂ ನಿಖಿಲವಸ್ತುಸ್ಥಾನಮುರ್ವೀತಳಾ॥
ಧಾರಂ ನಿತ್ಯಮುದಾತ್ತಮಪ್ರತಿಮಮೆಂಬೀಪೆರ್ಮೆಯಿಂ ಭಾವಿಸಲ್।
ಪಾರಾವಾರದವೊಲ್ ನೆಗೞ್ತೆವಡೆದಿರ್ಕುಂ ಯಾದವಾಖ್ಯಾನ್ವಯಂ ॥ 1563 ॥

ಬಲ್ಲಾಳ II

ಬುಧನಂತಿಳಾವರಂ ವಾ। ರಿಧಿಯಂತೆ ವಿಶಾಲವಿಲಸದಪಡಕ್ಷೀಣಂ॥
ಮಧುಸಖನಂತಸಮಾಸ್ತ್ರಂ। ಸುಧಾಂಶುಧರನಂತುಮಾಧವಂ ಬಲ್ಲಾಳಂ ॥1564॥

ರೇಚರಸ

ವದನಂ ವಾಗ್ವನಿತಾವಿಲಾಸಸದನಂ ವಕ್ಷಂ ರಮಾನರ್ತಕೀ।
ವಿದಿತಾನರ್ತಮುದಾರಮರ್ಥಿಜನತಾಸಂತರ್ಪಣಂ ಕೀರ್ತಿಕೌ॥
ಮುದಿ ಜೈನಾರ್ಣವವರ್ಧನಂ ಗುಣಗಣಂ ಭೂಭೂಷಣಂ ಮೂರ್ತಿ ಚಾ।
ರುದಯಾನ್ವಿತಮೆನಲ್ಕೆ ರೇಚಣಚಮೂಪಂ ಪೆರ್ಮೆಯಂ ತಾಳ್ದಿದಂ ॥1565॥

ಒಸೆದವರಿವರೆನ್ನದೆ ಸಂ। ತೊಸಮಪ್ಪಿನಮಿತ್ತು ಪಡೆದನೀವಸುಮತಿಯೊಳ್।
ವಸುಧೈಕಬಂಧುವೆಂಬೀ। ಪೆಸರಂ ರೇಚರಸನುಂತು ದೇಸಿಯಿನಾಯ್ತೇ ॥1566॥

ಅರಸಿಯಕೆರೆ

ನತಭೃಂಗಾಂಭೋಜಷಂಡಂ ಶುಕಪಿಕವಿವಿಧೋದ್ಯಾನಸಂಕೀರ್ಣಮಾಪೂ ।
ರ್ಣತಟಾಕಂ ಗಂಧಶಾಲೀಪರಿಮಳಕಳಿತಂ ಪುಷ್ಪಪುಂಡ್ರೇಕ್ಷುವಾಪೀ ॥
ವೃತಮುತ್ತುಂಗಪ್ರಭಾಭಾಸುರಸುರಗೃಹಸಂಪನ್ನಮುದ್ಯತ್ಪ್ರಜಾಪೂ ।
ರಿತಮುರ್ವೀಮಂಡನಂ ಸ್ಪಂದರಸಿಯಕೆಱೆಯಂ ಬಣ್ಣಿಸಲ್ ಬಲ್ಲನಾವಂ ॥1567॥

## 286 ಬೇಲೂರು 112 [ಸು. 1220]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ಸಾಯಲು ತನ್ನ ಸ್ವಾಮಿಯ ಮರಣಾನಂತರ ತಾನು ಬದುಕಿರುವುದು ನಾಚಿಕೆಗೇಡೆಂದು ಭಾವಿಸಿ ಆ ದೊರೆಯ ದಂಡನಾಥನಾದ ಕುವರಲಕ್ಷ್ಮನು ತನ್ನ ಸತಿಯೊಡನೆಯೂ, ತನ್ನ ಕೈಯ ಕೆಳಗಿದ್ದ ಸಾವಿರ ಜನ ವೀರರೊಡನೆಯೂ ಮೃತಿಯನ್ನು ಹೊಂದಿದಂತೆ ಹೇಳಿದೆ.

ಬಲ್ಲಾಳ II

ದ್ವಿಷದುರ್ವೀಪಾಲರಂ ವಿಕ್ರಮಗುಣನಿಲಯಂ ವೀರಬಲ್ಲಾಳದೇವಂ ।
ವಿಷಮಾರಣ್ಯಂಗಳೊಳ್ ನಿರ್ಜರಯುವತಿಯುರುತ್ಸಂಗದೊಳ್ ತಮ್ಮ ರಾಜ್ಯಾ ।
ಭಿಷವವ್ಯಾಸಂಗದೊಳ್ ಸಂಗರದೊಳೆಡಱಿ ಬೆನ್ನಿತ್ತರಂ ಸತ್ತರಂ ತ ।
ನ್ನಿಷುವಿಂಗೂಡಾಗದಾಳಾದರನಿರಿಸಿದನೇಂ ಭೂಪರಿಂತಾಗವೇಡಾ ॥1568॥

ನೃಗನಳನಹುಷಯುಧಿಷ್ಠಿರ । ಸಗರಭಗೀರಥದಿಲೀಪಪುರುಪುತ್ಸಾಯು ।
ರ್ಗಗನಚರಭರತರಾಮಾ । ದಿಗಳಳವೇ ನೆಗಟ್ದಿ ವೀರಬಲ್ಲಾಳನೃಪಂ ॥1569॥

ನೃಪರಾರುಂ ವೀರಬಲ್ಲಾಳನೊಳದಿರದೆ ಮಾಱಾಂಪರೇ ಮೀಱಿ ಶಾರ್ದೂ ।
ಳಪತಾಕಾದಂಡಮಲ್ಲಾಡಿದೊಡೆ ಮನದೊಳಲ್ಲಾಡುವರ್ ಪುಲ್ಲೆವಿಂಡಂ ॥
ತೆ ಪೊಲಂಗೊಂಡೋಡುವರ್ ಪೊಣ್ಮಿದ ಭಯದೊದವಿಂ ಸಂಗರಕ್ಷೋಣಿಯಿಂದಾಂ ।
ತಪೆವೆಂಬಾಗಾಂಪುವೇಡಾರಱಿಯದರೊಳರೇ ಕಾದುವಣ್ಮುಳ್ಳ ಗಂಡರ್ ॥1570॥

ಗಿರಿವನಜಲದುರ್ಗಂಗಳ । ನುರವಣೆಯಿಂ ಪವಿವೊಲಗ್ನಿವೋಲ್ ಗ್ರೀಷ್ಮದವೋ ।
ಲಿರದೊಡೆವುದು ಸುಡುವುದು ಪುಡಿ । ವರೆ ತವಿಪುದು ಯದುನೃಪಾಲಕೋಪಾ
ಟೋಪಂ ॥1571॥

ಅಸದಾಳಾಪಕ್ಕೆ ಪಕ್ಕಾಗದ ನುಡಿ ತೊಡರ್ದಂದಾರುಮಂ ಯುದ್ಧದೊಳ್ ಭಂ ।
ಗಿಸಿ ಗೆಲ್ಲಂಗೊಳ್ವ ಶೌರ್ಯಂ ನೆರೆದೆರೆಯೆ ಬುಧಶ್ರೇಣಿ ಪೊಣ್ದೇವ ದಾನ ॥
ವ್ಯಸನಂ ಮರ್ಯಾದೆಯಂ ದಾಂಟದೆ ವಸುಮತಿಯಂ ಕಾವ ಕಾರುಣ್ಯಮಾವೊಂ ।
ಗೆಸೆಗುಂ ಬಲ್ಲಾಳದೇವಂಗೆಸೆಗುಮಮಮ ಭೂಪಾಳರಿಂತಾಗವೇಡಾ ॥1572॥

## ಕುವರಲಕ್ಷ್ಮ

ಎನೆ ನೆಗಟ್ದಾನೃಪೋತ್ತಮನ ಮಂತ್ರಿಶಿಖಾಮಣಿ ವಂದಿಬೃಂದನಂ ।
ದನವನಮಾಧವಂ ಖರಕರಪ್ರತಿಮೋರ್ಜಿತತೇಜನಾಹವಾ ॥
ವನಿಯೊಳರಾತಿಭೂಭುಜರನಿಕ್ಕುವ ತಕ್ಕಿನ ವಿಕ್ರಮಾರ್ಜುನಂ ।
ಮನುಜಮಹೇಶ್ವರಂ ಕುವರಲಕ್ಷ್ಮನನಿಂದಿತವೀರವಂಶಜಂ ॥1573॥

ಅರಮನೆ ತೊಟ್ಟಿಲ್ ನೆಗಟ್ದಾ । ದರಮದು ಬಾಯೆಣ್ಣೆ ದಾದಿಯರ್ ತನ್ನಂತಃ ।
ಪುರಮೆನೆ ಬಲ್ಲಾಳನೃಪಂ । ಪೊರೆದ ಮಗಂ ಕುವರಲಕ್ಷ್ಮದಂಡಾಧೀಶಂ ॥1574॥

ಗುರುವುಂ ದೈವಮುಮಾಳ್ದನೆ । ಪರತ್ರೆಗಂ ತನಗಿಹತ್ರೆಗಂ ಪೆಱನೊರ್ವಂ ।
ಗುರುವಿಲ್ಲ ದೈವಮಿಲ್ಲೆನೆ । ಧರೆಗೆಸೆದೊಂ ಕುವರಲಕ್ಷ್ಮದಂಡಾಧೀಶಂ ॥1575॥

ಅರಮನೆ ನೆರೆಮನೆ ನಂಟಂ । ನರಪತಿ ತನಗಾಪ್ತಪರಿಜನಂ ಸಚಿವರೆನಲ್ ।
ದೊರೆವಡೆದಂ ಬಲ್ಲಾಳನ । ಪುರದಳವಿಗೆ ಕುವರಲಕ್ಷ್ಮ ದಂಡಾಧೀಶಂ ॥1576॥

ಆಳರಸೆಂಬ ಭೇದಮಿನಿತಪ್ಪೊಡಮಿಲ್ಲಿವರಲ್ಲಿ ತೇಜಮುಂ ।
ಲೀಳೆಯು ರಾಜ್ಯಚಿಹ್ನಮುಮವಿರ್ವರೊಳಂ ಸಮಮಕ್ಕುಮೆಂಬಿನಂ ॥
ಪಾಳಿಸುವರ್ ಧರಾವಳಯಮಂ ಪರಮೋತ್ಸವದಿಂದೆ ವೀರಬ ।
ಲ್ಲಾಳನೃಪಾಳನುಂ ಕುವರಲಕ್ಷ್ಮಚಮೂಪನುಮೇಂ ಸಪುಣ್ಯರೋ ॥1577॥

ಶ್ರೀಯುಂ ಶ್ರೀಧರನಾಯುಮಂ ವನಜಜಂ ಗೌರೀವರಂ ಕೀರ್ತಿಯಂ ।
ಕಾಯಕ್ಕೊಪ್ಪುವ ಕಾಂತಿಯಂ ವಿಧು ದಿನೇಶಂ ತೇಜಮಂ ಭೋಗಿನೀ ॥
ಜಾಯಂ ಭೋಗಮನೆಣ್ಬರುಂ ದಿಗಧಿಪರ್ ತಂತಮ್ಮೊಳುಳ್ಳೊಳ್ಪನೊ ।
ಲ್ದೀಯುತ್ತಿರ್ಕೆ ಕುಮಾರಲಕ್ಷ್ಮರಥಿನೀನಾಥಂಗತಿಪ್ರೀತಿಯಿಂ ॥1578॥

ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ ವೀರಬಲ್ಲಾಳದೇ ।
ವನ ದಾನೋನ್ನತಿಗಂ ಜಯೋನ್ನತಿಗಮೀಯಲ್ ಪೂಣ್ದು ಮುಂದಿಟ್ಟು ರಾ ॥
ಮನ ಬೀಡಿಂಗಣುಮಂ ಯಮಾತ್ಮಜನ ಬೀಡಿಂಗರ್ಜುನಂ ಚಂದ್ರಜಾ ।
ಟನ ಬೀಡಿಂಗೆ ಕುಮಾರನಿರ್ಪ ತೆಱದಿಂದಿರ್ದಪ್ಪನೇಂ ಧೀರನೋ ॥1579॥

ಸಾಧಿಸಿ ಕೊಟ್ಟನಾಳ್ದ ಯದುವಂಶನಮೇರುಗೆ ಕೂಡೆ ದಕ್ಷಿಣಾಂ ।
ಭೋಧಿವರಂ ಧರಾವಳಯಮಂ ಬುಧಕೋಟಿಗೆ ಕೊಟ್ಟನರ್ಥಮಂ ॥
ಸಾಧನೆವೋಯ್ತು ಸರ್ವನಿಧಿಯೆಂಬಿನೆಗಂ ದೊರೆಯಾರ್ ಕುಮಾರಲ ।
ಕ್ಷ್ಮೀಧರದೇವನೊಳ್ ಪತಿಹಿತಕ್ರಮದೊಳ್ ಪದೆದೀವ ದಾನದೊಳ್ ॥1580॥

ವಿನಯದ ಪೆರ್ಮೆ ಲಕ್ಷ್ಮಿಗೆ ವಿವೇಕದ ಮೆಯ್ಸಿರಿ ವಾಣಿಗಾಶ್ರಿತ ।
ರ್ಗನುನಯದಿಂದಮೀವ ಬಗೆ ದಾನಗುಣಕ್ಕೆ ಕಡಂಗಿ ಸಂಗರಾ ॥
ವನಿಯೊಳರಾತಿಯಂ ತವಿಪ ತಕ್ಕು ಜಯಾಂಗನೆಗೀಗಳಲ್ತೆ ನೆ ।
ಟ್ಟನೆ ದೊರೆವೆತ್ತುದೀಕುವರಲಕ್ಷ್ಮಚಮೂಪನೊಳಾದ ಸಂಗದಿಂ ॥1581॥

ಎಕ್ಕವದಂ ದಲೀಕುವರಲಕ್ಕೆಯನಾಡಿದ ಮಾತು ಕಲ್ಲೊಳಿ ।
ಟ್ಟಕ್ಕರದಂತೆ ಸತ್ಯಪರಿಪಾಳನಶೀಳಮನುಳ್ಳವಾವ ಕಾ ॥
ರ್ಯ್ಯಕ್ಕಮನರ್ಥಕಂ ಪೆಱರ ಮಾತು ವಿಚಾರಿಸಿ ನೋಡೆ ನೀರೊಳಿ ।
ಟ್ಟಕ್ಕರದಂತೆ ಸತ್ಯಪರಿಪಾಳನ ಶೀಳಮನುಳ್ಳವೆಲ್ಲಿಯುಂ ॥1582॥

ಅಱುವತ್ತುನಾಲ್ಕು ಕಳೆಗಳೊ । ಳಱಿಯದ ಕಳೆಯಿಲ್ಲ ಕುವರಲಕ್ಷ್ಮಚಮೂಪಂ ।
ಗಱಿಯದುವೆರಡೊಳವಿಲ್ಲೆನ । ಲಱಿಯಂ ಸೋಲ್ತುಱಿಯನರ್ಥಿಗಂ ಪಗೆವಂಗಂ ॥1583॥

ಆತಂ ಪತಿಭಕ್ತಿಸಮು । ನ್ವಿತಂ ಬಲ್ಲಾಳಭೂಮಿಪಾಳಂಗೆ ಜಗ ।
ತ್ಪೂತಚರಿತ್ರಂ ಕೊಟ್ಟಂ । ವೀತಭಯಂ ಭಾಷೆಯಂ ಪ್ರತಾಪವಿನೂತಂ ॥1584॥

ತೊಡರಂ ದೇಸೆಗೆ ಕಾಲೊಳಿಕ್ಕಿ ಪಡೆದರ್ಥಂ ಬೀಸರಂಬೋಗದಂ ।
ತೊಡಲಂ ರಕ್ಷಿಸಿ ನಂಬಿದಾಳ್ದನೆಡರೊಳ್ ಮತ್ತೊಂದು ಸಂತಾನಮಂ ॥
ಪಿಡಿವುದ್ಯೋಗದಿನಿರ್ಪಮಾತ್ಯರೆಣೆಯೇ ಬಲ್ಲಾಳದೇವಂಗೆ ಸಂ ।
ಗಡಮೆಂತಪ್ಪೆಡೆಯಲ್ಲಿಯುಂ ಕುವರಲಕ್ಷ್ಮಂ ತಾನೆ ತಾತ್ಪರ್ಯದಿಂ ॥1585॥

ತೊಡರೆಡಗಾಲೊಳೊಪ್ಪುವುದು ಬಲ್ಲಿಗೆಯುಂ ಮದದಂತಿಗಿಕ್ಕಿ ಬ ।
ಲ್ಪೊಡರಿಸುವೊಂದು ಭಂಗಿಯೊಳೆ ಪೊಂದೊಡರೊಳ್ ತೊಡರ್ದಿರ್ದ ಪಾಪೆಗಳ್ ॥
ತೊಡರ ತೊಡರ್ಪಿನೊಳ್ ತೊಡರಲಣ್ಮದ ಭಾಷೆಯುಮಾತ್ಯರಂಜಿ ಕಾ ।
ಲ್ವಿಡಿದವೊಲಿರ್ಪುವೇಂ ಕುವರಲಕ್ಷ್ಮಚಮೂಪತಿಗಿಂತಿದೊಪ್ಪದೇ ॥1586॥

ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ ।
ಸುತ್ತಿದ ಭಂಗಿಯಿಂದಮೆಸೆದಿರ್ಪುದು ಪೊನ್ನ ತೊಡರ್ ತದದ್ರಿಯಂ ॥
ಸುತ್ತಿದ ಕರ್ಣಿಕಾರವನಮಾಲೆವೊಲಿರ್ಪುದು ಕೊಟ್ಟ ಭಾಷೆಗ ।
ಚ್ಚೊತ್ತಿದ ಮಾಟ್ಕೆಯಿಂ ಕುವರಲಕ್ಷ್ಮಚಮೂಪನ ಪಾದಪದ್ಮದೊಳ್ ॥1587॥

ತೊಡರುಂ ಪಾಪೆಗಳುಂ ಝಣಝ್ಝಣರವಂ ಕೆಯ್ಗಣ್ಮೆ ವಾಮಾಂಘ್ರಿಯೊಳ್।
ನುಡಿಯುತ್ತಿರ್ಪುವು ಕೊಟ್ಟ ಭಾಷೆಗಿವನೊಳ್ ಮತ್ತಾರುಮೇನಾರ್ಪರೇ॥
ನುಡಿದಂತಣ್ಮಲದೆಂದುಮೆಂಬ ನುಡಿಯುಂ ಬಲ್ಲಾಳದೇವಂಗೆ ಕೈ।
ಪಿಡಿಯುಂ ಕಟ್ಟಿದ ಗೇಣುಮೀತನೆ ವಲಂ ದಂಡೇಶಲಕ್ಷ್ಮೀಧರಂ ॥1588 ॥

ತಾರಗೆಯಂತೆ ತಳ್ತಿಸೆವ ಮುತ್ತಿನ ಮೊತ್ತದಿನಾದ ಗಂಡಪೆಂ।
ಡಾರಮುಮಿಕ್ಕೆ ಚಂಪಕನವೋದ್ಗಮದಾಮದ ಚೆಲ್ವನಾಳ್ದು ವಾ॥
ಮಾರುಣಪಾದದೊಳ್ ಪೊಳೆವ ಪೊಂದೊಡರುಂ ಪತಿಭಕ್ತಿಯುಕ್ತಿವಿ।
ಸ್ತಾರಕುಮಾರಲಕ್ಷ್ಮರಥಿನೀಪತಿಗೊಪ್ಪುಗುಮೊಪ್ಪವನ್ಯರೊಳ್ ॥1589॥

ತಳತಳತೊಳಗುತ್ತುಂ ಪ। ಜ್ಜಳಿಸುವ ಮೌಕ್ತಿಕದ ಪೆಂಡೆಯುಂ ವಿಷ್ಣುಪದ।
ಕ್ಕಳವಟ್ಟುದೊಂದು ಧ್ರುವಮುಂ। ಡಳದಂದದೆ ಕುವರಲಕ್ಷ್ಮನಂಘ್ರಿಯೊಳೆಸೆಗುಂ
॥1590॥

ನಿಱಿಸಿದ ವೀರಶಾಸನದ ಕಲ್ ದೊರೆವೆತ್ತ ಯಶೋವಿಳಾಸಮುಂ।
ನಿಱಿಸಿದುದಷ್ಟದಿಗ್ವಳಯದೊಳ್ ದೊರೆಯಾವನೊ ಪೂಣ್ದ ಪೂಣ್ಕೆಯುಂ॥
ನೆಱಪುವ ಬಲ್ಪಿನೊಳ್ ಕುವರಲಕ್ಷ್ಮಚಮೂಪತಿಯುನ್ನನೆಂದು ತ।
ನ್ನೆಱಕದೆ ಬಣ್ಣಿಕುಂ ಧರಣಿ ಹೊಯ್ಸಳರಾಯನ ಗಂಧಹಸ್ತಿಯುಂ ॥1591॥

ಒಡದೊಱೆದಾಳ್ದನುಳ್ಳೊಡಮೆಯುಂ ಕವರ್ದಾದೆಡರಲ್ಲಿ ತಮ್ಮ ನಾ।
ಣಡಿಗಿಡೆ ಕೊಟ್ಟ ಭಾಷೆಗೊದವಲ್ಕಣಮಾಱದೆ ಪಿಂತೆ ಬಾಳ್ವ ನಿ॥
ಗ್ಗಡಿ ಸಚಿವರ್ಕಳಂ ನಗುವವೋಲೆಸೆದಿರ್ಪುದು ವೀರಶಾಸನಂ।
ಪೊಡವಿಯೊಳೆಂದೊಡಾರ್ ದೊರೆ ಯದುಕ್ಷಿತಿಪಾಲನ ಮಂತ್ರಿ ಲಕ್ಷ್ಮನೊಳ್ ॥1592॥

ಇಲ್ಲದ ಸಲ್ಲದ ಭಾಷೆಗೆ। ಕಲ್ಲಂ ನಿಱಿಸುವರನುಱದೆ ನಗುವವೊಲಿರ್ಕುಂ।
ಪಲ್ಲವಿಸಿ ಕುವರಲಕ್ಷ್ಮನ! ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್ ॥1593॥

ದೊರೆ ಪತಿಭಕ್ತಿಗೆ ತನ್ನೊಳ್। ಗರುಡಂ ಗರುಡಂಗೆ ತಾನೆ ದೊರೆ ಪೆಱರಾರುಂ।
ದೊರೆಯಲ್ಲರೆಂಬ ತೆಱದಿಂ। ದೊರೆಯಾದುವು ತನ್ನ ಗರುಡನೆಸೆವಾಕೃತಿಗಳ್ ॥1594॥

ವೀರದ ಶಾಸನಮುಂ ಮು। ನ್ನಾರುಂ ನಿಱಿಸಿದವರಿಲ್ಲ ಬಲ್ಲಾಳಧರಿ।
ತ್ರೀರಮಣನ ಮಂತ್ರಿವರಂ। ವೀರಭಟಂ ಕುವರಲಕ್ಷ್ಮ ದಂಡೇಶನವೋಲ್ ॥1595॥

ತನ್ನೊಡನೆ ತೊಱೆದ ಸುಭಟರ। ತನ್ನ ಮನಃಪ್ರಿಯೆಯ ತನ್ನ ಪರಮಾಯುಷ್ಯಂ।
ತನ್ನಾಳ್ದಂಗಾಯ್ತೆನಿಸಿದ। ನೇನ್ನೆಟ್ಟನೆ ಕಲಿಯೊ ಕುವರಲಕ್ಷ್ಮಚಮೂಪಂ ॥1596॥

ಆರ ಮನಕ್ಕೆ ವೀರರಸಮುಚ್ಚರಿಯಾಗಿರಲುಣ್ಮೆ ಪೊಣ್ಮದೊ।
ಲ್ದಾರ ಮನಕ್ಕೆ ಹರ್ಷಪುಳಕಂ ತನುವಿಂ ಪೊಱಪೊಣ್ಮದೀಕ್ಷಿಪಂ॥
ದಾರ ಮನಕ್ಕೆ ಭೀತಿಯೊದವಾಗದು ನಿನ್ನಯ ಪೂಣ್ಕೆ ರಾಯಸಾ।
ಧಾರ ಕುಮಾರಲಕ್ಷ್ಮರಥಿನೀಶ್ವರ ಭಾವಿಸುವಂದು ನಾಡೆಯುಂ ॥1597॥

ಬಾಸೆಗೆ ತಪ್ಪುವಂಕದ ನೆಗೞ್ತೆಯ ಲೆಂಕರ ಗಂಡನೆಂಬುದಂ।
ಬೀಸರಮಾಗದುದ್ಧರಿಪೊಡೇತೊದಳುದ್ಧರಿಪಂ ವಿರೋಧಿಸಂ॥
ತ್ರಾಸಿತವಿಕ್ರಮಂ ಕುವರಲಕ್ಷ್ಮ ಚಮೂವರನೊಲ್ದು ಮಾೞ್ಕೆಯಿಂ।
ಬಾಸೆಯನಿತ್ತು ಪುಚ್ಚಱಿವರಲ್ಲದೆ ಬಾಸೆಯನುದ್ಧರಿಪ್ಪರೇ ॥1598॥

ಇದು ಬಲ್ಲಾಳನೃಪಾಳಕಂಗೆ ಪಿರಿದುಂ ನಿತ್ಯತ್ವಮಂ ಮಾೞ್ಪುದ।
ಭ್ಯುದಯಕ್ಕಾಗರಮೆಂದು ಬಣ್ಣಿಸೆ ಜಗಂ ಭಾಸ್ವಚ್ಛಿಲಾಸ್ತಮ್ಭಮಂ॥
ಸದಳಂಕಾರದ ವೀರಶಾಸನಮನೀದಂಡೇಶಲಕ್ಷ್ಮೀವರಂ।
ಸುದತೀಸಂಯುತನೇಱಿದಂ ಪತಿಹಿತವ್ಯಾಪಾರಮಂ ತೋಱಿದಂ ॥1599॥

ಇವನ ಹೆಂಡತಿ ಸುಗ್ಗಲದೇವಿ

ಆತನ ಕಾಂತೆ ಕಂತುವಿನ ಕಾಂತೆಗೆ ರಾಮನ ಭಾಮೆಗಬ್ಜಸಂ।
ಜಾತನ ಚಿತ್ತವಲ್ಲಭೆಗೆ ರುದ್ರನ ಮೆಯ್ಯೊಡವಾದ ಭೂಧರೋ॥
ದ್ಭೂತೆಗೆ ಚಂದ್ರನಂಗನೆಗೆ ನಾಗನ ನಾಗಿಣಿಗೇಕೆ ಪೋಲ್ವೆಯಿೊ।
ಭೂತಳದೊಳ್ ಪೆಱಿರ್ ದೊರೆಯೆ ಸುಗ್ಗಲದೇವಿಗೆ ರಾಯರಾಣಿಯರ್ ॥1600॥

ವಾರಿಜದರ್ಪಣೇಂದುಮುಖಿ ವಾರಣಹಂಸಮಯೂರಯಾನೆ ಕ।
ಲ್ಹಾರಕುರಂಗಮತ್ಸ್ಯನಿಭಲೋಚನೆ ಕೋಕಿಲಚಾರುಕೀರವೀ॥
ಣಾರವೆ ಕೋಕತಾಳಫಳಹೇಮಘಟಸ್ತನಿಯೆಂದೊಡಾರುಮಿಾ।
ಧಾರಿಣಿಯೊಳ್ ವಧೂತ್ತಮೆಗೆ ಸುಗ್ಗಲದೇವಿಗೆ ಪೋಲ್ವೆಯಪ್ಪರೇ ॥1601॥

ಈ ಧರೆಯೊಳ್ ನೆಗೞ್ತೆವಡೆದಿರ್ದ ಪತಿವ್ರತದುನ್ನತಿಕ್ಕೆ ತಾಂ।
ಸಾಧನೆವೋಯ್ತು ಮುಂ ನೆಗೞ್ದರುಂಧತಿಯೊಳ್ ಪದೆದೀಗಳೀಕ್ಷಿಸಲ್॥
ಸಾಧನೆವೋಯ್ತು ಪೆಂಪುವಡೆದಿರ್ದ ಪತಿವ್ರತದುನ್ನತಿಕ್ಕೆ ಲ।
ಕ್ಷ್ಮೀಧರದಂಡನಾಥನ ಮನಃಪ್ರಿಯೆ ಸುಗ್ಗಲದೇವಿರಾಣಿಯೊಳ್ ॥1602॥

ಜಯಸಿಂಹಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದು ಭಾ।
ಷೆಯನಾ ಸುಗ್ಗಲದೇವಿ ಕೊಟ್ಟ ತೆಱದಿಂ ಬಲ್ಲಾಳಭೂಪೋತ್ತಮ॥
ಪ್ರಿಯಪುತ್ರಂಗೆ ಕುಮಾರಲಕ್ಷ್ಮರಥಿನೀನಾಥಂಗೆ ಕೊಟ್ಟಳ್ ಮನಃ।
ಪ್ರಿಯೆಯಿೊಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗೞ್ವನ್ನೆಗಂ ॥1603॥

ಎಡಗಾಲೊಳ್ ತೊಡರಂ ತೊಡರ್ಚಿ ಪತಿಯಂ ಬೇಳ್ಮಾಡಿ ನಿನ್ನೊಂದು ಪಿಂ।
ಬಡಿನೊಳ್ ನಿಲ್ವವಳಲ್ಲೆನೆಂದು ಸುಖದಿಂದುಂಡುಟ್ಟು ಕಾಲಂ ಕಱು॥
ತ್ತಡಸಲ್ ಪುಚ್ಚಱಿವನ್ಯಕಾಮಿನಿಯರಂ ಱೋಡಾಡುವಂತಿಕ್ಕಿದಳ್।
ತೊಡರಂ ಸುಗ್ಗಲದೇವಿ ತನ್ನೆಡದ ಪಾದಾಂಭೋಜದೊಳ್ ಲೀಲೆಯಿಂ ॥1604॥

ಕುವರ ಲಕ್ಷ್ಮನ ಭಟರು

ಧರೆಗೆ ನೆಗೞ್ತೆವೆತ್ತೆಸೆವ ಶಕ್ತಿಗೆ ಶೂದ್ರಕಭೂಭುಜಂಗೆ ಭಾ ।
ಸುರಮೆನೆ ಭಾಷಿತಂ ನೆಱಪುವಗ್ಗದ ಬೀರರದಯ್ವರಯ್ವದಿಂ ॥
ಬರೆ ಸುಭಟೋತ್ತಮರ್ ಕುವರಲಕ್ಷ್ಮಚಮೂಪತಿಗಿತ್ತು ಭಾಷೆಯಂ ।
ಧರೆ ಪೊಗೞ್ವನ್ನೆಗಂ ನೆಱಪುವಗ್ಗದ ವೀರರದೊಂದು ಸಾಸಿರಂ ॥1605॥

ತೊಱೆದಾಳ್ದನೊಡನೆ ಸಾಯದೆ । ಪೆಱಗುೞಿದಂ ತೊಱೆದು ಸತ್ತವನ ವೇಳೆ ದಲಾ ।
ವೞಿವೆವದನೆಂಬ ಗಂಡರೆ । ತೊಱೆದರ್ಕ ಲಿಕುವರಲಕ್ಷ್ಮನೊಡನತಿಸುಭಟರ್ ॥1606॥

## 287 ಚೆನ್ನಗಿರಿ 72 [1220]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಆಸಂದಿಯ ಪ್ರಭು ವೈಜರಸನ ಸೇವಕ ನಾಳ್ಪ್ರಭು ಕನ್ನಗೌಡನು ಶಿವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಜಗತೀಕಂಟಕಕೌಶಿಕವ್ರಜಮಡಂಗಲ್ ವಿಷ್ಣುಚೇತಸ್ತಮಂ ।
ಮಿಗೆ ಪಿಂಗಲ್ ಪರರಾಜಮಂಡಲಮದಾದಂ ಕುಂದಲುಗ್ರಾರಿದ್ಯೈ ॥
ತ್ಯಗಣಂ ಬೆಳ್ಕುಱಲಿಂತು ಹೊಯ್ಸಳಕುಭೃದ್ವಂಶೋದಯಾದ್ರೀಂದ್ರದಿಂ ।
ದೊಗೆದಂ ತೇಜಮನಪ್ಪುಕೆಯ್ದು ವಿನಯಾದಿತ್ಯಂ ಜಗಲ್ಲೋಚನಂ ॥1607॥

ಎರೆಯಂಗ

ಅಂಗವಿಲಾಸದೆ ರತಿಯೆಱೆ । ಯಂಗಂ ವಿಭವಾತಿಶಯದೆ ಶಚಿಯೆಱೆಯಂಗಂ ।
ತುಂಗಭುಜಬಲದೆ ಸಿರಿಯೆಱೆ । ಯಂಗಂ ಮಿಗಿಲೆನಿಸಿ ಸೊಗಯಿಸುವನೆಱೆಯಂಗಂ
॥1608॥

ವಿಷ್ಣುವರ್ಧನ

ಪುರಹರನ ಮೂಱು ಕಣ್ಗಳೊ । ಳುರಿಗಣ್ಣಪ್ರತಿಮಮಾದವೋಲ್ ಮೂವರ್ ಸೋ ।
ದರರೊಳ್ ವಿಕ್ರಮದೊದವಿಂ । ದರಸಾದಂ ವಿಷ್ಣುಮೂರ್ತಿ ವಿಷ್ಣುನರೇಂದ್ರಂ ॥1609॥

### ನಾರಸಿಂಹ I

ಅಳುರ್ವುದು ತನ್ನ ತೇಜಮರಿಮಂಡಳದಿಂ ರಿಪುಸೈನ್ಯಮಾಂಸದಿಂ ।
ತಳಿರ್ವುದು ತನ್ನ ಖಡ್ಗಲತೆ ವೈರಿಯ ಪೆಂಡಿರ ಸುಯ್ಯ ಗಾಳಿಯಿಂ ॥
ಮಿಳಿರ್ವುದು ತನ್ನ ಕೇತನಪಟಂ ಧರೆ ತನ್ನ ಸಿತಾತಪತ್ರದಿಂ ।
ಕುಳಿರ್ವುದಿದೇನಮಾನುಷಮೊ ರಾಜಗುಣಂ ನರಸಿಂಹದೇವನಾ ॥1610॥

ಮಗರೆಗನಾಜಿಯೊಳ್ ಸುಗಿದು ಕೊಟ್ಟಿಭಮಿಂತಿವು ಚೋಳನಟ್ಟಿದಾ- ।
ನೆಗಳಿವು ಪಾಂಡ್ಯನಂ ಸೆಳೆದು ಕಾಡವರಾಯನುಮಿತ್ತ ಮತ್ತಹ ॥
ಸ್ಸಿಗಳಿವು ನೋಡಿಮೆಂದು ನರಸಿಂಹನ ಬಲ್ಮೆಗೆ ಮೆಚ್ಚಿ ನೋಡುವರ್ ।
ಬಗೆಯೊಳಗಳ್ಕಿ ಸಿಂಹಳನ ಲಾಳನ ಗೌಳನ ರಾಯಭಾರಿಗಳ್ ॥1611॥

ಆನೆಯ ನಾಯಕಂಗೆ ನೆಗಬ್ದಾನೆಯ ನಾಯಕನಲ್ಲದಾನನೆಂ ।
ಬೀನುಡಿಯೇವುದೆಂದು ನರಸಿಂಹಮಹೀಪತಿ ನೂಱುಗಾವುದಂ ॥
ತಾನಿರದೆತ್ತಿ ಮೂಡಣ ದಿಶಾವರದುದ್ಧತರಂ ಪೊರಳ್ಚಿ ನೂ ।
ಱಾನೆಯನೊಡ್ಡಿದಾ ಮಗರನಾನೆಗಳಂ ಪಿಡಿತಂದನಶ್ವದಿಂ ॥1612॥

### ಬಲ್ಲಾಳ II

ಅನವದ್ಯೇಕ್ಷಣಮತ್ಸ್ಯನಂಘ್ರಿಕಮಠಂ ಗ್ರೀವಾವರಾಹಂ ಸುಮ ।
ಧ್ಯನೃಸಿಂಹಂ ಕ್ಷಿತಿಮಂಡಳಾಕ್ರಮಣಕೇಳೀವಾಮನಂ ಶತ್ರುಶಾ ॥
ಸನರಾಮಂತ್ರಿತಯಂ ಸ್ವಯೋಗಬಲಬುದ್ಧಂ ದುಷ್ಪ್ರಜೋನ್ಮಾಥಕ ।
ಲ್ಕಿ ನಿಜಾಧೀಶದಶಾವತಾರನೊಗೆದಂ ಬಲ್ಲಾಳಭೂಪಾಳಕಂ ॥1613॥

### ಆಸಂದಿಯ ಬಮ್ಮಭೂಪ

ಪ್ರತಿಪಕ್ಷಕ್ಷಿತಿದಕ್ಷದಕ್ಷಿಣಭುಜಾದಂಡಾರಿದಂಡಾವಿದಾ ।
ರಿತಶತ್ರುಕ್ಷಿತಿಸಂಕುಳಂಗಳೆನಸುಂತೀಬಂದನೀಬಂದನೆಂ ॥
ದತಿವಿಭ್ರಾಂತಿಯಿನುಗ್ರಮಂಡಳಿಕರಂತಲ್ಲಲ್ಲಿಗಂತಂತೆ ಬೆ ।
ರ್ಚುತುಮಿರ್ಪರ್ ಭುಜಶಾಳಿಬರ್ಮನೃಪನೊಳ್ ಮಾಱಾಂಪರೇ ಭೂಭುಜರ್
॥1614॥

## 288 ಹಾಸನ 106 [1221]

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಆಳಿಕೆಯಲ್ಲಿ ಮಾಧವ ದಣ್ಣಾಯಕನು ವಜ್ರದೇವನ ಮೇಲೆ ದಂಡೆತ್ತಿ ಹೋದಾಗ ಬಮ್ಮನು ಕಸರಿ ಕಾಳಗದಲ್ಲಿ ಕಾದಿ ಸತ್ತು ವೀರಸ್ವರ್ಗವನ್ನು ಪಡೆದನೆಂದು ಹೇಳಿದೆ.

ತೊಲತೊಲಗೆಂದು ಮಾರ್ಮಲೆವ ವಜ್ರನ ಸೇನೆಯನೊಕ್ಕಲಿಕ್ಕಿ ತಾಂ।
ತೊಲಗದೆ ನಿಂದು ವೈರಿಭಟರಂ ತವೆ ಕೊಂದು ರಣಾಜಿರಂಗದೊಳ್॥
ಮಲೆದಿದಿರಾಂತರಂ ತಱಿದು ಕಣ್ಬಸವೊತ್ತುವಿನೊಂದು ತಳ್ಗಿನಿಂ ?।
ಕಲಿತನಮಂ ನೃಸಿಂಹನರನಾಥನ ನಾಯಕ ಬಮ್ಮನುರ್ವಿಯೊಳ್॥1615॥

ಬಱಸಿಡಿಲೆಱಗುವ ತೆಱದಿಂ। ದುಱದಾಂತರನಿಕ್ಕಿ ಪೊಕ್ಕು ಸಂಗರಧರೆಯೊಳ್।
ಕುಱಿದಱಿದಱಿದಂ ಪಲಬರ। ನುಱಿ ಕಲಿ ನಿಟ್ಟೂರ ಮಾಚಗೌಂಡನ ಬಮ್ಮಂ॥1616॥

## 289 ಚೆನ್ನರಾಯಪಟ್ಟಣ 197 [1223]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಮಹಾಪ್ರಧಾನ ಅಮಿತ ದಂಡನಾಯಕನು ಸಿವರವೆಂಬ ಗ್ರಾಮವನ್ನು ಅಗ್ರಹಾರಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.

### ನಾರಸಿಂಹ II

ಕಡಿತಕ್ಕೇಱಿತ್ತು ನಾಲ್ಕುಂ ಕಡಲ ಕಡೆವರಂ ಧಾತ್ರಿ ಕೀರ್ತಿಸ್ರಜಂ ಸೋ।
ರ್ಮುಡಿಗಳ್ಗೇಱಿತ್ತು ದಿಕ್ಕಾಂತೆಯರ್ಗೆ ಸಕಲದಿಕ್ಪಾಳರುತ್ತಂಸಮಂ ಪಾ॥
ಯ್ದುಡರ್ದೇಱಿತ್ತಾಜ್ಞೆ ಸಿಂಹಾಸನಮನೊಸೆದು ತಾನೇಱಿ ಕುಳ್ಳಿರ್ಪುದುಂ ನೂ।
ರ್ಮಡಿವೀರಂ ನಾರಸಿಂಹಂ ಯದುಕುಳತಿಳಕಂ ಸೋಮವಂಶಪ್ರದೀಪಂ॥1617॥

### ಅಮಿತದಂಡನಾಯಕ

ಸವಖಂಡಂ ಬಿಟ್ಟಿ ತಂತಮ್ಮನಿಯರನಮಿತಂ ಗೆಲ್ದ ಸಂಗ್ರಾಮದೊಳ್ ವೈ।
ರಿವಧೂಸಂತಾನಮೋರಂತಱಸುವುದು ಪತತ್ಕುಂಡಳಾಂದೋಳಿತೈಕ॥
ಶ್ರವಣಂ ಹಸ್ತಚ್ಛಟಾಪ್ರಸ್ಫುರಿತಕುಚತಟಂ ನಿರ್ಯದತ್ಯುಷ್ಣಬಾಷ್ಪ।
ಪ್ಲವಮುಸ್ತವ್ಯಸ್ತಕೇಶಂ ಚಳದಳಕಚಯಂ ಗದ್ಗದೋತ್ಕಂಠಕಂಠಂ॥1618॥

ಕೃತಕೃತ್ಯಾಗಣ್ಯಪುಣ್ಯಾಮಿತವಿತರಣವಿಖ್ಯಾತಿಯಂ ತಾಳ್ದಲೆಂದು।
ಗ್ರತಪಂಗೆಯ್ಯುತ್ತುಮಿರ್ಕುಂ ಸುರತರು ಸಜಟಾವಲ್ಕಲಂ ಪುಷ್ಪಧೂಳೀ॥
ಸಿತಭಸ್ಮಾಲೇಪಮಾಲಂಬಿತಫಲವಿಲಸತ್ಕುಂಡಲಂ ಭೃಂಗಮಾಲಾ।
ವಿಲಸತ್ಕೃಷ್ಣಾಜಿನಂ ಸೇವಿತವನಮುದಕಾಹಾರಮಾಬದ್ಧಮೌನಂ॥1619॥

ಇಱಿಯಲ್ ಕಲ್ತ ಬಟಿಕ್ಕಮಿಲ್ಲ ಸರಿ ಭಂಗಂ ಶೌರ್ಯದೊಳ್ ಚಾಗಮುಂ।
ಮೆಱಿಯಲ್ ಕಲ್ತ ಬಟಿಕ್ಕಮಿಲ್ಲ ಕಲೆ ಕಂದೌದಾರ್ಯದೊಳ್ ಪೆರ್ಮೆಯಿಂ॥
ಪೆಱರಾರ್ ಪೊಯ್ಸಳರಾಜ್ಯದೊಳ್ ಪೆಸರ್ಗೊಳಲ್ ದಂಡಾಧಿಪರ್ ಮೀಸಲೇ।
ಱಱಿವಂ ? ಗೋಸಗೆ ಚಾಗಮೀವನಮಿತಂ ಶೌರ್ಯಾಂಜನಾನಂದನಂ॥1620॥

ಅಮಿತ ದಂಡನಾಯಕನ ಮಗ ಬಲ್ಲಾಳ ದಂಡನಾಯಕ

ನರಸಿಂಹಂ ಚಕ್ರಿ ಚಕ್ರಂ ಬಗೆದೆಡೆಗಮಿತಂ ಧಾರೆ ಬಲ್ಲಾಳುದೇವಂ ।
ನರಸಿಂಹಂ ವಜ್ರಿ ವಜ್ರಂ ಸಮರದೊಳಮಿತಂ ಬಲ್ಪು ಬಲ್ಲಾಳುದೇವಂ ॥
ನರಸಿಂಹಂ ಶೂಲಿ ಶೂಲಂ ಪಗೆಯೆರ್ದೆಗಮಿತಂ ಕೂರ್ಪು ಬಲ್ಲಾಳುದೇವಂ ।
ಸೆರಗುಂಟೇ ತಂದೆಮಕ್ಕಳ್ ಪತಿಹಿತವಿಜಯಾರಂಭದೊಳ್ ತಾವೆ ಮುಖ್ಯರ್ ॥1621॥

ತೊಡೆ ಮಡ ರೂಪು ರೇಖೆ ದನಿಯೊಟ್ಟಜೆ ಕೂರ್ಪಳವಟ್ಟು ತೋರ್ಪಿನಂ ।
ತೊಡರ್ದ ವಿರೋಧಿರಾಯರಥಿನೀಶರ ನೆತ್ತಿಯ ತುಪ್ಪಸಾಣೆಯೊಳ್ ॥
ಕಿಡಿಗಿಡಿಗುಟ್ಟೆ ಘಾರುಘುಣಿಲೆಂಬಿನೆಗಂ ಮಸೆವಂ ಕೃಪಾಣಮಂ ।
ಕಡುಗಲಿ ದಂಡನಾಥನಮಿತಾತ್ಮಜ ಪೇಷಣಹಣ್ಮ ಬಲ್ಲಿಗಂ ॥1622॥

ಇದು ತಾಂ ಸಂದುದು ವಂದಿ ಬಂದು ಮನೆಯೊಳ್ ಕೈವಾರಮಂ ಮಾಡಿ ಬೇ ।
ಡದ ಮುನ್ನೀವುದು ವೀರವೈರಿ ಮೊನೆಯೊಳ್ ಕಟ್ಟೇಟಿಗ್ಗಿಯಿಂ ಥಟ್ಟುಮಾ ॥
ಡದ ಮುಂ ಗೆಲ್ವುದು ಭೀತನಳ್ಕಿದೆಡೆಯೊಳ್ ಕಾಯೆಂದು ಬಾಯ್ವಿಟ್ಟು ನೋ ।
ಡದ ಮುಂ ಕಾವುದು ವೀರಮಾರುತಿಗೆ ಬಲ್ಲಾಳಂಗೆ ಜಾತಿವ್ರತಂ ॥1623॥

## 290 ಚೆನ್ನರಾಯಪಟ್ಟಣ 203 [1223]

ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಶ್ರೀಕರಣಾಗ್ರಣಿ ವಿಶ್ವನಾಥನು ಕೆಂಬಾಳನ್ನು ಅಗ್ರಹಾರಮಾಡಿ ಬ್ರಾಹ್ಮಣರಿಗೆ ಕೊಟ್ಟಂತೆ ಹೇಳಿದೆ.

ನಾರಸಿಂಹ II

ದೆಸೆಯಂ ತಳ್ಪೊಯ್ಯೆ ಕೀರ್ತಿಪ್ರಸರದೊಡನೆ ಕಾಲ್ಗೊಡಿ ತೀವ್ರಪ್ರತಾಪಂ ।
ರಸೆಯಂ ತಟ್ಕೈಸೆ ಬಾಹಾಬಳದೊಡನೆ ತಳಂಗೊಂಡು ರಾಜಾಜ್ಞೆ ಧರ್ಮಾ ॥
ವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಯವ್ರತಂ ಕೂ ।
ರಿಸಿದಂ ಶ್ರೀಕಾಂತೆಯಂ ಚೋಳಕುಳಕಮಳಕಂಜಪ್ರಿಯಂ ನಾರಸಿಂಹಂ ॥1624॥

ಅದಿಯಮಚೇರಪಾಂಡ್ಯಮಕರೋದ್ಧತಕಾಡವರಂ ಕರ್ವತೆಗೊಂ ।
ಡುದನದನೇಕೆ ಬಣ್ಣಿಸುವೆ ಬಣ್ಣಿಸು ಚೋಳನನೆತ್ತಿರಕ್ಕೆ ತಂ ॥
ದುದನೆಳೆ ಸೇತು ಮುಟ್ಟೆ ಬೆಸಕೆಯ್ದುದನಾತ್ರಿಕಳಿಂಗಭೂಪರ ।
ಟ್ಟಿದ ಕರಿ ಸಾಲೆವೊಕ್ಕಸಮಸಾಹಸಮಂ ನರಸಿಂಹರಾಯನಾ ॥1625॥

ರಸೆಯೊಳ್ ಕೂರ್ಮನನಿಟ್ಟು ವಾಸುಕಿಯನೂಡಂ ಕೊಟ್ಟು ತೂಗಾಡಿ ನಾ ।
ಲ್ದೆಸೆಗಂ ಜಾಱುಗುಮೆಂದು ಕೀಲಿಱಿದು ಕುತ್ಕೀಲಂಗಳಂ ತಳ್ಗದಂ ॥
ತು ಸೆಱಂಗಿಂಗಜನಾನೆಯಂ ನಿಱಿಪಿನಿತ್ತಾಯಾಸಮೇಕೆಂದು ತೋ ।
ಳ್ವಸೆಯೊಳ್ ತಾಳ್ದಿದನುರ್ವರಾರಮಣಿಯಂ ಚೋಳಪ್ರತಿಷ್ಠಾಪಕಂ ॥1626॥

ಸೋಮೇಶ್ವರ

ಕರಮಂತಶ್ಯೂನ್ಯಮಾಶಾಕರಿಗೆ ಭುಜಗರಾಜಂ ದ್ವಿಜಿಹ್ವಂ ಕುಳೋರ್ವೀ ।
ಧರಮೆಂತುಂ ಕರ್ಕಶಂಗಳ್ ಕಮಠನಣಮೆ ಮೆಯ್ದ್ದೋಱನೆಂದಿಟ್ಟು ದೋಷೋ ॥
ತ್ಕರಮಂ ಮುಂದಿಟ್ಟು ತನ್ನಂ ತರೆ ಜಯವಧು ಬಂದಿರ್ದಪಳ್ ಕೂರ್ತು ವಿಶ್ವಂ ।
ಭರೆಯೀಗಳ್ ವೀರಸೋಮೇಶ್ವರನರಪ ಭುಜಾದಂಡದೊಳ್ ಲೀಲೆಯಿಂದಂ ॥1627॥

ಪೊಸಮುಸೆಯ ಧಾರೆಯೊಳ್ ತ । ಳ್ತಿಸೆದಿರೆ ಜಸದಗೆಗಳಂತೆ ಮುತ್ತುಗಳಿದಿರಾ ।
ದಸುಹೃತ್ಕರಿಶಿರಮಂ ಪೋ । ಟ್ದಿಸಿ ಮಿಸುಪುದು ಸೋಯಿದೇವ ಭೂವಲ್ಲಭನಾ ॥1628॥

ವಿಶ್ವನಾಥ

ದುಸರಮುದಾಗೆ ಭಾರತಿಗೆ ಹಾರಮುನೋಯುರಮಾಗೆ ಕೋದವೋ ।
ಲೆಸೆವಿನಮಕ್ಕರಂ ಕರಯುಗಂಗಳೊಳಂ ಬರೆವಂ ಬುಧರ್ ಪರೀ ॥
ಕ್ಷಿಸಿ ತಲೆದೂಗೆ ಪೇಟ್ವಿನವಧಾನಶತಂಗಳನಾಗಳುಂ ಶ್ರುತ ।
ವ್ಯಸನತೆ ಲೀಲೆ ಬಾಲ್ಯದೊಳಮೀಕರಣಾಗ್ರಣಿವಿಶ್ವನಾಥನಾ ॥1629॥

## 291 ದಾವಣಗೆರೆ 25 [1224]

ಇದರಲ್ಲಿ ಹೊಯ್ಸಳರಾಜನಾದ 2ನೆಯ ನಾರಸಿಂಹನ ದಂಡನಾಯಕ ಪೋಲಾಳ್ವನು ಹರಿಹರ ಕ್ಷೇತ್ರದಲ್ಲಿ ಹರಿಹರದೇವಸ್ಥಾನವನ್ನು ಕಟ್ಟಿಸಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಹರಿಹರದೇವರು

ಶ್ರೀಮಹಿಮಾಸ್ಪದಂ ಭುಜಗಚಕ್ರಧರಂ ದ್ವಿಜರಾಜಭೂಷಣಂ ।
ಕಾಮದನರ್ಜುನೋದ್ಧುರುಚಿ ಗೋಪಮನೋಹರಮೂರ್ತಿ ಭಾಸ್ವದ ॥
ಬ್ಜಾಮಳನೇತ್ರನಾದಿಪುರುಷಂ ಪರಮೇಶ್ವರನೊಲ್ದು ದೇವಚೂ ।
ಡಾಮಣಿ ಸಂತತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ॥1630॥

ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಟ್ವರ್ ಕೆಲಂಬರ್ ।
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಟ್ವರ್ ಕೆಲಂಬರ್ ॥
ನರರಾಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ ।
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಮ್ಮಂ ॥1631॥

ಸಂದ ಶಿವಂಗೆ ವಿಷ್ಣುವಿನ ರೂಪಮದಾದುದು ವಿಷ್ಣುವಿಂಗೆ ಪೆಂ ।
ಪೊಂದಿ ನೆಗೞ್ತೆವೆತ್ತ ಶಿವರೂಪಮದಾದುದು ವೇದವಾಕ್ಯದಿಂ ॥
ದೆಂದದನೆಯ್ದೆ ನಿಶ್ಚಯಿಸುವಂತಿರೆ ಕೂಡಲಲೋಕಮೂರ್ತಿಯಿಂ ।
ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ॥1632॥

ನಿರವದ್ಯಂ ನಿರ್ವಿಕಲ್ಪಂ ನಿರತಿಶಯಸುಖಾನಂದಮಾದ್ಯಂತಶೂನ್ಯಂ ।
ಪರಿಪೂರ್ಣಂ ಚಿನ್ಮಯಂ ವಾಕ್ಕರಣರಹಿತಮಾದಾನಿರಾಕಾರಮಿಂತೀ ॥
ಧರೆಯೊಳ್ ಸಾಕಾರಮಾದಂತಿರೆ ನೆಗೞ್ದ ಗುಹಾರಣ್ಯದೊಳ್ ನಿಂದ ದೇವಂ ।
ಪರಿರಕ್ಷಿಕ್ಕುರ್ವಿಯಂ ಶ್ರೀಹರಿಹರನಮರಾಧೀಶಸಂಸ್ತೋತ್ರಪಾತ್ರಂ ॥1633॥

## ವಿಷ್ಣು

ಶ್ರುತಿ ಸಿಂಹಾಸನಮಾಗೆ ಚಾಮರಚಯಂ ಲಕ್ಷ್ಮೀವಿಳಾಸೇಕ್ಷಣ ।
ದ್ಯುತಿಯಾಗಾನತದೇವಕೋಟಿಮಣಿರೋಚಿರ್ಮಂಜರೀಪುಂಜಮಾ ॥
ರತಿಯಾಗೋಲಗದೊಳ್ ಸ್ವಕೀಯಮಹಿಮಾವಷ್ಟಂಭಮಂ ನಾರದಂ ।
ಸ್ತುತಿಗೆಯ್ಯುತ್ತಿರೆ ಪದ್ಮನಾಭನೆಸೆದಂ ಲೋಕೈಕಕಲ್ಪದ್ರುಮಂ ॥1634॥

## ಸಳ

ಕುಡಿವಾಲಂ ನೆಲನಂ ಪಳಂಚಲೆಯೆ ಕೋಪೋದ್ರೇಕದಿಂ ದಿಟ್ಟಿಗಳ್ ।
ಕಿಡಿಯಂ ಸಾಲಿಡೆ ನೀಳ್ದ ಕೇಸುರಿಯವೋಲ್ ಜಿಹ್ವಾದಳಂ ಪೊಣ್ಮೆ ಬ ॥
ಳ್ಸಿಡಿಲಂ ದಾಡೆಯ ಕೂರ್ಪದಿರ್ಪೆ ಹುಲಿಯೊಂದಾಕಸ್ಮಿಕಂ ವಿಸ್ಮಯಂ ।
ಬಡುವನ್ನಂ ಘನಘೋರಘರ್ಘರನಿನಾದಂ ಪಾಯ್ದುದುಚ್ಛೃಂಖಳಂ ॥1635॥

ಮುನಿಯಾಹುಲಿಯಂ ಹೊಯ್ ಸಳ । ಎನೆ ಸೆಳೆಯಿಂ ಹೊಯ್ದು ಕೊಂದು
ಹೊಯ್ಸಳನಾದಂ ॥1636॥

## ಎರೆಯಂಗ

ಮೆಱೆವನೆಱೆಯಂಗನಾತನ । ಕುಱುಪಿನ ಸುತನೆಱಗಿದವರ್ಗೆ ಮಱೆಯೆಱಗಿದವೋಲ್ ।
ಕಱೆವಂ ಹೊಮ್ಮಱೆಗಳನುಱೆ । ದೆಱಗದವರ್ಗ್ಗೆಱಗುತಿರ್ಪ ಬಱಸಿಡಿಲೆನಿಪಂ ॥1637॥

## ವಿಷ್ಣುವರ್ಧನ

ದೆಸೆಯೊಳ್ ನಿಶ್ಚಳಮಿರ್ಪ ದೇವರೆರ್ದೆ ಥಕ್ಕಾಧ್ವಾನದಿಂ ಡಕ್ಕೆವಾ।
ಜಿಸೆ ಸೇನಾರಜದಿಂ ಕೆಸರ್ಮಸಗೆ ವಾರಾಶಿವ್ರಜಂ ಬೆಟ್ಟು ಘ॥
ಟ್ಟಿಸಿದಂತಾಗೆ ಧರಿತ್ರಿಯೊಳ್ ಜಯನಿಯೋಗೋದ್ಯೋಗದೊಳ್ ಹೋಗಿ ಸಾ।
ಱಿಸಿ ವೀರಾರಿನೃಪಾಳರಂ ಬರಿಸಿದಂ ಮೂಱಿಟ್ಟಿಗಂ ಬಿಟ್ಟಿಗಂ॥1638॥

## ನಾರಸಿಂಹ I

ಬಲವಂತಂ ಭೀಮನಿಂದಂ ಛಲಿ ಭೃಗುಸುತನಿಂದಂ ಮಹಾತ್ಯಾಗಶೀಲಂ।
ಬಲಿಯಿಂದಂ ಗಂಗೆಯಿಂದಂ ಶುಚಿ ಕುಲಗಿರಿಯಿಂದಂ ಸ್ಥಿರಂ ವಾರ್ಧಿಯಿಂದಂ॥
ಸಲೆ ಗಂಭೀರಂ ಪ್ರತಾಪೋನ್ನತನತುಳದಿನಾಧೀಶನಿಂದಂ ನಿತಾಂತಂ।
ಕಲಿಯೆಂತುಂ ಸಿಂಗದಿಂದಂ ಸಮರವಿಜಯವಿಕ್ರಾಂತರಂಹಂ ನೃಸಿಂಹಂ॥1639॥

## ಬಲ್ಲಾಳ II

ನರಸಿಂಹಚಕ್ರವರ್ತಿಯ। ಕರಾಳಕರವಾಳತೀವ್ರಧಾರೆಗೆ ಕೂರ್ಪ।
ಚ್ಚರಿಯಾಗೆ ಪುಟ್ಟುವಂತಿರೆ। ಪರಾಕ್ರಮೋದ್ಭಾಸಿ ಪುಟ್ಟಿದಂ ಬಲ್ಲಾಳಂ॥1640॥

ಸಂದುಗ್ರಾಹಿತರಕ್ತದಿಂದಮಳಿಱಾದತ್ತೀಮಹೀಚಕ್ರಮಿ।
ನ್ನೆಂದಿಂಗಾಱುವುದೊಟ್ಟಿದಟ್ಟೆಗಳ ಬೆಟ್ಟೆಲ್ಲೆಲ್ಲಿಯುಂ ಬಟ್ಟೆಯಿ॥
ನ್ನೆಂದಿಂಗಪ್ಪುದು ಮಾರಿಗಂ ಹಸಿವದೆಂದಿಂಗಪ್ಪುದೆಂಬನ್ನೆಗಂ।
ಕೊಂದಂ ಸೇವುಣಸೈನ್ಯಮಂ ಬವರದೊಳ್ ಬಲ್ಲಾಳಭೂಪಾಳಕಂ॥1641॥

ಎರಡುಂ ಲಕ್ಕಂಬರಂ ಸುತ್ತಣೆಯುರಶನಿಸನ್ನಾಹದಿಂ ಪನ್ನೆರಟ್ಬಾ।
ಸಿರಮಶ್ವಶ್ರೇಣಿ ಮೇಲಂಕವಣೆಯ ಮಣಿಪರ್ಯಾಣದಿಂ ತೋರ್ಕೆವೆತ್ತೆ॥
ಯ್ತರೆ ತನ್ನೊಂದಾನೆಯಿಂ ಸೇವುಣನೃಪಬಳಮಂ ನೂಂಕಿ ಬೆನ್ನಟ್ಟಿ ಕೊಂದಂ।
ಸೊರಟೂರಿಂ ಕೃಷ್ಣವೇಣೀನದಿಯ ತಡಿವರಂ ವೀರಬಲ್ಲಾಳರಾಯಂ॥1642॥

ಒಟ್ಟಜಿಮಿಕ್ಕು ಸೊರ್ಕಿ ಕಱಿಗಟ್ಟಿದ ವೈರಿನೃಪಾಳಕರ್ ಛಲಂ।
ಬಟ್ಟಿರೆ ಸಂದೆರಂಬರಗೆ ಮಾನಿ ವಿರಾಟನ ಕೋಟೆ ಗುತ್ತಿ ಬೆ॥
ಳ್ವಿಟ್ಟಗೆ ಉಟ್ಟಪಳ್ಳಿ ಸೊರಟೂರ್ ಕುಱುಗೋಡೊಳಗಾದ ದುರ್ಗಮಂ।
ತೊಟ್ಟನೆ ಮುತ್ತಿಕೊಂಡಳವನೇವೊಗಟ್ವೆಂ ಗಿರಿದುರ್ಗಮಲ್ಲನಾ॥1643॥

## ನಾರಸಿಂಹ II

ಸಿರಿವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ ।
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ ॥
ಳಿರ ಕೋಟೀರಂಗಳೊಳ್ ವರ್ತಿಸೆ ವಿಶದಯಶಂ ಪರ್ಬೆ ವಾರಾಶಿತೀರಂ ।
ಬರಮಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ನಾರಸಿಂಹಂ ॥1644॥

ಕದನದ ಗೆಲ್ಲವೊಂದೆರಡು ಮೂಱಿನೆ ಲೆಕ್ಕಿಸಲುಂಟೆ ಸೇವುಣರ್ ।
ಕುದಿದಿದಿರಾಂತು ಸತ್ತುದನೆ ಬಣ್ಣಿಪೆನಿಂ ಗದೆಯಿಂದೆ ಭೀಮನೂ ॥
ಱದ ಕುರುಭೂಮಿಯಿಲ್ಲ ಕಲಿರಾಯನೃಸಿಂಹನ ಪಟ್ಟದಾನೆ ಮೆ ।
ಟ್ಟಿದ ರಣರಂಗಮಿಲ್ಲಮವು ಬಾಪ್ಪು ಜಯಂ ತನಗೆಕ್ಕಲಾವಣಂ ॥1645॥

ಜವರಾತೂ ಜಗದೇಕವೀರು ಮಝು ದೇವಾರೋಹಕೂ ಬಾಪು ಜಾ ।
ದವನಾರಾಯಣು ನಾರಸಿಂಗು ಭಲ ಎಂದಣ್ಮಂಗೆ ತಾಂ ಮೆಚ್ಚಿ ತೂ ॥
ಗುವವೋಲ್ ವಿಕ್ರಮಪಾಳಪಾವುಸಶಿರಃಕಂಜಂಗಳಲ್ಲಾಡುತಿ ।
ರ್ದುವು ತನ್ನಾನೆಯ ಹೊನ್ನ ಡೆಂಚೆಯುದ ಚಂಚತ್ಕೇತುದಂಡಂಗಳೊಳ್ ॥1646॥

ಕಡೆದಮರಾದ್ರಿಯಿಂ ಕಡಲನಂದು ಸುರಾಸುರರೊಂದೆ ದಂತಿಯುಂ ।
ಪಡೆದರದಿರ್ಕೆ ಪಾಂಡ್ಯಮಕರೋದ್ಧತಕಾಡವಸೈನ್ಯಮೆಂಬ ಹೆ ॥
ಗ್ಗಡಲನಳುರ್ಕೆಯಿಂದೆ ಭುಜಮಂದರದಿಂ ಕಡೆದುನ್ಮದೇಭಮಂ ।
ಪಡೆದನನೇಕಮಂ ಯದುಕುಳಾಭರಣಂ ನರಸಿಂಹವಲ್ಲಭಂ ॥1647॥

ಮೊದಲೊಳ್ ವಿಕ್ರಮಪಾಳಪಾವುಸರನಿತ್ತಲ್ ಕೊಂದನತ್ತಲ್ ಪೊರ ।
ಳ್ಚಿದನಾಕಾಡವರಾಯನಂ ಮಗರನಂ ಪಾಂಡ್ಯೇಶನಂ ಕೊಂಡನು ॥
ನ್ಮದಗಂಧೇಭಮನೊಲ್ದು ಪಟ್ಟಮನದಂ ಚೋಳಂಗೆ ಮುಂದಿಟ್ಟು ಕ ।
ಟ್ಟಿದನಾಸೇತುವಿನೊಳ್ ನೃಸಿಂಹನದಟಿಂ ನಟ್ಟಂ ಜಯಸ್ತಂಭಮಂ ॥1648॥

## ನಾರಣಪುರ

ವಾರವಧೂಕನತ್ಕನಕ ಕಂಕಣಝುಂಕೃತಿಯಿಂ ಮದೇಭಘಂ ।
ಟಾರವದಿಂ ರಸಂ ಮಸಗೆ ಪಾಡುವ ಗಾಯಕಬೃಂದದೊಂದು ಗೀ ॥
ತಾರವದಿಂ ಜಗಜ್ಜನಕೆ ರಾಗಮನಿತ್ತು ಸುಖಕ್ಕೆ ಸಂತತಂ ।
ಕಾರಣಮಾಗಿ ನಾರಣಪುರಂ ಪರಿರಂಜಿಪುದಂಧ್ರದೇಶದೊಳ್ ॥1649॥

## ಪೋಲಾಳ್ವ

ಸವುರಕ್ಕಾಯುಧಮೀವ ಕೆಯ್ ವಿತರಣಕ್ಕಾಲೋಚನಕ್ಕಾಪ್ತಮಂ ।
ಶ್ರಿ ಮಿಗಿಲ್ಗ ಣ್ ಪರದುರ್ಗವರ್ಗವಿಜಯಕ್ಕಾಸ್ಥಾನರಂಗಕ್ಕೆ ರ ॥
ಕ್ಷಮಯಾಕಲ್ಪಮೆನಿಪ್ಪಿನಂ ನೆಗಟ್ದಿ ಬಲ್ಲಾಳಂಗಮಾನಾರಸಿಂ ।
ಹಮಹೀಶಂಗಮಮಾತ್ಯನಾದನಧಿಕಂ ಪೋಲಾಳ್ವದಂಡಾಧಿಪಂ ॥1650॥

ರಣದೊಳ್ ತೆಂಕಣರಾಯನಂಕದ ಚತುಸ್ಸೈನ್ಯೋತ್ಕರಂ ದಂಡೆಯು ।
ಡ್ಡಣಮೀತಂ ಸಭೆಯೊಳ್ ಸಮಸ್ತಸಚಿವರ್ ಲೆಪ್ಪಂಗಳೆಂತೆಂಬ ಮಂ ॥
ತಣದೊಳ್ ನಾಲಗೆಯೀತನಿಂ ಸಚಿವರಂ ದಂಡೇಶರಂ ಬಲ್ಲೋಡಿ ।
ನ್ನೆಣೆಸಾ ಕಾರ್ಯದ ಖಡ್ಗದಗ್ಗಳಿಕೆಯೊಳ್ ಪೋಲಾಳ್ವನಂ ಪೋಲ್ವರಂ ॥1651॥

ಧರಣೀಪಾಳರ್ಕಳುಂ ಮಂತ್ರಿಗಳುಮಿತರರಿಲ್ಲೆಂದು ಬೊಟ್ಟಿತ್ತಿದೆಂ ರಾ ।
ಯರೊಳಂತಾನಾರಸಿಂಹಂ ಸಚಿವರೊಳೆಸಕಂಬೆತ್ತ ಪೋಲಾಳ್ವನೀಯಿ ।
ರ್ವರೆ ಶೌರ್ಯಂ ಕಾರ್ಯವೊಂಕಿರ್ದೆಡೆಯೊಳದಟನಿಂ ಗೆಲ್ದರಾರತ್ತ ಬಾಣೋ ।
ದರನಂ ನಿನ್ನಂತಿರಾರ್ ಹೊಯ್ಸಳನ ಸಕಳಸಾಮ್ರಾಜ್ಯಮಂ ಕಾದರಿತ್ತಲ್ ॥1652॥

ಇದು ವಿದ್ಯಾಲಕ್ಷ್ಮಿ ನಿರ್ಮತ್ಸರತೆಯುಸದಳಂ ಜವ್ವನಂಬೆತ್ತ ರೂಪಿಂ ।
ತಿದು ಗಂಗಾಪೂರಪೂತಂ ನಡೆವಳಿಯಿದು ವಿಕ್ರಾಂತನುತ್ಸೇಕಮೆಂದುಂ ॥
ಪದನಂ ಪೋಲಾಳ್ವದಂಡಾಧಿಪ ಪಡೆಯದು ನಿನ್ನಲ್ಲಿ ಮುನ್ನಾವುದೋ ನೋಂ ।
ತುದು ಸಯ್ಪಿಂದಾರನಾರಾಧಿಸಿ ಪಡೆದನೊ ನಿನ್ನನ್ನನಂ ಪದ್ಮಗರ್ಭಂ ॥1653॥

ಜಗಮಂ ಝಂಪಿಸುತಿರ್ಪ ಕೀರ್ತಿ ಮುಗಿಲಂ ಮುಟ್ಟಿರ್ಪ ಪೆಂಪಂಬುರಾ ।
ಶಿಗೆ ಮಾಱಿಂಡಲಮಾದ ಗುಣ್ಪು ಪತಿರಾಜ್ಯಶ್ರೀಗಡರ್ಪಾದ ಮಂ ॥
ತ್ರಗುಣಂ ರಾಗಮನುರ್ತಿಗೀವ ಸಿರಿ ಸಾಯುಜ್ಯಾದಿಸಂಪತ್ತಿಯುಂ ।
ನಗುತಿರ್ಪಚ್ಯುತಭಕ್ತಿ ತನ್ನೊಳೆನಿಪಂ ಪೋಲಾಳ್ವದಂಡಾಧಿಪಂ ॥1654॥

## ಹರಿಹರದೇವಸ್ಥಾನ

ದೆಸೆವೆಣ್ಗಳ್ ನೆಲೆಗೊಂಡ ಪುತ್ರಳಿಗಳಂ ಗೋತ್ರಾದ್ರಿಗಳ್ ತುಂಗಕೂ।
ಟಸಹಸ್ರಂಗಳನಿಂದುಸೂರ್ಯವಳಯಂಗಳ್ ಪೋಲ್ವಿನಂ ಕಾಂತಿ ಶೋ॥
ಭಿಸೆ ಚೆಂಬೊಂಗಳಸಂಗಳಂ ಹರಿಹರಶ್ರೀಗೇಹಮಂ ಕೂಡೆ ಮಾ।
ಡಿಸಿದಂ ಧಾರ್ಮಿಕಧರ್ಮರಾಜತನಯಂ ಪೋಲಾಳ್ವದಂಡಾಧಿಪಂ ॥ 1655 ॥

ಗಿರಿಯೋ ಕೂಟಮೋ ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ।
ದೊರೆವೆತ್ತಾದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ॥
ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವದಂಡೇಶನ।
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರಶ್ರೀದೇವತಾವಾಸಮಂ ॥ 1656 ॥

ಇದು ಪದ್ಮಾವಸಥಂ ದಿವಾಕರನವೋಲ್ ಕೀರ್ತ್ಯುನ್ನತಂ ಪಾತ್ರದಾ।
ನದವೋಲ್ ಸತ್ಕುಮುದಂ ಸರೋವರದವೋಲ್ ಘಂಟಾನ್ವಿತಂ ದಿಗ್ಗಜೇಂ॥
ದ್ರದವೋಲ್ ತಾನೆನಿಪನ್ನೆಗಂ ಹರಿಹರಶ್ರೀಗೇಹಮಂ ಮಾಡಿದಂ।
ಯದುಭೂಪಾಳನ ದಂಡನಾಥತಿಳಕಂ ಪೋಲಾಳ್ವದಂಡಾಧಿಪಂ ॥ 1657 ॥

ನಗವಾಯಿಂ ಕುಮುದಂಗಳಿಂ ನೆಗೆದ ಜಂಘಾಕಾಂಡದಿಂ ರನ್ನವ।
ಟ್ಟಿಗೆಯಿಂ ದಂಡಲತಾವಿಚಿತ್ರಮಯಪತ್ರವ್ರಾತದಿಂ ಘಂಟೆಯಿಂ॥
ಬಗೆಯಂ ಬಲ್ಸೆಱೆಗೆಯ್ವ ಪುತ್ತಳಿಗಳಿಂ ರಂಗಸ್ಥಳೀಸ್ತಂಭಮಾ।
ವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀದೇವತಾಮಂದಿರಂ ॥ 1658 ॥

## 292 ಗುಬ್ಬಿ 11 [1226]

ಇದರಲ್ಲಿ ಹೊಯ್ಸಳರಾಜನಾದ 2ನೆಯ ನಾರಸಿಂಹನ ಮಹಾಪ್ರಧಾನನೂ ಪದ್ಮಲದೇವಿಯ ಶ್ರೀಕರಣದ ಹೆಗ್ಗಡೆಯೂ ಆದ ನಾಗಣ್ಣನ ಮಗ ನರಸಿಂಗದಣ್ಣಾಯಕನು ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ನಾಗಣ್ಣ

ಸ್ವಸ್ತಿ ಶ್ರೀಮದಗಣ್ಯಪುಣ್ಯಭವನಂ ಬಲ್ಲಾಳಭೂಪಾಳಮಂ।
ತ್ರಿಸೋಮಾಂಬರಭಾನು ಪದ್ಮಲಮಹಾದೇವೀಸಭಾಂಭೋಜಿನೀ॥
ಪ್ರಸ್ತುತ್ಯೋಜ್ವಲಹಂಸನನ್ವಿತನಿಯೋಗೋದ್ಯೋಗಲಕ್ಷ್ಮೀವಧೂ।
ವಿಸ್ತಾರಂ ಭುಜನಿರ್ಜಿತಾನ್ಯಮಹಿಭೃತ್ಸೇನಾಗಣಂ ನಾಗಣಂ ॥ 1659 ॥

ಕುಲದೊಳ್ ಸತ್ಯದೊಳನ್ವಿತಾಚರಣದೊಳ್ ಗಾಂಭೀರ್ಯದೊಳ್ ಧೈರ್ಯದೊಳ್।
ಚಲದೊಳ್ ಚಾಗದೊಳಿಷ್ಟಶಿಷ್ಟಜನತಾಸಂತುಷ್ಟಿಯೊಳ್ ನೋಟಿಪ್ಪೊಡೀ॥
ಕಲಿಕಾಲಂ ತಲೆವಾಗಿಲಂ ಪುಗದದೇನಂ ಬಣ್ಣಿಪೈ ಸಂದ ಪ।
ದ್ಮಲಮಾದೇವಿಯ ರಾಜ್ಯರಂಜಿತಲತಾಪುನ್ನಾಗನಂ ನಾಗನಂ ॥ 1660 ॥

### ನರಸಿಂಗದಣ್ಣಾಯಕ

ತೊಳಪೆಳವೆಱೆ ಕೆಂಜಡೆಯೊಳ್। ಪಳಚ್ಚನಿರಲಲ್ಲಿ ಬಳಸೆ ಗಂಗಾನದಿ ಕ।
ಣ್ಗೊಳಿಪ ಕಲಿದೇವನತ್ಯು। ಜ್ವಳಕೀರ್ತಿಗೆ ನಾರಸಿಂಹ ನಿನಗೀಗೊಳ್ಪಂ ॥ 1661 ॥

**293 ಬೇಲೂರು 151 [1227]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಆಳಿಕೆಯಲ್ಲಿ ಸೋಮಯ್ಯ ನಾಗಯ್ಯಗಳು ಸೋಮನಾಥದೇವರ ಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ II

ಧುರದೊಳ್ ಬಂದಱಿದೊಡ್ಡಿ ನಿಂದರಿಬಳವ್ರಾತಕ್ಕೆ ಕೆಯ್ಯಾಂತು ನಿಂ।
ದೆರೆದರ್ಥಿಪ್ರಕರಕ್ಕೆ ವಾರವನಿತಾನೀಕಕ್ಕೆ ಗಂಭೀರಸಾ॥
ಗರನೀವೀರನೃಸಿಂಹನಾಂತಿಱಿಯಲೀಯಲ್ ಸೋಲಿಸಲ್ ನೋೞ್ಪೊಡಾ।
ಹರಿಪುತ್ರಂ ಹರಿಪುತ್ರನಾಹರಿಸುತಂ ತಾನೆಂದೊಡೇವಣ್ಣಿಪೆಂ ॥ 1662 ॥

ಪಾಳಿಸಿ ಚೋಳನಂ ಮಗರನಾನೆಯನರ್ಥಮನೆಯ್ದೆ ಕೊಂಡು ನಿ।
ರ್ಮೂಳಿಸಿ ಪಾಂಡ್ಯಪಲ್ಲವಮಹೀಶರನಾಳ್ವೆಸಗೆಯ್ಸಿ ಕೂಡೆ ಬಾ॥
ಯ್ಕೇಳಿಸಿ ಪೂರ್ವದಿಗ್ವಳಯಮಂ ಕಡಲಾಂಕೆಯದಾಗೆ ಶೌರ್ಯದಿಂ।
ದೇಳಿಸಿದಂ ನೃಸಿಂಹನೃಪನಾಜಿಯೊಳಾದಿನೃಪಾಳಜಾಳಮಂ ॥ 1663 ॥

**294 ನಾಗಮಂಗಲ 98 [1230]**

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ಕೆಲವರು ಗೌಡರು ಕೊಮ್ಮೇಶ್ವರ ದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ವಿನಯಾದಿತ್ಯನ ನಂದನಂ ನಿಜಭುಜಾವಷ್ಟಂಭದಿಂ ವಿಶ್ವಮೇ।
ದಿನಿಯಂ ತಾಳ್ದಿದನಾಜವೀರನೆಱೆಯಂಗಂ ಹರ್ಷಮಂ ತಾಳ್ದೆ ವಿ॥
ತ್ರನಿಕಾಯಂ ನಿಜಶತ್ರುಗಳ್ ಭಯಮನೆತ್ತಂ ತಾಳ್ದೆ ಭೀತಾನತರ್।
ಘನಸಂಪತ್ತಿಯನೆಯ್ದೆ ತಾಳ್ದೆ ದಿಗಧೀಶರ್ ತಾಳ್ದೆ ತನ್ನಾಜ್ಞೆಯಂ ॥ 1664 ॥

ವಿಷ್ಣುವರ್ಧನ

ಪೆಸರ್ಗೊಂಡಾವಾವ ದೇಶಂಗಳನೆಣಿಸುವುದಾವಾವ ದುರ್ಗಂಗಳಂ ಬ।
ಣ್ಣಿಸಿ ಪೇೞುತ್ತಿರ್ಪುದಾವಾವವನಿಪತಿಗಳಂ ಲೆಕ್ಕಿಸುತ್ತಿರ್ಪುದೆಂಬೊಂ॥
ದೆಸಕಂ ಕೆಯ್ಗಣ್ಮೆ ನಾಲ್ಕುಂ ಕಡಲ ಕಡೆವರಂ ದಿಗ್ಜಯೋತ್ಸಾಹದಿಂ ಸಾ।
ಧಿಸಿದಂ ವಿಕ್ರಾಂತದಿಂ ಸಂದೆಱಗನೃಪತಿಯಾತ್ಮೋದ್ಭವಂ ಬಿಟ್ಟಿದೇವಂ ॥ 1665 ॥

## ಬಲ್ಲಾಳ II

ಉರದೊಳ್ ಸಪ್ತಾಂಗಲಕ್ಷ್ಮೀವಧು ವಿಜಯಭುಜಾದಂಡದೊಳ್ ವಿಕ್ರಮಶ್ರೀ।
ಧರೆಯೊಳ್ ತನ್ನಾಜ್ಞೆ ತನ್ನೊಳ್ ನೃಗನಳನಹುಷಕ್ಷತ್ರಧರ್ಮಂ ಪದಾಬ್ಜೋ॥
ದರದೊಳ್ ಭೀತಾನತೌಘಂ ಸುಖಮಿರೆ ಪರಮೋತ್ಸಾಹದಿಂ ವಿಶ್ವವಿಶ್ವಂ।
ಭರೆಯಂ ದೋರ್ದಂಡದೊಳ್ ತಾಳ್ದಿದನತುಳಬಳಂ ವೀರಬಲ್ಲಾಳದೇವಂ ॥ 1666 ॥

## ನಾರಸಿಂಹ II

ನಡೆವನ್ನಂ ನಾರಸಿಂಹಕ್ಷಿತಿಪತಿಯುವನೀಪಾಳರೆಲ್ಲಿರ್ದಪರ್ ಬಾ।
ಳ್ವಿಡಿವನ್ನಂ ಕ್ಷತ್ರಿಯರ್ ಸಂಗರಸಮಯದೊಳಾರ್ ನಿಂದಪರ್ ದುರ್ಗಮಂ ಪೊ॥
ಕ್ಕೊಡಮುರ್ವೀಪಾಳರಂ ಪೆಣ್ಣುಡೆಯುನುಡಿಸುಗುಂ ತನ್ನ ದೋರ್ದಂಡಶೌರ್ಯಂ।
ಪೊಡೆಕಿಚ್ಚಂ ಕಾಸುತಿರ್ಕುಂ ಕಡೆಯುರಸುಗಳಂ ತನ್ನ ತೇಜಃಪ್ರತಾಪಂ ॥ 1667 ॥

## ಸೋಮೇಶ್ವರ

ನೆಲನಂ ಪೊತ್ತೆತ್ತಿ ನಾಳ್ವರ್ತನದ ಮಹಿಮೆಯಿಂ ಪೊಂಗುವಂ ಕೂರ್ಮರಾಜಂ।
ತಲೆಯೆತ್ತಿರ್ಪಂ ಫಣೀಶಂ ಮದಮನೆಸಗುವಂ ದಿಗ್ಗಜೇಂದ್ರಂ ನಿತಾಂತಂ॥
ಬಲಿದಿರ್ಪಂ ಗೋತ್ರಭೂಭೃದ್ವರನಿದು ನಗೆಯೆಂದುರ್ವಿಯಂ ನಿರ್ವಿಕಾರಂ।
ಬಲದೋಳೊಳ್ ತಾಳ್ದಿ ಪೆಂಪಂ ತಳೆದತುಳಬಳಂ ರಾಯರೊಳ್ ಸೋವಿದೇವಂ ॥1668॥

ಸಿರಿ ವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ।
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ॥
ಳರ ಕೋಟೀರಂಗಳೊಳ್ ನರ್ತಿಸೆ ವಿಶದಯಶಂ ಪರ್ವೆ ವಾರಾಶಿತೀರಂ।
ಬರಮಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋವಿದೇವಂ ॥ 1669 ॥

ಮುನ್ನಂ ರೂಢಿಯ ಕೃಷ್ಣಕಂಧರನುಮಂ ಮಾರ್ಕೊಂಡು ಚೋಳೋರ್ವಿಯಂ।
ನಿನ್ನಂತಾರೊಳಪೊಕ್ಕು ಸಾಧಿಸಿದರಾರ್ ಪಾಂಡ್ಯೇಶನಂ ಶೌರ್ಯದಿಂ॥
ಬೆನ್ನಂ ಪತ್ತಿಸಿ ಸೋವಿದೇವ ಘಟೆಯಂ ಕೆಯ್ಕೊಂಡರಾರ್ ಚೋಳನಂ।
ತನ್ನಾಮ್ನಾಯದ ರಾಜ್ಯದೊಳ್ ನಿಱಿಸಿದರ್ ಸೋಮಾನ್ವಯೋರ್ವೀಶ್ವರರ್ ॥ 1670॥

ಗಡಿ ಮೂಡಲ್ ಸಲೆ ಕಂಚಿಯಿತ್ತ ಪಡುವಲ್ ತಳ್ತಿರ್ದ ವೇಳಾಪುರಂ।
ಬಡಗಲ್ ಪೆರ್ದೊಱೆ ತೆಂಕಲಂಕದ ಬಯಲ್ನಾಡಾಂಕೆಯಾದೀನೆಲಂ॥
ಕಡಿತಕ್ಕೇಱಿತು ಸೋವಿದೇವನೃಪನಿಂದೇವಣ್ಣೆಪೆಂ ರಾಯರೊಳ್।
ಪಡಿಯಾರ್ ದಕ್ಷಿಣಚಕ್ರವರ್ತಿತಿಳಕಂಗೀವಿಶ್ವಭೂಪಾಳಕರ್ ॥ 1671 ॥

## 295 ಸೊರಬ 275 [1231]

ಇದರಲ್ಲಿ ಸೇವುಣರಾಜನಾದ ಸಿಂಹಣನ ಆಜ್ಞಾನುಸಾರವಾಗಿ ವಾಸುಗಿನಾಯಕನು ಕುಪ್ಪಟೂರು ಕೋಟಿನಾಥದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ಕುಪ್ಪಟೂರ ಉಪವನ

ತಳಿರಿಂದೊಪ್ಪುವಶೋಕೆ ಪಣ್ಬರದಿನಿಂಬಾಗಿರ್ದ ರಂಭಾವನಂ।
ತಿಳಿನೀರಂ ತಳೆದಿರ್ಪ ಕಾಯ್ದುಱುಗಲಂ ಪೇಱಿರ್ದ ಚೆಂದೆಂಗು ಕ॥
ತ್ತಲೆಯಂ ಸಂದಿಪ ನಾಗವಲ್ಲಿ ಕೊನೆಯಿಂ ಚೆಲ್ವಾದ ಪೂಗದ್ರುಮಂ।
ಕಲಿಕಾವ್ರಾತಮನಾಂತ ಚೂತಮೆಸೆಗುಂ ಕೋಟೀಶಪೌರಾಂತ್ಯದೊಳ್ ॥ 1672 ॥

ಪಾಡುವ ತುಂಬಿಗಳಿಂ ಕಡು। ಗೋಡುವ ಪುಟಿಲಿಲಿಂ ತಳಿರ್ತ ವನರಾಜಿಗೆ ಬಂ।
ದಾಡುವ ನವಿಲಿಂ ವಿರಹಿಗೆ। ಸೂಡಂ ಮಾಡುವ ಲತಾವನಂ ಪೌರವನಂ ॥ 1673 ॥

### ರುದ್ರಶಕ್ತಿ

ಗಿರಿಜೆಯ ಸಂಗಮಿಲ್ಲದ ಮರುನ್ನದಿಯೊಳ್ ಸಮಸಲ್ಲದಾವಗಂ।
ಮರುಳ ಗಣಂಗಳೊಳ್ ಬೆರಸಿಯಾಡದ ಶೂಲಮನೊಲ್ದು ಹಸ್ತದೊಳ್॥
ಧರಿಸದ ರುಂಡಮಾಲೆ ಕೊರಲಲ್ಲಿನಿಸಿಲ್ಲದ ಶಂಭುವೆಂಬುದೀ।
ಶ್ವರವರಮೂರ್ತಿಯೆಂಬುದು ಯತೀಂದ್ರನತಂದ್ರನ ರುದ್ರಶಕ್ತಿಯಂ ॥ 1674 ॥

### ಸರ್ವೇಶ್ವರ

ಕೊರಲೊಳ್ ಕಱ ಸಿರದೊಳ್ ಪೆಱ। ಪಿರಿದುಂ ಜಡೆಯಲ್ಲಿ ಗಂಗೆ ತೊಡೆಯೊಳ್ ಶಿವೆ ಮ
ತ್ತುರದೊಳ್ ಕರೋಟಿ ತೊಲಗಿದ। ಹರನೆಂಬುದು ಯತಿವರೇಣ್ಯಸರ್ವೇಶ್ವರನಂ
॥ 1675 ॥

## 296 ಪಾವುಗಡ 52 [ಸು. 1232]

ಇದರಲ್ಲಿ ನಿಡುಗಲ್ಲ ರಾಜನಾದ ಇರುಂಗೋಳನು ನಿಡುಗಲ್ಲುದುರ್ಗದಲ್ಲಿ ಗಂಗೆಯನ ಮಾರೆಯನು ಕಟ್ಟಿಸಿದ ಪಾರ್ಶ್ವಜಿನಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಇರುಂಗೋಳ

ಹರಿ ಗೋವರ್ಧನಗೋತ್ರಮಂ ದಶಮುಖಂ ರುದ್ರಾದ್ರಿಯಂ ರಾವಕಿಂ।
ಕರರುಗ್ರಾಚಳಕೋಟಿಯಂ ರವಿಸುತಂ ತೇರ್ಗಾಲಿಯಂ ಪೂಣ್ದು ದು॥
ರ್ಧರಸಂರಂಭದಿನಂದು ಮೆಟ್ಟಿ ಕಿಱ ನೊಂದಾಯಾಸಮಿಂದಾಱತು।
ರ್ವರೆಗೀದಕ್ಷಿಣಬಾಹುಸಂಗದಿನಿರುಂಗೋಳಕ್ಷಮಾಪಾಳನಾ ॥ 1676 ॥

ಕುಳಿಕನ ಲವಲವಿಕೆ ಲಯಾ। ನಳನುರವಣೆ ಸಿಡಿಲ ಸಡಗರಂ ಮಿಟ್ಟುವಿನ।
ಗ್ಗಳಿಕೆ ಜವನುಜ್ಜುಗಂ ಮಾ। ರ್ಪೊಳೆವುದಿರುಂಗೋಳನಾಜಿಗೆತ್ತಿದ ಬಾಳೊಳ್ ॥1677॥

ನಿಡುಗಲ್ಲು

ಕಾಳಾಂಜನವೆಂಬುದಿರುಂ। ಗೋಳನ ಗಿರಿದುರ್ಗಮಂತದಭ್ರಂಕಷತಾ।
ಭೀಳತರಚೂಳಮದಱು। ತ್ತಾಳತೆಯನೆ ನೋಡಿ ಧಾತ್ರಿ ನಿಡುಗಲ್ಲೆಂಗುಂ ॥ 1678 ॥

**297 ಅರಸಿಯಕೆರೆ 217 (ಅನುಬಂಧ) [1232]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಆಳಿಕೆಯಲ್ಲಿ ದಾಮೋದರಸೆಟ್ಟಿ ಬೆಂಡೆಯ ಕೆರೆಯಲ್ಲಿ ದಾಮೋದರೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಯದುಕುಲ ವಾರ್ಧಿ ವರ್ಧನ ಸುಧಾಕರನುನ್ನತ ಕೀರ್ತಿಯುಕ್ತನ।
ತ್ಯುದಿತ ಯಶೋಭಿರಾಮನತಿಧಾರ್ಮಿಕನಾಹವ ಭೀಮ ಸತ್ಯ ಸಂ॥
ಪದನತಿ ಧೀರನುನ್ನತ ಗಭೀರನುದಾರನೆನಿಪ್ಪ ಪೆಂಪಿನಿಂ।
ದುದಧಿ ಪರೀತ ಭೂತಳಮುಮಂ ನೆಱೆ ತಾಳ್ದಿದ ವಿಷ್ಣುವರ್ಧನಂ ॥ 1679 ॥

ಬಲ್ಲಾಳ II

ಮುಳಿಸಿಂದೆಟ್ಟಿಂದು ನಮ್ಮಂ ಬಳಸಿದೊಡರಿದಿಂತೀತನೊಳ್ ಕಾದಲುಂ ನ।
ಮ್ಮಳವಲ್ಲಂ ಕಾಣ್ಬಮೆಂದಾ ರಿಪು ನೃಪರಿಗಿದೆಯ್ತಂದು ದೇವೆಮ್ಮನೆಮ್ಮಾ॥
ಸ್ಥಳದಿಂ ಬಿಟ್ಟೆಟ್ಟು ಪೋಪಂತಿರೆ ನೆನೆಯದಿರೆಂದರ್ಘ ಹಸ್ತ್ಯಶ್ವ ರತ್ನಾ।
ವಳಿಯಂ ತಂದಿತ್ತು ಪಾದಕ್ಕೆಱಗುವರಿರದಾ ವೀರಬಲ್ಲಾಳಗೆಂದುಂ ॥ 1680 ॥

ನಾರಸಿಂಹ II

ಉದಯಿಸಿದಂ ದಿವಾಕರನ ತೇಜದವೊಲ್ ಭವನಂತೆ ಶಕ್ತಿಯಿಂ।
ದುದಧಿಯು ಮಾಟಕ್ಕೆಯಿಂದತಿ ಗಭೀರತೆ ಮೇರುವಿನಂತೆ ಬಿಣ್ಪಿನಿಂ॥
ಪದುಮಜನಂತಿರತ್ಯಧಿಕ ವಿದ್ಯೆಯೊಳಚ್ಯುತನಂತುಪಾಯದಿಂ।
ದೊದವಿ ನಿರಂತರಂ ಧರೆಯ ತಾಳ್ದಿದನೀ ನರಸಿಂಹ ಭೂಭುಜಂ ॥ 1681 ॥

ಪೊಡೆವ ನಿಸಾಳ ಕಾಹಳ ರವಂಗಳನಾಲಿಸಿ ವೈರಿ ರಾಯರಾ।
ರ್ಪೊಡರಿಪ ಶಕ್ತಿಯಂ ಬಿಸುಟು ಕೈಮುಗಿದಂಜಿಕೆಯಿಂದೆ ಬಂದು ನಿ॥
ನ್ನೊಡನೆ ವಿರೋಧಮಂ ನೆಗಟ್ದಿರಾರ್ ಬದುಕಿರ್ಪರದೆಲ್ಲಿ ಪೊಕ್ಕಪರ್।
ಕಡುಪನೆ ಮಾಣ್ಬು ಕಾವುದೆನುತಿರ್ಪರು ವೀರನೃಸಿಂಹರಾಯನೊಳ್ ॥ 1682 ॥

ತನಗಿದಿರಾಗಲಂಜಿ ಶರಣೆಂದವರ್ಗಿತ್ತಭಯಪ್ರದಾನಮಂ।
ತನಗಿದಿರಾಂತ ವೈರಿ ನೃಪರಂ ಪಲರಂ ತವೆ ಕೊಂದು ವಸ್ತು ವಾ॥
ಹನ ತತಿಯಂ ಧರಿತ್ರಿಯ ನಿಜಾಸಿಯೊಳಂ ನೆಱೆ ಕೊಂಡು ಕೀರ್ತಿ ಕಾ।
ಮಿನಿಯನಿಳಾ ಜಯಾಂಗನೆಯನೊಲ್ಲಿದನೀ ನರಸಿಂಹ ಭೂಭುಜಂ ॥ 1683 ॥

ದಾಮೋದರ ಸೆಟ್ಟಿಯ ಧರ್ಮ

ಕಟ್ಟಿಸಿದ ಕೆರೆ ಸುರಾಲಯ। ಮಿಟ್ಟಾರವೆ ಪಲವು ಸತ್ರಮಱವಂಟಿಗೆಯಂ॥
ನೆಟ್ಟನೆ ಗಣಿಸಲ್ ನೆಱೆಯಂ। ಸಿಟ್ಟಿಯ ಮಾಡಿದ ಚತುರ್ಮುಖಂ ನರರಳವೇ ॥1684॥

**298 ಅರಸಿಯಕೆರೆ 82 [1233]**

ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಆಳಿಕೆಯಲ್ಲಿ ದಾಮೋದರಸೆಟ್ಟಿ ಸರ್ವಜ್ಞ ಪುರವೆಂಬ ಅರಕೆರೆಯಲ್ಲಿ ವಿಷ್ಣುದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ತತ್ತನಯಂ ವಿಕ್ರಾಂತಗು। ಣೋತ್ತುಂಗಂ ಶತ್ರುಕುಳಮನೋಭಂಗಂ ಭೂ।
ಪೋತ್ತಮನೆಱೆಯಂಗಂ ಭೂ। ಭೃತ್ತನಯಾಧೀಶಪದಪಯೋರುಹಭೃಂಗಂ ॥ 1685 ॥

ಒದವಿರ್ದೀವೀರವೈರಿಕ್ಷಿತಿಪನಿಕರಸಂಗ್ರಾಮದೊಳ್ ಸಜ್ಜಿತಪ್ರೋ।
ನ್ಮದದಂತಿವ್ರಾತಕುಂಭಸ್ಥಳಮನಳಱೆ ದೋರ್ದಂಡಚಂಡಾಸಿಯಿಂ ಪೊ॥
ಯ್ದುದುಮಲ್ಲಿಂದುಣ್ಮೆ ಮುಕ್ತಾವಳಿ ಜಯಲಲನಾಕಂಠಿಕಾಮಾಲೆ ತಾನಾ।
ದುದೆನಲ್ ವಿಕ್ರಾಂತದಿಂದಾರೆಱೆಗನೃಪನೊಳಾಂಪುದ್ಧತಕ್ಷೋಣಿಪಾಲರ್ ॥ 1686 ॥

ಎರೆಯಂಗನ ಮಹಿಷಿ ಏಚಲೆ

ಆತನ ಕಾಂತೆಯೆಂತೆನೆ ಜಗತ್ತಳದೊಳ್ ಕಮನೀಯಕಾಮಿನೀ।
ವ್ರಾತಮನೆಯ್ದೆ ನಿರ್ಮಿಸಿ ವಿರಿಂಚಿ ಜಿತಶ್ರಮನಾಗಿ ತನ್ನ ವಿ॥
ಜ್ಞಾತಸದರ್ಥಮಿಂತಿದೆನಿಪಂತಿರೆ ನಿರ್ಮಿಸಿದಂ ಗಡೆಂದೊಡೇ।
ಮಾತೊ ಮೃಣಾಳಕೋಮಳೆಯನೇಚಲದೇವಿಯನೆಂತು ಬಣ್ಣಿಪರ್ ॥ 1687 ॥

## ವಿಷ್ಣುವರ್ಧನ

ಅವರೊಳ್ ಮಧ್ಯಮನಾಗಿಯುಂ ವಿನಯದಿಂದತ್ಯುತ್ತಮಂ ತಾನೆನಿ।
ಪ್ಪ ವಿಶೇಷೋನ್ನತಿವೆತ್ತನುದ್ಧತವಿರೋಧಿಕ್ಷೋಣಿಪಾಲವ್ರಜಾ॥
ಹವಕಂಠೀರವಶೌರ್ಯನಪ್ರತಿಮಕಾಂತಾನೀಕನೇತ್ರೋತ್ಪಲೇಂ।
ದುವಿಭಾಸೋಜ್ವಲಕೀರ್ತಿ ಮನ್ಮಥನಿಭಂ ಶ್ರೀವಿಷ್ಣುಭೂಪಾಲಕಂ ॥ 1688 ॥

ಮನುಮಾರ್ಗಂ ವಿಷ್ಣುಭಕ್ತಂ ರಿಪುಗಿರಿಕುಲಿಶಂ ವೀರವಿಷ್ಣುಕ್ಷಿತೀಶಂ।
ಮುನಿಸಿಂದೇಟ್ಟಿಂದನಿನ್ನಾವೆಡೆಯೊಳಡಗುವಂ ನಮ್ಮ ಕಾವನ್ನನಾವಂ॥
ಮನವಂದಂತೀಗಳಾತಂ ನಡಪಲಿ ದಯೆಯಿಂದೆಂದು ಬಂದಂಜಿ ಭೂಪರ್।
ಧನಮಂ ಹಸ್ತ್ಯಶ್ವರತ್ನಾವಳಿಯನವನಿಯಂ ಕೊಟ್ಟು ಕಾಣ್ಬರ್ ಕೆಲಂಬರ್ ॥ 1689 ॥

## ನಾರಸಿಂಹ I

ತತ್ತನಯಂ ನರಸಿಂಹನೃ। ಪೋತ್ತಮನುದ್ಯತ್ಪ್ರತಾಪನಹಿತನೃಪಾಳೋ।
ನ್ಮತ್ತೇಭಕುಂಭಿದಳನಾ। ಯತ್ತಾಯುತಖಡ್ಗಕಳಿತನಿಜದೋರ್ದಂಡಂ ॥ 1690 ॥

## ಬಲ್ಲಾಳ II

ನರಸಿಂಹೋರ್ವೀಶಕಾಂತಾತ್ಮಜನುರುತರಧರ್ಮೋಲ್ಲಸದ್ದುಗ್ಧನೀರಾ।
ಕರರಾಕೇಂದೂಪಮಾನಂ ನಳನಹುಷದಿಳೀಪಾದಿಭೂಪಾಳಕೋದ್ಯ॥
ಚ್ಚರಿತಂ ದೋರ್ದರ್ಪವೈರಿಕ್ಷಿತಿಪನಿಕರಸಂಗ್ರಾಮಕೇಳೀವಿನೋದಂ।
ಪರಿಭಾಸ್ವತ್ಕೀರ್ತಿವಲ್ಲೀವಲಯಿತಭುವನಂ ವೀರಬಲ್ಲಾಳಭೂಪಂ ॥ 1691 ॥

ಉರಗೇಂದ್ರಂ ಧಾತ್ರಿಯಂ ಧಾರಿಣಿ ಹಿಮಗಿರಿಯಂ ಹಿಮ್ಮಶೈಲಂ ಕುಭೃಜ್ಜಾ।
ವರನಂ ಗೌರೀವರಂ ಚಂದ್ರನನಮಳಿನಚಂದ್ರಂ ಕಲಾಸ್ತೋಮಮಂ ನಿ॥
ರ್ಭರದಿಂದಂ ತಾಳ್ದುವಂತಪ್ರತಿಮಯದುಕುಲೋದ್ಭೂತಸಾಮ್ರಾಜ್ಯಲಕ್ಷ್ಮೀ।
ಭರಮಂ ಹೇಲಾಸುಸಾಧ್ಯಂ ತನಗೆನೆ ತಳೆದಂ ವೀರಬಲ್ಲಾಳಭೂಪಂ ॥ 1692 ॥

ಕರಿನಕ್ರಾಭೀಳಹೇಷಾರವಯುತಹಯಸಂದೋಹವೀಚೀಪದಾತಿ।
ಸ್ಫುರದುತ್ತಾಲೀನಕೋಲಾಹಲಸಮರಮಹಾಂಭೋಧಿಯೊಳ್ ತನ್ನ ದೋರ್ಮಂ।
ದರದಿಂದಂ ಮಂಥನಾರಂಭಮನೊದವಿಸಿ ವೈರಿಕ್ಷಮಾಪಾಲಲಕ್ಷ್ಮೀ।
ಕರಿಜಾತ್ಯಶ್ವಂಗಳಂ ಕೊಂಡತುಳಬಳಯುತಂ ವೀರಬಲ್ಲಾಳಭೂಪಂ ॥ 1693 ॥

## IIನೆಯ ಬಲ್ಲಾಳನ ಮಹಿಷಿ ಪದ್ಮಲೆ

ಆವಿಭುವಿನ ಪಟ್ಟಮಹಾ। ದೇವಿ ಮದದ್ವಿರದಗಮನೆ ಬಿಂಬಾಧರೆ ಲ।
ಜ್ಜಾವತಿ ಪದ್ಮಲದೇವಿ ಕ। ಳಾವತಿ ಲಾವಣ್ಯಪುಣ್ಯವತಿ ಸೊಗಯಿಸಿದಳ್ ॥ 1694 ॥

ರತಿಗಮರುಂಧತಿಗಂ ಸರ। ಸತಿಗಂ ರೇವತಿಗಮೆಸೆವ ಪಾರ್ವತಿಗಂ ಶ್ರೀ।
ಸತಿಗಂ ಸಮನೆನಿಸಿ ಮಹಾ। ಸತಿ ಪದ್ಮಲದೇವಿ ತೊಳಗಿ ಬೆಳಗಿದಳೆಳೆಯಂ ॥ 1695 ॥

## ನಾರಸಿಂಹ II

ಕಮಠಂಗಿನ್ನೇಕೆ ಸರ್ವೋರ್ವಿಯ ಪೊಱೆ ಫಣಿರಾಜಂಗದಿನ್ನೇಕಿಳಾಭಾ।
ರಮದಿನ್ನೇಕಾ ದಿಶಾದಂತಿಗೆ ದಿಗುಭರಮಂ ತಾಳ್ದುವಾಯಾಸಮಿನ್ನೇ॥
ಕೆ ಮಹೀಭೃನ್ಮೂಳಮಂ ಪೊರ್ದುವ ಗಸಣಿ ನೆಲಕ್ಕಾನೆ ಪೋ ಸಾಲ್ವೆನೆಂದ।
ಶ್ರಮದಿಂ ಭೂಚಕ್ರಮಂ ವಿಕ್ರಮದೊಳೆ ತಳೆದಂ ಶ್ರೀನೃಸಿಂಹೋರ್ವಿಪಾಳಂ ॥1696॥

ಕಡುಪಿಂದಂ ನಾರಸಿಂಹೋರ್ವಿಪನವಯವದಿಂದೆತ್ತಿ ಬಂದಪ್ಪನಿನ್ನಾ।
ವೆಡೆಯಂ ಪೊಕ್ಕಿರ್ಪಮಿನ್ನಾವೆಡೆಯೊಳಡಗುವಂ ನಮ್ಮ ಕಾವನ್ನನಾವಂ॥
ಕುಡುವಂ ಹಸ್ತ್ಯಶ್ವರತ್ನಾವಳಿಯನವನಿಯಂ ಪ್ರಾಣದಿಂ ಬರ್ದೊಡೆಂತುಂ।
ಪಡೆವಂ ಹಸ್ತ್ಯಶ್ವರತ್ನಾವಳಿಯನೆಳೆಯನೆಂದಿತ್ತು ಕಾಣ್ಬರ್ ನೃಪರ್ಕಳ್ ॥ 1697 ॥

ಕರಿಘಟೆ ಕೂಡೆ ನೂಂಕಿದುವು ವಾಜಿದಳಂ ನಡೆತಂದುವೊಡ್ಡಣಂ।
ತರತರದಿಂದವೊಡ್ಡಿ ನಡೆಗೋಂಟೆವೊಲೆತ್ತಿಬರುತ್ತುಮಿರ್ದುವಾ॥
ಸುರಮೆನೆ ಬರ್ಪ ಬಿಲ್ಲಣಿಗೆಯಾಂಪವರಾರೆನುತಂಜಿ ಭೂಭುಜರ್।
ಕರುಣಿಸಿ ಕಾವುದೆಮ್ಮನೆನುತಿರ್ದಪರಾನರಸಿಂಹರಾಯನಂ ॥ 1698 ॥

ಒದವಿರ್ದೀಯದುಮವಂಶಜಂ ಮಲಪರೊಳ್ಗಂಡಂ ಭರಂಗೆಯ್ದು ತಾ
ನಿದಿರಾಂತಿರ್ದರಿಮಂಡಲಕ್ಕೆ ನಡೆಯಲ್ ಬೆನ್ನಿತ್ತು ಪೋದರ್ ಕೆಲರ್॥
ಕದನಕ್ಕೊಡ್ಡಿದಿರಾಂತ ವೈರಿನೃಪರಂ ಪೇಸೇಱೆ ಕೊಂದಂ ಪಲರ್।
ಕದನಕ್ಕಂಜಿದೊಡಿತ್ತನೊಲ್ದಭಯಮಂ ಶ್ರೀನಾರಸಿಂಹೋರ್ವಿಪಂ ॥ 1699 ॥

ಸುರರಾಜೇಭಂ ಮದಾಂಧಂ ಮಧುಪಕುಲಯುತಂ ಪುಂಡರೀಕಂ ಸದಾನೀ।
ಚರತಂ ಗಂಗಾಹ್ರದಂ ಚಂದ್ರನ ರುಚಿ ಸಲೆ ದೋಷಾವಿಲಂ ತಾನೆನಲ್ ಪೇೞ್॥
ದೊರೆಯೇ ಶ್ರೀನಾರಸಿಂಹೋರ್ವಿಪನ ನಿಜಯಶೋಲಕ್ಷ್ಮಿಯೊಳ್ ವರ್ಣಸಾಮ್ಯಂ।
ಪಿರಿದುಂ ತಾನಾದೊಡಂ ನಿರ್ಮಳಗುಣದಿನವಂ ಪೋಲಿಸಲ್ ಬಲ್ಲನಾವಂ ॥ 1700 ॥

ಸರ್ವಜ್ಞಪುರ

ವೇದಮನೋದುತಿರ್ಪರ್ಧಿಕಶಾಸ್ತ್ರಮನೊರ್ಮೆಯೆ ಕೇಳುತಿರ್ಪ ಸಂ।
ವಾದಿಪ ತರ್ಕಮಂ ಬಿಡದೆ ತರ್ಕಿಸುತಿರ್ಪ ಪುರಾಣಮಂ ಮನೋ॥
ಹ್ಲಾದದೆ ಪೇೞುತಿರ್ಪ ಸಕಲಸ್ಮೃತಿನಾಟಕಕಾವ್ಯದರ್ಥಮಂ।
ಸಾಧಿಸುತಿರ್ಪ ವಿಪ್ರತತಿಯಿಂ ನೆಗೞ್ದೊಪ್ಪುತುಮಿರ್ಕು ಸಂತತಂ ॥ 1701 ॥

## 299 ಕಡೂರು 12 [1233]

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ಕುಮಾರದೇವನು ದೇವನೂರಲ್ಲಿ ಕಟ್ಟಿಸಿದ ದೇವಸ್ಥಾನಕ್ಕೆ ಹಲವರು ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸೋಮೇಶ್ವರ

ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮ।
ಶ್ರೀವಧು ಬಾಹುಪೂರಕದವೋಲ್ ಭುಜದೊಳ್ ನಲಿವಂತು ಕೀರ್ತಿ ದಿ॥
ಗ್ದೇವಿಯರೊಳ್ ನಿಜಾಜ್ಞೆವೆರಸಾದರದಿಂ ನಲಿವಂತು ಧರ್ಮಲ।
ಕ್ಷ್ಮೀವರನಾಗಿ ಪಾಲಿಸಿದನುರ್ವರೆಯಂ ಕಲಿ ಸೋಯಿಬಲ್ಲಹಂ ॥ 1702 ॥

ಕುಮಾರದೇವನ ಗುರು ನನ್ನೆಯದೇವ

ನಯನಂಗಳ್ ಕರುಣಾರಸಾರ್ದ್ರಮಧುರಂಗಳ್ ಮಾತುಗಳ್ ತತ್ವನಿ।
ಶ್ಚಯದೀಕ್ಷಾಗುರುಗಳ್ ವಿಶುದ್ಧಚರಿತಂಗಳ್ ಶೈವಯೋಗೀಶ್ವರಾ॥
ನ್ವಯಚೂಡಾಮಣಿಗಳ್ ಪದಂಗಳವನೀಸೇವ್ಯಂಗಳೆಂಬಂತು ನ।
ನ್ನೆಯದೇವರ್ ಮೆಱೆವರ್ ಪ್ರಸಿದ್ಧಶಿವಧರ್ಮಪ್ರಾಭವೋದ್ಧಾರಕರ್ ॥ 1703 ॥

## 300 ಚಿಕ್ಕನಾಯಕನಹಳ್ಳಿ 31 [1233]

ಇದರಲ್ಲಿ ನಾಳ್ಪ್ರಭು ಮೋಟಗೌಡನು ದೇವಾಲಯವನೆತ್ತಿಸಿ ಮಾಚೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಮೋಟಗೌಡ

ವಿನಯಿತನೆಂದು ಸತ್ಯಪರನೆಂದು ಯಶೋನಿಧಿಯೆಂದುಮನ್ಯಕಾ।
ಮಿನಿಗನುಜಾತನೆಂದು ಗುಣಿಯೆಂದು ಮಹಾಪ್ರಭುವೆಂದು ಮೌನಿಯೆಂ॥
ದನುಪಮಶೀಲನೆಂದು ನರಲೋಕಶಿಖಾಮಣಿಯೆಂದು ಕೂಡೆ ಮೇ।
ದಿನಿ ನೆಱೆ ಬಣ್ಣಿಕುಂ ನೆಗೞ್ದ ಪೆಗ್ಗಡೆಯುಗ್ಗದ ಮೋಟಗೌಂಡನಂ ॥ 1704 ॥

ಎರೆದಂಗಂಬುಜಮಿತ್ರಜಾತನಬಳಾಜಾಳಕ್ಕೆ ಕಂದರ್ಪನಾಂ।
ತರಿಗಿಂದ್ರಾತ್ಮಜನುನ್ನತಿಕ್ಕೆಗೆ ಲಸದ್ದೇವಾಪಗಾನಂದನಂ॥
ಪೊರೆದಾಳ್ದಂಗೆ ಮಧುಚ್ಯುತಂ ವಿಪುಳಭೋಗಕ್ಕಿಂದ್ರನೀಯುರ್ವರೇ।
ಶ್ವರಸಂಪೂಜಿತಮೋಟಗೌಂಡನೆನೆ ಪೆಂಪಂ ತಾಳ್ದನೀಧಾತ್ರಿಯೊಳ್ ॥ 1705 ॥

ಕಟ್ಟಿಸಿದ ತಟಾಕಮುಮಱ। ವಟ್ಟೆಸೆದೆತ್ತಿಸಿದ ದೇವತಾಯತನಂ ಸಾ।
ಲಿಟ್ಟಿಟ್ಟಾರವೆ ಪೇಟಿವೆ। ನೆಟ್ಟನೆ ತಾವೆಯ್ದೆ ಮೋಟಗೌಂಡನ ಪೆಂಪಂ ॥1706॥

ಮುಱಿವುಗೆ ವಜ್ರಪಂಜರಮುದಂತಿರಲಿನ್ನತಿದಾನದೇಳ್ಗೆಯಂ।
ಮೆಱಿವೊಡೆ ಕರ್ಣನಂತಿರಲಿ ಸತ್ಯಮನಾದರಿಸಿರ್ಪೊಡೆಯ್ದೆ ಬಾಂ॥
ದೊಱೆಯ ತನೂಜನಂತಿರಲಿ ಕಾವೊಡಮೀವೊಡಮುನ್ನತಿಕ್ಕೆಯಂ।
ಮೆಱಿವೊಡೆ ಮೋಟಗೌಂಡನಿವನೊರ್ವನೆ ಸಾಲನೆ ಭೂತಳಾಗ್ರದೊಳ್ ॥ 1707 ॥

## 301 ಹೊಳೆಯ ನರಸೀಪುರ 93 (ಅನುಬಂಧ) [1238]

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ಮಹಾಪಸಾಯಿತ ಸೋವಣ್ಣನು ಎಳ್ಳೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಸೋವಣ್ಣ

ಸ್ಥಿರತರ ರೂಪು ಸಾಹಸದೊಳೊಂದಿದ ಪೌರುಷದೋಜೆಯಿಂ ನಿರಂ।
ತರದೊಳೆ ಧೈರ್ಯ ಗುಣ್ಪು ನಿಜ ತೇಜವೊಡಂಬಡೆ ಸತ್ಯದಿಂ ಕರಂ।
ಸುರುಚಿರಮಾದ ಬಲ್ಪು ಧೃತಿ ದಾನ ಗುಣಂ ಸುಭಗತ್ವ ಶೌಚಮುಂ।
ಸ್ಫುರಿಯಿಪ ಸತ್ವದಿಂ ನೆಗಟ್ಟಿ ನಾಗನ ಸೋಮನ ನೈಜವೀ ಗುಣಂ ॥ 1708 ॥

ಧುರದೊಳಿದಿರ್ಚಿದನ್ಯ ಸುಭಟಾಳಿಯ ಕಂಡು ಕನಲ್ದ ಕೋಪದಿಂ।
ದುರವಣೆಯಿಂದವೇಱಿ ನಿಜ ಖಳ್ಗದೆ ಪೊಯ್ದೊಡೆ ಸೀಸಕಂ ಶಿರಂ।
ಉರದ ತದೀಯ ಗದ್ದಿಗೆಯ ಪಲ್ಲಣವಂದಳ ಪಕ್ಕರಕ್ಕೆಯಂ।
ತುರಗಮನುರ್ಚಿತಾ ನಿಜದ ತೋಳ್ವಲ ನಾಗನ ಸೋಮನುರ್ವಿಯೊಳ್ ॥ 1709 ॥

## 302 ಕೃಷ್ಣರಾಜಪೇಟೆ 76 [1242]

ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ನಾಳ್ಪ್ರಭು ಕಲ್ಲಗೌಡನು ಶಿವಾಲಯವನ್ನು ಕಟ್ಟಿಸಿದಂತೆ ಈ ಶಾಸನದಲ್ಲಿ ಹೇಳಿದೆ.

ಕಲ್ಲಗೌಡ

ಬೆಳ್ಳಿಯರ ಕುಲಕೆ ತಿಲಕಂ। ಬಲ್ಲಿದನಮಲಂ ಜಗಕ್ಕೆ ಪೂಜಿತನೆಂದೇ।
ಎಲ್ಲರ್ ಪೊಗಟಲ್ ನೆಗಟ್ದ್ದ। ಕಲ್ಲಾ ನಿನ್ನಂತು ಪುಣ್ಯಜೀವಿಗಳೊಳರೇ ॥1710॥

ಕಲಿದೇವಪದಪ್ರಸಾದದೆ। ಕುಲಮಂ ಪ್ರತಿಪಾಲಿಸಲ್ಕೆ ಪುಟ್ಟಿದನೀತಂ।
ಕಲಿ ದಾನಿ ಮಾನ್ಯನೆಂದಿಂ। ತೊಲವಿಂ ಬಣ್ಣಿಪರು ಕಲ್ಲಗೌಂಡನ ಪೆಂಪಂ ॥ 1711 ॥

## 303 ಹೊನ್ನಾಳಿ 49 [1244]

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಬೀರದೇವರಸನ ಆಳಿಕೆಯಲ್ಲಿ ಐಚುಗನು ಲಕ್ಷ್ಮಣಪಾಳನ ದಾಳಿಯಲ್ಲಿ ಕಾದಿ ಸುರಲೋಕಪ್ರಾಪ್ತನಾದನೆಂದು ಹೇಳಿದೆ.

ಮುಳಿದಾಲಕ್ಷ್ಮಣಪಾಳನಾಕುದುರೆಗಳ್ ದಾಟಿಟ್ಟು ಸೇನೋಚ್ಚಳ।
ಜ್ಜಳಧಿಧ್ವಾನದಿನುಣ್ಮಿ ಪೊಣ್ಮಿ ಬರಲಾಭೀತೋರ್ವಿಪಾಳೋದ್ಧಮಂ॥
ಡಳಿಕೋದ್ಯದ್ಬಲಸಾಗರಂ ಪೊಱಮಡುತ್ತಿರ್ಪನ್ನೆಗಂ ಮುಂಚಿ ತ।
ದ್ಬಳಮಂ ಕಾದಿ ತೆರಳ್ಚಿ ಕೊಂದ ಪಲರಂ ವೈಚಿತ್ರ್ಯದಿಂದೈಚುಗಂ ॥ 1712 ॥

ಪರೆದ ಕರುಳ್ಮಿದುಳುಗಳಿಂ। ನೊರೆನೆತ್ತರ ಪೊನಲ್ಗಳಿಂದೆ ಕಂಡದ ಕೆಸಱಿಂ।
ಸಿರಮುರುಳ್ವ ಮುಂಡದಿಂ ಭೀ। ಕರಮಾಯ್ತುಂದೈಚನಿಱಿದ ಸಂಗರರಂಗಂ ॥ 1713 ॥

ಸಿಡಿಲಡಸಿ ಪೊಡೆವ ತೆಱದಿಂ। ಪಡೆಯುಶ್ವಮನುರುಳೆ ಪೊಡೆದು ಬಲಮಂ ಕೊಂದಂ।
ಕಡುಗಲಿಯೈಚುಗನಂ ತ। ಳ್ಕೊಡನಾಖೇಚರಿಯರೊಯ್ಯೆ ಸಗ್ಗಂಬೊಕ್ಕಂ ॥ 1714 ॥

## 304 ಹೊನ್ನಾಳಿ 55 [1247]

ಈ ವೀರಗಲ್ಲಿನಲ್ಲಿ ಸಿಂದರಾಜನಾದ ಬೀರದೇವರಸನಿಗೆ ಭಾಷೆಯನ್ನು ಕೊಟ್ಟಂತೆ ಏಚಣನು ಶತ್ರುಗಳೊಡನೆ ಕಾದಿ ಸುರಲೋಕಪ್ರಾಪ್ತನಾದನೆಂದು ಹೇಳಿದೆ.

ಬೀರಲಸಂಗೆ ಕೊಟ್ಟ ಹೊಸ ದೇಸೆಯ ಬಾಸೆಯನೇನನೆಂಬೆನಾ।
ವೈರಿಯ ಮೋಹರಂ ಪ್ರಳಯವಾರಿಧಿಯಂತೆ ಲಯಾಗ್ನಿಯಂತಿರಾ॥
ಮಾರಿಯ ಮೂರಿಯಂತಿರಱಿಯಟ್ಟಿದೊಡೇಚಣನಿಂದು ವೈರಿಸಂ।
ಹಾರಮನೀಕಟಾರದೊಳೆ ಮಾಡುವೆನೆಂದನದಂತೆ ಮಾಡಿದಂ ॥ 1715 ॥

ಪಲರಂ ಕುಱಿದಱಿದಱಿದಂ। ಪಲರಂ ಸೀಳ್ದೊಟ್ಟಿ ಕಡಿದು ದೆಸೆವಲಿಗೆಯ್ದಂ।
ಪಲರಂ ಬಾಣ್ದಲೆವಿಡಿದಂ। ಕಲಿ ಚಲದೆ ಕಟಾರದೇಚಿಗಂ ರಣಧೀರಂ ॥ 1716 ॥

ಕುಱಿಹಿನ ಕುದುರೆಗಳಂ ಸಂ। ದಱಿಕೆಯ ನಾಯಕರನಿಱಿದು ಬಲಮಂ ಮೆಱೆದಂ।
ನೆಱೆಗಲಿ ಕಟಾರದೇಚಂ। ಕಱೆವಲರ್ವಱೆ ಮೇಲೆ ಸುರಿಯೆ ಸಗ್ಗಕೆ ಸಂದಂ ॥ 1717 ॥

## 305 ಸಾವುಗಡ 50 [1248]

ಇದರಲ್ಲಿ ನಿಡುಗಲ್ಲ ರಾಜನಾದ ಇರುಂಗೋಳನ ಆಳಿಕೆಯಲ್ಲಿ ನಿಡುಗಲ್ಲ ವೈಶ್ಯರು ನಕರೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ನಿಡುಗಲ್ಲು

ಜಗದೀಶನಿರುಂಗೋಳಂ। ಸೊಗಯಿಸಿ ತಾನಿರ್ಪ ದುರ್ಗದಂಕಿತವದುವಂ।
ನೆಗೆದು ಗಿರಿಶಿಖರದುಚ್ಚಂ। ಮುಗಿಲಂ ಮುಟ್ಟಿದೊಡೆ ಪೊಡವಿ ನಿಡುಗಲ್ಲೆಂಗುಂ ॥1718॥

ನಿಡುಗಲ್ಲ ವೈಶ್ಯರು

ಮನುಮುನಿಮಾರ್ಗರೆಂದು ಸುಜನಾಶ್ರಯರೆಂದು ಮಹಾನುರಾಗರೆಂ।
ದನುಪಮರೆಂದು ಧರ್ಮಗುಣರೆಂದು ಸಮಸ್ತಸುಗಂಧವಸ್ತುವಾ॥
ಹನಕನಕಾದಿಲಕ್ಷಣವಿಚಕ್ಷಣರೆಂದು ಮಹಾನುಭಾವರೆಂ।
ದನುದಿನಮಟ್ಸಿಯಿಂ ಪೊಗಟ್ಟುದೀಧರೆಯೀ ನಿಡುಗಲ್ಲ ವೈಶ್ಯರಂ ॥ 1719 ॥

ಧರಣಿಗೆ ಮೇರೆ ಸರಿತ್ಪತಿ। ಶರಧಿಗೆ ದೆಸೆ ದೆಸೆಗೆ ದಿಗ್ಗಜಂ ತಾನಾಯ್ತೀ।
ಧರೆಗೆ ಶರನಿಧಿಗೆ ದಶದಿ। ಕ್ಕರಿಗಂ ಮೀಱಿದುದು ವೈಶ್ಯಜನದೊಂದು ಜಸಂ ॥ 1720 ॥

## 306 ಚೆನ್ನರಾಯಪಟ್ಟಣ 242 [1252]

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಮಂತ್ರಿ ಕೇಶಿದಣ್ಣಾಯಕನು ಬೆಳುಗಲಿ ಯಲ್ಲಿ ಕೇಶವದೇವರನ್ನು ಪ್ರತಿಷ್ಠೆ ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಕೇಶಿದಣ್ಣಾಯಕ

ಜಯಮಿರ್ಪಂತಿರ್ದಪಂ ಹೊಯ್ಸಳನೃಪನ ಭುಜೋತ್ಖಾತಖಡ್ಗಕ್ಕೆ ಭಾಗ್ಯೋ।
ದಯಮಿರ್ಪಂತಿರ್ದಪಂ ಬಾಂಧವಬುಧಜನಶಿಷ್ಟೇಷ್ಟವರ್ಗಕ್ಕೆ ಪುಣ್ಯಾ॥
ಶ್ರಯಮಿರ್ಪಂತಿರ್ದಪಂ ಶ್ರೀಶ್ರುತಿವಿಹಿತಪುರಾಣೋಕ್ತಮಾರ್ಗಕ್ಕುಮಾದೇ।
ವಿಯ ರಾಜ್ಯಶ್ರೀವಧೂಟೀಮಣಿಮಯಮುಕುರಂ ಕೇಶವಂ ಕೀರ್ತಿಕಾಂತಂ ॥ 1721 ॥

ಬೆಟ್ಟಚಮೂಪ

ದಾನನಿಧಾನ ದಾನಿಗಳ ಬಲ್ಲಹ ಕೀರ್ತಿವಿಳಾಸ ಕೀರ್ತಿಕಾಂ।
ತಾನಯನಾಭಿರಾಮ ಬುಧಬಾಂಧವ ಬಾಂಧವಕಲ್ಪಭೂಜ ವಿ॥
ದ್ಯಾನಿಧಿ ಸತ್ಕಲಾನಿಧಿ ದಯಾನಿಧಿ ಬೆಟ್ಟಚಮೂಪ ನಿತ್ಯನಾ।
ಗೀ ನೆಲನುಳ್ಳಿನಂ ದಿಗಿಭಮುಳ್ಳಿನಮಿಂದ್ವಿನಬಿಂಬಮುಳ್ಳಿನಂ ॥ 1722 ॥

## 307 ಕುಪ್ಪಗುಡ್ಡೆ ವೀರಗಲ್ಲು [1254]

(ಮೈಸೂರು ಶಾಸನದ ಇಲಾಖೆಯ 1929ನೆಯ ವರ್ಷದ ವರದಿ ; ಶಾಸನ ಸಂಖ್ಯೆ 72)

ಇದರಲ್ಲಿ, ಬೀರದೇವರಸನಿಗೂ ಬಿದಿರೂರ ಈಡುಸಾಮಂತನಿಗೂ ನಡೆದ ಯುದ್ಧದಲ್ಲಿ ಮಾಳಿಗನು ಪರಾಕ್ರಮವನ್ನು ತೋರಿಸಿ ಸುರಲೋಕಪ್ರಾಪ್ತನಾದನೆಂದು ಹೇಳಿದೆ.

ಬಿರುದರ ಬಿಂಕಮಂ ಮುಱಿದು ಬಿಂಕದ ಗಂಡರನೊಕ್ಕಲಿಕ್ಕಿ ಸಂ।
ಗರದೆಡೆಯಲ್ಲಿ ಮಾರ್ಮಲೆವ ವೈರಿ ಶಿರಂಗಳ ಸೆಂಡನಾಡಿ ತ।
ತ್ತುರಗ ಖುರ ಪ್ರಘಾತದೆಡೆ ತೂಳ್ದು ತೆರಳ್ಚಿದನಂದು ಮೆಚ್ಚುತುಂ।
ಧರೆ ಪೊಗಟಲ್ಕೆ ವೀರವರನಗ್ಗದ ಮಾಳಿಗನಾಜಿ ರಂಗದೊಳ್ ॥ 1723 ॥

## 308 ಅರಸಿಯುಕೆರೆ 108 [1254]

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ಮಹಾವಡ್ಡವ್ಯವಹಾರಿ ಕಂಡನಂಬಿ ಸೆಟ್ಟಿ ಮುತ್ತನ ಹೊಸವೂರಿನಲ್ಲಿ ಕುಂಜೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಸಳ

ಇದಿರೊಳಿದಿರ್ಚಿ ಮೇಲೆ ಪುಲಿ ಪಾಯ್ದೊಡೆ ದಿವ್ಯವಸಂತಿಕಾನಿವಾ।
ಸದ ಜಿನಯೋಗಿರಾಜನೊಲವಿಂದಭಿಮಂತ್ರಿಸಿ ನೀಡೆ ಕೊಂಡು ಕುಂ॥
ಚದ ಸೆಳೆಯಿಂದದಂ ಪೊಡೆದು ಪೊಯ್ಸಳನೆಂಬಭಿಧಾನಮಂ ನಿಜಾಂ।
ಗದೊಳೆಡೆಮಾಡಿದಂ ಯದುಕುಳಾಗ್ರಣಿ ತುಂಗಭುಜಾಬಳಂ ಸಳಂ ॥ 1724 ॥

ಎರೆಯಂಗ

ಆ ವಸುಧಾನಾಥನ ಸುತ। ನೋವದೆ ರಿಪುಶಿರಮನೆರಡನೆರಡುಂ ಕರದಿಂ।
ಸಾವಗಿಸದೊಡೆದು ಕಿಟ್ಟಿಂ। ಭಾವಿಸೆ ನೆಱೆಯಂಗನಾಜಿಗೆನಿಪೆಱೆಯಂಗಂ ॥ 1725 ॥

## ನಾರಸಿಂಹ II

ತತ್ತನಯಂ ಚೋಳನನೊ। ತ್ತೆತ್ತಿದನರಿಬಿರುದ ಮಗರಕಾಡವರಂ ತ।
ಳ್ತೊತ್ತಿದನಾಕಳಿತಜಯಾ। ಯತ್ತಂ ನರಸಿಂಹರಾಯನಖಿಳೋಪಾಯಂ॥ 1726 ॥

## ಸೋಮೇಶ್ವರ

ಮಗರಕ್ಷೋಣಿಪನಂ ಪೊರಳ್ಚಿ ಕಡುಪಿಂದಾ ಕಾಡವೋರ್ವೀಶನಂ
ಮೊಗಮಂ ಪೊಯ್ದಿಡಿಯಿಕ್ಕಿ ಪಾಂಡ್ಯನೃಪನಂ ಬೇರಿಂದೆ ಕಿೞ್ತಿತ್ತಿ ಜ॥
ಕ್ರಿಗೆ ಚೋಳಂಗೆ ಪುನಃಪ್ರತಿಷ್ಠೆಯನದಂ ಕೈಸಾರ್ಚಿ ಕೋಪಪ್ರಸಾ।
ದಗುಣಂಗಳ್ ನಿಜಮೆಂಬಿನಂ ನೆಗೞ್ದಿಪಂ ಶ್ರೀವೀರಸೋಮೇಶ್ವರಂ ॥ 1727 ॥

ಧರೆಯಿಂದನ್ಯನೃಪಾಳಕರ್ ಬಹಳಭಾರಗ್ರಸ್ತರೆಂದಿಂತಿಳಾ।
ಭರಮಂ ತಾನೆ ಭುಜಾಗ್ರದೊಳ್ ತಳೆದು ತದ್ಭೂಪಾಳಭೂಭಾರಮಂ॥
ಭರದಿಂದಿಂಗಿಸುವಂ ನೃಪಾಳರೊಳಿದೇಂ ವಿಕ್ರಾಂತಕಾರುಣ್ಯತ।
ತ್ಪರನೋ ಪೊಯ್ಸಳಚಕ್ರವರ್ತಿಯದಟಂ ಶ್ರೀವೀರಸೋಮೇಶ್ವರಂ ॥ 1728 ॥

ಯದುಚಕ್ರೇಶನ ಸೋಯಿದೇವನ ಭುಜಾದಂಡಕ್ಕೆ ದುರ್ಗತ್ರಯಂ।
ಪದುಳಂ ನಿಲ್ಲದುದರ್ಕೆ ಚಿಂತಿಸಿ ರಿಪುಕ್ಷೋಣೀಶರಂತಾತನೆ॥
ಯ್ದಿದ ದುರ್ಗಂಗಳಿವೆಂದು ಪೆರ್ಮಡುವಿನೊಳ್ ಬಲ್ಗಾಡಿನೊಳ್ ಬೆಟ್ಟಿನೊಳ್
ಮದಿಸಿರ್ದಾವಗಮಿಂತು ಬಾೞ್ವರೆನೆ ತದ್ವಿಕ್ರಾಂತಮತ್ಯದ್ಭುತಂ ॥ 1729 ॥

ಕೆರಳ್ದೊಡೆ ನಿಲ್ಲನಶ್ವಪತಿಯೆತ್ತಿದ ವಾರ್ತೆಗೆ ನಿಲ್ಲನಾಗಜೋ।
ತ್ಕರಪತಿಯಾತ್ಮ ಸೈನ್ಯಚರಣೋತ್ಥರಜಃಪಟಳಕ್ಕೆ ನಿಲ್ಲನಾ॥
ನರಪತಿಯೆಂದೊಡಿನ್ನೆಣಿಕೆಗುಂಟೆ ಕಱುತ್ತಿದಿರಾಂಪ ರಾಯರು।
ದ್ಧುರಧುರವಲ್ಲಿ ಸೋಮಧರಣೀಪತಿಯೊಳ್ ಚಲದಂಕರಾಮನೊಳ್ ॥ 1730 ॥

ಅರಿರಾಯರ ಶಿರಮಂ ನಿಜ। ಕರಪತ್ರಂ ಕೊಳ್ವುದರಿದೆ ಸೋಮನೃಪಾಳಂ।
ಕರುಣಿಸದಟ್ಟಿದ ಪತ್ರಂ। ಶಿರಮಂ ಕೊಳ್ವುದು ವಿರೋಧಿಭೂಪಾಳಕರಾ॥ 1731 ॥

## ಕುಂಜಸೆಟ್ಟಿ

ವೀರದ ಕಣಿ ವೀರದ ನಿಧಿ। ವೀರದ ನೆಲೆ ವೀರದಾಗರಂ ಮತ್ತಂ ತಾ।
ವೀರದ ನಿಧಾನನೆನಿಪಂ। ವೀರಾಗ್ರಣಿ ಕುಂಜಸೆಟ್ಟಿ ವೀರವಿನೋದಂ ॥ 1731(ಅ) ॥

ನಡೆದುಚ್ಚಂಗಿಗೆ ಬಂದ ರಾಯದಳಮಂ ಕೈಕೊಳ್ಳದೊಂದಂಗದಿಂ।
ಬಿಡದೆಚ್ಚಾಡಿ ಶರಂಗಳಿಂ ತೆಮಱಿಯಿಂತಾಸೇನೆ ಪಿಂಗಲ್ಕೆ ತಾಂ॥
ಪಡೆದಂ ವೀರದ ಪೆರ್ಮೆಯಂ ಜಸದ ಸೊಂಪಂ ವೈರಿಕೋಳಾಹಳಂ।
ಪಡಿಯಾರಗ್ಗದ ಕುಂಜಸೆಟ್ಟಿಗೆ ಮಹಾಸಂಗ್ರಾಮರಂಗಾಗ್ರದೊಳ್ ॥ 1732 ॥

ಕಲಿಬಲ್ಲಾಳನೃಪಾಳಕಂ ಬರಿಸಿ ಬಾಹಾಸಾಹಸಕ್ಕಾವಗಂ।
ತಲೆಯಂ ತೂಗಿ ಸರಾಗದಿಂ ಸುಭಟಪಟ್ಟಂಗಟ್ಟಿ ಮೆಯ್ವೆರ್ಚಿತೀ॥
ನೆಲದೊಳ್ ಮುನ್ನಿನ ಸೆಟ್ಟಿವಟ್ಟಮೆನೆ ಕಣ್ಗಿಂಬಾದನುತ್ತುಂಗವೀ।
ರಲಲಾಮಂ ಕಲಿ ಕುಂಜಸೆಟ್ಟಿ ರಣಧೀರಂ ವೈರಿಕೋಳಾಹಳಂ ॥ 1733 ॥

ಕುಂಜನಂಬಿ ಸೆಟ್ಟಿ

ನಾನಾರತ್ನಪರೀಕ್ಷೆಯೆಂಬುದದು ತನ್ನೊಂದಂಗಮಂತಿರ್ಕೆ ಧಾ।
ತ್ರೀನಾಥರ್ಕಳ ಚಿತ್ತವೃತ್ತಿಗಳನಿಚ್ಛಾಮಾತ್ರದಿಂ ಬಲ್ಲನೆಂ॥
ಬೀನಿಸ್ಸಾರದ ಕುಂಜನಂಬಿ ನೆಗೞ್ದಂ ಮಂತ್ರಾಂಗಸಾಮರ್ಥ್ಯವಿ।
ದ್ಯಾನೈಪುಣ್ಯದಾರಮೇರು ಮಲೆಯಾಳಶ್ರೀಕುಳೋದ್ಧಾರಕಂ ॥ 1734 ॥

ತೆಂಕಲ್ ಹೊಯ್ಸಳಚಕ್ರವರ್ತಿ ಬಡಗಲ್ ತಾಂ ಬಲ್ಲಹಂ ಮೆಚ್ಚಿ ತ।
ನ್ನಂ ಕೊಂಡಾಡುವಿನಂ ಸಮಂತುಭಯರಾಯರ್ಗೆಯ್ದೆ ಸಂಧಾನಮಂ॥
ಮುಂ ಕೈವತ್ತಿಸಿ ಸಂಧಿವಿಗ್ರಹದ ಮೆಯ್ಯಿಂ ಸತ್ಯವಾಕ್ಯಂ ದಯಾ।
ಳಂಕಾರಂ ಸಲೆ ಕುಂಜನಂಬಿ ಮೆಱೆದಿರ್ಪಂ ಮಂತ್ರವಿದ್ಯಾಧರಂ ॥ 1735 ॥

ಚೇರನ ಮಾಳವೇಂದ್ರನ ಕಳಿಂಗನ ಚೋಳನ ಪಾಂಡ್ಯಭೂತಳಾ।
ಧಾರನ ಮುಟ್ಟಿದೊಂದವಸರಂಗಳನಾಗಳೆ ಪೂಣ್ದು ಮಾೞ್ಪ ವಿ॥
ಸ್ತಾರದ ಪುಣ್ಯಸಂಪದದಿನೊಪ್ಪುವ ಸೆಟ್ಟಿಗೆ ಕುಂಜನಂಬಿಗಿ।
ನ್ನಾರೆಣೆಯೆಂಬಿನಂ ನೆಗೞ್ದನಗ್ಗದ ಹೊಯ್ಸಳರಾಯರಾಜ್ಯದೊಳ್॥ 1736 ॥

ಮುತ್ತನ ಹೊಸವೂರು

ಅನುದಿನಮೊಳ್ಪುವೆತ್ತೆಸೆವ ಹೊಯ್ಸಳದೇಶವಿಳಾಸಲಕ್ಷ್ಮಿಗಾ।
ನನವನಜಾತಮಾವಿಷಯಕಾಂತೆಗೆ ಭೋಗದ ಜನ್ಮಭೂಮಿಯಾ॥
ಜನಪದಲಕ್ಷ್ಮಿಗಿಟ್ಟ ಹೊಸಬೊಟ್ಟೆನಿಸಿರ್ಪುದು ರೂಢಿವೆತ್ತ ಮು।
ತ್ತನ ಹೊಸವೂರನೂನಸುಖಸಾಗರಮುನ್ನತಭೋಗದಾಗರಂ ॥ 1737 ॥

ಹಸವಿಲ್ಲ ಜನಕೆ ಬೆಳೆಯಿಂ। ಹಸವಿಲ್ಲಳಿಗಲರ್ಗಳಿಂದೆ ಹಕ್ಕಿಗೆ ಬನದಿಂ।
ಹಸವಿಲ್ಲೆಂದೆನೆ ಮುತ್ತನ ।ಹೊಸವೂರೆಸೆವುದು ಸಮಸ್ತಸೌಖ್ಯಾವಾಸಂ ॥ 1738 ॥

ಅಗಟಾಟಿದಿನಹಿರಾಜನ। ನಗರಮನಡಿಮೆಟ್ಟೆ ಕನಕಕೋಟೋನ್ನತಿಯಿಂ।
ಮುಗಿಲಂ ಮುತ್ತನ ಹೊಸವೂರ್। ಮಿಗೆ ಮುಟ್ಟುವುದದಱ ಪೆಂಪನಿನ್ನೇವೇೞ್ವಿಂ॥
॥ 1739 ॥

ದೊರೆ ತಾನಿಂದ್ರಪುರಕ್ಕೆ ಪಾಟಿ ಧನದ ಶ್ರೀಪಟ್ಟಣಕ್ಕುರ್ವಿಯೊಳ್।
ಸರಿ ತೂಕಂ ಬಗೆವಂದು ವಿಷ್ಣುನಗರಕ್ಕೆಂಬಂತೆ ಕೈಕೊಂಡ ಮೆ।
ಯ್ಸಿರಿಯಿಂ ಮುತ್ತನ ಮೆಯ್ಮೆವೆತ್ತ ಹೊಸವೂರೊಪ್ಪಿರ್ಪುದುತ್ತುಂಗಮಂ।
ದಿರಮಾಳಾಪರಿಪೂರಿತಂ ವಿವಿಧದೇವಾಗಾರವಿಸ್ತಾರಿತಂ ॥ 1740 ॥

ಕುಂಜೇಶ್ವರ ದೇವಾಲಯ

ಇದು ಕೈಲಾಸವೊ ಮೇಣಿದೆತ್ತಿಸಿದರುದ್ಯತ್ಪುಣ್ಯಸಂಶುದ್ಧಬೀ ।
ಜದ ಹೇರೊಟ್ಟಿಲೊ ಮೇಣದಂತವರ ಭಾಸ್ವತ್ಕೀರ್ತಿತನ್ವಂಗಿ ಕೂ ॥
ಡೆ ದಿಶಾಲೋಕನಿಮಿತ್ತಮೇಱುವೆಡೆಗೆಂದಿಕ್ಕಿರ್ದ ವೇದೀವಿಳಾ ।
ಸದ ವಿಸ್ತಾರವೊ ಪೇೞೆನಲ್ಕೆ ಮೆಱೆಗುಂ ಶ್ರೀಕುಂಜನಾಥಾಶ್ರಯಂ ॥1741॥

**309 ಶಿಕಾರಿಪುರ ತಾಲೂಕು ಗುತ್ತನಹಳ್ಳಿಯ ವೀರಗಲ್ಲು** [1257]

(ಮೈಸೂರು ಶಾಸನದ ಇಲಾಖೆಯ 1927 ನೆಯ ವರ್ಷದ ವರದಿ, ಶಾಸನ ಸಂಖ್ಯೆ 136)

ಇದರಲ್ಲಿ ಬನವಾಸಿಪುರವರಾಧೀಶ್ವರ ವೀರರಾಮದೇವರಸನ ಆಳಿಕೆಯಲ್ಲಿ ರಾಮುಗವುಡನು ತುರುಗೋಳಿನಲ್ಲಿ ಕಾದಿ ಮಡಿದನೆಂದು ಹೇಳಿದೆ.

ಪೊಳೆವ ಸಿಡಿಲಂತೆ ಜವನಂ । ತಳವಡಿಸುವ ಕಾಲಮೃತ್ಯುವೆಂಬಂತದಟಿಂ ॥
ದಳವಿಯೊಳೆ ಪೊಯ್ದುನಾಗಳ್ । ಕುಲ ದೀಪಕನೆನಿಪ ರಾಮುಗವುಡಂ ಪಲರಂ ॥1742॥

ಸುರಿದರ್ ಪೂವಿನ ಮುೞೆಯುಂ । ಸುರ ದುಂದುಭಿಯೊಡನೆ ಶಂಖ ಕಹಳಾ ರವಮುಂ ॥
ಬೆರಸು ಸುರಾಂಗನೆಯರ್ ತಾಂ । ಪಿರಿಯನನಾ ರಾಮುಗವುಡನಂ ದಿವಕುಯ್ದರ್
॥1743॥

## 310 ಅರ್ಜುನವಾಡದ (ಬೆಳಗಾಂ ತಾಲೂಕು) ಶಾಸನ[1] [1259]

ಈ ಶಾಸನದಲ್ಲಿ ಸೇವುಣ ರಾಜನಾದ ಕನ್ನರನ ಆಳಿಕೆಯಲ್ಲಿ ಮಹಾಪ್ರಧಾನ ನಾಗರಸನೂ ಚವುಡಿ ಸೆಟ್ಟಿಯೂ ಕವಿಳಾಸಪುರದ ಈಶ್ವರ ದೇವಸ್ಥಾನಗಳಿಗಾಗಿ ಬಸವನ ವಂಶೋದ್ಭವನಾದ ಯತಿರಾಯ ಹಾಲಬಸವದೇವನಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.

ಶಿವಸ್ತುತಿ

ಶ್ರೀಯಂ ಶ್ರೀ ಕಲ್ಲಿನಾಥಂ ಕುಡುಗೆ ಭವಹರಂ ಭಕ್ತಬೃಂದಕ್ಕೆ ಗೌರೀ ।
ಜಾಯಾಕಾಯಾನುಷಂಗಾಕಲಿತಲಲಿತತಾಪ್ರೋಲ್ಲಸದ್ವಾಮಭಾಗಂ ॥
ಸ್ವೀಯಸ್ವಾಯತ್ತ ಶಕ್ತಿತ್ರಯಮಯ ಮಹಿಮಂ ದೇವದಾಯಾದಮಾಯಾ ।
ಪಾಯಾಭಿಪ್ರಾಯಲೀಲಂ ಪ್ರಣತಜನ. . ತಾಪ ಸಂಘಟ್ಟ ಶೀಲಂ ॥1744॥

ಬಸವ

ಮಂಗಳ ಕೀರ್ತಿ ಪುರಾತನ । ಜಂಗಮ ಲಿಂಗೈಕಭಕ್ತಿ ನಿರ್ಭರ ಲೀಲಾ ॥
ಸಂಗಂ ಸಂಗನ ಬಸವಂ । ಸಂಗತಿಯಂ ಮಾಟ್ಕೆ ಭಕ್ತಿಯೊಳಗನವರತಂ ॥1745॥

ಕನ್ನರ

ಯಾದವ ಭೂಮಿಪಾಳರಿಳೆಯಂ ಚತುರಬ್ಧಿ ಪರೀತೆಯಂ ನಿಸ ।
ರ್ಗೋದಯರಾಳ್ವರಂತವರೊಳಶ್ವ ಚಮೂ ಚಯ ವಾರ್ಧಿ ಸಿಂಹಣ ॥
ಕ್ಷ್ಮಾದಯಿತಂ ತದಗ್ರ ತನಯ ಪ್ರಭವಂ ನೃಪ ಕನ್ನರಂ ಸಮ ।
ಸ್ತೋದಧಿವೇಳೆಯಿಂ ಪೊಱಗೆ ಬೆಳ್ಗೊಡೆಯೊಳ್ನೆಟಿಲಂ ನಿಮಿರ್ಚಿದಂ ॥1746॥

ಸಲೆ ಭೂದೇವರ್ಕಳ್ಗಿ । ತ್ತಲಸದೆ ಗೋ ಭೂಮಿ ಹೇಮ ವಸ್ತ್ರಾದಿಗಳಂ ।
ಮಲೆವರಸುಗಳೊಳ್ ಕೊಳ್ವಂ । ಬಲವಂತಂ ಕನ್ನರಂ ಪ್ರತಾಪ ಸಹಾಯಂ ॥1747॥

ಚಾವುಂಡ

ಚಾವುಂಡಂ ಪಾರ್ವತೀವಲ್ಲಭ ಚರಣ ಸರೋಜದ್ವಯಾಮೋದ ಭೃಂಗಂ ।
ಚಾವುಂಡಂ ತ್ಯಾಗ ಭೋಗಾನುಭವ ಭವ ಸುಖಶ್ರೀ ವಧೂ ನೃತ್ಯ ರಂಗಂ ॥
ಚಾವುಂಡಂ ಸಾಮ ಭೇದಪ್ರಭೃತಿ ಸಕಲ ಮಂತ್ರಾಂಗ ವಿದ್ಯಾ ಸಮುದ್ರಂ
ಚಾವುಂಡಂ ವೀರ ವೈರಿಪ್ರಕರ ಸಮರ ಸಂಘಟ್ಟ ಕಾಲಾಗ್ನಿರುದ್ರಂ ॥1748॥

---

1 ಶಿವಾನುಭವ III, 94.

ನಾಗ

ತ್ಯಾಗ ಗುಣಕ್ಕೆ ತಾಯ್ವನೆ ಸಮಸ್ತ ನೃಪಾಲ ನಿಯೋಗ ವರ್ತನಾ।
ಶ್ರೀಗೆ ನಿವಾಸಮಿಷ್ಟರ ವಿಶಿಷ್ಟರ ತೋಷಣ ಪೋಷಣಂಗಳೊ॥
ಳ್ಳಾಗರಮೆಂದು ಬಣ್ಣಿಸುವುದೀ ಧರೆ ಪಂಡಿತ ಪಾರಿಜಾತನಂ।
ನಾಗನನಾ ಜನಾರ್ದನನ ಭಕ್ತಿ ಭರ ಪ್ರಭವಾನುರಾಗನಂ॥1749॥

## 311 ನಾಗಮಂಗಲ 97 [1260]

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಸಾಮಂತ ಗುಜ್ಜನು ಮಲೆಯ ಸೈನ್ಯದೊಡನೆ ಕಾದಿ ಮಡಿದು ವೀರಸ್ವರ್ಗವನ್ನು ಪಡೆದಂತೆ ಹೇಳಿದೆ.

ಗುಜ್ಜ

ಅರಿಯೆಂಬಂಬುಜವನಮಂ। ಕರಿ ಮದದಿಂದೊಕ್ಕಿಲಿಕ್ಕಿ ತುಳಿವಂತೆವೊಲಾ।
ಅರಿಗಳೆನಿಪದಟಮಲೆಹರ। ಪರಿಭವಿಪಂ ಭುಜದ ಬಲದೆ ಗುಜ್ಜಂ ಧರೆಯೊಳ್॥1750॥

ಅರಿಕುಲತಿಮಿರಕಲಾಧರ। ನರಿಮುದಕರಿಹರಿಯೆನಿಪ್ಪ ಸಿತಗರ ಗಂಡಂ।
ಅರಿಗಿರಿವಜ್ರಂ ಗುಜ್ಜಂ। ಗರಿಗಳ್ ಕಳವಳಿಸದಿಹರೆ ವಸುಧಾತಳದೊಳ್॥1751॥

## 312 ಬೇಲೂರು 342 (ಅನುಬಂಧ) [1265]

ಇದರಲ್ಲಿ ಹೊಯ್ಸಳ ರಾಜನಾದ 3ನೆಯ ನಾರಸಿಂಹನು ತ್ರಿಕೂಟ ರತ್ನತ್ರಯ ಶಾಂತಿನಾಥ ಜಿನಾಲಯಕ್ಕಾಗಿ ಮಾಘನಂದಿ ಸೈದ್ಧಾಂತಿಗೆ ಕಲ್ಲಂಗೆರೆಯನ್ನು ಕಾಲುವಳ್ಳಿ ಸಹಿತವಾಗಿ ಕೊಟ್ಟಂತೆ ಹೇಳಿದೆ.

ಹೊಯ್ಸಳರ ಶಾರ್ದೂಲ ಚಿಹ್ನ

ಮುದದಿಂ ಜೈನವ್ರತೀಶಂ ಶಶಕಪುರದ ಪದ್ಮಾವತೀ ದೇವಿಯುಂ ಮಂ।
ತ್ರದಿನೆಂತುಂ ಸಾಧಿಸಲ್ ವಿಕ್ರಿಯೆಯೊಳೆ ಪುಲಿ ಮೇಲ್ವಾಯೆ ಯೋಗೀಶ್ವರಂ ಕುಂ॥
ಚದ ಕಾವಿಂದಾಂತದಂ ಪೊಯ್ ಸಳ ಎನಲಭಯಂ ಪೊಯ್ಯುದುಂ ಪೊಯ್ಸಳಾಂಕಂ
ಯದುಭೂಪರ್ಗಾದುದಂದಿಂದೆಸೆದುದು ಸೆಳೆಯಿಂ ಲೋಲ ಶಾರ್ದೂಲ ಚಿಹ್ನಂ
॥1752॥

## ವಿನಯಾದಿತ್ಯ

ಸತ್ಕುಲದೊಳಗಿಂದು ಮಹೀ । ಭೃತ್ಕುಲದೊಳಗಚಲ ನಾಥನೆಸೆವಂತೆಸೆದಂ ॥
ತತ್ಕುಲದೊಳ್ ವಿಜಿತಾರಿ ಕು । ಭೃತ್ಕುಲನಾದಿತ್ಯಮೂರ್ತಿ ವಿನಯಾದಿತ್ಯಂ ॥1753॥

## ಎರೆಯಂಗ

ತದಪತ್ಯಂ ರಿಪುನೃಪ ಭುಜ । ಮದ ಮರ್ದನನಖಿಲ ವಿಬುಧ ಜನತಾ ಸೌಖ್ಯ ॥
ಪ್ರದನುದಿತೋದಿತ ಮಹಿಮಾ । ಸ್ಪದನೆನಿಪೆಱೆಯಂಗ ಭೂಪನಂಗಜ ರೂಪಂ ॥1754॥

## ನಾರಸಿಂಹ II

ಕಲಿ ಬಲ್ಲಾಳನ ಸೂನು ಗೆಲ್ದ ರಣರಂಗಂ ತಳ್ತ ಮುಂಡಂಗಳಿಂ ।
ದೆಲೆದೋಂಟಕ್ಕೆಣೆಯಾಯ್ತು ಭೇದಿಸಿದ ವೀರಾಸಾರದಿಂ ಧಾರೆವ ॥
ಟ್ಟಲನಿಟ್ಟಂತೆವೊಲಾಯ್ತು ಭಾನುವಳಯಂ ಶ್ರೀರಾಯ ಭೇರುಂಡನೆ ।
ಕ್ಕಲಸಿಂಹಂ ನರಸಿಂಹನೇಂ ತುಱಿದನೋ ತನ್ನಾನೆಯಿಂದಾರ್ಯರಂ ॥1755॥

## ಸೋಮೇಶ್ವರ

ಹೊಗು ಬಾ ಹಮ್ಮೀರ ಹೋ ಗೂರ್ಜರ ಹೆಱತೆಗೆ ನಿಂದಲ್ಲೆ ನಿಲ್ಲಂಧ್ರ ನಿನ್ನೋ ।
ಲಗವೇಱಿತ್ತಿತ್ತ ಸಾರ್ ಮಾಳವ ಕುಡು ತೆಱಹಂ ಲಾಳ ಗೌಳಂಗೆ ಮಾಣ್ ಮಾ ॥
ತುಗಳಂ ಬಂಗಾಳ ದೇವಂ ಬೆಸಸುವ ನುಡಿಯಂ ವಂಗ ಕೇಳೆಂಬರೆತ್ತಂ ।
ನೆಗೞ್ದೀ ಸೋಮೇಶನಾಸ್ಥಾನದೊಳರಿ ಬಿರುದಕ್ಷತ್ರರಂ ವೇತ್ರ ಹಸ್ತರ್ ॥1756॥

## ನಾರಸಿಂಹ III

ಮುಳಿಸಿಂದಂ ಕಂಬದಿಂ ಮೂಡಿದನೆನಿಸಿದ ಡೊಂಬಿಂಗೆ ಹೇವೈಸಿ ತಾಂ ಬಿ ।
ಜ್ಜಳದೇವೀ ರಾಣಿಗಂ ಹೊಯ್ಸಳ ಕುಳ ತಿಳಕಂ ಸೋಯಿದೇವಂಗಮುರ್ವೀ ॥
ವಳಯಂ ಬಾಪ್ಪೆಂಬಿನಂ ಪುಟ್ಟಿದನಹಿತ ಹಿರಣ್ಯಾಕ್ಷ ದೈತ್ಯೇಂದ್ರ ವಕ್ಷ ।
ಸ್ಥಳ ಚಂಡೋಗ್ರಾಸಿ ಧಾರಾ ನಖ ವಿದಳನ ಸಿಂಹಂ ನೃಪಂ ನಾರಸಿಂಹಂ ॥1757॥

ಬಳದಿಂದಂ ಚೋಳ ಪಾಂಡ್ಯಾವನಿಪರನೊಲವಿಂ ಸ್ಥಾಪನಂ ಗೆಯ್ದು ಹಿಮ್ಮಾ ।
ಚಳದಿಂದಂ ಸೇತು ಸೀಮಾವನಿಯನಿಳೆ ಬಬಾಪ್ಪೆಂಬಿನಂ ಬಾಹು ಮೂಳ ॥
ಸ್ಥಳದೊಳ್ ಶ್ವೇತಾತಪತ್ರಂ ತನಗಮುರ್ವಿನೆಗಂ ತಾಳ್ದಿದಂ ರಾಯರೊಳ್ ಬಿ ।
ಜ್ಜಳದೇವೀ ನಂದನಂ...ಕರಟಿಘಟಾಸಿಂಹನೀ ನಾರಸಿಂಹಂ ॥1758॥

ಇಳೆಯೊಳ್ ತನ್ನಾಣೆ ತನ್ನುಬ್ಬಟೆಯು ವಿತರಣಂ ತನ್ನ ತೋಳ್ವಲ್ಪು ತನ್ನು।
ಜ್ಜ್ವಳ ವೃತ್ತಂ ತೇಜಂ ಪಸರಿಸೆ ಧರಣೀಪಾಳರೊಳ್ ಕೀರ್ತಿಗಿಂತೇಂ॥
ನೆಲೆಯಾಗಿರ್ದಪ್ಪನೋ ಬಾಪ್ಪೆನೆ ಸಕಳ ಜನಂ ಸೋಯಿದೇವಾತ್ಮಜಂ ಬಿ।
ಜ್ಜಳದೇವೀ ನಂದನಂ ಹೊಯ್ಸಳ ಕುಳ ಕಮಳೋತ್ತಂಸ ಹಂಸಂ ನೃಸಿಂಹಂ॥1759॥

**313 ಸಾಗರ 140 [1265]**

ಈ ವೀರಗಲ್ಲಿನಲ್ಲಿ ಬೊಮ್ಮರಸನು ಸಾಂತಳಿಗೆಯನ್ನು ಆಳುತ್ತಿದ್ದಾಗ ಹೊಯ್ಸಳರಾಜನಾದ 3ನೆಯ ನಾರಸಿಂಹನ ಕಡೆಯವನಾದ ಸಂಗನು ಹಣಜೆಯ ತುರುವನ್ನು ಹಿಡಿದಲ್ಲಿ ದೇಸು ನಾಯಕನು ಕಾದಿ ಮಡಿದನೆಂದು ಹೇಳಿದೆ.

ಕರವಾಳಿಂ ದೇಸುವೇಟ್ಟಿಂದಿಱಿಯಲಹಿತರಂ ಯುದ್ಧದೊಳ್ ಖುದ್ಧಕೋಪಂ।
ನೊರೆನೆತ್ತರ್ ಸೂಸೆ ಕಂಡಂ ಸಡಿಲೆ ಕಟಿಲಲಾಕಾಳಿಜಂ ಮೂಳೆ ಬೀೞೆ॥
ಲ್ವರಿಯಲ್ ನುರ್ಗಾಗೆ ಬಿಕ್ಕೊಕ್ಕುರುಳೆ ತೊರಳೆಗಳ್ ಸಿಂಘಗಳ್ ತಾಱಿ ಪಾಱಿಲ್।
ಕರುಳೊಕ್ಕಾಸಂಧಿಬಂಧಂ ಬಿಡಲತಿಭಯದಿಂ ಘೋರಮಾಯ್ತಾಜಿರಂಗಂ॥1760॥

ತೋಳ್ಗಳ ಸಾಲ್ಗಳಿಂ ತೊಡೆಯ ತಂಡಗಳಿಂ ಭಟ್ಟರಟ್ಟೆಯೊಟ್ಟಲಿಂ।
ಬಾಳ್ಗಳ ಘಾಯದಿಂ ಪಱಿದ ಪಂದಲೆಯೋಳಿಯಿನೆಲ್ಲಿ ನೋೞ್ಪೊಡಂ॥
ಕೀಲ್ಗಳನಡ್ಡಗರ್ಚಿ ಕೆಡೆದಿರ್ದ ತುರಂಗದ ಪೆರ್ವೆಣಂಗಳಿಂ।
ದಾಳ್ಗಳ ದೇವ ದೇಸುವಿಱಿದಾಹವಮದ್ಭುತಮಾಯ್ತು ಧಾತ್ರಿಯೊಳ್॥1761॥

ಪಡೆಮಾತೇಂ ಹೊಗಟಿಲ್ಕದಾರ್ಗಮರಿದುಗ್ರಾಟೋಪದಿಂ ದೇಸು ಮಾ।
ರ್ಪಡೆಯುಂ ಕೂರಸಿಯಿಂ ಪಡಲ್ವಡಿಸಲಾ ಪೆರ್ಮಾರಿ ಪೇಸಿತ್ತಿದಂ॥
ಸುಡಲಿನ್ನೆಂದುದು ಮೃತ್ಯು ಮತ್ತೊಗಡಿಸಿತ್ತಾ ಭೂತವರ್ಗಂ ಜವಂ।
ಕಡು ಬೇಸತ್ತಪನುಯ್ಯಲಾಂತರಸುವಂ ತಾನೆಂದೊಡುಗ್ರಾಜಿಯುಂ॥1762॥

**314 ಅರಸಿಯಕೆರೆ 8 [1267]**

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಮಹಾಪಸಾಯಿತ ಬಲ್ಲಣ್ಣನು ತನ್ನ ತಂದೆ ಕಟ್ಟಿಸಿದ ಚನ್ನಕೇಶವ ದೇವಸ್ಥಾನವನ್ನು ಸಿದ್ದಣ್ಣ, ದೇವಣ್ಣ ಇವರುಗಳಿಗೆ ಪ್ರೀತಿದಾನವಾಗಿ ಕೊಟ್ಟಂತೆ ಹೇಳಿದೆ.

ವಿಷ್ಣುಸ್ತುತಿ

ಶ್ರೀರಾಮಾವಲ್ಲಭಂ ಸದ್ಗುಣಗಣನಿಲಯಂ ಸರ್ವಗಂ ಸರ್ವಲೋಕಾ।
ಧಾರಂ ಭಕ್ತಪ್ರಿಯಂ ಶಾಶ್ವತನಖಿಳಜಗದ್ವಂದ್ಯನಾನಂದರೂಪಂ॥
ಕ್ಷೀರಾಂಭೋರಾಶಿಸಂಸ್ಥಂ ಭವದುರಿತಹರಂ ಮುಕ್ತಿದಂ ಭಕ್ತಿಗಮ್ಯಂ।
ಕಾರುಣ್ಯಾಂಭೋಧಿ ನಾರಾಯಣನೆಮಗಮಳಾನಂದಮಂ ಮಾೞ್ಕನಂತಂ॥1763॥

## 315 ಕೃಷ್ಣರಾಜಪೇಟೆ 12 [1267]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಆಳಿಕೆಯಲ್ಲಿ ಅವನ ದಂಡನಾಥ ಸೋಮಯ್ಯನ ಅಕ್ಕ ರುಕ್ಕವ್ವೆದಣ್ಣಾಯಕಿತ್ತಿ ಅಗ್ರಹಾರವನ್ನು ಮಾಡಿ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ II

ಬಲ್ಲಾಳೋರ್ವೀಶ್ವರಂಗಂ ಪದುಮಲೆಲಲನಾರಾಜರತ್ನಕ್ಕೆ ನಿಚ್ಚಂ ।
ಕಲ್ಯಾಣಂ ಕೈಗೆಯಲ್ ಭೂಭುವನಜನಮನೋರಂಜನಂ ನಾರಸಿಂಹಂ ॥
ಫುಲ್ಲಾಸ್ತ್ರಾರಾತಿರೂಪಂ ಜನಿಯಿಸಿದನಿಳಾವಲ್ಲಭಂ ಕೀರ್ತಿಲಕ್ಷ್ಮೀ ।
ಸಲ್ಲೀಲಾಲಾಸ್ಯಶಿಕ್ಷಾಗುರುವೆನಲೆಸೆದಂ ಗಂಡಭೇರುಂಡಕಾಯಂ ॥1764॥

ನಾರಸಿಂಹ III

ಕಂಬದೊಳೊಗೆದ ನೃಸಿಂಹನ । ಡಂಬರಮಂ ಮೆಚ್ಚದೊಸೆದು ಸೋಮೇಶದಯಾ ।
ಲಂಬನಬಿಜ್ಜಳದೇವಿಯು । ನುಣ್ಬಸಿಱೊಳ್ ಬಂದನದಟನಾ ನರಸಿಂಗಂ ॥1765॥

## 316 ನಾಗಮಂಗಲ 39 [1271]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಮಂತ್ರಿ ಪೆರುಮಾಳೆದೇವನು ಬೆಳ್ಳೂರ ಪಂಚಿಕೇಶ್ವರದ ಧರ್ಮಕ್ಕೂ ಆರಣಪೂಜೆಯ ಧರ್ಮಕ್ಕೂ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ III

ಮದವದುದಗ್ರವೈರಿಮದಮರ್ದನವೀರನೃಸಿಂಹಭೂಭುಜಂ ।
ಗದಿರದೆ ಬಂದು ಸೇವುಣಮಹಾಮಹಿಪಂ ಮಹದೇವರಾಣೆಯುಂ ॥
ಕದನದೊಳಾಂತು ನಿತ್ತರಿಸಲಾಱದೆ ಬಿಟ್ಟು ತುರಂಗಮಂಗಳಂ ।
ಬೆದಱಿ ಪಲಾಯನಂ ಕುಶಲಮೆಂದಿರದೋಡಿದನೊಂದೆ ರಾತ್ರಿಯೊಳ್ ॥1766॥

ಕುಲಮುಂ ಚಲಮುಂ ನಿಜಭುಜ । ಬಲಮುಂ ವಿಖ್ಯಾತಿಯುಂ ಪ್ರತಾಪೋದಯಮುಂ ।
ಕಲಿತನಮುಂ ಚೆಲ್ವುಂ ಜನ । ದೊಲವುಂ ನೃಪವೀರನಾರಸಿಂಹಂಗೆ ನಿಜಂ ॥1767॥

## 317 ಚೆನ್ನರಾಯಪಟ್ಟಣ 269 [1276]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ದಂಡನಾಯಕ ಪೆರುಮಾಳೆದೇವನು ಬಾಳುಗಚ್ಚಿನ ಐಂದ್ರುಪರ್ವದ ಪಂಚಿಕೇಶ್ವರದೇವರ ಧರ್ಮಕ್ಕೆ ಭೂಮಿಯನ್ನು ಕೊಂಡು ಬಿಟ್ಟಂತೆ ಹೇಳಿದೆ.

ಪೆರುಮಾಳೆದೇವ

ಶ್ರೀ ಸೌಭಾಗ್ಯಮನಾಂತು ವಾಗ್ವನಿತೆ ಸತ್ಯಂಬೆತ್ತು ಶೌರ್ಯಂ ಜಯ ।
ಶ್ರೀಸೊಂಪಂ ಪಡೆದತ್ಯುದಾರತೆ ಜನಾಭೀಷ್ಟಾರ್ಥಸಂಸಿದ್ಧಿಗೊಂ ॥
ಡೀಸೈಪಿಂ ವರವಕ್ಷ ವಕ್ತ್ರಭುಜಹಸ್ತಸ್ಥಾಯಿಗಳ್ ಸಂತತಂ ।
ಲೇಸಪ್ಪೀಪೆರುಮಾಳೆದೇವಸಚಿವಾಂಗಶ್ರೀಗಿವೇ ಭೂಷಣಂ ॥1768॥

ಜವನಿಕೆಯೋಡಲಿರ್ಬಲದ ವೀರಭಟಾವಳಿ ನೋಡೆ ಖಡ್ಗದಿಂ ।
ದವೆ ಕಲಿರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು ತ ॥
ಜ್ಜವನಿಕೆಗೊಂಡ ಗಂಡ ಪೆರುಮಾಳೆಚಮೂಪತಿಗಿಂತು ಸಾರ್ದುದಾ ।
ಜವನಿಕೆನಾರಣಾಂಕಮಿದು ರಾವುತರಾಯನುದಗ್ರದೋರ್ಬಳಂ ॥1769॥

**318 ಬೇಲೂರು 165 [1276]**

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಆಳಿಕೆಯಲ್ಲಿ ಸೇವುಣರಾಮ ದೇವನ ದಳಪತಿ ಸಾಳುವತಿಕ್ಕಮನು ಸೈನ್ಯದೊಡನೆ ಬಂದು ಬೆಳವಾಡಿಯಲ್ಲಿ ನೆಲಸಿರಲು ಚಿಕ್ಕ ಕೇತಯದಣ್ಣಾಯಕನ ಮಗ ಅಂಕೆಯನಾಯಕನು ಅವನೊಡನೆ ಯುದ್ಧಮಾಡಿ ಸತ್ತನೆಂದು ಹೇಳಿದೆ.

ಅಂಕೆಯನಾಯಕ

ಹೊಸಬಿರುದರ ಗಂಡಂ ನಾ । ಲ್ದೆಸೆಗಂ ಕವಿತರ್ಪ ಸೇವುಣರ ಸೈನ್ಯಕಮಂ ।
ದೆಸೆವಲಿಗೆಯ್ದಂ ಪೊಯ್ದಂ । ವಸುಧಾತಳದಲ್ಲಿ ವೀರಭಟರುರುಳ್ವಿನೆಗಂ ॥1770॥

ಕಿಡಿ ಕಿಡಿ ಸೂಸೆ ಮಸ್ತಕದ ಸಿಪ್ಪುಗಳಾಗಳೆ ಪಾಱೆ ವಾಜಿಗಳ್ ।
ಕಡಿಕಡಿಯಾಗೆ ನೆತ್ತರ ಕಡಲ್ ಪರಿಯಲ್ ಕಲಿಯಂಕನೇಱೆ ಪೊ ॥
ಯ್ದೊಡೆ ಹರಿಪಾಳನಳ್ಕಿದನು ಸಾಳುವನೋಡಿದನೇವೆನೆಂದು ಬಾ ।
ಯ್ವಿಡುತುಮೆ ಜೇಯಿದೇವನನುವಿಲ್ಲದೆ ಮೆಯ್ದೆಗೆದಂ ಮಹಾಜಿಯೊಳ್ ॥1771॥

**319 ಬೇಲೂರು 133 [1279]**

ಇದರಲ್ಲಿ ಅಭಯಚಂದ್ರಸಿದ್ಧಾಂತದೇವರಿಗೆ ದೋರಸಮುದ್ರದ ನಕರಂಗಳು (ವರ್ತಕರು) ನಿಸಿದಿಗೆಯನ್ನು ಮಾಡಿಸಿದರೆಂದು ಹೇಳಿದೆ.

ಚಾರುಕೀರ್ತಿ ಪಂಡಿತ

ಧವಳಯಶೋನೀರಂಜಿತ । ಭುವನಂ ಕವಿಗಮಕಿವಾದಿವಾಗ್ಮಿವಿತಾನ ।
ಪ್ರವರಂ ಸಾರ್ಥಕನಿಜನಾ । ಮವಿಳಾಸಂ ಚಾರುಕೀರ್ತಿಪಂಡಿತದೇವಂ ॥1772॥

ಸಮುದಾಯದ ಮಾಘನಂದಿ

ಕುಮತೌಘನಿವಾಳಕನಂ । ನಮಸ್ಕರಿಪ್ಪೆಂ ಜಿನಾಗಮೋದ್ಧಾರಕನಂ ।
ವಿಮಳದಯಾಧಾರಕನಂ । ಸಮುದಾಯದ ಮಾಘನಂದಿಭಟ್ಟಾರಕನಂ ॥1773॥

ಅಭಯಚಂದ್ರ

ಸವಿಶೇಷಾಗಮವಾಕ್ಸುಧೌಷಧಮನೀಂಟಲ್ ಕೊಟ್ಟಕಾರತ್ರಿದೋ ।
ಷವಿಕಾರಂಗಳನೆತ್ತಿ ಕಿಱ್ತು ವಿಳಸದ್ರತ್ನತ್ರಯಂ ರಕ್ಷೆಯಾ ॥
ಗೆ ವಿನೇಯಾಳಿಗೆ ಕಟ್ಟಿ ರಕ್ಷಿಸಿದನೀಸಿದ್ಧಾಂತಚಕ್ರೇಶನೇಂ ।
ಭವರೋಗಕ್ಕೆ ಸುವೈದ್ಯನೋ ಅಭಯಚಂದ್ರಂ ಬಾಳಚಂದ್ರಾತ್ಮಜಂ ॥1774॥

ಅಱಿದಾತ್ಮೀಯಸಮಾಧಿಯಂ ತೊಱೆದು ಸರ್ವಾಹಾರಮಂ ದೇಹಮಂ ।
ಮೆಱೆದಕ್ಷೋಭತೆಯಂ ಜಗಂ ಪೊಗೞೆ ಪರ್ಯಂಕಾಸನಪ್ರಾಪ್ತಿಯಿಂ ॥
ನೆಱೆದಾತ್ಮೋದ್ಭವಕಳಾಂಶುವಂ ದಿವದೊಳಂ ತೋರ್ಪೆಂ ದಲೆಂಬಂದದಿಂ ॥
ತಱಿಸಂದಂ ಸುರಮಂದಿರಕ್ಕಭಯಚಂದ್ರಂ ರುಂದ್ರಸೈದ್ಧಾಂತಿಕಂ ॥1775॥

**320 ಬೇಲೂರು 92 [1279]**

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಆಳಿಕೆಯಲ್ಲಿ ಪಾಥಿಜಟ್ಟಿ ದೋರಸಮುದ್ರದ ನಿಂಬಜಾದೇವಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳ ವಂಶ

ಶ್ರೀಕಾಂತಾಕಾಂತೋದರ । ಕೋಕನದದೊಳೊಗೆದನೊಲ್ದು ಸೃಷ್ಟಿಗಧೀಶಂ ।
ನಾಕಾಧೀಶ್ವರವಂದ್ಯಂ । ಲೋಕೇಶಂ ಬ್ರಹ್ಮನಮಳಕೀರ್ತಿನಿಧಾನಂ ॥1776॥

ವನಜಜನೋತು ಮಾನಸಸುಪುತ್ರರನತ್ಯಧಿಕಪ್ರಸಿದ್ಧರಂ ।
ಮನದನುರಾಗದಿಂದೆ ಪಡೆದಂ ನವಸಂಖ್ಯೆಯಿನಲ್ಲಿಯತ್ರಿಯೆಂ ॥
ಬನುಪಮಪುಣ್ಯಪುಂಜನುದಿತೋದಿತವಿಕ್ರಮನುದ್ಧತೇಜನಾ ।
ತನ ನಿಜಕೀರ್ತಿ ವರ್ತಿಸೆ ಪಿತಾಮಹನಿಂದಧಿಕಂ ತ್ರಿಲೋಕದೊಳ್ ॥1777॥

ಆ ಸರಸೀಜಸಂಭವನ ಮಾನಸನಂದನನತ್ರಿಯೊರ್ವೆ ಕಂ ।
ಜಾಸನವಿಷ್ಣುರುದ್ರರನುಪಾರ್ಜಿಸೆ ಮೆಚ್ಚಿಯವರ್ ಪ್ರಸನ್ನರಾ ॥
ದಾ ಸಮಯಾನುರಾಗದೊಳೆ ನೀವೆನಗಾತ್ಮಜರಾಗಿಮೆಂದೆನಲ್ ।
ಭಾಸುರತೇಜರುದ್ಭವಿಸಿದರ್ ತ್ರಿಜಗನ್ನುತಕೀರ್ತಿಭಾಜನರ್ ॥1778॥

ಹರಿ ದತ್ತಾತ್ರೇಯನುಮಾ । ವರನೇ ದೂರ್ವಾಸನಬ್ಜಜಂ ಚಂದ್ರಂ ಭಾ ॥
ಸುರಚಿತ್ತತಮದ್ಭೃಗುದ್ಭವ । ರುರುತೇಜಃಪುಂಜರಾದರತ್ರಿಗೆ ಪುತ್ರರ್ ॥1779॥

ಆ ಮೂವರ್ ದೇವರಂಶೋದ್ಭವರೊಳಗಧಿಕಂ ಚಾರುತಾರಾಳಿಶೋಭಿ ।
ವ್ಯೋಮಾಧೀಶಂ ಚಕೋರೀಚಯಹೃದಯಸುಖಾನಂದಕಂದಂ ತ್ರಿಣೇತ್ರೋ ॥
ದ್ದಾಮೋದ್ಯಜ್ಜೂಟದೇಶೋಜ್ಜ್ವಳರುಚಿರಸುಧಾರೋಚಿದಿಗ್ವ್ಯಾಪಿ ಚಂದ್ರಂ ।
ಭೂಮಿಶೋತ್ಪತ್ತಿಯಾಯ್ತಾತನ ಪೆಸರೆಸೆವಿಂ ಸೋಮವಂಶಾವತಾರಂ ॥1780॥

ತಾರಾಧೀಶತನೂಭವ । ನಾರಿಂದಂ ಚೆಲ್ವನಾಗಿ ಸೌಮ್ಯನೆನಿಪ್ಪಂ ।
ಧಾರಿಣಿಯುಂ ರಕ್ಷಿಸಲು ಪು । ರೂರವನಂ ಪಡೆದನವನಿಗವನೇ ದೇವಂ ॥1781॥

ಚಾರುಪುರೂರವೋರ್ವಿಪನ ನಂದನನಾಯುನರೇಂದ್ರನಾತನಿಂ ।
ಧಾರಿಣಿಪಾಲಕಂ ನಹುಷನಾ ನಹುಷಕ್ಷಿತಿನಾಥನಾತ್ಮಜಂ ॥
ಶೂರಯಯಾತಿಭೂಭುಜ ... ಕುತೂಹಳನಬ್ಧಿವೇಷ್ಟಿತೋ ।
ದಾರಧರಿತ್ರಿವಿಸ್ತೃತಯಶಂ ಪಡೆದಂ ಯದುವೆಂಬ ಚಕ್ರಿಯಂ ॥1782॥

ಆ ಯದುವಂಶದೊ ... ವೀರದ ಚಾಗದ ಭೋಗದೊಳ್ಪಿನಾ ।
ಖ್ಯಾಯಿಕೆ ತನ್ನೊಳೊಪ್ಪೆ ಧರಣೀಭರಮಂ ಭುಜದಲ್ಲಿ ತಾಳ್ದಿಕೊಂ ॥
ಡಾಯತಚಿತ್ತದಿಂ ಜಗಮನುದ್ಧರಿಸುತ್ತತಿತೇಜದೆಟ್ಟಿರಂ ।
ಸ್ಥಾಯಿಯೆನಲ್ಕೆ ವಿಕ್ರಮದಿನಾಳ್ದನಿಳಾತಳಮಂ ಸಳೋರ್ವಿಪಂ ॥1783॥

ಶ್ರೀಸಂಪತ್ತಿಯ ಶಶಪುರ । ವಾಸಂತೀವಾಸದಲ್ಲಿ ಸಿದ್ಧಮುನೀಂದ್ರಂ ॥
ಲೇಸೆನೆ ಸಳಂಗೆ ವಿದ್ಯಾ । ಭ್ಯಾಸಂಗೆಯ್ಯುತ್ತುಮಿರ್ದನಿರ್ಪನ್ನೆವರಂ ॥1784॥

ಅಳವಿಯೊಳೆಟ್ಟಿ ಪಾಯ್ವ ಪುಲಿಯುಂ ಮುನಿ ಹೊಯ್ ಸಳ ಎಂದ ತತ್ಕ್ಷಣಂ ।
ಸೆಳೆಯೊಳಡುರ್ತು ಪೊಯ್ದು ಸೆಳೆಯುಂ ನೆಗಪಲ್ಕತಿಚಿತ್ರಮಾದುದಾ ॥
ಸೆಳೆಗೊನೆಯುಲ್ಲಿ ನೇಲ್ವ ಪುಲಿಯೆತ್ತಿದ ಸಿಂದವೆನಲ್ಕೆ ಕೀರ್ತಿಯುಂ ।
ತಳೆದ ಸಳಂಗೆ ಹೊಯ್ಸಳವೆಸರ್ ಪ್ರಕಟೀಕೃತಮಾಯ್ತು ಲೋಕದೊಳ್ ॥1785॥

## 321 ದಾವಣಗೆರೆ 59 [1280]

ಇದರಲ್ಲಿ ಸೇವುಣರಾಜನಾದ ರಾಮಚಂದ್ರನ ಆಳಿಕೆಯಲ್ಲಿ ಅವನ ಮಂತ್ರಿ ತಿಕ್ಕಮದೇವನು ಹರಿಹರಕ್ಷೇತ್ರದಲ್ಲಿ ಮಹದೇವರಾಯನಾರಾಯಣದೇವರನ್ನು ಪ್ರತಿಷ್ಠೆ ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವರಾಹ

ಪಿರಿದೊಲವಿಂದೀಧರ್ಮ್ಮವ। ಪರಿಪಾಲಿಸುಗಾಮಹಾವರಾಹಹರೀಶಂ।
ಧರೆಯಾವನ ರದನಾಗ್ರದೊ। ಳಿರುತೊಪ್ಪುವಳಬ್ಜಮಧುಪಲಲನೆಯ ತೆಱದಿಂ ॥1786॥

ವರರದನಾಳದಿಂ ದಿಗಮಳಚ್ಛದದಿಂದುಡುಕೇಸರಂಗಳಿಂ।
ದುರುಘನಭೃಂಗದಿಂ ಕನಕಪರ್ವ್ವತಕರ್ಣಿಕೆ ಕೂರ್ಮ್ಮವೃಂತದಿಂ॥
ಪರವೆನೆ ನೈದಿಲಂತೆಸೆವ ಧಾತ್ರಿಯನಾದಿವರಾಹರೂಪದಿಂ।
ಧರಿಸಿದನಾವನಾಹರಿಹರಂ ಪರಿಪಾಲಿಸುಗೀಸುಧರ್ಮ್ಮಮಂ ॥1787॥

### ಸರಸ್ವತಿ

ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ಬಿ।
ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ॥
ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಳ್ ಪಗಲಾವಳೊರ್ವಳಾ।
ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ ॥1788॥

### ಸಿಂಘಣ

ನಲವಿಂ ವೈಹಾಳಿಗಾತಂ ಪೊಱಮಡುತಿರಲಾಸೇನೆಯಿಂದೆಟ್ದ ಧೂಳೀ।
ಕುಲಮಂ ಕಂಡಂಜಿ ಶತ್ರುಕ್ಷಿತಿಪತಿಗಳೆ ತಂದಿತ್ತ ವಿತ್ತಂಗಳೆಲ್ಲಂ॥
ಇಳೆಯೊಳ್ ಕಾಲಿಕ್ಕಲಿಂಬಿಲ್ಲೆನೆ ಪಸರಿಸಲಂಭೋನಿಧೀಶಂಗೆ ನಿನ್ನೀ।
ಜಲದೊಳ್ ದೌವಾರಿಕರ್ ಬೈಚಿಣಿಸೆನಲವರಿಂ ವಾರ್ಧಿ ರತ್ನಾಧಿನಾಥಂ ॥1789॥

ಅರಿಹೃದಯಂಗಳೆಂಬುರುಸರೋವರಜೀವನಮಂ ಕರಂಗಳ।
ತ್ಯುರವಣೆಯಿಂದಸಾರಮೆನೆ ತತ್ತರುಣೀನಯನೋತ್ಪಳಂಗಳಂ॥
ವಿರಸವೆನಲ್ಕೆ ಮಾಡುತೆ ಮಹೀಸುರರಾಸ್ಯಸರೋರುಹಂಗಳಂ।
ಭರವಸದಿಂದೆ ವಿಸ್ತರಿಸುತೊಪ್ಪಿದ ಸಿಂಘಣನೆಂಬ ಭಾಸ್ಕರಂ ॥1790॥

ಕಂಧಾರ ದೇವ

ಪಿರಿದಪ್ಪೀಖ್ಯಾತಿಯಿಂದಂ ಧುರದ ಬಲುಪಿನಿಂ ಕ್ಷಾತ್ರತೇಜೋಗ್ರತಾವಿ
ಸ್ತರದಿಂದಂ ಕ್ರೋಧದಿಂದಂ ಹುಸಿಗೆ ಸೊಗಸನೆಂಬೊಂದು ತಾತ್ಪರ್ಯದಿಂದಂ ॥
ಅರಿಚಕ್ರೈಶ್ವರ್ಯಮಂ ಕೊಂಡುದುಟಿ ಕಳೆವ ಸಾಮರ್ಥ್ಯದಿಂ ಧೈರ್ಯದಿಂದಂ ।
ವರಭಾಗ್ಯಂ ಪಾಂಡವಾದ್ಯಂಗೆಣೆಯೆನಲೆಸೆದಂ ವೀರಕಂಧಾರದೇವಂ ॥1791॥

ಮಹದೇವ

ಗೌಳರ್ ಕಾಳೆಗಕಂಜಿ ಪುತ್ತಡರಿದರ್ ನಾಣ್ಗೆಟ್ಟು ಪೋಗುತ್ಕಳರ್ ।
ಚೇಳಪ್ರೀತಿಯ ಬಿಟ್ಟರೋಡಿ ಜಳಮಂ ಪೊಕ್ಕಂಜಿದರ್ ಮಾಳವರ್ ॥
ಲಾಳರ್ ಕಾಣಿಕೆಗೊಟ್ಟು ಕಂಡರುಳಿದ ಕ್ಷ್ಮಾಪಾಳರೆಲ್ಲಾಗಳುಂ ।
ವೇಳಾಳಾಗಿಹರೆಂದೊಡೇಂ ಪೊಗಟ್ವಿನಾಭೂಪಪ್ರತಾಪೋಗ್ರಮಂ ॥1792॥

ತಿಕ್ಕಮ

ಭರದಿಂ ಸಾಳುವತಿಕ್ಕಮಂ ಪೊಜಿಮಡಲ್ ಸೇನಾರಜಃಪುಂಜದಿಂ ।
ಗಿರಿಯುಂ ಚೂರ್ಣಿಸಿ ಭೂಮಿಯಾಗಿ ನಭಮಂ ಮಾಡುತ್ತುಮಂಭೋಧಿಯಂ ॥
ಪಿರಿದುಂ ಪೆರ್ಗ್ಗಸಱಾಗಿ ಶತ್ರುಶಿರಮಂ ಸೆಂಡಾಡಿ ವೈರಿಶ್ರಿಯುಂ ।
ಪರಿತಂದೀವುದು ರಾಮಚಂದ್ರಚರಣಕ್ಕಾನಂದದಿಂ ವಿಕ್ರಮಂ ॥1793॥

## 322 ಹೊಳೆಯನರಸೀಪುರ 112 (ಅನುಬಂಧ) [1282]

ಇದರಲ್ಲಿ ಹೊಯ್ಸಳ ರಾಜನಾದ 3ನೆಯ ನಾರಸಿಂಹನು ಮಾವನೂರಲ್ಲಿ ದೇವರಸನ ಹೆಸರಿನಲ್ಲಿ ಅವನ ತಮ್ಮ ಅಪ್ಪರಸನು ಕಟ್ಟಿಸಿದ ದೇವೇಶ್ವರ, ಅಪ್ಪರಸನ ಹೆಸರಿನಲ್ಲಿ ಅವನ ಹೆಂಡತಿ ದೇವವ್ವೆ ಕಟ್ಟಿಸಿದ ಅಪ್ಪೇಶ್ವರ ಎಂಬ ಎರಡು ದೇವಸ್ಥಾನಗಳಿಗಾಗಿ ದೇವವ್ವೆಗೆ ತವನಿಧಿ ಎಂಬ ಗ್ರಾಮವನ್ನು ಕೊಟ್ಟಂತೆ ಹೇಳಿದೆ.

ಮಾವನೂರೊಡೆಯ ದೇವರಸ

ಜಡೆ ಮುಡಿಯೊಳ್ ಸುರಾಪಗೆಯನಾಂತ ಮಹೇಶ್ವರನೊಲ್ದ ಶೈವ ಸಂ ।
ಗಡಿಗನ ಪುಣ್ಯ ಪೋಷಕನ ವೀತ ಗುಣೌಘನ ಮರ್ತ್ಯ ಲೋಕದೊಳ್ ॥
ನಡೆವ ಶಶಾಂಕ ಶೇಖರನ ಸರ್ವ ಸಮೈಕನ ಚಾರು ಮಾವನೂ ।
ರೊಡೆಯರೆನಿಪ್ಪ ದೇವರಸನುನ್ನತ ಶೀಳಮಿಳಾ ವಿಭೂಷಣಂ ॥1794॥

ಅಪ್ಪರಸ ದೇವರಸರು

ಸ್ವಸ್ತಿ ಸಮಸ್ತ ಸಮುದ್ರ ಮುದ್ರಿತಮಪ್ಪ ಧರಾಕಾಂತೆಯ ಶಿರಃಕಂಜದಂತೆ, ಪುರತ್ರಯ ವಿಪಿನ ದಹನ ದಾವಾನಳನ ಸುಕೃತ ಸರ್ವಸ್ವದ ಗವಸಣಿಗೆಯಂತೆ, ಸಕಳ ಭಕ್ತರ ಪುಣ್ಯಶಾಲೆಯಂತೆ, ಮುಕ್ತ್ಯಂಗನೆಯ ತಾಯ್ಮನೆಯಂತೆ, ಧರ್ಮಾರ್ಥ ಕಾಮ ಮೋಕ್ಷಂಗಳಪ್ಪ ಚತುರ್ವಿಧ ಪುರುಷಾರ್ಥಂಗಳ ಜನ್ಮಕ್ಷೇತ್ರದಂತೆ, ಮೆಱೆವ ಶ್ರೀ ಪರ್ವತದ ಮೇಲೆ ಮೂಜಗಕೆ ಸೋಜಿಗಮಪ್ಪೋಜೆಯಿಂ ರಾಜಿಸುವ ರಾಜೇಂದ್ರ ಚೂಡಾಮಣಿಯು, ಮನ್ಮಥ ಮತ್ತೇಭ ಮೃಗಾಧಿಪನ, ಕೀನಾಶ ಬಳ ಬಳಾಹಕ ಮಹಾಬಳನ, ಶಾರ್ದೂಲ ದೈತ್ಯಧ್ವಾಂತ ಪ್ರದ್ಯೋತನನ, ದರ್ಪಿಷ್ಠ ಕುಂಜರಾ ಸುರ ಮರಾಳ ಹರ್ಷ ವಿಳಯ ಜಳದ ಗರ್ದನನ, ಸುರ ಸರಿತ್ಸಮುದ್ಭೂತ ಲೋಲತರ ಕಲ್ಲೋಲ ಮಾಲಾ ಸಂಘಟ್ಟಿತ ಜಟಾಜಾಲನ, ಶ್ರೀ ಪರ್ವತಾಧೀಶ್ವರನಪ್ಪ ಮಲ್ಲಿ ಕಾರ್ಜುನನ ಕಾರುಣ್ಯಕಾಂತಿ ಕಾಯಮಂ ತಳೆದಂತೆ ಜನಿಯಿಸಿದ ಪರ್ವತಯ್ಯ ಚಂದ್ರನುದಯದಿಂ ಮುನ್ನಂ ಬೆಳ್ದಿಂಗಳೊಗೆವಂತೆ, ಫಳ ರಸಮನೀಂಟುವು ದಱಿಂ ಮುನ್ನಂ ಸವಿ ಜಿಹ್ವೆಯಂ ಮುತ್ತುವಂತೆ, ತನಗೆ ಗುರುಪ್ರಾಪ್ತಿಯಪ್ಪು ದಱಿಂ ಮುನ್ನಮೆ ಪೂರ್ವ ವಾಸನಾ ಸಂಬಂಧದಿಂದುರ್ವಿ ಕೊರ್ವಿ ಪರ್ವತಮನೇಱಿ ಶ್ರೀ ಮಲ್ಲಿಕಾರ್ಜುನನಂ ಸುತ್ತಿ ಮುತ್ತಿ ಪತ್ತಿ ಪರಿದು ನೆರೆದಾಲಿಂಗಿಸಿ ತನ್ನ ಚಿತ್ತವ-ನೀಶಾಂಘ್ರಿಯೊಳ್ ಸೆಱೆಯಿಟ್ಟ ನೇಹಮಂ ಕಂಡು ಶ್ರೀ ಮಲ್ಲಿಕಾರ್ಜುನನಂ ಕಾರುಣ್ಯಂ ಮಾಡೆ ಗುರು ಕಾರುಣ್ಯಂ ಬಡೆದು ಶಾಂತಿಯಂ ತಳೆದ ನಿರ್ಮಳ ಜ್ಯೋತಿ ಯಂತೆ ಮೆಱೆಯುತ್ತಿರೆ, ಶಿವನುಭಯ ನೇತ್ರದಿಂ ಚಂದ್ರ ಸೂರ್ಯರೊಗೆದಂತೆ ಪರ್ವತಯ್ಯ ನುಭಯುವಹ ಕಾರುಣ್ಯ ಕಟಾಕ್ಷದಿಂದುದಯಿಸಿದ ಅಪ್ಪರಸ ದೇವರಸರ್ಗೆ ಚಂದ್ರಂಗೆ ಬೆಳ್ದಿಂಗಳಂ ಬೆಳ್ದಿಂಗಳಿಂಗೆ ಪರಿಮಳಮಂ ಪರಿಮಳಕ್ಕೆ ಸವಿಯಂ ಸವಿಗೆ ರೂಪಂ ರೂಪಿಂಗೆ ಸೌಂದರ್ಯಮಂ ಕೊಡುವಂತೆ ಉಪದೇಶಂ ಮಾಡೆ, ಕೈಕೊಂಡ ಅಪ್ಪರಸ ದೇವರಸರ್ ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ, ಶಾಂತಿ ಸಾಕಾರವೆತ್ತಂತೆ, ಪರಮಾರ್ಥಂ ಶರೀರವಡೆದಂತೆ, ಭಕ್ತಿ ಜ್ಞಾನಂ ಸಂಸಾರವಂ ಸವಿವಂತೆ, ಮೆಱೆಯುತ್ತೆ, ಲೋಭವಡಿ ಯಿಡದ ಕರ್ಣಪಲ್ಲವಂಗಳ, ಅನೃತವಂಕುರಿಸದ ರಸನಾಪ್ರದೇಶದ, ಸಂಸ್ಕೃತಿ ಸರಸವಾಡದ ಚರಿತ ಶುದ್ಧಿಯ, ಕಾಮನ ಡಾಮರಕೊಳಸೋರದ ಮನದ ಬಿನದದ, ಮಾಯೆಯಾಜ್ಞೆಯ ನುಲ್ಲಂಘಿಸಿದ ಚಿತ್ತವೃತ್ತಿಯ, ಶಬ್ದ ಸ್ಪರ್ಶ ರೂಪ ರಸ ಗಂಧಾದಿ ಭೋಗಕ್ಕೆಳಸವ ಕರಣಾವಳಿಯ ಮಹಾಮಹಿಮರೆನಿಸಿ, ತಿಲ ಮಧ್ಯದೊಳಿರ್ಪ ತೈಲದಂತೆ, ಕಾಷ್ಠಮಧ್ಯ ದೊಳಿರ್ಪ ಅಗ್ನಿಯಂತೆ, ಜಲಮಧ್ಯದೊಳಿರ್ಪ ಕಮಳದಂತೆ, ತಾಂ ಮಾನುಷ ಚರಿತರಪ್ಪು ದಱಿಂ ಸಂಸಾರಮಂ ಸೋಂಕದೆ ಅನವರತಂ ಶಿವನೊಳವಿರಳ ಪೂಜೆಯಂ ಮಾಡುತಂ ಮೂಲೋಕಮಂ ತೀವಿದ ಶೈವ ಕೀರ್ತಿಯಂ ತಳೆದು ಸುಖದೊಳಿರ್ದರ್. ॥1795॥

**323 ನಾಗಮಂಗಲ 38 [1284]**

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಮಂತ್ರಿ ಪೆರುಮಾಳೆದೇವನು ಬೆಳ್ಳೂರು ಮಾಧವದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಆದಿವರಾಹ

ಆದಿಕ್ರೋಡಂ ಧಾತ್ರಿಯ । ನಾದರದಿಂ ತನ್ನ ತೊಳಪ ದಂಷ್ಟ್ರಾಗ್ರದೊಳೆಂ ।
ದಾದಂ ನೆಗಪಿದನಂದಿಂ । ಮೇದಿನಿ ಸುಸ್ಥಿರತೆವೆತ್ತುದಾಚಂದ್ರಾರ್ಕಂ ॥1796॥

## 324 ಅರಸಿಯಕೆರೆ 9 [1286]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ದಂಡನಾಥ ಬೀರನ ವೈದ್ಯ ದೇವಪಿಳ್ಳೆಯಣ್ಣನಿಗೆ ಬಲ್ಲಣ್ಣನು ತನ್ನ ಕೊಡಗೆಯ ಗದ್ದೆಯನ್ನು ಕ್ರಯಕ್ಕೆ ಕೊಟ್ಟನೆಂದು ಹೇಳಿದೆ.

ನಾರಸಿಂಹ III

ಪರರಾಜ್ಯೋದಗ್ರಸಿಂಧುಪ್ರತತಿ ನಿಜಬಳಾಂಭೋಧಿಯೊಳ್ ಕೂಡೆ ಖಟ್ಗೋ ।
ದ್ಧುರಧಾರಾವಾರಿಯೊಳ್ ಶಾತ್ರವನೃಪನಿಕರಂ ಮಾಣದೋಲಾಡೆ ದಿಕ್ಪಾ ॥
ಳರ ಹೆಂಡಿರ್ ತನ್ನ ಕೀರ್ತಿಪ್ರಸರಮನೊಲವಿಂ ಪಾಡೆ ಮೂಲೋಕಲಕ್ಷ್ಮೀ ।
ವರನಾದಂ ಸೋಯಿದೇವಾತ್ಮಜನತುಳಬಳಂ ನಾರಸಿಂಹಕ್ಷಿತೀಶಂ ॥1797॥

ಬೀರದಂಡಾಧಿಪ

ಕಲಿ ಕಟ್ಟಾಳ್ ನಾರಸಿಂಹಾಧಿಪನ ಕಟಕದೊಳ್ ಬೀರದಂಡಾಧಿಪಂ ಮಂ ।
ಡಳಿಕಾಂಚತ್ತೋರಹತ್ತಂ ಭುಜಬಳದಳವಿಂ ಭೀಮನಿಂ ತೋರಹತ್ತಂ ॥
ಬಳನಿಂದಂ ತೋರಹತ್ತಂ ಸಮರಸಮಯದೊಳ್ ಶೌರ್ಯದೊಳ್ ಪಾರ್ಥನಿಂದ ।
ಗ್ಗಳ . . ತೋರಹತ್ತಂ ವಿತರಣಗುಣದೊಳ್ ಕರ್ಣನಿಂ ತೋರಹತ್ತಂ ॥1798॥

ವೈದ್ಯ ದೇವಪಿಳ್ಳೆ

ಅಂತೆನಿಪ ಬೀರರಥಿನೀ । ಕಾಂತನ ಮನೆಯಲ್ಲಿ ನೋಡೆ ಧನ್ವಂತರಿವೋಲ್ ।
ಸಂತತಮಿರ್ಪಂ ಸುಖದಿನ । ನಂತಗುಣಂ ದೇವರಾಜನೂರ್ಜಿತತೇಜಂ ॥1799॥

ವಿನಯನಿಧಾನಂ ಸಜ್ಜನ । ಜನಸೇವ್ಯಂ ಸರ್ವಸಮಯಸಮದರ್ಶಿಯೆನಿ ।
ಪ್ಪನುಪಮಗುಣದಿಂ ಮೆಱೆವಂ । ಜನವಂದ್ಯಂ ದೇವರಾಜನನುಪಮಪುಣ್ಯಂ ॥1800॥

ಆತಂ ಗೌರೇಶ್ವರಮಂ । ಭೂತಳಮಱಿವಂತು ಭಕ್ತಿಯಿಂ ಮಾಡಿಸಿದಂ ।
ನೂತನವೈದ್ಯಕಲಾವಿ । ಖ್ಯಾತಂ ಶ್ರೀದೇವಪಿಳ್ಳೆ ಧರ್ಮನಿಧಾನಂ ॥1801॥

## 325 ಚಿತ್ರದುರ್ಗ 32 [1286]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನ ಮಂತ್ರಿ ಪೆರುಮಾಳೆ ದಣ್ಣಾಯಕನು ಭೂಮಿಯನ್ನು ಕೊಂಡುಕೊಂಡು ಅಧಿಕಾರಿ ವಿಟ್ಟಪ್ಪ ಮುಂತಾದವರಿಗೂ ಬೆಮ್ಮತ್ತನೂರ ರಂಗನಾಥ ಮುಂತಾದ ದೇವರುಗಳಿಗೂ ಬಿಟ್ಟಂತೆ ಹೇಳಿದೆ.

ಪೆರುಮಾಳೆ ದಣ್ಣಾಯಕ

ಆ ವೀರೋರ್ವಿಪನಾರಸಿಂಹನೃಪರಾಜ್ಯಶ್ರೀಗಡರ್ಪೆಂಬಿನಂ ।
ಭಾವಿಪ್ಪಂದು ನಿಜಾಧಿಪಂಗವಯವಂ ತಾಂ ಸರ್ವನಿರ್ವಾಹಕಂ ॥
ಕಾವಂ ಕಂಡವರಂ ಕೃಪಾಳುತನದಿಂದಾರ್ ವೇಡಿ ಕೆಯ್ಯಾಂತವ ।
ಗ್ರೀವಂ ಶ್ರೀಪೆರುಮಾಳೆಮಂತ್ರಿ ಮಹಿಮಾವಷ್ಟಂಭಸಂರಂಭಕಂ ॥1802॥

ಒದವಿದ ರಾಜ್ಯಲಕ್ಷ್ಮಿಯನೆ ಸಾರ್ಚುವ ಸಾಹಸದಿಂದೆ ಪುಣ್ಯಸಂ ।
ಪದಮನೆ ಗಂಧಬಂಧುರಗಜೇಂದ್ರಮನೇಱಿಸಿಕೊಂಡು ಮುಂದೆ ಮುಂ ॥
ದದಟಿನರಾತಿವರ್ಗಮನೆ ಶಾಸಿಸುತೀಪೆರುಮಾಳೆಮಂತ್ರಿ ಸಾ ।
ರ್ಚಿದನೆಸೆವಾಳ್ದ ವೀರನರಸಿಂಹನರೇಂದ್ರನ ರಾಜ್ಯಲಕ್ಷ್ಮಿಯಂ ॥1803॥

## 326 ತಿಪಟೂರು 123 [1286]

ಇದರಲ್ಲಿ ಹೊಯ್ಸಳರಾಜನಾದ 3ನೆಯ ಬಲ್ಲಾಳನ ಆಳಿಕೆಯಲ್ಲಿ ಹಡಿಹಾರ ಅಲ್ಲಾಳದೇವನು ಮಂಚೇಶ್ವರದೇವರನ್ನು ಪ್ರತಿಷ್ಠೆ ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಯದುಕುಳಸುಧಾಂಬುನಿಧಿಯೊಳ್ । ಮುದದಿಂದಂ ಚಂದ್ರನೊಗೆವ ತೆಱದಿಂದೊಗೆದಂ।
ಸದಮಳಗುಣಸಂಪದ್ಯುತ । ನುದಿತೋದಿತಕೀರ್ತಿ ಹೊಯ್ಸಳಕ್ಷಿತಿಪಾಳಂ ॥1804॥

ಎರೆಯಂಗನ ಹೆಂಡತಿ ಏಚಲೆ

ಮೇರುಂಗೆ ಮೇಖಲೆ ಬಹುಕಲೆ । ವಾರಿರುಹಭವಂಗೆ ಪೂರ್ಣಕಲೆ ಚಂದ್ರಂಗಾ ।
ಧೀರಗೇಚಲದೇವಿ ಗ । ಭೀರಂಗೆಱೆಯಂಗನೃಪತಿಗೊಪ್ಪಂಬಡೆಗುಂ ॥1805॥

ನಾರಸಿಂಹ I

ಅದಟರ ಗೋವನಂಜದರನಂಜಿಸುವಂ ಸುಭಟತ್ರಿಣೇತ್ರನಾ ।
ಳದ ಚಲದಂಕರಾಮನತಿವೀರಭಯಂಕರನತ್ಯುದಾರನೋ ॥
ವದೆ ಕಲಿವೀರವೈರಿಭಟಭಾರ್ಗವನೀನರಸಿಂಹನೆಂದು ಕಾ ।
ದದೆ ಶರಣೆಂದು ಬಂದಹಿತವರ್ಗಮೆ ಹೇಟಿದೆ ವೀರದೇಟಿಗೆಯಂ ॥1806॥

## 327 ಕೃಷ್ಣರಾಜಪೇಟೆ 10 [1291]

ಇದರಲ್ಲಿ ಹೊಯ್ಸಳರಾಜನಾದ 3ನೆಯ ನಾರಸಿಂಹನು ಸಾಯಲು ಅವನ ಸಾಮಂತ ಸಿಂಗೆಯ ನಾಯಕನು ಸ್ವಾಮಿಭಕ್ತಿಯಿಂದ ತನ್ನ ಹೆಂಡತಿಯರು ಸೇವಕ ಸೇವಕಿಯರು ಇವರೊಡನೆ ತಾನೂ ಸತ್ತನೆಂದು ಹೇಳಿದೆ.

ನಾರಸಿಂಹ III

ಮುಳಿಸಿಂದಂ ಸ್ತಂಭದಿಂ ಮೂಡಿದನೆನಿಸಿದ ಡೊಂಬಿಂಗೆ ಹೇವೈಸಿ ತಾಂ ಬಿ।
ಜ್ಜಳದೇವೀರಾಣಿಗಂ ಹೊಯ್ಸಳಕುಳತಿಳಕಂ ಸೋಯಿದೇವಂಗಮುರ್ವೀ॥
ವಳಯುಂ ಬಾಪ್ಪೆಂಬಿನಂ ಪುಟ್ಟಿದನಹಿತಹಿರಣ್ಯಾಕ್ಷದೈತ್ಯೇಂದ್ರವಕ್ಷ।
ಸ್ಥಳಚಂಡೋಗ್ರಾಸಿಧಾರಾನಖವಿದಳನಸಿಂಹಂ ನೃಪಂ ನಾರಸಿಂಹಂ॥1807॥

## 328 ಹೊಳೆಯನರಸೀಪುರ 83 (ಅನುಬಂಧ) [1303]

ಈ ವೀರಗಲ್ಲಿನಲ್ಲಿ ಹೊಯ್ಸಳ ರಾಜನಾದ 3ನೆಯ ಬಲ್ಲಾಳನ ಆಳಿಕೆಯಲ್ಲಿ ಸೋಮೆಯ ದಣ್ಣಾಯಕನು ಬೆಮ್ಮತೂರುಕಲ್ಲಿನ ಯುದ್ಧದಲ್ಲಿ ಸೇವುಣರ ಸೇನಾನಾಯಕನಾದ ಕಂಪಿಲದೇವನೊಡನೆ ಕಾದಿ ಮಡಿದನೆಂದು ಹೇಳಿರುವಂತೆ ತೋರುತ್ತದೆ.

ಸೋಮೆಯ ದಣ್ಣಾಯಕ

ಜೀಯನುತಿರೆ ಪರಿವಾರಂ। ರಾಯುಂ ಬಲ್ಲಾಳದೇವ ಚಾಗೆನೆ ರಿಪುಗಳ॥
ಬಾಯನೊಜಿಮಾಡಿ ಖಳ್ಗಮು। ನಾಯತದಿಂ ತೊಡಿಸುತಿರ್ಪ ಮಯ್ದುನ ಸೋಮಂ
॥ 1808 ॥

## 329 ಚಾಮರಾಜನಗರ 152 [ಸು. 1339]

ಇದರಲ್ಲಿ ಚಂದ್ರಕೀರ್ತಿ, ಕೂಚಿರಾಜ ಇವರುಗಳ ಸ್ತುತಿ ಇದೆ.

ಕೂಚಿರಾಜ

ಸಾರತರವಿಭವದೊಳ್ ಸುಕು। ಮಾರತೆಯೊಳ್ ಸುಜನವೃತ್ತಿಯೊಳ್ ಬ್ರಹ್ಮಸುತಂ।
ಗೋರಾಜಂ ಗೋರಾಜಂ। ಗೋರಾಜಂ ಕೂಚಿರಾಜ ಸಿತಗರ ಗಂಡಂ॥1809॥

## 330 ಕಡೂರು ತಾಲ್ಲೂಕು ಸಕ್ಕರೆ ಪಟ್ಟಣದ ಶಾಸನ [ಸು. 1360]

(ಮೈಸೂರು ಶಾಸನದ ಇಲಾಖೆಯ 1927ನೆಯ ವರ್ಷದ ವರದಿ, ಶಾಸನ ಸಂಖ್ಯೆ 48)

ಇದರಲ್ಲಿ (ವಿಜಯನಗರದ ರಾಜನಾದ 1ನೆಯ ಬುಕ್ಕನ ಆಳಿಕೆಯಲ್ಲಿ) ಹೊಸಪಟ್ಟಣದ ವೈಶ್ಯ ಮಾಯಣ್ಣನು ಲಕ್ಷ್ಮಿಸೇನ ಭಟ್ಟಾರಕರ ನಿಷಿಧಿಯನ್ನು ಪ್ರತಿಷ್ಠೆ ಮಾಡಿದನೆಂದು ಹೇಳಿದೆ.

ಮಾಯಣ್ಣ

ದ್ವೀಪಿ ತಟಾಕ ನಾಮ ನಗರೀಪತಿ ಶಂಖ ಜಿನೇಂದ್ರ ಚಂದ್ರಮ।
ಶ್ರೀಪದ ಪಂಕಜಾಳಿ ವಿಮಳಾವರ ಕೀರ್ತಿ ಮುನೀಂದ್ರ ಪಾದ ಸೇ॥
ವಾ ಪರಿಪಕ್ವ ಬುದ್ಧಿ ಬಳೆಗಾಱ ಸಮಾಹ್ವಯ ವಂಶ ಪದ್ಮ ತಾ।
ರಾಪತಿ ರಂಜಿಪಂ ಸ್ವಜನ ಕಂಜ ನಭೋಮಣಿ ವೈಶ್ಯ ಮಾಯಣಂ ॥ 1810 ॥

ಗುಣ ತುಂಗಂ ಹೊಲ್ಲರಾಜಂ ಪಿತೃ ಗುಣವತಿ ದೇಮಾಂಬೆ ತನ್ನಂಬೆಯುದ್ಯ।
ದ್ಗುಣರತ್ನಂ ನಾಗರಾಜಂ ಪರಿಕಿಪೊಡೆ ಪಿತೃವ್ಯಂ ಗುಣೈಕಾಶ್ರಯಂ ಮಾ।
ಕಣನಾತ್ಮೀಯಾನುಜಂ ತಾನೆನಿಪಗಣಿತ ಸಾಭಾಗ್ಯದಿಂ ಭಾಗ್ಯದಿಂ ಧಾ।
ರಿಣಿಯೊಳ್ ವಿಖ್ಯಾತಿವೆತ್ತಂ ಜಿನ ಸಮಯ ಸರಸ್ಸಾರಸಂ ಮಾಯಣಾರ್ಯಂ ॥ 1811 ॥

ನಿರುತಂ ಲೋಕೈಕ ಮಿತ್ರಂ ಪ್ರಚುರತರ ಕಲಾ ವಲ್ಲಭಂ ವಂದಿ ವೃಂದೋ।
ತ್ಕರ ಪುಷ್ಯತ್ಕಲ್ಪ ಭೂಜಂ ಬುಧ ನುತ ಚರಿತಂ ವಾಗ್ವರಂ ಕಾವ್ಯಗೋಷ್ಠೀ॥
ಸರಸಂ ವಿದ್ವಿಷ್ಟ ಶೈಲಾಶನಿ ಸುರ......... ಮೀನಕೇತೂ।
ದ್ಧರ ರೂಪಂ ಸದ್ಗುಣೋದ್ಯದ್ಗ್ರಹಮಯನೆನಲಾಶ್ಚರ್ಯಮೀ ಮಾಯಣಾರ್ಯಂ ॥1812॥

## 331 ನಂಜನಗೂಡು 43 [1371]

ಇದರಲ್ಲಿ ಮೇಘಚಂದ್ರನೆಂಬ ಜೈನಗುರು ಮುಕ್ತಿಗೆ ಸಂದ ಸಂಗತಿ ಹೇಳಿದೆ.

ಜೈನಮತಾಂಬುರಾಶಿಪರಿವರ್ಧನಚಂದ್ರನನಸ್ತತಂದ್ರನಂ ।
ಮಾನಿತಸಾರಸರ್ವಗುಣರುಂದ್ರನನುನ್ನತಕೀರ್ತಿಸಾಂದ್ರನಂ ॥
ಪೀನವಿಮೋಹವಾರಣಮೃಗೇಂದ್ರನನುದ್ಧಕೃಪಾನದೀಂದ್ರನಂ ।
ಭೂನುತಮೇಘಚಂದ್ರನನಶೇಷಜನಂ ನಲವಿಂದೆ ಬಣ್ಣಿಕುಂ ॥1813॥

## 332 ಚಾಮರಾಜನಗರ 64 [1380]

ವಿಜಯನಗರದ ರಾಜನಾದ 2ನೆಯ ಹರಿಹರನ ಆಳಿಕೆಯಲ್ಲಿ ಹೊಮ್ಮದ ಮಹಾಜನಗಳು ಆವೂರ ಮೂಲಸ್ಥಾನದ ದೇವರಿಗೆ ಭೂಮಿಯನ್ನು ಬಿಟ್ಟುದಾಗಿ ಈ ಶಾಸನದಲ್ಲಿ ಹೇಳಿದೆ.

ಹೊಮ್ಮ

ತುಂಗತರಂಗಕಾಂಚನನದೀತಟಸಂಭವನಾಳಿಕೇರನಾ ।
ರಂಗಸುಪೂಗಚೂತವರಚಂಪಕಬಂಧುರನಂದನಾಳಿಯಿಂ ॥
ಪಿಂಗದ ನೀಲನೀರರುಹಪಂಕಜಸೌರಭಸಾರಲೋಲಸ ।
ದ್ಭೃಂಗದಿನೊಪ್ಪುಗುಂ ಭರದೆ ಹೊಮ್ಮಮೆನಿಪ್ಪ ಪುರಂ ನಿರಂತರಂ ॥1814॥

ಅದಱೊಳ್ ಬಂದೋದಿ ವಾಚಸ್ಪತಿ ಸುರಪತಿಯಾಸ್ಥಾನದೊಳ್ ಸಂದನಾರ್ಪಿಂ ।
ದದಱೊಳ್ ಬಂದಿರ್ದು ವಾಣೀಸತಿ ಸರಸಕಲಾಪ್ರೌಢೆಯಾದಳ್ ಶಶಾಂಕಂ ॥
ಅದಱುದ್ಯದ್ಧರ್ಮ್ಯರುಕ್ಸಂಗದಿನೆಸೆವ ಕಳಾಭೂಷನಾದಂ ಮಹೀಭಾ ।
ಗದೊಳೆಂದಂದಾರ್ದು ತದ್ಗ್ರಾಮದ ಮಹಿಮೆಯನಿಂ ಬಣ್ಣಿಸಲ್ ಬಲ್ಲನಾವಂ ॥1815॥

ಧರ್ಮಪಾಲನ

ಇದನಾದಂ ನೋಡಿ ಸಂತೋಷದೆ ನಡಸಿದ ಭೂಪಾಲವಕ್ಷಸ್ಥಳಾವಾ।
ಸದೊಳಿರ್ಪೆಂ ನಾಂ ಸಮಂತಲ್ಲದೆಯಿದಕುಱೆ ಕಾಯ್ದಿರ್ದನಾವಾಸದೊಳ್ ಮಾ॥
ಣದೆ ನಿಲ್ವಳ್ ತಾನದೆನ್ನಗ್ರಜೆಯೆನುತೆ ರಮಾದೇವಿ ಕೀರ್ತ್ಯಂಗನಾಹ।
ಸ್ತದೆ ದಿಕ್ಪಾಲವ್ರಜಾಧ್ಯಕ್ಷದೊಳನವರತಂ ಡಂಗುರಂಬೊಯ್ಸುತಿರ್ಪಳ್ ॥ 1816 ॥

## 333 ಸೊರಬ 146 [1388]

ಈ ನಿಷಿದಿಗಲ್ಲಿನಲ್ಲಿ ವಿಜಯನಗರದ ರಾಜನಾದ 2ನೆಯ ಹರಿಹರನ ಆಳಿಕೆಯಲ್ಲಿ ಮುನಿಭದ್ರ ದೇವನು ಸನ್ಯಸನವಿಧಿಯಿಂದ ಮುಡಿಪಿದಂತೆ ಹೇಳಿದೆ.

ಕ್ಷೇಮಮುಮುರ್ವ್ವಿನಂ ವಿಮಳಕೀರ್ತಿ ದಿಗಂತಮನೆಯ್ದಿದರ್ವ್ವಿನಂ।
ಕಾಮನ ಚಾಪಚಾಪಲತೆ ಸೋರ್ವಿನಮೊಪ್ಪಿದರಂ ಪೊಗಟ್ದಿಪೆಂ॥
ಶ್ರೀಮುನಿಭದ್ರದೇವರನಿಳಾವಿನುತೋರುಶುಭಸ್ವಭಾವರಂ।
ಪ್ರೇಮದೊಳರ್ಥಿಗರ್ಥಮುಮನೀವರನುಗ್ರತಪಃಪ್ರಭಾವರಂ ॥ 1817 ॥

ಮುನಿಸಂ ಮನ್ಮಥಯುದ್ಧದೊಳ್ ನಿರುತಮಂ ತತ್ವಾರ್ಥದೊಳ್ ಭಕ್ತಿಯಂ।
ಜಿನಪಾದಾಂಬುಜದೊಳ್ ದ್ರವಾಧಿಕತೆಯಂ ಸಚ್ಚಿತ್ತದೊಳ್ ದೇಸೆಯಂ॥
ವಿನುತಾಚಾರಚಯಂಗಳೊಳ್ ವಚನಮಂ ವಕ್ತೃತ್ವದೊಳ್ ರುಕ್ಮರಂ।
ಜನೆಯಂ ದೇಹದ ಕಾಂತಿಯೊಳ್ ನಿಱಿಸಿದರ್ ವಾಕ್ಯಾದಿವರ್ಣಾಹ್ವಯರ್ ॥ 1818 ॥

## 334 ಗೇರಸೊಪ್ಪೆ ಶಾಸನ [1392]

(ಮೈಸೂರು ಶಾಸನ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ109)

ಇದರಲ್ಲಿ ಯೋಜಣ ಸೆಟ್ಟಿಯ ಹೆಂಡತಿ ರಾಮಕ್ಕನು ಸಂನ್ಯಸನ ವಿಧಿಯಿಂದ ಸತ್ತಂತೆ ಹೇಳಿದೆ.

ಪತಿಭಕ್ತೆ ಶೀಲವತಿ ಭೂ। ನುತ ಚಾರು ಚರಿತ್ರೆ ಸಕಳ ಜೀವ ದಯಾಪರೆ॥
ಸತತ ಚತುರ್ವಿಧ ದಾನದೊ। ಳತಿ ನಿಪುಣತೆಯಿಂದಮೆಸೆವಳೀ ರಾಮಕ್ಕಂ ॥ 1819 ॥

ಕಮಳಾಕರದೊಳ್ ಕಮಳಿನಿ। ಕಮಳದೊಳಂ ಕಮಳೆ ಪುಟ್ಟುವಂತಿರೆ ನಾಗಮ॥
ನಮಳಾನ್ವಯದೊಳ್ ರಾಮಕ। ವಿಮಳ ಗುಣಾಭರಣೆ ಪುಟ್ಟಿದಳ್ ಕಲಿಯುಗದೊಳ್ ॥ 1820 ॥

## 335 ಬೇಲೂರು 3 [1397]

ಇದರಲ್ಲಿ ವಿಜಯನಗರದ ರಾಜನಾದ 2ನೆಯ ಹರಿಹರನ ಮಂತ್ರಿ ಗುಂಡದಂಡಾಧಿಪನು ಬೇಲೂರು ಚನ್ನಕೇಶವದೇವಸ್ಥಾನದಲ್ಲಿ ಉತ್ಸವಗಳೂ ಸರ್ವವಿನಿಯೋಗಗಳೂ ಕ್ರಮವಾಗಿ ನಡೆವಂತೆ ಏರ್ಪಾಡುಮಾಡಿ ಕಲ್ಲುಬರಗೆಯ ತುರುಕ ಗಂಗಸಲಾರನು ಮುರಿದು ಸುಡಿಸಿದಂಥ ಆ ದೇವಸ್ಥಾನದ ಬಾಗಿಲುವಾಡದ ಗೋಪುರವನ್ನು ಏಳುನೆಲೆಯಾಗಿ ಮಾಡಿಸಿದಂತೆ ಹೇಳಿದೆ.

ಗುಂಡದಂಡಾಧಿಪ

ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ ಭೂಭಾಗದೊಳ್ ಮ।
ತ್ಸರದಿಂದಂ ಶ್ರೀವಧೂಸಂಗಮನುಱಿದೊಲವಿಂದಂ ದಿಶಾಚಕ್ರದೊಳ್ ಡಾ॥
ವರಿಸಲ್ಕಾಕಾಂತೆಯುಂ ಭಾರತಿ ಜಗದ ಕವಿವ್ರಾತಜಿಹ್ವಾಳಿಯೊಳ್ ತ।
ಳ್ತಿರು ನೀನೆಂದೊಲ್ದು ಸಂತೈಸಲು ನಟವಿಧದಿಂ ನೃತ್ಯವಾಡುತ್ತುಮಿರ್ಪಳ್ ॥ 1821 ॥

ಭರದಿಂದಂ ರೌದ್ರಸಂಗ್ರಾಮದೊಳಹಿತರ ಬೆಂಬತ್ತಿ ಪೊಯ್ಯಲ್ಕೆ ಬಿಟ್ಟರ್।
ತುರಗಂ ರೌತರ್ ಗಜಂ ಜೋದರು ಬಹಳಪದಾತಿಪ್ರತಾನಂ ಧರಾಧೀ॥
ಶ್ವರರೊಂದೇತಾಣದೊಳ್ ಮಾರಿಗೆ ಮನದೊಲವಿಂದಿಟ್ಟಗಲ್ ತಾನದೆಂಬಂ।
ತರರೇ ಶ್ರೀಗುಂಡದಂಡಾಧಿಪನ ಬಹಳಬಾಹಾಬಳಕ್ಕಾಂಪನಾವಂ ॥ 1822 ॥

ಧುರದೊಳ್ ಗುಂಡಾಮಾತ್ಯಂ। ನರಮೇಧವ ಮಾಡದುಱಿಯನೆಂದೆನಲಾಭೀ।
ತರು ಮರನನೇಱಿ ಹೂವಿನ। ತಱುವಾಯ್ ತಱುವಾಯೆನುತ್ತುಮಿರ್ದರದೇನೋ ॥ 1823 ॥

## 336 ಗೇರಸೊಪ್ಪೆ ಶಾಸನ [(?)1404]

(ಮೈಸೂರು ಶಾಸನದ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 110)

ಇದರಲ್ಲಿ ಹೈವಣರಸನ ಹೆಂಡತಿ ಶಾಂತಲದೇವಿ ಸಂನ್ಯಸನ ವಿಧಿಯಿಂದ ಸತ್ತಂತೆ ಹೇಳಿದೆ.

ಅರಸಪ್ಪೊಡೆಯರ ತನುಭವೆ। ವರಗುಣೆ ಬೊಮ್ಮಕ್ಕನಾಕೆಯಾತ್ಮಜೆ ಶಾಂತ॥
ಕ್ಕರಸಿಯು ಪರಮನ ಪದಮಂ। ಸ್ಮರಿಯಿಸಿ ಸುರ ಲೋಕವೆಯ್ದಿ ಸುಖದಿಂದಿರ್ದಳ್
॥ 1824 ॥

ಅರುಹಂತನ ಪಾದಾಂಬುಜಮಂ। ಸ್ಮರಿಯಿಸುತಂ ಪಂಚ ಪದವ ನಾಲಗೆ ವೊಳಗು॥
ಚ್ಚರಿಸುತ ಶಾಂತಕ್ಕರಸಿಯು। ಶರೀರಮಂ ತೊಱೆದು ಪತ್ತು ದಿನದೊಳ್ ಸಂದಳ್
॥ 1825 ॥

ವರ ವತ್ಸರ ತಾರಣದೊಳ್। ಸುರುಚಿರ ಫಾಲ್ಗುಣದ ಶುದ್ಧ ಪಾಡಿವ ತಿಥಿಯೊಳ್॥
ಹರಿದಶ್ವ ದಿನದಿ ಶಾಂತ। ಕ್ಕರಸಿಯು ಸ್ವರ್ಗಸ್ಥೆಯಾದಳಾಕೆ ನಿಮಿತ್ತಂ ॥ 1826 ॥

ಮಾಡಿಸಿದ ನಿಸಿಧಿಯ ಕಲ್ಲಿಂಗೆ ಮಂಗಳ ಮಹಾ.

## 337 ಸೊರಬ 261 [1408]

ಇದರಲ್ಲಿ ವಿಜಯನಗರದ ರಾಜನಾದ 1ನೆಯ ದೇವರಾಯನ ಆಳಿಕೆಯಲ್ಲಿ ಕುಪ್ಪಟೂರ ಪ್ರಭು ಗೋಪಗೌಡನು ಸನ್ಯಾಸನವಿಧಿಯಿಂದ ಸತ್ತನೆಂದು ಹೇಳಿದೆ.

### ಸಮುದ್ರ

ತನ್ನೊಳಗಿರ್ದ ಮೌಕ್ತಿಕಮಿಳಾಧರಮದ್ರಿಧರಾಂಗರೋಚಿಗಳ್।
ತನ್ನೊಳಗೊಳ್ಪುವೆತ್ತು ಪೊಱಪೊಣ್ಮುವವೋಲ್ ಜಳಶೀಕರಂಗಳಿಂ॥
ದುನ್ನತಮಾದ ಬಲ್ದೆರೆಗಳಿಂ ತೆರೆಮಾಲೆಯ ನೀಲರೋಚಿಯಿಂ।
ತನ್ನತಿಗುಣ್ಪು ಘೋಷದೊದವಿಂ ಲವಣಾಂಬುಧಿ ನಾಡೆ ರಂಜಿಕುಂ ॥ 1827॥

### ಕರ್ಣಾಟ ದೇಶ

ಜಿನಧರ್ಮಾವಾಸಮಾದತ್ತಮಳವಿನಯದಾಗಾರಮಾದತ್ತು ಪದ್ಮಾ।
ಸನನಿರ್ಪಾಸದ್ಮಮಾದತ್ತತಿವಿಶದಯಶೋಧಾಮಮಾದತ್ತು ವಿದ್ಯಾ॥
ಧನಜನ್ಮಸ್ಥಾನಮಾದತ್ತಸಮತರಳಗಂಭೀರಸದ್ಗೇಹಮಾದ।
ತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ ॥1828॥

ಕುಪ್ಪಟೂರು

ಪೂಲತೆ ಪೂಗಿಡು ಪೂಮರ। ಸಾಲಿಂದಲ್ಲಲ್ಲಿ ಕೇರಿಕೇರಿಗಳೊಳ್ ಚೈ।
ತ್ಯಾಲಯದ ಮುಂದೆ ತುಂಬಿಯು। ಜಾಲಂ ಮದಮೇಱಿ ಮೆಱೆವುವಾಪರಿಮಳದೊಳ್
॥ 1829 ॥

ಗೋಪಣ್ಣ

ವಾರಿಜಸದ್ಮೆ ಸದ್ಮದೊಳಗಿರ್ದವೊಲಿಂ ನುತಿಸಿರ್ದ ಪಾರದಂ।
ಪಾರದೆ ಬಂದ ತೋರ್ಕೆ ಸುಮನೋಮಣಿ ಸನ್ಮಣಿಹಾರದಲ್ಲಿ ಬಂ॥
ದೋರಣವಾಗಿ ನಿಂದ ಪರಿ ವಂದಿಜನಕ್ಕೆನಿಪೊಂದು ದಾನಗಂ।
ಭೀರತೆಯಾದುದೇವೊಗೞ್ವೆನಾಂ ಸಿರಿಯಣ್ಣತನೂಜಗೋಪನಂ ॥ 1830 ॥

ಸತ್ಯದ ಮೇಲಣೆಚ್ಚಱಿಕೆ ಧರ್ಮದ ಮೇಲಣ ಲೋಭವಿಂತು ಸಾ।
ಹಿತ್ಯದ ಮೇಲಣಾಸೆ ಜಿನಪಾದದ ಮೇಲಣ ನಿಷ್ಠೆ ನಾಡೆ ಸ॥
ದ್ಭೃತ್ಯರ ಮೇಲಣಾದರಣೆ ಕೀರ್ತಿಯ ಮೇಲಣ ಕೂರ್ಮೆ ಲೋಕಸಂ।
ಸ್ತುತ್ಯದ ಗೋಪಣಪ್ರಭುವಿಗುಂಟುೞಿದಗ್ಗಿನಿತುಂಟೆ ಧಾತ್ರಿಯೊಳ್ ॥ 1831 ॥

ಕರುಣರಸಂ ಪೊನಲ್ಕವಿದು ಧರ್ಮಮಹಾಲತೆಗಾಲವಾಲಸು।
ಸ್ಥಿರಜಲಮಾಗೆ ತಲ್ಲತೆ ಜಿನಾಗಮಕಲ್ಪಮಹೀಜಮಂ ಮನೋ॥
ಹರತರದಿಂದೆ ಪರ್ವಿ ನಿಲೆ ಗೋಪನ ತುಂಗಕೃಪಾನುಭಾವಮಂ।
ನಿರುಪಮಧರ್ಮಮಂ ವರಜಿನಾಗಮದುನ್ನತಿಯಂ ಪೊಗೞ್ವರಾರ್ ॥ 1832 ॥

**338 ಸೊರಬ 329 [1415]**

ಈ ನಿಷಿದಿಗಲ್ಲಿನಲ್ಲಿ ಅಭಯಚಂದ್ರ ಸಿದ್ಧಾಂತದೇವನ ಶಿಷ್ಯನಾದ ಭಾರಂಗಿಯ ಗೋಪಣ್ಣನು ಸಮಾಧಿವಿಧಿಯಿಂದ ಮುಡಿಪಿದನೆಂದು ಹೇಳಿದೆ.

ನಾಗರಖಂಡ

ಫಲಭರವಾಂತ ಶಾಳಿ ತಳಿರೇಱಿದ ಚೂತಕುಜಾಳಿ ತೆಂಗು ಕ।
ಣ್ಗೊಳಿಸುವ ಕೌಂಗು ಪೂತ ಲತೆ ಪೂಗಿಡು ಪೂಮರದೋಳಿ ಪಲ್ಲವಂ॥
ಗಳ ಪೊಳಪೊಂದಿ ತಾಂ ನಿಮಿರ್ವಶೋಕಕುಜಂ ತಿಳಿನೀರ್ಗೊಳಂಗಳಿಂ।
ಸುಲಲಿತಮಾಗಿ ರಂಜಿಪುದು ನಾಗರಖಂಡಮದೆತ್ತ ನೋೞ್ಪೊಡಂ ॥ 1833 ॥

ಗೋಪಣ್ಣ

ಗೋಪತಿವಾಹನಪ್ರಭೆಯನೇಳಿಸಿ ಗೋಪತಿವಾಹನಾಂಶುವಂ।
ರೂಪುಗಿಡಲ್ಕೆ ತಾಂ ಜಚಿದು ಗೋಪತಿವಾಹನಕಾಂತಿಯುಂ ಮಹಾ॥
ಟೋಪದೆ ತಾನೆ ನಿಂದಿಸಿ ಮನೋಹರದೇಟಿಗ್ಗೆಯೊಳೊಪ್ಪುತುಂ ಬಹು।
ದ್ವೀಪಮನೆಯ್ದೆ ಪರ್ವಿದುದು ಗೋಪಣನಗ್ಗದ ಕೀರ್ತಿ ಪಾಂಡುರಂ ॥ 1834 ॥

## 339 ಗೇರಸೊಪ್ಪೆ ಶಾಸನ [1421]

(ಮೈಸೂರು ಶಾಸನದ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 105)

ಇದರಲ್ಲಿ ಪದ್ಮಣ್ಣರಸನು ಪಾರ್ಶ್ವ ಜಿನಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಹೈವನೃಪ

ಆ ಹೊನ್ನಬರಸಿಯುರಸಂ। ಶ್ರೀ ಹೈವನೃಪಂ ಜಿನಕ್ರಮಾಂಬುಜ ಭೃಂಗಂ॥
ಬಾಹುಬಲ ನಿರ್ಜಿತಾರಿ ಸ। ಮೂಹಂ ಸಾಹಸ ಸಮುದ್ರನಭಿನವಕಾಮಂ ॥ 1835 ॥

ಕೇಶವಭೂಪ

ಸುರಲೋಕದ ಸುರತರುವಿನ। ಗುರು ಫಲಮಂ ಮೆಲ್ದು ತೃಪ್ತಿಯಿಲ್ಲದೆ ಸುರರುಂ॥
ಧರೆಯೊಳ್ ಭೂಸುರರಾದರ್। ವರ ಕೇಶವಭೂಪ ಕಲ್ಪಭೂಜಸ್ಪೃಹೆಯಿಂ ॥1836॥

ಪದ್ಮಣರಸ

ಧರೆಯೊಳಿರುಂದೂರೊಳ್ ಭೂ। ಸುರ ನುತ ಕಲ್ಲರಸನನುಜೆ ತಂಗಲೆ ದೇವಿಗೆ।
ವರನೆನಿಪ ಹೈವೆಯುರಸನ। ವರ ಪುತ್ರಂ ಪದ್ಮಣರಸ ಜಿನಪದ ಭಕ್ತಂ ॥ 1837 ॥

## 340 ಮೂಡಬಿದರೆಯ ಹೊಸ ಬಸ್ತಿಯ 1ನೆಯ ಶಾಸನ[1] [ಸು. 1430]

ಇದರಲ್ಲಿ ವಿಜಯನಗರದ ರಾಜನಾದ ಎರಡನೆಯ ದೇವರಾಯನ (1419–1446) ಆಳಿಕೆಯಲ್ಲಿ ನಾಗಮಂಗಲದ ದೇವರಾಜೊಡೆಯನು ಮಂಗಳೂರ ರಾಜ್ಯಮಂ ಆಳುವಲ್ಲಿ ವೇಣುಪುರದ ಅಥವಾ ಮೂಡಬಿದರೆಯ ಭವ್ಯ ಜನಗಳು ತ್ರಿಭುವನ ಚೂಡಾಮಣಿ ಎಂಬ ಚೈತ್ಯಾಲಯವನ್ನು ಶಕ 1351ನೆಯ ಸೌಮ್ಯ ಸಂವತ್ಸರದಲ್ಲಿ ಮಾಡಿಸಿದಂತೆ ಹೇಳಿದೆ. ಅದೇ ಚೈತ್ಯಾಲಯದ ಮುಖಮಂಟಪವನ್ನು ಇನ್ನು ಕೆಲವರು ಭವ್ಯ ಜನರು ಶಕ 1373 ಪ್ರಜಾಪತಿ ಸಂವತ್ಸರದಲ್ಲಿ (ಕ್ರಿ.ಶ. 1451) ಕಟ್ಟಿಸಿದಂತೆಯೂ ಇದೇ ಶಾಸನದಲ್ಲಿ ಹೇಳಿದೆ.

---

[1] ಪಂಚಕಜ್ಜಾಯ, ಪು. 151-3.

ತುಳುದೇಶ

ಉ॥ ಸಾರತರ ದ್ರುಮಪ್ರತತಿಯಿಂ ಪರಿಶೋಭಿಪ ಗೋಪ್ರತಾನದಿಂ।
ಕೀರ ಮರಾಳ ಸಾರಸದಿನೊಪ್ಪುವ ನಂದನ ವೃಂದದಿಂ ಪಯಃ ॥
ಪೂರ ಸರಸ್ಸರೋಜ ವನದಿಂ ಬಿನದಕ್ಕೆಡೆಯಾದ ತಾಣದಿಂ।
ದಾರ ಮನಕ್ಕೆ ಮಾಡದೊಲವಂ ತುಳುದೇಶಮನೇಕದೇಶದೊಳ್ ॥ 1838 ॥

ಮಂಗಳೂರು

ಮ॥ಸ॥ ಚಲದೂರ್ಮಿವ್ರಾತ ಜಾತ ಪ್ರಹರಣಂ ರಣ ಕೃದ್ವಾರ್ಧಿಯಿಂ ಮುಂದೆ ಸಾಲಂ।
ಬಳಸಲ್ ನಾನಾ ಮಣಿ ಪ್ರಸ್ಫುರಿತ ಪರಿವೃಢಾಗಾರದಿಂ ವಾರ ನಾರೀ॥
ಕುಲದಿಂ ಸ್ವರ್ಣಾದಿ ಪೂರ್ಣಾಪಣ ಗಣದಿನಣಂ ಶೋಭಿಕುಂ ಮಂಗಲೂರಾ।
ಸ್ಥಳದೊಳ್ ವ್ರೀಹ್ಯಾದಿ ಸಸ್ಯೋತ್ಕರುಷ ಹರುಷಿತಾತ್ಮೀಯ ಪೌರ ಪ್ರತಾನಂ ॥1839॥

ಮೂಡಬಿದರೆ

ಮ॥ ಘನ ವಕ್ಷೋರುಹ ಹಾರ ಭಾರ ವಿಚಲನ್ಮಧ್ಯಂ ಮನಃ ಪ್ರೀತರೊಂ।
ದನುರಾಗಕ್ಕೆಡೆಯಾಗೆ ಸಂಚರಿಪ ನಾರೀ ವೃಂದದಿಂ ಸಾರ ಕಾ॥
ವ್ಯ ನವಾರ್ಥಾಮೃತ ಸೇವೆಯಿಂ ತಣಿದ ಕಾವ್ಯ ಪ್ರೌಢರಿಂ ರತ್ನ ಕಾಂ।
ಚನ ಚೀನಾಂಬರ ವಿಕ್ರಯ ಕ್ರಯಿಕರಿಂ ಚೆಲ್ವಾದುದಂತಾ ಪುರಂ ॥ 1840 ॥

ಕಂ॥ ಅಂತಾ ಪುರ ವಾಸ್ತವ್ಯರ್। ಕಂತುಗೆ ರೂಪಿಂದೆ ಧನದಗಂ ಸಿರಿಯಿಂದ॥
ತ್ಯಂತ ವಿತರಣದಿನಾ ದಿನ। ಕಾಂತ ತನೂಜಂಗೆ ಮಾಡುವರ್ ಕೌತುಕಮಂ ॥ 1841 ॥

## 341 ಮೂಡಬಿದರೆಯ ಹೊಸ ಬಸ್ತಿಯ 2ನೆಯ ಶಾಸನ[1] [ಸು. 1460]

ಇದರಲ್ಲಿ ಗೇರುಸೊಪ್ಪೆಯ ದೊರೆ ಭೈರವರಾಯನು ವೇಣುಪುರದ ತ್ರಿಭುವನ ಚೂಡಾಮಣಿ ಬಸ್ತಿಗೆ ತಾಮ್ರದ ಹೊದಕೆಯನ್ನೂ ಅದೇ ಸ್ಥಲದ ಚಂದ್ರನಾಥ ದೇವರಿಗೆ ಬೆಳ್ಳಿಯ ಕುಂಭ, ದಂಡಿಗೆ, ಪರಿಯಣ. ತಾಣದೀವಿಗೆ ಇವುಗಳನ್ನೂ ಮಾಡಿಸಿದನೆಂದು ಹೇಳಿದೆ.

ಗೇರುಸೊಪ್ಪೆ

ಮ॥ ಬಳಸಿರ್ದೊಪ್ಪುವ ನಂದನಾವಳಿಗಳಿಂ ಕಾಸಾರ ನೀರೇಜದಿಂ।
ಕಳಧೌತೋಜ್ವಲ ಸಾಲ ಕೊತ್ತಲಗಳಿಂದಟ್ಟಾಲ ಜಾಲಂಗಳಿಂ॥
ವಿಳಸದ್ಗೋಪುರದಿಂ ಸುಹರ್ಮ್ಯ ಚಯದಿಂ ಶ್ರೀ ಜೈನ ಗೇಹಂಗಳಿಂ।
ಚೆಲುವಂ ತಾಳ್ದಿದ ಗೇರುಸೊಪ್ಪೆ ಪುರಮಂ ಕೊಂಡಾಡಲಾರ್ ಬಲ್ಲರೈ ॥ 1842 ॥

---

1 ಪಂಚಕಜ್ಜಾಯ, ಪು. 153-156.

## ಭೈರವರಾಯ

ಚಂ॥ ಕಡಲುಱಿ ತುಳ್ಕೆ ದಿಕ್ಪತಿಗಳಳ್ಕೆ ದಿಶಾ ಗಜಮುಳ್ಕೆ ಭೂತಳಂ।
ಜಡಿಯೆ ಕುಲಾಚಲಂ ಕೆಡೆಯೆ ವೈರಿ ನೃಪಾಲರ ಹೃದ್ಘಟಂಗಳಂ॥
ತೊಡೆಯೆ ಧಡಂ ಧಡಂ ಧಡಧಡೆಂದುದು ಭೂರಿ ಗಭೀರ ಭೇರಿ ದೀಂ।
ಕಿಡೆ ವಿಜಯ ಪ್ರಯಾಣದೊಳು ಭೈರವ ಭೂವರನೇಂ ಪ್ರತಾಪಿಯೋ ॥ 1843 ॥

ಮಱೆವುಗೆ ಕಾವರೆಂಬರಿದು ಗಣ್ಯವೆ ನೀರ್ ಮರ ಪುತ್ತು ಪುಲ್ಗಳುಂ।
ಮಱೆವುಗೆ ಕಾಯುವೇ ದಿಟ ದರಿದ್ರರ ಕೋಟಲೆಗಳ್ಕೆ ಬಳ್ಕಿ ಬಂ॥
ದರನುಱಿ ಕಾದು ತನ್ನ ಸಮನಾಗಿಯೆ ಮಾಟ್ಪಿ ಮಹಾತ್ಮೆಗೀತ ತಾ।
ನೆಱೆಯನೆನುತ್ತ ಸಾಱುವುದು ಭೈರವ ರಾಜನ ಕೀರ್ತಿ ಡಂಗುರಂ॥ 1844 ॥

ಮ॥ ಅರಿಭೂಪಾಲರ ದೇಶಮಂ ನಗರಮಂ ಭಂಡಾರಮಂ ಕೊಂಡು ಸಂ।
ಗರದೊಳ್ ಜೀವವನಿತ್ತೊಡಾ ರಿಪು ನೃಪರ್ ದೇಶಾಂತರಂ ಪೋಗಿ ಸಂ॥
ಚರಿಪರ್ ದಂಡ ಕಮಂಡಲಾಜಿನ ಜಟಾ ಭಸ್ಮಾಂಗದಿಂದಾವಗಂ।
ತಿರಿವರ್ ಭೈರವ ಭೈರವೆಂದು ಭಯದಿಂ ಶ್ರೀ ಭೈರವಕ್ಷೋಣಿಪಾ ॥ 1845 ॥

ಮ॥ಪ್ರ॥ ದಾನ ಶ್ರೇಯಾಂಸನೆಂಬರ್ ಮುನಿಜನಕಿರದಾಹಾರವೀವಲ್ಲಿ ಮತ್ತಂ।
ಸಾನಂದಂ ಶಕ್ರನೆಂಬರ್ ಜಿನಪತಿ ಸವನೋದ್ಯೋಗದೊಳ್ ನಿಚ್ಚ ನಿಚ್ಚಂ॥
ದೀನಾನಾಥಾದಿ ವಂದಿ ಪ್ರತತಿ ಬಯಸಿದಂತೀವ ಕಾರುಣ್ಯದಿಂದಂ।
ಕಾನೀನಂ ತಾನೆನುತ್ತಂ ಪೊಗಟ್ಟಿರಿಳೆಯೊಳಂ ಭೈರವಕ್ಷ್ಮಾಪ ನಿನ್ನಂ ॥ 1846 ॥

## 342 ಸೊರಬ 330 [1465]

ಈ ನಿಷಿದಿಗಲ್ಲಿನಲ್ಲಿ ದೇವಚಂದ್ರಮುನಿಯ ಶಿಷ್ಯನಾದ ಭಾರಂಗಿಯ ಬುಳ್ಳಪ್ಪನು ಸಮಾಧಿ ವಿಧಿಯಿಂದ ಮುಡಿಪಿದಂತೆ ಹೇಳಿದೆ.

ಕಲಿಯುಂ ಮಾಂಕರಿಸಿತ್ತು ತನ್ನ ಚರಿತಂ ಕಲ್ಪಾವನೀಜಾತದೊಳ್।
ಚಲಮುಂ ಮಾಡಿದುದತ್ಯುದಾರತೆ ಮಹಾಧೈರ್ಯಂ ಸುರೋರ್ವೀಧ್ರದೊಳ್॥
ಮಲೆದತ್ತೆಂದೊಡೆ ಬುಳ್ಳಪಪ್ರಭುಗೆ ಭವ್ಯಾಚಾರದಿಂ ಚಾಗದಿಂ।
ವಿಲಸದ್ಧೈರ್ಯದಿನೀಧರಾತಳದೊಳನ್ಯರ್ ಪೋಲಲೇನಾರ್ಪರೇ ॥ 1847 ॥

ಸರಿಗಾಣೆಂ ಧರೆಯಲ್ಲಿ ಚಾಗಿಗಳೊಳೆನ್ನೊಳ್ ಪೋಲ್ಕೆವರ್ಪನ್ನರಂ।
ಸುರಭೂಜಂ ಸಮನಪ್ಪೊಡಪ್ಪುದದನಾಂ ನೋಟ್ಪೆಂ ಸಮಂತೆಂಬವೋಲ್॥
ಧರೆಯೊಳ್ ಪೊಮ್ಮಳೆ ಸೋರ್ದ ಪಾಂಗಿನೊಳೆ ಚಾಗಂಗೆಯ್ದು ಸೋಪಾನಮಾ।
ಗಿರೆ ಧರ್ಮಂ ತ್ರಿದಿವಕ್ಕೆ ಬುಳ್ಳಪನಮರ್ತ್ಯಾವಾಸಮಂ ಪೊರ್ದಿದಂ ॥ 1848 ॥

**343 ಸಾಗರ 163 [ಸು. 1488]**

ಇದರಲ್ಲಿ ಸಂಗೀತಪುರದ ರಾಜನಾದ ಸಾಳುವೇಂದ್ರನು ಪದ್ಮಣ ಮಂತ್ರಿಗೆ ಒಗೆಯಕೆರೆಯೆಂಬ ಗ್ರಾಮವನ್ನು ಕೊಟ್ಟಂತೆ ಹೇಳಿದೆ.

ತೌಳವದೇಶ

ಶಾ॥ ಶ್ರೀಮದ್ಭೂಭುವನ ಪ್ರಸಿದ್ಧತರ ಜಂಬೂದ್ವೀಪ ಮಧ್ಯಸ್ಥ ತುಂ।
ಗಾಮರ್ತ್ಯಾಚಲ ದಕ್ಷಿಣಾಂತ್ಯ ಭರತಾರ್ಯಾಖಂಡ ನೈಋತ್ಯ ದಿ॥
ಕ್ಷೀಮೋಪಾಬ್ಧಿ ತಟೋಪಕಂಠ ವಿಲಸದ್ವರ್ಣಾಶ್ರಮಾಕೀರ್ಣ ಭೂ।
ಧಾಮಂ ತೌಳವ ದೇಶಮಿರ್ಪುದಿಳೆಯೊಳ್ ಸಪ್ತಾಂಗ ಸಂಪತ್ತಿಯಿಂ
॥ 1849 ॥

ಸಂಗೀತಪುರ

ಮ॥ ಅದಱೊಳ್ ಮಾಂಗಲ್ಯ ಗೇಹಂ ಬಹು ವಿಧ ವಿಭವ ಪ್ರೋಲ್ಲಸಚ್ಚೈತ್ಯ ಗೇಹಂ।
ಸುದತೀ ಸಂತಾನ ಜನ್ಮಾಲಯಮಖಿಲ ಸುಖಿ ತ್ಯಾಗಿ ಭೋಗಿ ಪ್ರವಾಹಂ॥
ಮದವದ್ದಂತ್ಯಶ್ವ ಯೂಥ ಪ್ರಬಲ ಪಟು ಭಟಾಕೀರ್ಣಮುತ್ತುಂಗ ಸೌಧೋ।
. . ರಾಜದ್ರಾಜ ಸಂಗೀತಪುರಮದೆಸೆಗುಂ ಪ್ರೌಢ ಸಂಗೀಯಮಾನಂ ॥1850 ॥

ಕಂ॥ ಕವಿ ಗಮಕಿ ವಾದಿ ವಾಗ್ಮಿ। ಪ್ರವೇಶ ಸಂಗೀತ ವಿಷಯ ಸಾಹಿತ್ಯ ರಸೋ॥
ದ್ಭವ [ಭಾವ] ಚತುರ ಸಂಸ್ತುತ। ವಿವಿಧ ಕಲಾ ಭಂಗಿ ಸಂಗಿ ಸಂಗೀತಪುರಂ
॥ 1851 ॥

ಪದ್ಮಣ ಮಂತ್ರಿ

ಮ॥ ಜಿನಪಾದಾನತಿ ಮಸ್ತಕಕ್ಕೆ ಜಿನ ಬಿಂಬಾಲೋಕನಂ ದೃಷ್ಟಿಗಾ।
ಜಿನ ಶಾಸ್ತ್ರ ಶ್ರವಣಂ ಸ್ವಕರ್ಣ ವಿವರಕ್ಕೆ ಶ್ರೀ ಜಿನ ಸ್ತೋತ್ರಮಾ॥
ನನ ಪದ್ಮಕ್ಕೆ ಚಿದಾತ್ಮ ಭಾವನೆ ಮನಕ್ಕಂ ಪಾತ್ರ ದಾನಂ ಕರ।
ಕ್ಕೆ ನಿಜಾಲಂಕೃತಿಯಾಗೆ ಪದ್ಮಣ ಮಹಾ ಮಂತ್ರೀಶನೇಂ ಧನ್ಯನೋ
॥ 1852 ॥

ಕಂ॥ ಪದ್ಮಂ ವಿನಮಿತ ಜಿನ ಪದ। ಪದ್ಮಂ ಸಜ್ಜನರೊಳೆಸೆವ ವಿಗತಚ್ಛದ್ಮಂ ॥
ಪದ್ಮಾ ಪ್ರಿಯಕರ ಗುಣ ಗಣ। ಸದ್ಮಂ ನಿತ್ಯ ಪ್ರಸನ್ನ ನಿಜಮುಖ ಪದ್ಮಂ
॥ 1853 ॥

## 344 ಮೂಡಬಿದರೆಯ ಹೊಸ ಬಸ್ತಿಯ 5ನೆಯ ಶಾಸನ[1] [ಸು. 1550]

ಈ ಶಾಸನವು ಅಸಮಗ್ರವಾಗಿದೆ. ಇದರಲ್ಲಿ ಸಾಳ್ವಮಲ್ಲ ಎಂಬ ದೊರೆಯ ಶೌರ್ಯ ಪ್ರತಾಪಗಳು ವರ್ಣಿತವಾಗಿವೆ.

ಸಾಳ್ವಮಲ್ಲ

ಯ॥ ಪುರುಳೀತಂ ಮರುಳೀತನೀತನುರು ಶಾಸ್ತ್ರೋತ್ತುಂಗನೀತಂ ನಿರ।
ಕ್ಷರನೀತಂ ಸುಚರಿತ್ರನೀತನುಜಿ ದುಶ್ಚಾರಿತ್ರನೀತಂ ಗುಣೋ॥
ತ್ಕರನೀತಂ ಗುಣಹೀನನೆಂದವರ್ಗಳಂ ಕಂಡಾಕ್ಷಣಂ ಬಲ್ಲನೀ।
ಧರೆಯೊಳ್ ಸಾಳುವಮಲ್ಲರಾಯನೆ ವಲಂ ಭಾವಜ್ಞ ಚಕ್ರೇಶ್ವರಂ ॥ 1854 ॥

ಜಗದೊಳ್ ಕ್ಷತ್ರಿಯ ರತ್ನನಂ ಯದು ನೃಪಾಲೋತ್ತಂಸ ಮಾಣಿಕ್ಯನಂ।
ಮೃಗಲಕ್ಷ್ಮಾನ್ವಯನಂ ಜಿನೇಂದ್ರ ಪದ ಪೂಜಾ ಶಕ್ರನಂ ಚಾಗ ಪೆಂ॥
ಪಿಗನಂ ಕಾಶ್ಯಪ ಗೋತ್ರನಂ ಸುಗುಣನಂ ಶ್ರೀ ಸಾಳ್ವಮಲ್ಲೇಶನಂ।
ಪೊಗಟ್ವೀ ನಾಲಗೆಯನ್ಯರಂ ಪೊಗಟ್ವುದೇ ಪಾಲುಂಡು ಮೇಲುಂಬುದೇ ॥ 1855 ॥

ಬಲಿಯಿಂ ಕರ್ಣನೆ ಚಾಗಿಯಾ ಬಲಿಯಿನುದ್ಯತ್ಕರ್ಣನಿಂ ಭೋಜನಾ।
ಬಲಿಯಿಂ ಕರ್ಣನಿನಂತೆ ಭೋಜ ವಿಭುವಿಂ ಮಾಂಧಾತನೀ ಲೋಕದೊಳ್॥
ಬಲಿಯಿಂ ಕರ್ಣನಿನಂತೆ ಭೋಜ ವಿಭುವಿಂ ಮಾಂಧಾತನಿಂ ಚಾಗದ।
ಗ್ಗಲನಾದಂ ಕಲಿ ಸಾಳ್ವಮಲ್ಲನವನಂತಾರ್ ನೋಂತರೀ ಧಾತ್ರಿಯೊಳ್ ॥ 1856 ॥

ಚಂ॥ ಪರಮ ಜಿನೇಂದ್ರ ಭಕ್ತಿಗೆ ಸದುಕ್ತಿಗೆ ಚಾಗಕೆ ಭೋಗಕಾತನೊಳ್।
ಸಿರಿಗೆ ಪರಾಕ್ರಮಕ್ಕೆ ಕಡು ನನ್ನಿಗೆ ಸತ್ಕಳೆಗಂ ತ್ರಿಲೋಕದೊಳ್॥
ಸರಿ ದೊರೆ ಪಾಡು ತೋಡು ಪಡಿ ಪಾಸಟಿಯಿಾಡೆಣೆಯಿಲ್ಲೆನುತ್ತಹಂ।
ಕರಿಸಿ ಪೊಗಟ್ದು ಬಾಜಿಸಿತು ಸಾಳುವ ಮಲ್ಲನ ಕೀರ್ತಿ ಡಿಂಡಿಮಂ ॥ 1857 ॥

## 345 ಸಾಗರ 55 [ಸು. 1560]

ಇದರಲ್ಲಿ ಗೇರುಸೊಪ್ಪೆಯ ರಾಜನಾದ ದೇವರಾಯನ ಆಳಿಕೆಯಲ್ಲಿ ಅಂಬಣಸೆಟ್ಟಿ ಗೇರುಸೊಪ್ಪೆಯ ನೇಮಿ ಜಿನಾಲಯದ ಮುಂದೆ ಕಂಚಿನ ಮಾನಸ್ತಂಭವನ್ನು ನಿಲ್ಲಿಸಿದಂತೆ ಹೇಳಿದೆ.

---

[1] ಪಂಚಕಜ್ಜಾಯ, ಪು. 153-163.

## ನೇಮಿನಾಥ ಸ್ತುತಿ

ಮ॥ಸ॥ ಅಮೃತ ಶ್ರೀಕಾಂತಮಾಗಿರ್ದಖಿಲ ಸುಖ ಸಮುಚ್ಚಾ್ರಯಮಾಗಿರ್ದ ನಾನಾ।
ಸಮಲ ಪ್ರಧ್ವಂಸಿಯಾಗಿರ್ದನಿಮಿಷ ಖಗ ಸಂಸೇವ್ಯಮಾಗಿರ್ದ ದೇವೋ॥
ತ್ತಮನಾಗೀಶೋತ್ತಮಂಗಾರ್ಪಿತ ನಿಜಪದಮಾಗಿರ್ದ ವಾರಾಶಿ ಚಂದ್ರೋ।
ಪಮಮಾಗಿರ್ದೀ ನಿಜಾಕಾರಮೆ ರಮೆಗೆ ವಿಲಾಸಾಸ್ಪದಂ ನೇಮಿನಾಥಾ
॥ 1858 ॥

ಮ॥ ಜನನೇತ್ರ ಭ್ರಮರಾವಲೀ ಕುಸುಮಿತೋದ್ಯಾನಂ ಮುನೀಂದ್ರೌಘ ಚಿ।
ತ್ತ ನವೀನಾಂಬುರುಹ ಪ್ರಭಾತ ಸಮಯಂ ವಿದ್ವಜ್ಜನ ಸ್ತೋತ್ರ ದಿ॥
ವ್ಯ ನದೀ ಪೂರ ಹಿಮಾಚಲಂ ನಿಜ ಮಹಾ ಸೌಂದರ್ಯಮೆಂದೆಂಬ ಸ।
ಜ್ಜನತಾ ಸಂಸ್ತುತಿ ನಿನ್ನೊಳೇನಮರ್ದುದೈ ಶ್ರೀನೇಮಿತೀರ್ಥೇಶ್ವರಾ ॥1859॥

## ಗೇರುಸೊಪ್ಪೆ

ಚಂ॥ ವರ ಜಿನ ಚೈತ್ಯ ಗೇಹ ನೃಪ ಸದ್ಮ ನಿಯೋಗಿ ನಿವಾಸ ವೈಶ್ಯ ಮಂ।
ದಿರ ನಿಕುರುಂಬದಿಂ ವಿಮಲಧರ್ಮ ದಯಾನ್ವಿತ ದಾನ ಶೌಂಡರಿಂ॥
ಗುರು ಯತಿ ವೃಂದದಿಂ ಕವಿ ಬುಧೋತ್ಕರದಿಂ ವರ ಭವ್ಯ ಕೋಟಿಯಿಂ।
ಸುರುಚಿರ ಗೇರುಸೊಪ್ಪೆಯವೊಲಾವ ಪುರಂ ಜಗದೊಳ್ ಪ್ರಸಿದ್ಧಮೋ
॥ 1860 ॥

## ಸಾಳ್ವಮಲ್ಲ

ಮ॥ಸ॥ ಸಮರಾಂಭೋ ರಾಶಿಯೊಳ್ ಸುತ್ತುವ ಸುಱಿಗಳಿವೆಂಬಂತೆ ನೀನೇಱಿದಶ್ವೋ।
ತ್ತಮದಿಂದಂ ವೇಡೆಯಂಗಳ್ ಪಸರಿಸೆ ರಿಪು ರಾಜೇಂದ್ರರೇಱಿರ್ದ ಮತ್ತೇ॥
ಭ ಮಹಾ ವಾಜಿವ್ರಜಂಗಳ್ ಪಡಗುಗಳವೊಲಟ್ಟಿಲ್ಕೆ ನುಂಗುತ್ತುಮಿರ್ಕುಂ।
ಕ್ರಮದಿಂ ತ್ವತ್ಪಾದ ಯುಗ್ಮಂ ಮಕರ ಯುಗದವೋಲ್ ಸಾಳ್ವಮಲ್ಲ ಕ್ಷಿತೀಶಾ
॥ 1861 ॥

## ದೇವರಸಿ

ಉ॥ ಆತನ ಕಾಂತೆ ಶೀಲಗುಣವಂತೆ ಕಲಾ ಗುಣವಂತೆ ಜೈನಮಾ।
ರ್ಗಾತತ ಚಿತ್ತೆ ಧರ್ಮಪರ ವಿತ್ತೆ ಜನಸ್ತುತ ವೃತ್ತೆ ಸತ್ಕುಲ॥
ಖ್ಯಾತ ಸುರೂಪೆ ಸನ್ಮತಿ ಕಲಾಪೆ ವಿನಿರ್ಗತ ಕೋಪೆಯೆಂದು ಧಾ।
ತ್ರೀ ತಳವೊಪ್ಪೆ ದೇವರಸಿಯಂ ಪೊಗಳ್ಗುಂ ಗುಣರತ್ನ ರಾಶಿಯಂ ॥ 1862 ॥

## ಯೋಜಣ್ಣ

ಕಂ॥ ಪ್ರಿಯುತಮೆಯ ದ್ವಯುದಿಂದಂ। ನಯುನದ್ವಯದಿಂದೆ ವಕ್ತ್ರವೊಪ್ಪುವ ತೆಱದಿಂ॥
ಜಯಂದಂಕದಾನೆ ದಂತ। ದ್ವಯುದಿಂದೆಸೆವಂತೆಯೊಪ್ಪಿದಂ ಯೋಜಣ್ಣಂ
॥ 1863॥

## ನಾಗಮ್ಮ

ಮ॥ ಪತಿ ಚಿತ್ತಾನುಗುಣ ಪ್ರವರ್ತನದಿನತ್ಯಾಶ್ಚರ್ಯ ಸೌಕರ್ಯ ಸಂ।
ಯುತ ಶೀಲೋನ್ನತಿಯಿಂ ಜಿನೇಂದ್ರ ಪದ ಪೂಜಾಸಕ್ತ ಸದ್ಭಕ್ತಿಯಿಂ॥
ಸತತೋತ್ಸಾಹ ಸುದಾನದಿಂ ಪರಹಿತ ವ್ಯಾಪಾರ ಚಾತುರ್ಯದಿಂ।
ಕ್ಷಿತಿಯೊಳ್ ನಾಗಮನಾಂತಳುತ್ತಮ ಯಶಃ ಸೌಭಾಗ್ಯಮಂ ಭಾಗ್ಯಮಂ
॥ 1864 ॥

## ಮಾನಸ್ತಂಭ

ಮ॥ಸ॥ ಭರದಿಂ ಜನ್ಮಾಬ್ಧಿಯಂ ದಾಂಟಿಸುವ ವರ ಮಹಾ ಧರ್ಮಮೆಂದೆಂಬ ಪೋತ।
ಕ್ಕುರು ಕೂಪಸ್ತಂಭಮಂಬಾಂಕನ ವಿಶದ ಯಶಃಪಟ್ಟಿಕಾ ಸ್ತಂಭಮೆಂಬಂ॥
ತಿರೆ ಮಾನಸ್ತಂಭಮಾ ಕೂಟದೊಳೆಸೆವ ಚತುರ್ಜೈನ ಬಿಂಬಾಂಘ್ರಿ ಪೂಜಾ।
ಪರಿಕೀರ್ಣಾಸ್ಫಾರ ಪುಷ್ಪಾಂಜಲಿವೊಲೆಸೆವುದೀ ವ್ಯೋಮ ತಾರಾ ಕದಂಬಂ
॥ 1865 ॥

# ಟಿಪ್ಪಣಿ

## (ಸಂಖ್ಯೆಗಳು ಪದ್ಯಗಳಿಗೆ ಅನ್ವಯಿಸುತ್ತವೆ)

1-6. ಈ ಪದ್ಯಗಳಲ್ಲಿ ಈಗಿನ ವ್ಯಾಕರಣಗಳಿಂದ ಸಿದ್ಧಿಸದ ಕೆಲವು ಪ್ರಯೋಗಗಳು ಇವೆ. ಇವು ಪೂರ್ವದ ಹಳಗನ್ನಡಕ್ಕೆ ಸೇರಿದುವು. 1. ಪ್ರಥಮಪುರುಷದ ಆಖ್ಯಾತ ಪ್ರತ್ಯಯಗಳಿಗೆ ದೀರ್ಘಸ್ವರ: ಏಱಿದಾರ್, ಸಂದಾರ್; 2. ಸಪ್ತಮೀವಿಭಕ್ತಿಗೆ ಉಳ್ ಪ್ರತ್ಯಯ: ವೆಟ್ಟದುಳ್, ಧರಣಿಯುಳ್; 3. ನಿಷೇಧರೂಪದಲ್ಲಿ ದೀರ್ಘಸ್ವರ: ತಪ್ಪಾದೆ; 4. ನಪುಂಸಕಲಿಂಗದಲ್ಲಿ ಒದು ಪ್ರತ್ಯಯ: ಕೆಟ್ಟೊದು; 5. ಬಿಂದುವಿಗೆ ನಕಾರ: ಇಂಬಿನ್ರ್, ನೋನ್ಪಿ, ವಿಪರೀತ್ರ್, ಸಿಂಘರ್ವ್ರ; 6. ಸ್ವರ ಪರವಾಗದಿದ್ದರೂ ದ್ವಿತೀಯಾವಿಭಕ್ತಿಗೆ ದೀರ್ಘ: ಪ್ರಾಸಾದಾಂತರವಾರ್ ವಿಚಿತ್ರ; ಇತ್ಯಾದಿ.

1. ಕಳ್ವಪ್ಪು, ಕಟ್ಬಪ್ಪು = ಶ್ರವಣಬೆಳ್ಗೊಳದಲ್ಲಿರುವ ಚಿಕ್ಕ ಬೆಟ್ಟ. ವೆಟ್ಟ = ಬೆಟ್ಟ. ಸಂಘಂಗಳ, ಪ್ರಥಮೆಂಗೆ ಷಷ್ಠಿ. ಉಯೆ = ಕರೆದುಕೊಂಡುಹೋಗಲು.

2. ನೋನ್ಪಿ, ನೋಂಪಿ = ವ್ರತ. ಕಱ = ದೋಷ. ಕಂತಿ = ಜೈನಸನ್ಯಾಸಿನಿ. ಮುಡಿಪು = ಪ್ರಾಣತ್ಯಾಗಮಾಡು.

3. ಸುರಚಾಪ = ಕಾಮನಬಿಲ್ಲು. ತೆಱ = ರೀತಿ. ಇರವಾರ್ = ಇರುವಿಕೆಯನ್ನು. ಸನ್ಯಾಸನ, ಸಮಾಧಿ, ಸಲ್ಲೇಖನ = ಉಪವಾಸವ್ರತ.

4. ಸುಮಾರು 700 ರಲ್ಲಿಯೇ ಕನ್ನಡದಲ್ಲಿ ತ್ರಿಪದಿ ಇದ್ದಿತು.

7. ಪರೋಕ್ಷ = ಮರಣಾನಂತರ. ದತ್ತಿ = ದಾನ. ರಘುಕುಳ = ರಾಮ. ಅಱ್ಕು = ನಿಶ್ಶೇಷವಾಗು. ಪೆಂಪು = ಮಹಿಮೆ. ದೀವಬ್ಬೆ ಕಟ್ಟಿಸಿದ ಕೆರೆ ಸಮುದ್ರವನ್ನು ಹೀಯಾಳಿಸುವಂತಿದ್ದಿತು.

8. ಈ ಕೆರೆ ಗಂಗೆಯೇ ದಕ್ಷಿಣಕ್ಕೆ ಬಂದಂತೆ ಇದ್ದಿತು. ಅಮರನದಿ = ಗಂಗೆ. ಸಯ್ಪು = ಪುಣ್ಯ.

9. ಅಳುಂಬ = ಅಧಿಕ. ಒಳ್ಪು = ಒಳ್ಳೆಯ ಗುಣ. ಶಿಖಿ = ಬೆಂಕಿ.

10. ನೆಗಟ್ದ = ಪ್ರಸಿದ್ಧಿಹೊಂದಿದ. ವೇಳೆವಡಿಚರ್ = ಕೊಟ್ಟ ಭಾಷೆಯನ್ನು ನಡಸಿದವರು. ನಿನ್ನನ್ನರೆ = ನಿನಗೆ ಸಮಾನರೇ? ದೊರೆಯಯ್ = ಸಮಾನ.

11. ಉಱದೆ = ಹೆದರದೆ. ಇಱಿವ = ಸಂಹರಿಸುವ. ಆಂಪೆವು = ಯುದ್ಧ ಮಾಡುವೆವು. ಪೊಚ್ಚಱಿಸು = ಗೋಚರಿಸು. ಸಕ್ಕಿ = ಸಾಕ್ಷಿ.

12. ಸೆರಗುವಾರ್ = ಅಪಾಯವನ್ನು ನಿರೀಕ್ಷಿಸು. ನೆರವು = ಸಹಾಯ. ಸಿಂಧುರ = ಆನೆ.

13. ಆಮ್ನಾಯ = ವಂಶ. ಕಲಿ = ಶೂರ. ನೆಗಟ್ತೆ = ಕೀರ್ತಿ.

14. ಅದಗುಂತಿ = ರಾಶಿ. ಅವನಿಜೆ = ಸೀತೆ.

15. ಶ್ರಾವಕ = ಜೈನಗೃಹಸ್ಥ. ಸಜ್ಜನಿಕೆ = ಪತಿಭಕ್ತಿ.

19. ಪೇನಿ = ? ಹೀನ. ಕಣೆ = ಗಣೆ. ವಸುಮತಿ = ಭೂಮಿ. ಊನ = ಕೊರತೆ. ಮೋನಿ = ಮೌನಿ.

20. ಕಾಯ್ವೊಂಗೆ = ಕೋಪಿಸುವನಿಗೆ. ಆರ್ಪು = ಶಕ್ತಿ, ಸಾಹಸ. ಗೆಡೆಗೊಂಡು = ಸೇರಿ. ಕೊಂಡುಕೊನೆ = ಹೊಗಳು.

21. ಕಾಳ = ಯಮ. ಆಳಾಳ = ಆಳಿನ ಆಳ. ಹೇಳಾ = ಲೀಲೆ.

22. ಎರ್ದೆಗಿಡದಿರು = ಧೈರ್ಯಗುಂದಬೇಡ. ಜವ = ಯಮ. ರಕ್ಕೆ = ರಕ್ಷೆ.

23. ಅಗುರ್ವಿಸೆ = ಭಯ ಹುಟ್ಟಲು. ಕಾಡುವಟ್ಟಿ = ಪಲ್ಲವರಾಜ. ಅಸುಂಗೊಳೆ = ಆಶ್ಚರ್ಯಪಡಲು.

24. ಓಳಿಯೆ = ವರಿಸೆಯಾಗಿ; ತೃತೀಯೆಗೆ 'ಎ' ಪ್ರತ್ಯಯ. ಪಂದಲೆ = ಕತ್ತರಿಸಿದ ತಲೆ. ಆಳೋಳಿ = ಆಳುಗಳ ಸಮೂಹ. ಒಟ್ಟಜಿ = ಪ್ರಭಾವ, ಪರಾಕ್ರಮ.

25. ಒಗೆದ = ಹುಟ್ಟಿದ. ಎಱೆಯೊಂ, ಎಱೆಯಂ = ಸ್ವಾಮಿ. ಇನಿಯಂ = ಪ್ರಿಯ.

27. ನಿಶಾತ = ತೀಕ್ಷ್ಣ. ಅಸಿ = ಕತ್ತಿ. ದ್ವಿಷತ್ = ಶತ್ರು. ಹವಿರ್ಭುಜ = ಅಗ್ನಿ.

28. ಅಣ್ಮುವರ್ = ಸಮರ್ಥರಾಗುವರು. ಅರೆಬರ್ = ಕೆಲವರು. ಪೂಣ್ದು = ಮಾತು ಕೊಟ್ಟು. ಆರಾನುಂ = ಆರಾದರೂ. ಅಣ್ಮು = ಸಾಮರ್ಥ್ಯ. ಚಾಗ = ತ್ಯಾಗ.

29. ಕಿಡದ = ಕೆಡದ. ಚಲ = ದೃಢಸಂಕಲ್ಪ. ಅರ್ಥಿ = ಯಾಚಕ. ತೊದಳ್ = ಸುಳ್ಳು. ಓತು = ಪ್ರೀತಿಸಿ.

30. ಪೆಱದು = ಪೆರತು. ಇಂ = ಇನ್ನು. ಭೂಮಿರುಹ = ವೃಕ್ಷ. ಅಗ್ಗಳಂ = ಹೆಚ್ಚು. ಸುರಾಚಳ = ಮೇರು. ಖರಕರ = ಸೂರ್ಯ. ನನ್ನಿ = ಸತ್ಯ. ಈದೊರೆತು = ಇಂಥದು. ಅಳವು = ಪರಾಕ್ರಮ, ಪ್ರಭಾವ.

31. ದುಸ್ಥಿತ = ದರಿದ್ರ. ಕುಂಭಿ = ಆನೆ. ಕೇಸರಿ = ಸಿಂಹ. ಸರೋರುಹ = ಕಮಲ.

32. ತಕ್ಕು = ಯೋಗ್ಯತೆ. ಅಳಿಪಿ = ದುರಾಶೆಯಿಂದ. ಮಂತಣಂ = ಆಲೋಚನೆ. ಆಟಿಸುವುದು = ಆಶೆಪಡುವುದು. ಬಿನ್ನಣ = ವಿಜ್ಞಾನ. ಕೂರ್ತು = ಪ್ರೀತಿಸಿ. ಬಂಚಿಸು = ವಂಚಿಸು. ಕಲ್ಪಿ = ವಿದ್ಯೆ.

33. ಶಿಳೀಮುಖ = ಭ್ರಮರ.

34. ಮಾಣಂ = ಬಿಡನು. ಅಳಕು = ಭಯ.

35. ಅಮೃತಕಿರಣ = ಚಂದ್ರ. ರುಚಿ = ಕಾಂತಿ. ಕರಂ = ಹೆಚ್ಚಾಗಿ.

36. ಸೆಡೆವರ್ = ಹೆದರುವವರು. ಮುಯ್ವಾಂಪರ್ = ಬೀಗುವವರು. ಸೋಚಿಗಳೆಂ = ಶುಚಿಯಾದವರು. ಗಡಣಂ = ಸಂಗ. ಕಲಿಗಳೊಳ್ಗಂಡ = ವೀರರೊಳಗೆ ವೀರ.

39. ಅಬ್ಜಾರಿ = ಚಂದ್ರ. ಕಾಯ್ಪು = ಕೋಪ. ಮೂರಿ = ? ಬಾಯಿ. ಅಱಿಗೆ = ತಿಳಿಯಿರಿ. ಮುಮ್ಮುಡಿಚೋಟಿ = ಚೇರಚೋಳಪಾಂಡ್ಯರಾಜರ ಕಿರೀಟಧಾರಿಯಾದ ರಾಜರಾಜ. ಗಂಧವಾರಣ = ಮತ್ತಗಜ.

40. ಅಭ್ಯಧಿಕೇಕ್ಷಣಂ = ಹೆಚ್ಚು ಕಣ್ಣುಗಳುಳ್ಳವನು. ವಚಶ್ರೀಪತಿ = ಸರಸ್ವತೀಪತಿ, ಬ್ರಹ್ಮ.

41. ಗೊಂದಳಿಸಿ = ಗುಂಪಾಗಿ. ತೆರಳ್ಚಿ = ಓಡಿಸಿ. ಒಸೆದು = ಒಲಿದು. ಇನ = ಸೂರ್ಯ. ದೆಸೆಗಿಡೆ ತೂಳ್ದಿ = ದಿಕ್ಕಾಪಾಲಾಗುವಂತೆ ಓಡಿಸಿ. ಕೃತ = ಕೃತಯುಗದ. ತೆಳ್ಪು = ಸೊಬಗು. ವಿಷ್ಟರ = ಆಸನ.

42. ಮಾದೇವಿ = ಮಹಾದೇವಿ, ಪಾರ್ವತಿ. ಎಂಬ = ಎನ್ನುವೆಯಾ?

43. ಬೆಡಂಗಿ = ವಿಲಾಸಿನಿ. ಸೂನೃತ = ಸತ್ಯ.

44. ಸಿಂಹಾಗ್ರಜೆ = ಜಯಸಿಂಹನ ಅಕ್ಕ. ಯಾನೆ = ನಡೆಯುಳ್ಳವಳು.

51. ಪೊಂಗು = ಔದ್ಧತ್ಯ. ಮನ್ನೆಯರು = ಸಾಮಂತರು. ಉರ್ಕು = ಗರ್ವ. ಕಟಿಲ್ದುದು = ಹೋಯಿತು. ಓಗಡಿಸಿತು = ಅಡಗಿತು. ಬಿಗುರ್ತ = ಬೆಗಡುಗೊಂಡ. ಬಾಟ್ದಲೆ = ಸಜೀವವಾದ ತಲೆ. ಬೆಸಗೆಯ್ದುಪರ್ = ಸೇವೆಮಾಡುವರು. ಈದೊರೆತು = ಇಂಥ. ಪೊಡರ್ಪು = ತೇಜಸ್ಸು.

53. ಸರಸತಿ = ಸರಸ್ವತಿ. ಪಾಸಟಿ = ಸಮಾನ.

54. ಶಶಾಂಕಧರ = ಶಿವ. ಅಘ = ಪಾಪ.

55. ಪತಿಹಿತಿಕ್ಕೆ = ಪತಿಭಕ್ತಿ (ಈ ಪದವು ಗಮನಿಸತಕ್ಕದ್ದು) ಪುದಿದು = ತುಂಬಿ. 'ಸುಪುತ್ರಃ ಕುಳದೀಪಕಃ' ವಾಕ್ಯವೇಷ್ಟನ.

56. ನೆಗಟ್ = ನಡೆಯಲು.

57. ಅರಾತಿ = ಶತ್ರು. ವಾಜಿ = ಕುದುರೆ. ಪೆಱಪಿಂಗು = ಹಿಮ್ಮೆಟ್ಟು. ಅಳಿರ್ವಳ್ಕೆ? ಸಾಧನ = ಸೈನ್ಯ. ತವೆ = ಹೆಚ್ಚಾಗಿ. ಆಜಿ = ಯುದ್ಧ. ಭುಂಭುಕ? 167 ನ್ನು ನೋಡಿ.

58. ಕೇವಳ = ಸಾಧಾರಣ. ಅಜಿೀತ = ಜ್ಞಾನ. ನಯ = ನೀತಿ.

63. ನಿಟಿಲ = ಹಣೆ. ಕರವಾಳ್ = ಕತ್ತಿ.

64. ಅಟಂದಪಂ = ಬೆನ್ನಟ್ಟುವನು; ಧಾತು:ಅಟರ್. ಎಟ್ಟಿಟ್ಟು = ಓಡಿಸು. ನೇರ್ದಪಂ = ಕತ್ತರಿಸುವನು. ಕೋವರ = ಕುಂಬಾರರ.

65. ಅಟ್ಟೆ = ಮುಂಡ. ಅರುಣಾಂಬು = ರಕ್ತ, ರಾಮೆ = ? ಶಾಕಿನಿ. ಪೆಂತೆಜಿೆಯುರ್? ರಕ್ಕಸ = ರಾಕ್ಷಸ, ಮರುಳ್ = ಪಿಶಾಚ. ಆಸುರ = ಭಯಂಕರ.

66. ಪೋರ್ದಪಂ = ಯುದ್ಧಮಾಡುವನು. ಅಪ್ಪಂ = ಆಗುವ. ಎಂಬಂ = ಎನ್ನುವ. ಅಕ್ಕುಂ = ಆಗುವುದು.

67. ಪಡಲಿಡು = ಬೀಳು. ಬಲ್ಕಣೆ = ? ಶೂರ. ನೆತ್ತರ್ = ರಕ್ತ. ನೆಣ = ಮೇದಸ್ಸು.

68. ಧುರ = ಯುದ್ಧ. ನಿಶಿತ = ತೀಕ್ಷ್ಣ. ಬಿಸುಸುಯ್ಯೆ = ಉಷ್ಣವಾದ ಉಸಿರನ್ನು ಬಿಡಲು. ಇಂದು = ಚಂದ್ರ. ನಿತ್ತರಿಸಲ್ = ಸಹಿಸಲು. ಅಣಂ = ಸ್ವಲ್ಪವೂ. ಸೀವರ = ಹನಿ. ಉಂತು = ಸುಮ್ಮನೆ. ಏಸಮ್ಮದಂ = ಏನು ಸಂಬಂಧ?

69. ತೊಡರ್ವ = ಇದಿರಿಸುವ. ಎಂಟೆರ್ದೆಯೆ = ಎಂಟು ಎದೆಯೋ? ಧೈರ್ಯವೇ. ಅಣ್ಣಲ್ = ದೊರೆ (ತಮಿಳು). ಬರ್ಮ = ಬ್ರಹ್ಮ. ಬರಂ ಬಿಡಿದನೆ = ವರವನ್ನು ಹೊಂದಿದನೇ? ಕಡಿಕೆಯ್ದು = ಸಾಹಸಮಾಡಿ. ಒಡರಿಸು = ಪ್ರಯತ್ನಿಸು. ಭುಜಗಮರ್ದನ = ಕೃಷ್ಣ.

70. ಆಶಾ = ದಿಕ್ಕು. ಅಲುಪ್ತಿ = ಪ್ರೀತಿ. ಪ್ರಧ್ವಾನ = ಶಬ್ದ.

76. ಇನಜ = ಕರ್ಣ. ಹಿರಣ್ಯ = ಸ್ವರ್ಣ. ಏಗುವುದು = ಏನು ಪ್ರಯೋಜನ?

77. ವನೀಪಕ = ಯಾಚಕ. ರಾಯನ, ಪ್ರಥಮೆಗೆ ಷಷ್ಠಿ. ಪೊದಟ್ಟಿ = ಪ್ರಸಿದ್ಧವಾದ. ಇಭ = ಆನೆ. ಮನಮಿಕ್ಕಿ = ಚಿಂತಿಸಿ. ಗಬಿಲ್ಲನೆ = ತಟ್ಟನೆ. ಮಾಯ್ದ = ನಾಶವಾದ. ಪವಣ್ಗೊಳಲ್ = ಪ್ರಮಾಣವನ್ನು ಹೇಳಲು. ಇರ್ಕೆ = ಇರಲಿ. ಅಜ = ಬ್ರಹ್ಮ.

78. ಅರಿಯುಂಗೆ = ? ಶತ್ರುವಿಗೆ. ಉರ್ಕುಡಿ = ಗರ್ವಭಂಜಕ. ಅಗುರ್ವಪ್ಪ = ಭಯಂಕರವಾದ. ದಳ್ಳುರಿ = ಜ್ವಲಿಸುವ ಅಗ್ನಿ. ಮಾರ್ಕೊಳ್ವ = ಪ್ರತಿಭಟಿಸುವ. ಎಬಿಲ್ದ = ಬಾಗಿದ; ಲಕಾರಕ್ಕೆ ಶಿಥಿಲತ್ವ.

79. ಎಳೆ = ಭೂಮಿ. ದಾಂಗುಡಿವರಿಲ್ದು = ಹಬ್ಬಿ ವ್ಯಾಪಿಸಿ.

80. ಕುಳಭವನಂ = ತವರುಮನೆ. ನಿಧಾನಂ = ನಿಧಿ. ಮಾಂತನ = ದೊಡ್ಡಸ್ತಿಕೆ. ಆಗರ = ಮನೆ. ವಿಧು = ಚಂದ್ರ.

82. ಚಾಂದ್ರ ಮುಂತಾದುವು ವ್ಯಾಕರಣಗಳು; ಶಬ್ದಾನುಶಾಸನ ಶಾಕಟಾಯನಕೃತ. ಏಕಾಕ್ಷರಂ = ಅತಿಸುಲಭ. ಮೊಗ್ಗೇ = ಸಾಧ್ಯವೇ?

83. ವಡ್ಡವ್ಯವಹಾರಿ = ದೊಡ್ಡವರ್ತಕ. ಉಕ್ಷ = ವೃಷಭ. ರಾಜೀವ = ಕಮಲ. ಮಧುಪ = ದುಂಬಿ. ಯಥಾಸಂಖ್ಯಾಲಂಕಾರ.

84. ಶ್ಲೇಷಾಲಂಕಾರ. ವಿಬುಧ = ದೇವತೆಗಳು, ವಿದ್ವಾಂಸರು. ಉಮಾ = ಪಾರ್ವತಿ, ಯಶಸ್ಸು. ಆಶಾರದನಿ = ದಿಗ್ಗಜ. ದಾನ = ತ್ಯಾಗ, ಮದದ ನೀರು.

85. ಆರ್ಪು = ಔದಾರ್ಯ. ಆಹವ = ಯುದ್ಧ.

86. ಎಱಗದ = ನಮಸ್ಕರಿಸದ. ಅದಟರ್ = ಪರಾಕ್ರಮಶಾಲಿಗಳು. ತಿಱದ = ಕೊಡದ. ಅಂಕಚೇಯರ್ = ? ಯುದ್ಧವೀರರು. ಬೆಳ್ಕುಱದ = ನಡುಗದ.

87. ಬೆಸಕೆಯ್ದತ್ತು = ಸೇವೆಮಾಡಿತು. ಚೋಳಿಕ = ಚೋಳರಾಜ.

88. ಪೀನ = ದಪ್ಪವಾದ. ಉದ್ಧ = ಶ್ರೇಷ್ಠವಾದ.

89. ಮೇರೆ = ಎಲ್ಲೆ. ಎಱೆವಟ್ಟು = ಸ್ಥಾನ, ನೆಲೆ.

104. ಆಘಾಟ = ಎಲ್ಲೆ. ಬಳ್ವಳನೆ = ಹೆಚ್ಚಾಗಿ. ಪ್ರಜ್ವಳಿಸಿದ = ಬೆಳಗಿದನು. ಬಿಂದುವಿಲ್ಲದ ಪ್ರಯೋಗ: ಕೃದಂತವೆಂದು ಭಾವಿಸಿದರೆ ಕ್ರಿಯೆಯನ್ನು ಅಧ್ಯಾಹಾರ ಮಾಡಬೇಕು.

105. ತಱಸಲವು = ನಿರ್ಣಯ, ದೃಢಸಂಕಲ್ಪ. ದೇಗುಲ = ದೇವಕುಲ, ದೇವಸ್ಥಾನ. ಇಂ = ಇನ್ನು. ಸಲೆ = ಚೆನ್ನಾಗಿ.

106. ನೆಗಟ್ಟ, ಇಲ್ಲಿಯೂ ಬಿಂದುವಿಲ್ಲದ ಪ್ರಯೋಗ; 104 ನ್ನು ನೋಡಿ.

107. ಜಳರಾಶಿ = ಸಮುದ್ರ. ಅಗ್ಗಳಂ = ಹೆಚ್ಚು.

108. ನಾಡಾಡಿ = ಸಾಮಾನ್ಯ. ಧವಳಾರ = ಧವಳಾಗಾರ, ಅರಮನೆ. ನೀಡ = ಗೂಡು, ಮನೆ,

110. ಎಕ್ಕಲಾವಣಂ = ಏಕಾಯತ್ತ. ಏಗಣಜು = ಎಂಥ ಕಣಜ? ಪೊಗಟುಗುಂ, ಪೊಗಟ್ಗುಂ ಎಂಬುದಕ್ಕೆ. ಸಮೀರಣ = ಗಾಳಿ.

114. ಮ್ಮೆಮೆ = ಮಹಿಮೆ. ಓಜೆ = ಕಾಂತಿ.

115. ಸಲುಗೆ, ಗೆಲುವ; ಹೊಸಗನ್ನಡ. ಎಕ್ಕೆ = ಉನ್ನತಿ. ಅಕ್ಕೆ = ಆಗಲಿ. ಎಮ, ಅಂಗೀಕಾರಾರ್ಥ.

116. ಕೃತಕ = ಮೋಸ.

117. ಮಾಣ್ = ಬಿಡು. ತೋಡು, ಪಾಟಿ = ಸಮಾನ. ಕುಜಾತೆ = ಸೀತೆ.

124. ಘಟೆ = ಸಮೂಹ. ಒಡ್ಡು = ಸೈನ್ಯ. ಚಕ್ರಿ = ಚಕ್ರವರ್ತಿ.

125. ಎರೆದವರ್ಗೆ = ಯಾಚಕರಿಗೆ.

126. ಅಸದಳಂ = ಶ್ರಮದಿಂದ. ವರ್ಗತ್ರಯ = ಧರ್ಮಾರ್ಥಕಾಮಗಳು. ಒಡರಿಸಿ = ಹೊಂದಿಸಿ.

127. ಬೆಳ್ಕುತ್ತುದು = ಹೆದರಿತು. ವೆಸ(ಬೆಸ) = ಕೆಲಸ. ಪೂಣ್ದತ್ತು = ಕೈಕೊಂಡಿತು. ಅಗಿದು = ಹೆದರಿ. ಮೆಲ್ಪು = ಮಾರ್ದವ. ಆವರ್ಜಿಸಿದ = ಒಳಕೊಂಡ. ಎಳಸು = ಅಪೇಕ್ಷಿಸು. ಎಸಕಂ = ತೇಜಸ್ಸು. ಕೆಯ್ಗಣ್ಮೆ = ಹೆಚ್ಚಳು.

128. ಮಾನಸ = ಮನುಷ್ಯ. ಪಸಯಿತ, ಪಸಾಯಿತ = ? ಉಡುಪನ್ನು ಕೊಡುವವನು.

129. ಅಣುಗು = ಪ್ರೀತಿಪಾತ್ರನಾದ. ತುಱಿಲಾಳ್ = ಯುದ್ಧವೀರ. ಮೇಳದಾಳ್ = ನರ್ಮಸಚಿವ.

130. ಬಲಿವ = ಔದ್ಧತ್ಯವನ್ನು ತೋರಿಸುವ. ಮಲೆವ = ಪ್ರತಿಭಟಿಸುವ. ಕೆಲೆವ = ಗರ್ಜಿಸುವ. ಅದಟಲೆವ = ಆಕ್ರಮಿಸುವ. ಪಳಂಚಲೆವ = ಹೊಡೆವ. ಎಲ್ವು = ಎಲುಬು. ಇಸುವೆಸ = ಸೇವಾವೃತ್ತಿ. ಬೆಸಸು = ಆಜ್ಞಾಪಿಸು.

131. ಏರ್ವಲ = ? ಆಯುಧಗಳ ಬಲ. ಬೇಳ್ವೊಲ = ಯಜ್ಞಭೂಮಿ.

132. ಕವಿ ಇತ್ಯಾದಿ, ಯುದ್ಧಭೇದ. ಎನ್ನಂ = ಎಂಥವನು? ಇಂದ್ರಾರಿಯನ್ನಂ = ಇಂದ್ರಜಿತುವಿನಂಥವನು.

133. ತೀರಿಕೆ, ಬಿಂಡಿವಾಳ, ಕರ್ಕಡೆ; ಆಯುಧಗಳು. ಕರವಾಳ = ಕತ್ತಿ. ಆಟಿಡುವ? ಒದಱು = ಗರ್ಜಿಸು. ತಱುಂಬು = ತಡೆ.

134. ಸೋಯಲ್ = ಓಡಿಸಲು. ಲೌಲ್ಯಭಾವ = ಪ್ರೇಮ.

135. ಟಿಪ್ಪರ = ? ಮೋಸ. ಮರುಳ್ದೊಡಂ = ಮೋಹಪಟ್ಟರೂ. ಮರಲ್ದೊಡಂ = ಹಿಮ್ಮೆಟ್ಟಿದರೂ.

136. ಶ್ಲೇಷಾಲಂಕಾರ. ಗಾತ್ರತ್ರ = ಕವಚ.

137. ವದಾನ್ಯತೆ = ಔದಾರ್ಯ.

138. ಮಸಗಿ = ರೇಗಿ. ತುತ್ತು = ಕಬಳಿಸು.

139. ಎಟಲ್ವ = ಜೋಲುವ. ತವುವ = ಕ್ಷೀಣವಾಗುವ. ಏಱು = ಗಾಯ.

145. ಅದ್ವಯ = ಅಸಮಾನವಾದ. ಅಕ್ಷರ = ವ್ಯತ್ಯಾಸವನ್ನು ಹೊಂದದವನು.

146. ಅಚಳ = ಈಶ್ವರ.

148–9. ತ್ರಿಪದಿಗಳು.

150. ಅಳಿಪಂ = ದುರಾಶೆಯನ್ನು.

151. ಅಟ್ಕಾಡಿದರ್ = ನಿಶ್ಶೇಷರಾದರು.

152. ಕಱುತ್ತು = ಕೋಪಿಸಿ. ಆರ್ಪು = ಔದಾರ್ಯ.

159. ಅಳುಕಿ, ಬಳುಕಿ; ಹೊಸಗನ್ನಡ. ಕಡಂಗಲ್ = ಉತ್ಸಾಹವನ್ನು ಹೊಂದಲು. ಎಡಱಿಲ್ = ವಿರೋಧಿಸಲು. ಒಟ್ಟಯ್ಸಲ್ = ಜಯಿಸಲು. ಪಳಂಚಲ್ = ಹೊಡೆಯಲು. ಪೊಳೆಪು = ತೇಜಸ್ಸು, ಪ್ರತಾಪ. ನೆಱೆವರೆ = ಸಮರ್ಥರಾಗುವರೆ?

160. ಅಳುಕಿಸಲ್, ಹೊಸಗನ್ನಡ. ಚಾಳಿಸು = ಅಲ್ಲಾಡಿಸು, ಅಡಗಿಸು. ಅಳಱಿಸು = ಹೆದರಿಸು.

161. ಕಡುಪು = ದರ್ಪ. ತಾತ್ಪರ್ಯ–ನಿನ್ನನ್ನು ಇದಿರಿಸಲು ಶಿವನಿಗೊಬ್ಬನಿಗೇ ಸಾಧ್ಯ.

162. ಬಿದಿ = ಬ್ರಹ್ಮ.

163. ಪೋಲ್ಕೆ = ಸಮನಾಗಲಿ. ಬೆಸೆಯದಿರ್ = ಗರ್ವಿಸಬೇಡ. ಎಂಬ = ಎನ್ನು ತ್ತೀಯೋ. ಸಿಂಧೂದ್ಭವಂ = ಭೀಷ್ಮ. ನಿಂದಾಸ್ತುತಿ.

166. ಉರ್ಚಿದೊಡೆ = ಎಳೆದರೆ.

169. ಅಲಗು = ಆಯುಧ. ಅಣಿಯರಂ = ಹೆಚ್ಚಾಗಿ.

170. ಆರ್ತು = ? ಸಂಪೂರ್ಣವಾಗಿ. ಅರ್ತಿ, ಅರ್ಥಿ, ಅಱ್ತಿ = ಆಶೆ. ನೆಟ್ಟೆರೆದ = ? ನೆಟ್ಟನೆ ಯಾಚಿಸಿದ.

171. ಪುದು = ಭಾಗಿಯಾಗುವುದು. ಪದುಳಂ = ಸುರಕ್ಷಿತವಾಗಿ.

172. ನೆಱವು = ಪೂರ್ತಿ.

173. ಬೆಳಪ = ಬೆಳಗುವ.

174. ಅಂಕದ = ಪ್ರಸಿದ್ಧವಾದ. ರಸಾ = ಭೂಮಿ. ಎಲ್ಲಿತ್ತು = ಎಲ್ಲಿಯದು.

175. ಮಡಗು = ಬಚ್ಚಿಡು. ಪಡಲ್ವಡಿಪ = ನಾಶಮಾಡುವ. ಕೆಯ್ದು = ಆಯುಧ. ದಾಂಗುಡಿವಿಡೆ = ಹಬ್ಬಲು. ಕ್ಷಣ = ಸಂತೋಷ.

177. ಉರ್ವರೆ = ಭೂಮಿ. ಪ್ರತಿಪನ್ನ ಮಂದರ = ಮಂದರಧೀರ.

179. ಒಱಲು = ಪ್ರೀತಿಸಿ. ಎಡರ್ = ಬಡತನ.

181. ಉಪಧಾ = ಗುಣಪರೀಕ್ಷೆ.

182. ಕೂಡಬಟ್ಟಿಗೆ? ತಿಟ್ಟಮಿಡು = ಚಿತ್ರಿಸು. ಅಡರ್ಪು = ಅವಲಂಬನ. ಏವಣ್ಣಿಪಂ = ಏನು ವರ್ಣಿಸುವನು?

183. ಕೞನಿ = ಗದ್ದೆ. ಎರೞ್ = ಎರಡು.

185. ದಹಳೆ = ಚೇದಿರಾಜ್ಯ. ತಿವುಳಂ = ತಿಗುಳ. ಗುಂದುಗೊಳ್ = ? ಮರೆಯಾಗು.

186. ಕ್ರಮಾಲಂಕಾರ. ಅಸದಳ = ಅಸಾಧ್ಯ. ಅಣ್ಮುಟ್ಟೆಂದುದು = ? ಕಷ್ಟವಾಯ್ತು. ಅದರುಂಬೀಡಿಗೆ? ಇಂದ್ರೇಜ್ಯ = ಬೃಹಸ್ಪತಿ.

187. ಉಂತು = ಸುಮ್ಮನೆ.

188. ಒರೆ = ಸಮಾನ.

189. ಕಱಂಗು = ಕಪ್ಪಾಗು. ಅಮೃತಧಾಮ = ಚಂದ್ರ. ಕರ = ಕಿರಣ. ಪೀಯೂಷ = ಅಮೃತ.

190. ವಲ್ಲರಿ = ಲತೆ. ಬಂಬಣಬಾಡು = ಹೆಚ್ಚಾಗಿ ಬಾಡು. ಪಾಡು = ಸ್ಥಿತಿ. ಬಿತ್ತರ = ವಿಸ್ತಾರ.

191. ಸರದೀನಿ = ? ಸರಸ್ಸಿನಲ್ಲಿ ಆಹಾರವನ್ನು ಪಡೆವುದು—ಪುಷ್ಪ, ಮೀನು ಇತ್ಯಾದಿ.

192. ಮಂಹಿ = ಜನರು.

193. ಎಳೆ = ಭೂಮಿ. ಬಿಣ್ಪು = ಸ್ಥಿರತೆ. ಗುಣ್ಪು = ಆಳ, ಗಾಂಭೀರ್ಯ. ತಿಣ್ಪು = ಭಾರ. ಪಾರಾವಾರ = ಸಮುದ್ರ. ಅಸುರ = ಹಿರಣ್ಯಾಕ್ಷ. ಅನಿಮಿಷನಗ = ಮೇರು, ಮಂದರ.

194. ವಾಕ್ಯವೇಷ್ಟನ.

195. ಇನಸೂನು = ಕರ್ಣ.

195ಅ. ಯಮಸುತ = ಧರ್ಮರಾಯ.

197. ಕೇಣ = ಮತ್ಸರ. ಎಗ್ಗು = ನಾಚಿಕೆ.

198. ಇರ್ಕೆ = ಇರಲಿ. ದೂಱಿಪಳ್ = ನಿಂದಿಸುವಳು.

199. ಅಱ್ತಿಗ = ಪ್ರೀತಿಯುಳ್ಳವನು. ಪಸುಗೆಗೋಜ = ? ದಾನಕ್ಕೆ ಆಚಾರ್ಯ.

223. ತಾರ = ತೊಳಗುವ.

224. ಅದಿರದೆ = ಹೆದರದೆ. ಚಪ್ಪರಿಪ = ಶಬ್ದಮಾಡುವ. ಕಪ್ಪರಿಪ? ಮರಲ್ = ಹಿಂದಿರುಗು. ಏಱು = ಗಾಯ. ಗೇಣ್ = ಕತ್ತಿ.

227. ಕುಳಿಶಾಗಾರ = ವಜ್ರಪಂಜರ.

228. ಮಱುವಕ್ಕ = ಮಾರ್ಬಲ.

229. ನಿಧಾನ = ನಿಧಿ.

229ಅ. ಹರಿ = ವೇಗ.

231. ಮಟ್ಟಮಿರು = ಮೌನವಾಗಿರು. ಚಾರ್ವಕ = ಚಾರ್ವಾಕ, ? ವಕ್ರಗತಿಯುಳ್ಳವನು.

232. ತಗೆಯಲ್ = ಸ್ಥಂಭೀಭೂತನಾಗಲು: ಸತ್ಯರ್ಥದಲ್ಲಿ ಅಲ್ ಬಂದಿದೆ. ತಿಪ್ಪಿಕೊಂಡು? ಸುಗತಂ = ಬೌದ್ಧ. ಲೋಕಾಯತ = ಚಾರ್ವಾಕ. ತೂಳ್ದು = ಓಡಿಸು.

233. ಗುಣವ್ರತ 3–(1) ದಿಗ್ವ್ರತಪರಿಮಾಣ, (2) ಉಪಭೋಗಪರಿಭೋಗಪರಿಮಾಣ, (3) ಅನರ್ಥದಂಡ.

235. ಹರಿಪುತ್ರ = ಅರ್ಜುನ, ಕರ್ಣ, ಮನ್ಮಥ.

236. ತಾರಕಾದ್ರಿ = ಕೈಲಾಸ. ದುಗುಂಧ = ದುಗ್ಧ, ಹೊಸರೂಪ.

237. ಪ್ರತತಿ = ಸಮೂಹ,

237ಅ. ಬನ್ನ = ಭಂಗ. ಸರಿಸ = ಸಮಾನ.

238. ಪೆಡಱು, ಪೆಳಱು = ಹೆದರು.

239. ಬಯ್ಕೆ = ನ್ಯಾಸ. ಎಂದಪೆ, ಹೊಸರೂಪ.

240. ಊಡಿಟ್ಟಂ = ಊರೆಕೊಟ್ಟನು.

246. ಅರುಣಜಳ = ರಕ್ತ. ಪಡೆವಳ = ಸೇನಾಪತಿ.

267. ಘನಾಘನ = ಮೇಘ.

269. ಚುನ್ನಂ = ನಿಂದೆ. ಮನ್ನೆಯರ = ಪ್ರಭುಗಳ. ಆಳ್ವೊತ್ತುವ = ? ಎತ್ತುವ.

270. ತುಹಿನದೀಧಿತಿ = ಚಂದ್ರ.

271. ಜತ್ತಕ = ದತ್ತಕ, ವೈಶಿಕಸೂತ್ರಕಾರ.

272. ಅಣಲೆ = 69ನ್ನು ನೋಡಿ. ಮೂವಣ್ಣಂಬರಿಸಿ = ನಾಚಿಕೆಗೆಡಿಸಿ.

273. ಕುತ್ಕೀಳ = ಪರ್ವತ. ಕೀಲ್ = ಕಡಿವಾಳ.

278. ಅಸುಂಗೊಳೆ = ಬೆರಗಾಗಲು.

279. ಬಳಂಬೆ = ರಾಶಿ. ಕೋಟ್ಮಿದುಳ್ = ಕೋಡುವ + ಮಿದುಳ್. ? ಅಗುಂತಿ = ರಾಶಿ. ಕರೋಟಿ = ಕಪಾಲ.

281. ತೊಂಡು = ? ಪರಾಕ್ರಮ.

301. ಅದಟು = ಪರಾಕ್ರಮ. ಅದಟಲೆದು = ಅಡಗಿಸಿ.

304. ಜಗದಳಂ = ? ನಾಶಕ.

307. ಪುರುಷಕಾರ = ಶೌರ್ಯ.

318. ತೊಡರ್ಬದರ್ಾರಾತಿ?

319. ರಾಜನ್ವತಿ = ಒಳ್ಳೆಯ ರಾಜನನ್ನುಳ್ಳುದು.

320. ಆಣೆ = ಆಜ್ಞೆ. ಗೋಸಣೆ = ಘೋಷಣೆ, ಸ್ತುತಿ. ಮುನ್ನೀರ್ = ಸಮುದ್ರ: ನದಿಯ ನೀರು, ಮಳೆಯ ನೀರು, ಒರತೆಯ ನೀರು ಈ ಮೂರನ್ನೂ ಉಳ್ಳುದು.

321. ಲಪನ = ಮುಖ.

324. ತಿಱಿವೇೞ್ಕುಂ = ತೆರಬೇಕು.

325. ಶಫರ = ಮೀನು.

326. ಶ್ಲೇಷಾಲಂಕಾರ. ವಂಶ = ಪೀಳಿಗೆ, ಬಿದಿರು.

327. ವಂಶ, ಭೂಭೃತ್, ಕಂಟಕ—ಶ್ಲೇಷೆ. ಕಂಟಕ = ಮುಳ್ಳು, ದುಷ್ಟರು.

329. ಅಸುರ = ಹಿರಣ್ಯಾಕ್ಷ. ಅಱಿಯಾದ = ರೂಪುಗೆಟ್ಟ. ಸೇದೆ = ಶ್ರಮ.

330. ಭುಜಂಗ = ವಿಟ.

331. ಉದಗ್ರರು = ವೀರರು. ತೊೞ್ತುವೆಸ = ದಾಸ್ಯ. ಅಗುರ್ವಿನ = ಭಯಂಕರನಾದ.

332. ವಿಜೃಂಭಣ = ಹೆಚ್ಚಿಕೆ.

333. ರಕ್ಕೆ = ರಕ್ಷೆ. ನಿಟ್ಟೆಯ್ದೆತನಂ = ದೀರ್ಘ ಸುಮಂಗಲೀತ್ವ.

334. ಆಲವಾಲ = ಪಾತಿ.

335. ಶ್ಲೇಷೆ. ವಿಬುಧ = ದೇವತೆಗಳು, ವಿದ್ವಾಂಸರು. ಭೋಗಿ = ಸರ್ಪ, ಭೋಗವುಳ್ಳವರು.

336. ಸೋಗೆ = ನವಿಲು. ಅಟ್ಕಿಸು = ಜೀರ್ಣಿಸು. ನಲ್ಲವರ್ = ನಲ್ಲರು, ಪ್ರಿಯರು.

337. ಜನ್ನವಿರ್ಪ = ಯಜ್ಞಮಾಡುವ.

339. ತ್ರಯೀ = ವೇದತ್ರಯ, ಋುಗ್ಯಜುಸ್ಸಾಮಗಳು. ತ್ರಿಪಥಗಾ = ಗಂಗೆ.

340. ಶ್ಲೇಷೆ. ಗೋತ್ರ = ಪರ್ವತ, ವಂಶ. ಚಕ್ರ = ಚಕ್ರಾಯುಧ, ಗುಂಪು. ಸತ್ಯಭಾಮಾ = ಸತ್ಯಭಾಮೆ, ಸತ್ಯ ಕಾಂತಿ ಲಕ್ಷ್ಮಿ.

341. ಎಕ್ಕಲಾವಣ, 110ನ್ನು ನೋಡಿ.

342. ನಿಲಿಂಪ = ಸುರ.

343. ಪುತ್ರಿಕೆ = ಪ್ರತಿಮೆ. ದೇಗುಲ, ದೇವಕುಲ = ದೇವಸ್ಥಾನ.

349. ಭುಂಭುಂಕ. 57, 167 ನ್ನು ನೋಡಿ.

351. ನಿಸಿದಿಗೆ = ಜೈನರಲ್ಲಿ ಸತ್ತವರ ಜ್ಞಾಪಕಾರ್ಥವಾಗಿ ನಡುವ ಕಲ್ಲು. ಹಿಮರೋಚಿ = ಚಂದ್ರ. ಸವ್ಯಸಾಚಿ = ಅರ್ಜುನ.

356. ಕ್ವಥಿತ = ಕುದಿವ. ಜಾಂಗಳ = ಮಾಂಸ. ಮಾಳ = ದಿಣ್ಣೆ, ಕಾಡು. ಕುಧರ = ಬೆಟ್ಟ. ಬಟ್ದನೇ = ಬಾಳಿದನೇ.

357. ತರವಾರಿ = ಕತ್ತಿ. ಒಱಲ್ದು = ಪ್ರೀತಿಸಿ.

358. ಪಾರ್ದು = ನಿರೀಕ್ಷಿಸಿ. ಕಿವಿವರ್ಚುವ = ಕಿವಿಯಲ್ಲಿ ಮೆಲ್ಲಗೆ ಹೇಳುವ.

360. ವ್ಯತಿಕರ = ತಡೆ, ಸೇರುವೆ. ಸಾಪತ್ನಿಕ = ಶತ್ರು. ಕೆಮ್ಮನೆ = ಸುಮ್ಮನೆ.

361. ಸ್ಥಾಸಕ = ಅನುಲೇಪನ.

363. ಝಳಪ್ಪ = ? ಶ್ರೇಷ್ಠ. ಕೌಕ್ಷೇಯಕ = ಕತ್ತಿ. ನಾಯಕದೊಳ್ = ನಾಯಕರತ್ನದೊಡನೆ.

364. ಮುಂತ್ತು, ಶ್ಲೇಷೆ. ಕಾಯ್ದು = ಕೋಪಿಸಿ. ಎತ್ತಲೊಡಂ = ಯುದ್ಧಕ್ಕೆ ಹೊರಟರೆ.

365. ಧರ್ಮ = ಧರ್ಮ, ಧನುಸ್ಸು. ಗುಣ = ಗುಣ, ಬಿಲ್ಲಿನ ಹಗ್ಗ. ದರ್ಪಕ = ಮನ್ಮಥ. ದಶಧರ್ಮ = ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ. ಷಟ್ತ್ರಿಂಶದ್ಗುಣ = ದ್ವಾದಶ ತಪಸ್ಸು, ದಶಧರ್ಮ, ಷಡಾವಶ್ಯಕ, ಪಂಚಾಚಾರ, ಗುಪ್ತಿತ್ರಯ.

368. ಈಂಟಲ್ = ಕುಡಿಯಲು.

369. ಇರಲಿ, ಹೊಸರೂಪ. ಕೊಪಣ = ಜೈನರಲ್ಲಿ ಪ್ರಸಿದ್ಧವಾದ ಕೊಪ್ಪಳ ಎಂಬ ಊರು.

371. ಕ್ರಮಾಲಂಕಾರ.

372. ನನ್ನಿ = ಸತ್ಯ. ಏಸು = ಬಾಣಪ್ರಯೋಗ.

375. ಇರುಮುಟ್ಟಂ = ಮೌನವಾಗಿರು.

376. ಅಪಘನ = ಮೇಘವಿಲ್ಲದುದು. ರೋದಸ್ಸು = ಆಕಾಶ. ಕುಱುಪಿನ = ಪ್ರಸಿದ್ಧವಾದ.

379. ಪುದುವೆ, 171 ನ್ನು ನೋಡಿ.

383. ಪೇವೈಸು = ಅಸಹ್ಯಪಡು.

385. ಎಂಗೆ = ಎನ್ನಲಿ.

388. ಬೆಚ್ಚನಿಪ = ಬೆಚ್ಚಗೆಮಾಡುವ.

390. ಶ್ಲೇಷೆ. ಕುವಳಯ = ಭೂಮಂಡಲ, ನೆಯ್ದಿಲು. ಚಕ್ರ = ಗುಂಪು, ಚಕ್ರವಾಕ. ಸತ್ಪಥ = ಸನ್ಮಾರ್ಗ, ನಕ್ಷತ್ರಗಳ ಮಾರ್ಗ ಎಂದರೆ ಆಕಾಶ. ಪದ್ಮ = ಕಮಲ; ಪದ್ಮಾ = ಲಕ್ಷ್ಮಿ.

391. ಎಯ್ದನೇ = ಸಾಲನೇ. ದಾಮ = ಚೋಳರಾಜನ ಕಡೆಯ ಅಧಿಕಾರಿ.

392. ಕಂಕಣ = ನೀರಿನ ಕಣ. ಮುಂಬುಗಿಸುಗು, ಹೊಸರೂಪ. ಪರಿಯಿಡು = ದಾಳಿ ಯಿಡು.

393. ತಡವು = ಸವರಿಕೊಳ್ಳು.

394. ಆರ್ತಂ = ಪೂರ್ಣನಾದನು.

397. ಪಾಠೀನ = ಮೀನು. ಪ್ರವಾಳ = ಹವಳ.

399. ಕೋಡಿಡು = ಮೀರಿಸು.

400. ಬಾಡ = ಗ್ರಾಮ. ಏಡಿಪುದು = ತಿರಸ್ಕರಿಸುವುದು.

401. ದಾಂಗುಡಿ, ದಾಂಟು + ಕುಡಿ. ಶ.ಮು.ದ. ಸೂತ್ರ 210. ಮಡಲಾಗಿ = ಉದ್ದವಾಗಿ ಬೆಳೆದು.

402. ಅಂತ್ಯದಲ್ಲಿ ಕೀರ್ತಿ ಎಂದು ಹ್ರಸ್ವದಲ್ಲಿ ನಿಲ್ಲುತ್ತದೆ.

405. ಪುಡವಿ = ಪೊಡವಿ, ಭೂಮಿ. ಕೋಡು = ದಾನ.

406. ಕಂದಖನಿತ್ರಂ = ಗೆಡ್ಡೆಗೆ ಗುದ್ದಲಿ.

408. ವಾರುವ = ಕುದುರೆ. ಹಾರುವ, ಹೊಸರೂಪ. ಬವರ = ಯುದ್ಧ. ಸವಂಗಂ? ಕಟಕಿಗ = ನೀಚ. ಅಳಿಱು = ಕೆಸರು.

409. ಅಕ್ಕರ. ತಿಗುಳರ್ = ಚೋಳರು. ರಾಯ = ಚಾವುಂಡರಾಯ.

411. ಸನ್ಯಸನವಿಧಿ = ಅನಶನವ್ರತ. ಅತ್ತಳಗಂ = ಅಧಿಕ.

412. ತನುತ್ರ = ಕವಚ. ಕಿಱು = ಮುಂಚ್ಚು.

418. ತೆರ್ಪುತ್ತು = ? ಅವಕಾಶವನ್ನು ಹೊಂದಿ.

419. ದಾನ = ದಾನ, ಮದದ ನೀರು.

421. ವಂಶ = ಕುಲ, ಬಿದಿರಿನ ಮೂಳೆ. ಭದ್ರ = ಮಂಗಳ, ಆನೆಯಲ್ಲಿ ಭೇದ. ಧ್ವಜಿನಿ = ಸೇನೆ.

423. ಕೇವಳಮೆ = ಸಾಧಾರಣವೆ.

424. ವೆರಗು = ? ಅವಲಂಬನ. ರಕ್ಕೆವಣಿ = ರಕ್ಷಾಮಣಿ. ತಾಳ್ದು = ಹೊಂದು.

425. ಈವ + ಇಱಿವ.

426. ಲೋಗರ = ಜನರ. ಇರಲಿ, ಹೊಸರೂಪ. 369 ನ್ನು ನೋಡಿ. ಕೋಳ್ = ಕೊಳ್ಳೆ. ದಲ್ = ನಿಶ್ಚಯ.

427. ಚಾಣಕ್ಯ = ಚಂದ್ರಗುಪ್ತನ ಮಂತ್ರಿ. ಮೊನೆ = ಯುದ್ಧ. ಸೌಪರ್ಣ = ಗರುಡ. ಕಾರ್ಯ = ಮಂತ್ರಿಕಾರ್ಯ.

428. ಶ್ಲೇಷೆ. ಪದ್ಮಾಕರ = ಸರಸ್ಸು, ಲಕ್ಷ್ಮಿಯ ಕೈ.

429. ವಿದಗ್ಧತೆ = ವೈದುಷ್ಯ.

430. ಆದಂ = ಹೆಚ್ಚಾಗಿ.

432. ಕಲ್ಲುವೆಸ = ಕಲ್ಲು ಕೆಲಸ. ಕೌಂಗು = ಅಡಕೆ. ಮಿಡುಕು = ಚಲಿಸು.

435. ದಶಾನನತೆ = ರಾವಣತ್ವ, ಹತ್ತು ಮುಖಗಳನ್ನು ಹೊಂದಿರುವಿಕೆ.

436. ಆಲಿಕಲ್ = ವರ್ಷೋಪಲ. ತವುವಿನೆಗಂ = ನಿಶ್ಶೇಷವಾಗಲು. ಪಿಟ್ಟು = ಹುಡಿ.

437. ರುಚಿ = ಆಶೆ, ಕಾಂತಿ.

439. ಆತಪವಾರಣ = ಕೊಡೆ.

440. ವಾರುಣಿ = ಪಶ್ಚಿಮದಿಕ್ಕು, ಸುರೆ. ಸತ್ಪದ = ಆಕಾಶ, ಒಳ್ಳೆಯ ಸ್ಥಾನ. ದೋಷಾಕರ = ಚಂದ್ರ, ದೋಷಿ. ವೃತ್ತ = ನಡತೆ, ಗುಂಡಗಿರುವುದು.

441. ಕರಂಡಕ = ಬರಣಿ. ಪಡಿ = ಸಮಾನ.

442. ಗತಿಗಂ = ಸದ್ಗತಿಗೂ. ಭಾಜನ = ಪಾತ್ರ.

443. ಕರ್ಚುರ್ = ತೊಳೆ.

444. ಕಾಶ್ಮೀರ = ಕುಂಕುಮಂದ ಹೂ.

445. ದೊರೆಗಳ್ = ಸಮಾನರು. ರಾಯರ್ = ಅರಸರು.

446. ಅಮರ್ದುರ್ = ಅಮೃತ. ವಿಳಂಬಂ = ಅವಲಂಬನ. ಅಳುಂಬಂ = ಅಧಿಕ.

447. ನೋೞ್ಕೆ = ನೋಡಲಿ. ಸೆಣಸು = ಪ್ರತಿಭಟಿಸು. ಜವ = ಯಮ.

448. ಪುರುಷವ್ರತ = ಪಾತಿವ್ರತ್ಯ.

450. ಬೆಸನ = ಆಸಕ್ತಿ, ಚಿಂತೆ. ನೋಂಪಿ = ವ್ರತ.

452. ಅಳ್ಕುಱದೆ = ಭಯವನ್ನು ಹೊಂದದೆ.

453. ಬಿದಿರ್ದುರ್ = ಹರಡಿ. ಬಾೞ್ವಲೆಗೊಂಡು = ಜೀವದೊಂದಿಗೆ ಹಿಡಿದು. ತೊತ್ತೞಿ ದುೞಿದಂ = ಪಿಂಡವಾಗುವಂತೆ ತುಳಿದು.

454. ಶಾಂತಲದೇವಿ, 402 ನ್ನು ನೋಡಿ.

455. ಓತು = ಪ್ರೀತಿಸಿ. ಉದ್ದಾನಿ = ಆಧಿಕ್ಯ.

456. ವಾಕ್ = ಕತ್ರ್ಪ: ಸಂಸ್ಕೃತಪ್ರಕೃತಿ.

457. ವೇದಂಡ = ಆನೆ. ದಂಡಧರ = ಯಮ.

458. ಲತಾಂತ = ಪುಷ್ಪ. ತೂಳ್ದು = ಬೆನ್ನಟ್ಟಿ. ದೂಸಱಿಂ = ಕಾರಣದಿಂದ. ಕತ್ತಳಂ = ಕವಚ (ತೆಲುಗು).

460. ಅಪ್ಪುಕೆಯ್ = ಸ್ವೀಕರಿಸು.

461. ಮಿಂತ್ತು = ಮೃತ್ಯು. ಕೊಯ್ವಿನಿಂ = ? ಹತಿಯಿಂದ. ಕಡೆಗಣ್ಚು = ಹಿಂಜರಿ.

462. ತೆತ್ತಿಸಂ = ಕೆತ್ತಿಸಂ.

463. ಪಂಚಪಾದವೃತ್ತ. ಅಭೀಳ = ಭಯಂಕರವಾದ. ಗಂಡಪೆಂಡಾರ = ವೀರಶ್ರೇಷ್ಠ.

465. ಎಡಗಲಿಸಿ = ? ದಾಟಿ.

466. ಉದೀರ್ಣ = ಎದ್ದ. ಸಂವರ್ತಗರ್ತ = ಪ್ರಳಯಕಾಲದ ಹಳ್ಳ.

467. ರಾಜ = ದೊರೆ, ಚಂದ್ರ.

470. ಅದಿಯಮ, ನೃಸಿಂಹವರ್ಮ: ಇವರು ಚೋಳರಾಜನ ದಂಡನಾಯಕರು.

ಱೋಡಿಸಿ = ಪರಿಹಾಸಮಾಡಿ. ಚೆಂಗಿರಿ, ಒಬ್ಬ ಅರಸು.

471. ಸ್ಯಾದ್ವಾದ = ಜೈನರಲ್ಲಿ ಸಪ್ತಭಂಗಿ ಎಂಬ ಸಿದ್ಧಾಂತ.

472. ಮಹೀಭೃತ್ = ರಾಜ, ಪರ್ವತ.

473. ಶೈಲೂಷ = ನಟ.

477. ಅಡರ್ಪು = ಆಧಾರ. ಮಯ್ಮೆ = ಮಹಿಮೆ.

478. ಕಡಿತಲೆ = ಕತ್ತಿ. ಪಲಗೆಯುಮ = ಗುರಾಣಿಯನ್ನೂ; ದ್ವಿತೀಯೆಯ ಬಿಂದು ವಿಲ್ಲ.

479. ಬಲ್ಕಣಿ = ? ವೀರ. ಆರ್ = ಕೂಗು, ಗರ್ಜಿಸು.

480. ರಸೆ = ಭೂಮಿ, ಪಾತಾಳ.

481. ಮಾನಸಿಕೆ = ಮನುಷ್ಯತ್ವ, ದೊಡ್ಡಸ್ತಿಕೆ. ಪರಿವಾದ = ನಿಂದೆ. ವಿಶ್ವಂಭರೆ = ಭೂಮಿ.

482. ದೋರ್ವಾಸ = ತೋಳಿನಲ್ಲಿ ವಾಸ.

483. ಅಳವಟಿದ = ಬಲವಳಿದ. ಲಾಲಾ = ಜೊಲ್ಲು.

484. ಬೆಸಕೆಯ್ದು = ಸೇವೆಮಾಡಿ. ಎಂದುದನೆಂದು = ಆಜ್ಞೆಯನ್ನು ವಹಿಸಿ. ದೇವ ರಾಜ್ಯಸಲ್ಲೀಲೆಯೊಳೆಯ್ದಿಪಂ = ಸ್ವರ್ಗಕ್ಕೆ ಕಳುಹುವನು, ಕೊಲ್ಲುವನು.

485. ಆರ್ತತೆ = ದುಃಖ. ರಾಗ = ಸಂತೋಷ. ಸನಾಥತಾ = ಪೋಷಕನನ್ನು ಪಡೆವಿಕೆ.

486. ಮಣಿಯುದ = ಬಾಗದ. ಅಣಿಯುರಂ = ಹೆಚ್ಚಾಗಿ. ಉಡೆವಣಿ = ಕಟಿಸೂತ್ರದ ಆಭರಣ.

489. ಸೋಮವಲ್ಲಭಂ = ಸೋಮರಾಜನೆಂಬ ಚಂದ್ರ.

490. ಅವ್ಯಪಗಮ = ಅನಿವಾರಣ.

491. ಲಾಸ್ಯ = ನರ್ತನ.

493. ದಳ್ಳುರಿ = ಚಂಡಜ್ವಾಲೆ. ಮಟ್ಗು = ಶಾಂತವಾಗು. ಶುದ್ಧಾಂತ = ಅಂತಃಪುರ. ಕುಂತಳ, ಕಾಂಚಿ, ಧಾರೆ: ರಾಜ್ಯಗಳು.

497. ಶ್ಲೇಷೆ. ವಿಬುಧ = ಪಂಡಿತ, ಸುರ. ಭೋಗಿ = ಸುಖಿ, ಸರ್ಪ. ಧನದ = ದಾತೃ, ಕುಬೇರ.

498. ಒಡವೆ = ವಸ್ತು.

499. ಕ್ಷಮೆ = ಭೂಮಿ, ಸಹನ. ನಗರಂಗಳ್ = ವರ್ತಕರು.

500. ಶರಭರಿಪು = ಗಂಡಭೇರುಂಡ.

501. ಕಳ = ಯುದ್ಧರಂಗ. ಎಕ್ಕತುಳ = ? ದ್ವಂದ್ವಯುದ್ಧ. ಎಳೆ = ಭೂಮಿ. ಅವ್ವಳಿಸು = ಆತುರಿಸು.

502. ಮಾದೇವ = ಮಹಾದೇವ.

503. ನಿವ್ಮದದ = ? ದೋಷರಹಿತವಾದ.

504. ಉತ್ತತ = ವ್ಯಾಪ್ತವಾದ.

505. ಅಣೆ = ಹೊಡೆ. ಅದಿರ್ಪು = ನಡುಗಿಸು. ನೊಣೆ = ಕಬಳಿಸು. ಅಂಡಲೆ = ಪೀಡಿಸು.

506. ತಿಣ್ಪು = ಸ್ಥಿರತೆ.

507. ಖಚರನಾಯಕ = ಜೀಮೂತವಾಹನ. ಆರ್ಪು = ? ರಕ್ಷಣೆ. ಗಂಡು = ಪರಾಕ್ರಮ.

509. ಆರ್ತೀವ = ಪೂರ್ಣವಾಗಿ ಕೊಡುವ. ಎಸಕಂ = ಕಾಂತಿ.

510. ಎನ್ನ = ಎನ್ನು.

511. ತಾತ್ಪರ್ಯ = ಆಸಕ್ತಿ. ಗೋತ್ರ = ವಂಶ.

512. ಕಲ್ಗೆಗೊಂಡ = ತೋಡಲ್ಪಟ್ಟ (ತಮಿಳು). ವೆಟ್ಟು = ಬೆಟ್ಟ. ವಟ್ಟೆ, ಬಟ್ಟೆ = ಮಾರ್ಗ.

513. ಆಟಂದು = ಇರಿದು: ಧಾತು ಆಟರ್. ಎಂದೋಲೆಗೆ = ಮಾಡಿದ ಆಜ್ಞೆಗೆ. ಬೆಸ = ಸೇವೆ.

514. ಅತ್ತಳಗಂ = ಅಧಿಕ.

515. ವಾಕ್ಯವೇಷ್ಟನ. ಕಃಕೇನಾರ್ಥೀ = ಆರಿಗೇನು ಬೇಕು?

516. ಅದಟು = ಪರಾಕ್ರಮ. ಆರ್ಪು = ಶಕ್ತಿ. ಅಣ್ಮು = ಸಾಹಸ. ವಂದಿ = ಸ್ತುತಿ ಪಾಠಕ. ಚಾಗ = ತ್ಯಾಗ. ಕಃಕೇನಾರ್ಥೀ, 515 ನ್ನು ನೋಡಿ.

517. ಅಗುಂದಲೆ = ಅಧಿಕ.

518. ಸತ್ = ನಕ್ಷತ್ರ. ಕುಭೃತ್ = ರಾಜ.

519. ಜನತಾ = ಜನಸಮೂಹ.

520. ಎಲ್ವು = ಎಲುಬು. ಒಱೆದಂ = ಸ್ರವಿಸಿ.

521. ಕೂರ್ಪು = ತೀಕ್ಷ್ಣತೆ, ಪ್ರೀತಿ. ಆದಂ = ಹೆಚ್ಚಾಗಿ.

522. ಅಂತಂ = ಅಂತವನ್ನು, ಪ್ರಕೃತಿ ಅಂತು.

523. ಪೊಡರದೆ = ಚಲಿಸದೆ. ಬೆಸಕೆಯ್ದುದು = ವಶವಾಯ್ತು. ಕೃಪಾಣ = ಕತ್ತಿ.

524. ಅವಲೇಪ = ಗರ್ವ. ವಿಸ್ಫಾಳನಂ = ನಾಶಮಾಡುಂವವನು.

525. ಭೂಮಿಯೆಂಬ ಸ್ತ್ರೀಗೆ ಕೊಟ್ಟಿರುವ ವಿಶೇಷಣಗಳಲ್ಲಿ ಅಂಗ ಮೊದಲಾದ ದೇಶಗಳೂ ಸರಸ್ವತಿ ಮೊದಲಾದ ನದಿಗಳೂ ಉಕ್ತವಾಗಿವೆ.

526. ತೊದಳ್ = ಸುಳ್ಳು. ಬೞ್ದೊಡೆ = ಜೀವಿಸಿದರೆ. ಗಡ + ಇವು + ಎಱಂ.

527. ಪರಮಾರ್ಥಂ = ಸತ್ಯವಾಗಿ. ವಿದ್ವದರ್ಥಂ = ವಿದ್ವಾಂಸರಿಗೋಸ್ಕರ. ತವಿಸು = ವ್ಯಯಮಾಡು. ಅರ್ಥಿಸಾರ್ಥಂ = ಯಾಚಕರಿಗೆ ಉಪಕಾರಿ. ಮನೋದ್ಯಂ? ವಿಪಶ್ಚಿತ್ = ವಿದ್ವಾಂಸ.

528. ಕ್ಷೋಣಿಭೃತ್ = ರಾಜ. ಕಂದುಕ = ಚೆಂಡು. ಅರುಣಾಂಭಃ = ರಕ್ತ. ಓಲಾಡು = ಮುಳುಗು, ಸ್ನಾನಮಾಡು.

529. ಉನ್ನತಿಯಿಂ ಯಶೋಭಾಜನನಪ್ಪ.

530. ಕರುವಿಡು = ರೂಪವನ್ನು ತಿದ್ದು. ಅತ್ತಳಗಂ = ಅಸಾಧ್ಯ. ಅಗ್ಗಳಿಕೆಯ = ಪೆರ್ಮೆವಡೆದ. ದೋರಸಮುದ್ರ = ಹಳೆಯ ಬೀಡು.

531. ಶ್ಲೇಷೆ. ಗೋತ್ರ = ವಂಶ, ಪರ್ವತ. ಕರಿಹರಿ = ಕರಿಗೆ ಹರಿ. ಕರಿ ಹರಿ ಇವುಗಳ. ಅಚಳತಾ = ನಿಶ್ಚಲತೆ, ಪರ್ವತತ್ವ.

534. ಧರಾಧರ = ಪರ್ವತ. ಎರ್ಬಟ್ಟು = ಓಡಿಸು. ಸೆಡೆ = ಹೆದರು. ಆಬಂದ-ನೀಬಂದಂ = ಅದೋಬಂದನು ಇದೋ ಬಂದನು. ಸರ್ವಂ ವಿಷ್ಣುಮಯಂ ಜಗತ್: ವಾಕ್ಯವೇಷ್ಟನ.

536. ಕಂತುವ = ಮನ್ಮಥನ.

537. ಅಱಿಯಟ್ಟಿ = ಓಡಿಸಿ. ತಱಿಸಂದು = ದೃಢಚಿತ್ತದಿಂದ. ವೀರ = ಶೌರ್ಯ. ಎಱಿವಟ್ಟು = ನೆಲೆ.

538. ಲೊಕ್ಕಿಗುಂಡಿ, ಒಂದು ಗ್ರಾಮ. ಇಟ್ಟುಕೊಳಿಗೊಂಡ = ಸ್ವಾಧೀನಮಾಡಿಕೊಂಡ.

540. ನಲ್ಲಂ = ಸ್ವಾಮಿ. ಅನ್ನಂ = ಅಂಥವನು.

541. ವಿಷ್ಣುವರ್ಧನನ ಆನೆಯನ್ನು ಗರುಡನೆಂದು ರೂಪಿಸಿದೆ. ಘ್ರಾಣಹಸ್ತಂ = ಮೂಗೆಂಬ ಸೊಂಡಿಲುಳ್ಳ. ಪಕ್ಷರಕ್ಷಾ = ಪಕ್ಕರಕ್ಕೆ. ಓವಗಿಸಿ = ? ಮೇಲೆ ಬಿದ್ದು. ಪೃತನಾ = ಸೈನ್ಯ. ತುಚ್ಛಾಜಿ = ಅಲ್ಪವಾದ ಯುದ್ಧ.

542. ಆರ್ಪು = ಶೌರ್ಯ. ಕೂರ್ಪು = ಪ್ರೀತಿ. ಚಕ್ರಂ = ಚಕ್ರಾಯುಧ.

543. ತವದ = ಕಡಮೆಯಾಗದ. ಏಟ್ಟಿವಾದಿವ = ಶುಕ್ಲಪಕ್ಷದ ಪಾಡ್ಯ. ಎಳದಿಂಗಳ್ = ಬಾಲಚಂದ್ರ. ವಿಭೂತಿ = ಐಶ್ವರ್ಯ, ಮಹಿಮೆ.

544. ಜಯ = ಅರ್ಜುನ. ಅಪರಾಜಿತ = ವಿಷ್ಣು. ಅಳುರ್ಕೆ = ವ್ಯಾಪ್ತಿ.

545. ವಿಷ್ಣುದಂಡನಾಥನನ್ನು ಕಲ್ಪವೃಕ್ಷನೆಂದು ರೂಪಿಸಿದೆ. ಪಸರಂಬೆತ್ತು = ವಿಸ್ತಾರವನ್ನು ಹೊಂದಿ. ಸರ್ವರ್ತುಕ = ಎಲ್ಲಾ ಋತುಗಳ. ಚೇತೋರಥ = ಮನೋರಥ. ಕಮಳಾ = ಲಕ್ಷ್ಮಿ. ಆವಸಥಂ = ಸ್ಥಾನ. ದಿವಿಜಕುಜಾತಂ = ಕಲ್ಪವೃಕ್ಷ.

546. ಅಕ್ಷುಣ್ಣ = ಕಡಮೆಯಾಗದ. ವಿಶ್ವನೇತ್ರ = ಸೂರ್ಯ. ಕ್ರಮ = ಪಾದ.

547. ಅಭಿರಾಮ = ಸುಂದರ. ಸಪ್ತಾಂಗ = ಸ್ವಾಮ್ಯಮಾತ್ಯಸುಹೃತ್ಕೋಶರಾಷ್ಟ್ರ ದುರ್ಗಬಲಗಳು.

548. ಅಪಗಾ = ನದಿ. ಸ್ಫಾರರುಕ್ = ಹರಡಿದ ಕಾಂತಿ. ತಬ್ಬಿಕೈಸಿ = ಆಲಿಂಗಿಸಿ, ಹೊಂದಿ. ವಿಯತ್ = ಆಕಾಶ.

549. ದಿಗಧೀಶರ್ = ದಿಕ್ಪಾಲಕರು. ಅಗಿದು = ಹೆದರಿ. ಆಟಂಗೊಂಡು = ಸ್ಥಾನ ಭ್ರಷ್ಟರಾಗಿ. ಗೋಳುಂಡೆಗೊಳುತ್ತಿರ್ಪನ್ನಂ = ಹಲುಬುತ್ತಿರಲು. ವಿಕ್ರಾಂತ ಗುಣ = ಪರಾಕ್ರಮ. ಕೆಯ್ಗಣ್ಮೆ = ಮಿಗಿಲುಗಲು. ಅದಟಂ = ಶೌರ್ಯವನ್ನು.

550. ಶಿಖಾಕಳಾಪಂ = ಜ್ವಾಲೆಗಳ ಸಮೂಹ. ಆಪರಿದುವೆ = ಅದೋ ಹರಡಿಯೇ ಹರಡಿದುವು. ಪೊದಟ್ಟುದು = ವ್ಯಾಪಿಸಿತು. ಅಗುರ್ವು = ಭೀತಿ. ಪದ = ಕಿರಣ, ಸ್ಥಾನ. ಗೋತ್ರಾಚಲ = ಕುಲಪರ್ವತ, ಕುಲವೆಂಬ ಪರ್ವತ. ಆಭೋಗ = ವಿಸ್ತಾರ.

553. ಬ್ರಾಹ್ಮ್ಯ = ಬ್ರಾಹ್ಮಣತ್ವ. ಪರಿಬೃಢ = ಶ್ರೇಷ್ಠ. ಅನರ್ಘ = ಬೆಲೆಯಿಲ್ಲದ.

554. ನೆಗಟ್ತೆ = ಪ್ರಸಿದ್ಧಿ. ಗಾಡಿ = ಸೌಂದರ್ಯ. ರೂಢಿ = ಕೀರ್ತಿ. ಅಗುಂದಲೆ = ಅಧಿಕ.

556–564. ಮುಕ್ತಪದಗ್ರಾಸ.

556. ಜಯಜಾಯಾಶರಣಂ = ಜಯವೆಂಬ ಹೆಂಡತಿಗೆ ರಕ್ಷಕನು. ನಿರ್ದಾರಿತ = ಭೇದಿಸಲ್ಪಟ್ಟ. ಲೋಹಿತಪಯಃ = ರಕ್ತವೆಂಬ ನೀರಿನಲ್ಲಿ. ಶಾತ = ಕೂರು ಮಾಡಲ್ಪಟ್ಟ. ಧಾರಾ = ಅಲಗು. ಯುವತ್ = ಕೂಡುವ,

557. ಕ್ರಮನಮತ್ = ಪಾದಕ್ಕೆ ನಮಿಸುವ. ವೃತ್ತ = ನಡತೆ. ಗ್ರಾಮಣಿ = ಶ್ರೇಷ್ಠ. ಜ್ಯಾರಾವ = ಹೆದೆಯ ಟಂಕಾರ. ಅಜಿ = ಯುದ್ಧ.

558. ನೂತ = ಸ್ತುತ. ಮಂಡಲಾಗ್ರ = ಕತ್ತಿ. ವಿಲೂನ = ಕತ್ತರಿಸಲ್ಪಟ್ಟ. ಶಿಖಾ ಶೇಖರೀಭವತ್ = ಕೂದಲಿಗೆ ಪುಷ್ಪಮಾಲೆಯಂತಿರುವ. ಮೀನಕೇತು = ಮನ್ಮಥ.

559. ಪುಷ್ಪೇಷು = ಪುಷ್ಪಬಾಣ, ಪುಷ್ಪಬಾಣವುಳ್ಳ ಮನ್ಮಥ. ಕದಂಬಿ = ಸಮೂಹ ವುಳ್ಳವನು.

560. ಲಹರಿಕಾ = ಅಲೆ. ತರ್ಪಿ = ತೃಪ್ತಿಯುಂಟುಮಾಡುವವನು. ವಿಕ್ರಾಂತ ವಧೂಕರೇಣು = ವೀರಶ್ರೀ ಎಂಬ ಹೆಣ್ಣಾನೆಯುಳ್ಳವನು.

561. ಮಹೋಮಹ = ಬಲದ ಮಹಿಮೆಯಿಂದ. ದಮಿತ = ಅಡಗಿಸಲ್ಪಟ್ಟ. ಚೈತ್ರ ಲಕ್ಷ್ಮಿ = ಜಯಲಕ್ಷ್ಮಿ.

562. ಕೇತು = ಧೂಮಕೇತು, ಧ್ವಜ. ದ್ವಿಟ್ = ಶತ್ರು. ಲಯಾನಲ = ಪ್ರಳಯಾಗ್ನಿ. ಜೀವನಂ = ಪ್ರಾಣವೆಂಬ ನೀರುಳ್ಳವನು. ವನಶಿಖಿ = ಕಾಡುಗಿಚ್ಚು. ತತ = ವ್ಯಾಪ್ತವಾದ. ಶ್ರೀ = ಕಾಂತಿ.

563. ಕರವಾಳ = ಕತ್ತಿ. ಅಸೃಕ್ಪೂರ = ರಕ್ತಪ್ರವಾಹ. ಪ್ಲುತ = ಮುಳುಗಿದ, ಓಡುವ. ಖಡ್ಗಿ = ಖಡ್ಗವುಳ್ಳವನು, ಖಡ್ಗಧಾರಿಗಳು. ಅಂತ್ರ = ಕರುಳು. ಫೇರವ = ನರಿ.

564. ಮನೋಭಾವ = ಮನ್ಮಥ. ಅಳಿಕ = ನೆತ್ತಿ. ದ್ವಿಟ್ಟಿರೋದೇವಕೀರ್ತಿ?

565. ಮಂತ್ರದಲ್ಲಿ ಆಕರ್ಷಣ, ಉಚ್ಚಾಟನ, ಮಾರಣ, ಸ್ತಂಭನ, ವಶ್ಯ, ಶಾಂತಿ ಎಂಬ 6 ವಿಧವನ್ನು ಸೂಚಿಸಿದ್ದಾನೆ. ಅಭಿಜನ = ಕುಲಜರ. ಪರಿವೃಢ = ಸ್ವಾಮಿ.

566. ತಿರಿಯದ = ಸುತ್ತದ, ಬೇಡದ. ಮಧ್ಯಮ = ಮಧ್ಯವರ್ತಿ, ಮಧ್ಯತರ ವಾದುದು.

568. ವದನ, ಬಿಂದುವಿಲ್ಲ. ಮನೋಜಾತ = ಮನ್ಮಥ.

569. ಬಿತ್ತು = ಬೀಜ.

572 ಅ. ಸರಲ್ = ಬಾಣ. ಅಸುರತರ = ಭಯಂಕರ. ಸಿಂಧುರಘಟಾ = ಆನೆಯ ಗುಂಪು.

573. ಆಳಿಂ = ಆಳಿಗಿಂತ. ಲೀಳೆಯಿ = ಲೀಲೆಯಿಂದ, ಸುಲಭವಾಗಿ: ಎ ತೃತೀಯಾ ವಿಭಕ್ತಿಪ್ರತ್ಯಯ.

574. ಷಂಡ = ಸಮೂಹ. ಅವದಾತ = ಬಿಳುಪಾದ. ಜೀಯ + ಎಂಬಿನಂ. ಬಂಟು = ಶೌರ್ಯ.

576. ಮಲ್ಲ = ಜೆಟ್ಟಿ. ದೇಗುಲ = ದೇವಸ್ಥಾನ.

578. ಪರೋಕ್ಷವಿನಯ = ಸತ್ತವನ ಜ್ಞಾಪಕಾರ್ಥವಾಗಿ. ಪಕ್ಕು = ಪಾತ್ರ.

580. ಸಮಾಧಿ = ಅನಶನವ್ರತ. ಮುಡಿಪು = ಪ್ರಾಣಬಿಡು. ಬಲದೇವಮಾತ್ಯ; ಬಲದೇವಾಮಾತ್ಯ ಎಂದಿರಬೇಕು; ಆದರೆ ಛಂದಸ್ಸು ಕೆಡುತ್ತದೆ.

585. ಇನ್ನಪ್ಪರ್ = ಇನ್ನು ಮೇಲೆ ಹುಟ್ಟುವವರು.

586. ವನರುಹನಾಭ = ವಿಷ್ಣು.

587. ಗಸಣಿ = ಶ್ರಮ. ಆನೆ = ನಾನೆ.

588. ತರವಾರಿ = ಕತ್ತಿ. ಒಂದು ಕತ್ತಿಯಿಂದ ಅನೇಕ ಕತ್ತಿಗಳನ್ನು ಹುಟ್ಟಿಸುವುದು ಆಶ್ಚರ್ಯವಾದ ಕೆಲಸ. ಬಹುತರ ವಾರಿ = ಬಹಳ ನೀರು.

593. ಇಂದ್ವಿನ = ಚಂದ್ರಸೂರ್ಯರ.

595. ಉತ್ತರಿಪಂ = ಹೆಚ್ಚಿಸುವನು.

596. ನಳಿ = ಕೋಮಲವಾದ. ಸೆಳೆ = ಸಣ್ಣನಾದ.

597. ದೇವಾಲಿಕೆ? ಆರ್ಪು = ಔದಾರ್ಯ.

598. ಆಯುಂ = ಆಯುಸ್ಸೂ. ಅಕ್ಕೆ = ಆಗಲಿ. ಕಾಯ್ವ = ಕೋಪಿಸುವ.

599. ಪಂಚಪಾದವೃತ್ತ: 463, 601 ನ್ನು ನೋಡಿ. ವನಧಿ = ಸಮುದ್ರ. ಎಂದುದ ನೊಲ್ಲದ = ಆಜ್ಞೆಯನ್ನು ಮೀರುವ. ಜೀಯ + ಎನುತ್ತೆ. ವೆಸ = ಕೆಲಸ.

600. ಅಳವಿಗಳುಂಬಮಪ್ಪ = ಮಿತಿಮೀರಿದ. ಚೋಳ್ನೆಲ = ಚೋಳನ ರಾಜ್ಯ. ಅದಿರ್ಪಿ = ಹೆದರಿಸಿ, ಜಯಿಸಿ. ಆನೆಗವರ್ತೆಗೊಂಡಂ = ಆನೆಯನ್ನು ಹಿಡಿವ ಹಾಗೆ ಹಿಡಿದನು. ಕುಳಬಿಟ್ಟಿಗಳಪ್ರಾಸ,

601. ನಿಮಿರ್ಕೆ = ಹೆಚ್ಚಿಕೆ. ಅಮರ್ಕೆ = ಹೊಂದಿಕೆ. ಸಾರ್ಕೆ = ಪ್ರಾಪ್ತಿ. ಕಡುಪ್ಪುರ್ಪು = ? ದರ್ಪ. ವಿಗುರ್ವಿಸು = ಭೀತಿಗೊಳಿಸು. ಅಳುರ್ಕೆ = ವ್ಯಾಪ್ತಿ. ಉತ್ತರೋತ್ತರಂ = ಅಭ್ಯುದಯ.

602. ಪವಿ = ವಜ್ರಾಯುಧ. ಈಬಂದಂ = ಇದೋ ಬಂದನು. ತರಣಿ = ಸೂರ್ಯ. ಕರಿರಿಪು = ಸಿಂಹ. ಇದ್ಧ = ವೃದ್ಧಿ ಹೊಂದಿದ.

603. ವಿತರ್ಥ = ವ್ಯರ್ಥ. ಅಜ ಪಶುಪತಿ ಶಾರ್ಙ್ಗ = ತ್ರಿಮೂರ್ತಿಗಳು. ನಾವೋ ಚಿತಚರಿತರೆ. ಈ ಪದಗಳಿಗೆ ಆಡು, ಎತ್ತು, ಬೇಡ ಎಂಬ ಅರ್ಥಾಂತರವನ್ನು ನೆನೆದು ಈ ಉಕ್ತಿ.

604. ಸರ = ಧ್ವನಿ. ಮತಂಗಜ = ಆನೆ. ಪೊಂಗಿ = ಬೀಗಿ. ಎಂಟೆರ್ದೆಯೇ = ಧೈರ್ಯವೇ.

605. ಹಿರಣ್ಯಗರ್ಭ = ಬ್ರಹ್ಮ. ಉರವಣೆ = ವೇಗ. ಬಿತ್ತರಿಸು = ಕೊಂಡಾಡು.

606. ರಾಜಮಾರ್ತಾಂಡರೂಪಂ = ರಾಜರಲ್ಲಿ ಸೂರ್ಯರೂಪನು, ಚಂದ್ರಸೂರ್ಯ ರೂಪನು. ಶ್ಲೇಷೆ. ಕುಭೃತ್ = ಪರ್ವತ, ರಾಜ. ಚಕ್ರ = ಸಮೂಹ, ಚಕ್ರವಾಕ.

607. ಚಂದ್ರಾರ್ಕತಾರಂ; ಮೊದಲು ಆ ಆಗಲಿ ಕೊನೆಯಲ್ಲಿ ಬರಂ ಆಗಲಿ ಇರಬೇಕು. ತಿಗುಳರ = ಚೋಳರ. ತಳವಾರಲ್? ತಳ್ತ = ಪ್ರತಿಭಟಿಸಿದ. ಅಲಗು = ಆಯುಧ.

608. ಉದ್ಘ = ಶ್ಲಾಘ್ಯವಾದ. ಕರಂ = ಹೆಚ್ಚಾಗಿ. ವಿದ್ರಾವಣಂ = ಓಡಿಸುವವನು.

609. ಕೆಂದಳಂ = ಕೆಂಪಾದ ಕೈ. ಪೋಲ್ವೆ = ಸಾಮ್ಯ. ಜ್ಯಾ = ಬಿಲ್ಲಿನ ಹಗ್ಗ.

610. ರತ್ನಾಕರ = ಸಮುದ್ರ, ರತ್ನಗಳ ಸಮೂಹ.

611. ಕರವಾಳ್ = ಕತ್ತಿ. ಜಿಂಡು? ಪರ್ವಂ = ಹಬ್ಬ. ಸುರಟಿಂದೆ? ಆಗೆ + ಎಕ್ಕಲ.

612. ರಾಮಾನುಜ = ಲಕ್ಷ್ಮಣ. ಮಾರ್ಮರ್ = ಶತ್ರುಗಳು. ಆಟಂದು = ಓಡಿಸಿ; ಧಾತು ಆಟರ್.

613. ಮನ್ನೆಯರ್ = ಪ್ರಭುಗಳು.

614. ಕೀಱಿ = ಕೋಪಿಸಿ. ಕೋಟ್ಮಿದುಳ್ = ಕೋಡುವ + ಮಿದುಳ್. ಇಂಡೆ = ರಾಶಿ. ಪಿಣಿಲ್ = ಗುಂಪು, ಹೆಣಿಕೆ. ಮರುಳ್ = ಪಿಶಾಚ.

615. ನಲ್ಮೆ = ಒಳ್ಳೆಯ ಗುಣ. ಪ್ರಾಗಲ್ಭ್ಯ = ವೈದುಷ್ಯ. ಸೂಕ್ತಿಲಕ್ಷ್ಮಿ = ಸರಸ್ವತಿ.

616. ವಿರೋಧಾಭಾಸ. ಪಂಚೇಷುತ್ವ = ಮನ್ಮಥತ್ವ. ಸುಧಾಕಾಂತಂ = ಅಮೃತ ದಂತೆ ಮನೋಹರ. ತೀವ್ರಕರ = ಸೂರ್ಯ. ವೃತ್ತ = ಮಂಡಲಾಕಾರ, ನಡತೆ. ವಿಧು = ಚಂದ್ರ. ದೋಷ, ದೋಷಾ = ರಾತ್ರಿ.

617. ಚಕ್ರ = ಸಮೂಹ, ಗಾಲಿ. ಪುಂಗವಭ್ರಾಂತಿ = ಎತ್ತಿನ ಸಂಚಾರ. ಘಟೀ ಯಂತ್ರ = ಏತ. ಯುದ್ಧಾಜಿರವಾಪೀ = ಯುದ್ಧರಂಗವೆಂಬ ಬಾವಿಯಲ್ಲಿ. ರಕ್ತಾಂಬು = ರಕ್ತವೆಂಬ ನೀರು.

618. ಅಗಲ್ದು = ಅಗೆದು. ಅಡ್ಡಂತಿಗಟಂ = ? ಪ್ರತಿಬಂಧಕವಾದ ಪ್ರದೇಶವನ್ನು.

619. ಹಿಮ = ಹಿಮವತ್ಪರ್ವತ. ತೊಟಿಲ್ವಂ = ಸಂಚರಿಸುವನು.

620. ಕಂಜ = ಕಮಲ.

621. ಎಟ್ಟಿರದಿಂ = ಹೆಚ್ಚಾಗಿ. ಘರಟ್ಟಂ = ಬೀಸುವ ಕಲ್ಲು.

622. ಝುಳಪ್ಪ = ಶ್ರೇಷ್ಠ. ಚಕ್ರಿ = ಚಕ್ರವರ್ತಿ. ಮುಡಿಗಿಕ್ಕಿದೆಂ = ಮುಡಿಗೆ ಹಾಕಿ ದೆನು. ಆರ್ಪವರ್ = ಸಾಮರ್ಥ್ಯವುಳ್ಳವರು.

623. ನಿಸ್ತ್ರಿಂಶ = ಕತ್ತಿ. ಆಖ್ಯಾನ = ಹೆಸರು.

624. ವಿಕ್ರಮವಧೂಟಿ = ಶೌರ್ಯಲಕ್ಷ್ಮಿ. ಇಟ್ಟುಳಿಗೊಂಡು = ಆಕರ್ಷಿಸಿ.

623. ಪುತ್ತಳಿಗೆ = ಬೊಂಬೆ. ತೆತ್ತಿಸು = ಕೆತ್ತು.

633. ತವದೆ = ಕ್ಷಯಿಸದೆ. ಪೊಗರ್ = ಕಾಂತಿ. ಆಟಂದು = ಪ್ರತಿಭಟಿಸಿ.

635. ಸಕ್ಕಿ = ಸಾಕ್ಷಿ. ತೊಡೆಸಕ್ಕಿ ? ತೀವಿದ = ತುಂಬಿದ. ದೊರೆ = ಸಾಮ್ಯ.

636. ಸ್ರುಕ್ = ಮಾಲಿಕೆ. ಹೈಮ = ಚಿನ್ನದ. ಶುದ್ಧಾಂತ = ಅಂತಃಪುರ.

637. ಚಾಗ = ತ್ಯಾಗ. ವನೀಪಕ = ಯಾಚಕ. ಅವನೀಪಕರ್ = ರಾಜರು. ಒಕ್ಕು = ಬಿಟ್ಟು. ಕೋಳ್ = ಕೊಳ್ಳೆ. ಆಶಾಗಜ = ದಿಗ್ಗಜ.

637 ಅ. ಉಱಿವೆ = ಪೆದರದೆ. ಸೆಱಿಕೋಲ್ = ? ದಂಡ. ಕೋಲಿಂಗೆ, ಪೊಸ ರೂಪ. ಕಿಕ್ಕಿಱಿದು = ಒತ್ತಾಗಿ. ಸೆರೆಕೋಲಿಗೆ ಹೆದರಿ ಸೆರೆಯಲ್ಲಿ ಅಡಗಿದನು — ಎಂಬುದು ಆಶ್ಚರ್ಯ.

638. ಎಲ್ಲಮು; ಬಿಂದುವಿಲ್ಲ. ಇಡುಕುೞಿ = ಪೊದರಿನಲ್ಲಿ: ಸಪ್ತಮಿಗೆ ಷಷ್ಠಿ. ಮಿಂಡಿ ದೊಟ್ಟಿರ್ಗೆ = ಸ್ವೈರಿಣಿದಾಸಿಯರಿಗೆ. ತುಡುಗುಣಿಗೊರವ = ಕಳ್ಳಸನ್ಯಾಸಿ.

639. ಅಜಿ = ಯುದ್ಧ. ಅದಿರದೆ = ಹೆದರದೆ. ಪದುಳಿಸಿ = ಕ್ಷೇಮದಲ್ಲಿಟ್ಟು. ಮನ್ನೆಯ = ಪ್ರಭು.

640. ಆರ್ತು = ತುಂಬಿ, ಪೂರ್ಣವಾಗಿ. ಪಡಿ = ಸಮಾನ. ಕುಂಚಿತ = ಅಲ್ಪರಾದ.

641. ಪಣೆದಂಬೊಯ್ದು = ಸಂಹರಿಸಿ. ಬಂಡಣ = ಯುದ್ಧ.

642. ಎಳೆ = ಭೂಮಿ. ನೆಗಪಿ = ಎತ್ತಿ. ಕೋಡು = ಕೊಂಬು. ಗಂಧವಾರಣಂ = ಮತ್ತಗಜ. ಎಡವರಿಗೆ ಅಣ್ಣನ ಗಂಧವಾರಣ ಎಂದು ಬಿರುದು.

643. ದಾನ = ದಾನ, ಮದ. ಕೋಡು = ದಾನ, ಕೊಂಬು. ಗಾಡಿ = ಸೊಬಗು. ಅಗುರ್ವುವೆತ್ತು = ಭಯಂಕರವಾಗಿ. ದಿಗುದಂತಿ, ಪೊಸರೂಪ.

648. ಸೆಲ್ಯ = ಶಲ್ಯ.

649. ಪರಮೇಷ್ಠಿ = ಬ್ರಹ್ಮ.

650. ದಾಮ = ಮಾಲಿಕೆ. ಧಾಮ = ಸ್ಥಾನ.

651. ದಿಶಾಸಿಂಧುರ = ದಿಗ್ಗಜ.

654. ತೆವರ್ = ಉನ್ನತ ಪ್ರದೇಶ. ನಿಮ್ನ = ತಗ್ಗಾದ. ದೀರ್ಘಿಕಾ = ಬಾವಿ. ಕಾಸಾರ = ಕೊಳ. ದಲ್ = ನಿಶ್ಚಯ.

654 ಅ. ಪವಣ್ = ಪ್ರಮಾಣ.

656. ಅಸಿಧಾರಾವ್ರತ = ಕತ್ತಿಯ ಅಲಗಿನ ಮೇಲೆ ನಡೆವ ವ್ರತ.

661. ಕ್ರಮಾಲಂಕಾರ. ಪಡೆವಳ್ಳ = ಸೇನಾಪತಿ.

662. ಬಿಟ್ಟಿದೇವನ ಗರುಡಂ = ವಿಷ್ಣುವರ್ಧನನ ಪ್ರಿಯಸೇವಕ.

663. ಅನ್ನಳ್ = ಅಂಥವಳು.

664. ದಿಗುದಂತಿ, 643 ನ್ನು ನೋಡಿ.

673. ಪದೆದು = ಆಶೆಯಿಂದ. ಬಿಲ್ಬೊಯ್ದು = ಧನುಷ್ಟಂಕಾರಮಾಡಿ. ಉರ್ವು = ಹೆಚ್ಚಿಕೆ. ಸಮಸ್ಕಂಧ = ಸಮಾನ.

674. ದಿಗುವಿಜಯು, 643 ನ್ನು ನೋಡಿ. ಅಗಿ = ಹೆದರು. ಬಿಟ್ಟಿದೇವಗರುಡ, 662 ನ್ನು ನೋಡಿ.

675. ಪರಿವೆರಸು = ಅಂದವಾಗಿ. ಗೆಡೆಗೊಂಡು = ಹೊಂದಿ.

676. ಹಡೆವಳ = ಸೇನಾಪತಿ. ನಿಯೋಗ = ಅಧಿಕಾರ. ಖೇಚರಚಕ್ರಿ = ಜೀಮೂತ ವಾಹನ. ನನ್ನಿ = ಸತ್ಯ. ಕೃತಾಂತ = ಯಮ.

677. ಪದುಮಜ, ಹೊಸರೂಪ. ಪಾಸಟಿ = ಸಮಾನ.

680. ಸೂರ್ಯನ, ಬಿಂದುವಿಲ್ಲ.

681. ಅಬುಜೋದ್ಭವ. ಹೊಸರೂಪ. ತಿಟ್ಟವಿಟ್ಟಂ = ಚಿತ್ರಿಸಿದನು.

683. ಅಹಿಮಕರ = ಸೂರ್ಯ. ಗುಣ್ಪು = ಗಾಂಭೀರ್ಯ.

684. ಇಂದ್ರಜ = ಜಯಂತ.

686. ತುಱುಗೋಳ್ = ಗೋಗ್ರಹಣ.

686 ಅ. ಎತ್ತಲು, ಬಿಂದುವಿಲ್ಲ.

687. ಸುಭಟರ, ಕನ್ನ: ಬಿಂದುವಿಲ್ಲ.

688. ವೀಚೀ = ಅಲೆ. ತಲ್ಪ = ಹಾಸಿಗೆ. ವಿಶ್ವೋಜ್ಜನನ = ಜಗತ್ಸೃಷ್ಟಿ. ಪದ್ಮಸದ್ಮಂ = ಬ್ರಹ್ಮ.

689. ಶಿಪು = ಹಿರಣ್ಯಕಶಿಪು; ಹಿರಣ್ಯಾಕ್ಷ ಎಂದಿರಬೇಕು. ತದ್ರಿಪುವ = ವಿಷ್ಣುವಿನ. ದಲ್ + ಅತರ್ಕ್ಯ.

690. ತಮಾಳ = ಹೊಂಗೆ. ಕಂದಳ = ಸಣ್ಣಶಾಖೆ, ಅಂಕುರ.

691. ಮಾಲವ = ? ಲಕ್ಷ್ಮಿಯ ಲೇಶ. ವಿಪದನೂನಕಳಿಂಗ = ? ಹೆಚ್ಚಾದ ವಿಪತ್ತಿಗೆ ಗುರಿಯಾದ ಸುಂದರಿಯರುಳ್ಳ. ಅಭೀಲ = ಭಯಂಕರವಾದ.

692. ನಾಡೆಯುಂ = ಹೆಚ್ಚಾಗಿ.

693. ಶ್ಲೇಷೆ. ವಿಕ್ರಮ = ಅಡಿಯಿಡುವುದು, ಪರಾಕ್ರಮ. ಬಲಿ = ಬಲಿಚಕ್ರವರ್ತಿ, ಬಲಿಷ್ಠ. ದಶ + ಅವತಾರ; ದಶಾ + ಅವತಾರ. ಲಕ್ಷ್ಮ = ಚಿಹ್ನ. ಆಗಳುಂ = ಆವಾಗಲೂ.

694. ವಿಶಿಖ = ಬಾಣ. ರುಂದ್ರಭಾವ = ವ್ಯಾಪ್ತಿ. ವಾಸರ = ಹಗಲು.

695. ಬೆಸಂ = ಕೆಲಸ. ಬರ್ಮ = ಬ್ರಹ್ಮ. ಸಮಂತು = ಚೆನ್ನಾಗಿ. ನಿಸದಂ = ನಿಶ್ಚಯ.

696. ಇನಜಂ = ಕರ್ಣ. ಅಡಗು = ಮಾಂಸ.

698. ಅಂಗರಾಜಂ = ಕರ್ಣ.

700. ನಯ = ನೀತಿ. ಆಶಾಳಿ = ದಿಕ್ಕುಗಳ ಸಮೂಹವುಳ್ಳವನು.

701. ಮಧುವ್ರತ = ಭೃಂಗ.

702. ಕೃತಕಲ್ಪ = ಕೃತಯುಗ.

703. ಪರಿಣತಿ = ಕುಶಲತೆ.

704. ಬಲಿ = ಕೊಬ್ಬು. ಮಲೆ = ಪ್ರತಿಭಟಿಸು.

705. ಆನೀಳ್ಕುಂ = ? ಅದೋ ಉದ್ದವಾಗುವುದು.

706. ಇಂ = ಇನ್ನು.

707. ಹರಿತನಯಂ = ಮನ್ಮಥ, ಅರ್ಜುನ, ಕರ್ಣ.

708. ಉಪ್ಪರವಟ್ಟಂ = ? ಮೇಲಿನ ಸ್ಥಾನ. ಕೇವಳಮೆ = ಸಾಧಾರಣವೇ. ಕರಂಡ = ಭರಣಿ.

709. ವಿಯಚ್ಚರನನ್ನಂ = ಜೀಮೂತವಾಹನನಂಥವನು.

710. ವಾದಿಗಳೆವು = ವಾದಿಗಳಾಗಿದ್ದೇವೆ. ಟುಂಟುಕ = ಅಲ್ಪ, ಹೀನ.

711. ಆವನ ವಿಷಯುವೊ = ಆರಿಗೆ ಸಾಧ್ಯವೊ.

712. ನಿಳಿಂಪಕುಜಂ = ಕಲ್ಪವೃಕ್ಷ. ಮಣಿ = ಚಿಂತಾಮಣಿ. ನೀಡಿರದೆ = ಸಾವಕಾಶ ವಿಲ್ಲದೆ.

713. ಧರಾಮರ = ಬ್ರಾಹ್ಮಣ.

714. ಕುಡಿದು + ಅಂತೆ + ಆ + ತಾಪಿ.

715. ಬಿಸಜಪ್ರೋದ್ಭೂತ = ಬ್ರಹ್ಮ. ಕಲ್ಕಿ = ಕಲಿ.

716. ಕ್ರಮಾಲಂಕಾರ. ನನೆಯಂಬು = ಪುಷ್ಪಬಾಣ.

717. ಪೆಂಪು = ಗೌರವ. ಆರ್ಪು = ಔದಾರ್ಯ. ತಳ್ಳೊಯ್ದ ಅಲಂಪು = ಅತಿಶಯ ವಾದ ಪ್ರೀತಿ.

718. ಒಳ್ಗಾಹಂ = ಒಳ್ಳೆಯ ಕಾವಲು.

720. ಅಳುರ್ಕೆ = ವ್ಯಾಪ್ತಿ. ನಿಮಿರ್ಕೆ = ಹೆಚ್ಚಿಕೆ. ಕಡುದೆಳ್ಪು = ಶ್ರೇಷ್ಠತೆ. ತಳ್ಪು = ಹೊಂದಿಕೆ. ಪೊದಟಿಕ್ಕೆ = ಪ್ರಕಾಶ. ತೆರಳ್ಕೆ = ಪ್ರಸಾರ.

721. ಅಳವು = ಪರಾಕ್ರಮ. ಮನ್ನೆಯರು = ಪ್ರಭುಗಳು. ಕೂಗು = ಗರ್ಜನೆ. ನಡಪು = ಕಾಪಾಡು.

722. ಕೆಯ್ಪಿಡಿ = ಅವಲಂಬನ.

723. ಮಾಱಿಂಡಳಂ = ? ಸಾಟಿ. ಆಟೋಪ, ಬಿಂದುವಿಲ್ಲ. ಪಾಟಿ = ಸಮಾನ.

724. ಆಗಡುಂ = ಆವಾಗಲೂ. ಕರ್ಣನ + ಈವ. ಬಿಣ್ಪು = ಗೌರವ. ಸವ್ಯಸಾಚಿ = ಅರ್ಜುನ.

725. ಇತ್ತು ವಿಶ್ವಂಭರಾಭಾಗಮುಂ ತಣಿಪಲ್ ಸುರಧೇನ್.

728. ಶಿತಿ = ಕಪ್ಪಾದ.

729. ಸಜ್ಜೆವನೆ = ಶಯ್ಯಾಗೃಹ. ಭೋಗಿಪಭೋಗ = ಆದಿಶೇಷನ ಶರೀರ. 688ನ್ನು ನೋಡಿ.

730. ದನುಸುತಂ = ದಾನವ. ಹಿರಣ್ಯಾಕ್ಷ. ರಸೆ = ಪಾತಾಳ. ಅಗುರ್ವಿನ = ಭೀಕರನಾದ. 689 ನ್ನು ನೋಡಿ.

731. ಕುಂಧರ = ಪರ್ವತ. ರಶನಾ = ಮೇಖಲೆ. ಅವರಜ = ತಮ್ಮ.

733. ಬಿಟ್ಟಿಗೆ? ಸಬಳಂ = ಈಟಿ. ಆಯುಗವಡ್ಡಂ? ನಟ್ಟಿ? ತ್ರಿಗುಣಂಮಾಡೆ = ಹೆಚ್ಚಿಸಲು.

734. ಆಶಾತ = ಕೂರಾದ.

735. ಸಾಚಿ?

736. ವಾಕ್ಯವೇಷ್ಟನ. ಕಟಕ = ರಾಜ್ಯ.

737. ಗೊತ್ತು = ಸ್ಥಾನ. ಎಱೆವಟ್ಟು = ನೆಲೆ.

738. ತಿಂಬು = ತುಂಬು. ರಯ್ಯ = ರಮ್ಯ.

739. ನಿಱ = ಚೆಲುವಾದ. ತೊಂಗಲ್ = ಗುಚ್ಛ. ತಂದಲ್ = ಸೋನೆ. ಬಕ್ಕೆ = ಹಲಸು.

740. ಅಗುರ್ವಿನ = ಅತಿಶಯುವಾದ. ಕಂಪಣ = ವಿಭಾಗ, ವಿಷಯ.

741. ನಾಗಲತಾ = ವೀಳೆಯದೆಲೆ.

742. ಶ್ರೀಖಂಡ = ಗಂಧ.

744. ಮರುತ್ತನಯುಂ = ಭೀಮ, ಹನುಮಂತ. ಅಂಶುಮತ್ತನಯುಂ = ಕರ್ಣ. ಇಂದ್ರಸರಿತ್ತನಯುಂ = ಭೀಷ್ಮ.

745. ಹೋಗೆಡೆಗೆಟ್ಟು = ನಿರ್ವಾಹವಿಲ್ಲದೆ. ಬಂಟು = ಶೌರ್ಯ.

747. ಪರಪುಷ್ಟ = ಕೋಗಿಲೆ.

748. ಕಲ್ಕಿ = ಕಲಿ. 715 ನ್ನು ನೋಡಿ.

749. ನಿಸದಂ = ನಿಜವಾಗಿ. 694, 715 ನ್ನು ನೋಡಿ.

750. ಆಮ್ನಾಯ = ವಂಶ. ವಾಗ್ವರ = ಬ್ರಹ್ಮ.

753. ಅಗಿದು = ಹೆದರಿ.

756. ವಾಕ್ಯವೇಷ್ಟನ.

758. ಇಱಿದ = ಯುದ್ಧ ಮಾಡಿದ. ಅಟ್ಕಿಸು = ಜೀರ್ಣಿಸು. ದುಱಿ? ತೀಂಬ = ಕಡಿತವನ್ನು ಹೊಂದಿದ. ಕಟ = ಗಂಡಸ್ಥಲ. ಲಚ್ಚಣ = ಲಕ್ಷ್ಮಣ.

759. ತನಿಗಂದಂ? ಕಪ್ಪೆಗೂಂತಿರ್ಕುತಿರ್ದುದು = ? ಕಪ್ಪೆಯ ಹಾಗೆ ಕುಪ್ಪುತಿದ್ದಿತು.

760. ಕರಂಪು? ಮೊಕ್ಕಳ = ಅಧಿಕ.

761. ಭೂಭೃತ್ = ರಾಜ, ಬೆಟ್ಟ. ಕೀಱಿ = ರೇಗಿ. ತರವಾರಿ = ಕತ್ತಿ.

762. ಪಾಂಡ್ಯಂ ಕರಂ ಆಳವಾಡೆ = ಪರಿಹಾಸಮಾಡಲು. ಕರವಾಳ್ = ಕತ್ತಿ. ನೋಡಲ್ ಕರಂ ಆಳಲ್ಲದೆ ಕಾದಲ್ ಕರಂ ಆಳಿಲ್ಲ.

763. ಕುಭೃತ್ = ರಾಜ, ಬೆಟ್ಟ. ಕಳೆವೈ = ಕಳೆವೆಯಾ.

764. ಗರ = ಗ್ರಹ. ಪರಿಘ = ತೋಮರ. ಅಗುಂಬು = ಭಯಂಕರತೆ.

765. ವಿಷ್ಣುನೃಪನ ಅಸಿ ರಣರಂಗದೊಳ್ ಅಭಿನಯವನ್ನು ಮಾಡಿತು ಎಂಬುದು ಅರ್ಥ. ಜಡಿದಂ = ? ಜಳಪಿಸುವಿಕೆ. ಸೋಲಿಕ್ಕೆ ಗಂಡು, ಇರಳೊಪ್ಪೆ ಎಂಬ ಕಡೆ ತಪ್ಪುಬಿದ್ದಿರಬಹುದು. ಪದ್ಯದಲ್ಲಿ ಕ್ರಿಯೆಯೇ ಕಾಣುವುದಿಲ್ಲ.

766. ನಿಶಾರಮಣ = ಚಂದ್ರ. ಸುರಕುಂಭಿ = ಐರಾವತ.

767. ಶ್ಲೇಷೆ. ಕುಮುದ = ಭೂಮಿಗೆ ಆನಂದ, ನೆಯ್ದಿಲು.

768. ಜಳನಿಧಾನಂ = ಸಮುದ್ರ.

769. ಎಱಗಿದಗೆ, ಹೊಸರೂಪ. ಎಱಪಂ = ಎರಗುವನು. ಗೋವಂ = ? ಸ್ವಾಮಿ, ಗಂಡ.

770. ಶ್ರೀಖಂಡಷಂಡಾಚಲಂ = ಸಹ್ಯಪರ್ವತ. ಪೆರ್ದೊಱೆ = ಕೃಷ್ಣಾನದಿ.

771. ಅಣ್ಮಿ = ಯುದ್ಧಮಾಡಿ. ಆರ್ಪವರ್ = ಸಮರ್ಥರು.

772. ಸುಲಿ = ಸ್ವಚ್ಛವಾದ. ವೀಚೀ = ಅಲೆ.

773. ತನ್ನನ್ನಳ್ = ತನ್ನಂಥವಳು. ಅಗ್ಗಳಂ = ಹೆಚ್ಚು.

774. ಕವಿಯೇಱು = ಯುದ್ಧಭೇದ: 132 ನ್ನು ನೋಡಿ.

776. ಶೂದ್ರಕಂ = ಶೂದ್ರಕರಾಜ, ಶೂದ್ರ. ಬಾಡವಂ = ಬಡಬಾಗ್ನಿ, ಬ್ರಾಹ್ಮಣ.

777. ಧರ್ಮ = ಧರ್ಮ, ಧರ್ಮರಾಜ. ಅರ್ಜುನ = ಧವಳ, ಅರ್ಜುನ.

778. ಸಬಳಂ = ಈಟಿ. ಸಪ್ತಾಂಗ = ಸ್ವಾಮ್ಯಮಾತ್ಯಸುಹೃತ್ಕೋಶ ರಾಷ್ಟ್ರದುರ್ಗ ಬಲಗಳು.

779. ತೆಱೆ = ತೆರಿಗೆ. ಪನ್ನಾಯ = ಆಯತಿಯ ಭೇದ.

780. ಬಪ್ಪನ ಗಂಧವಾರಣಂ = ತಂದೆಯ ಮತ್ತಗಜ: ಬಿರುದು. ಪುಷ್ಕರ = ಸೊಂಡಿಲ ತುದಿ, ಕತ್ತಿ. ಪದ್ಮ = ಆನೆಯ ಚಿಬ್ಬು, ಕಮಲ. ವಂಶ = ಬೆನ್ನ ಎಲುಬು, ಕುಲ. ಭದ್ರ = ಆನೆಯಭೇದ, ಮಂಗಳ.

782. ಬಣಂಬೆ = ರಾಶಿ. ಬಳ್ಳವಳ್ಳಿ = ಸಮೂಹ. ಕಂಡ, ಬಿಂದುವಿಲ್ಲ. ನಿಶಾಟೆ = ರಾಕ್ಷಸಿ.

783. ಸುರಭಿ = ಕಾಮಧೇನು. ವತ್ಸ = ಕರು.

784. ಸಿರಿಸ = ಶಿರೀಷ. ನಳಿ = ಕೋಮಲವಾದ.

785. ಅಣುಗಂ = ಪ್ರೀತಿಪಾತ್ರ. ಅಣುವಂ = ಹನುಮಂತ.

786. ಭೃಗು = ಶುಕ್ರಾಚಾರ್ಯ. ನಿಗತಂದಿವಿ?

787. ಒಟ್ಟಜೆ = ಪೆರ್ಮೆ.

788. ಉಗ್ಗಡಂ = ಉತ್ಕಟ. ಕೋಲ್ = ಬಾಣ.

789. ಸದ್ದ್ವಿಜರಾಜಮಿತ್ರ = ನಕ್ಷತ್ರಗಳು ಸೂರ್ಯಚಂದ್ರರು, ಸದ್ಬ್ರಾಹ್ಮಣರು ಸ್ನೇಹಿತರು. ತಿರಿ = ಸಂಚರಿಸು, ಬೇಡು.

790. ಕೂಸಂ = ಕೂಸು.

791. ಅಳಿಪಿ = ಆಶಿಸಿ.

793. ಆಪೊಱ್ತುಂ = ಆವಾಗಲೂ.

794. ಶ್ಲೇಷೆ. ಹಸ್ತ = ಕೈ, ಹಸ್ತನಕ್ಷತ್ರ. ಚಿತ್ರ = ಆಶ್ಚರ್ಯ, ಚಿತ್ರಾ = ಚಿತ್ರಾನಕ್ಷತ್ರ. ಅಂಬರ = ಬಟ್ಟೆ, ಆಕಾಶ. ಉತ್ತರೋತ್ತರಂ = ಅತಿ ಶ್ಲಾಘ್ಯವಾದ, ಉತ್ತರಾ ನಕ್ಷತ್ರಕ್ಕೆ ಮೇಲೆ ಬರುವ. ಅಪ್ರತಿಹಸ್ತ = ಅಸಮಾನ.

795. ದೊರೆಯುಂ = ಸಮಾನನನ್ನು. ಗಱಪಲ್ = ಹೆಚ್ಚು ಮಾತಾಡಲು.

797. ಬಱುದೊಱೆವೋದುದು = ನೀರಿಲ್ಲದ ನದಿಯಾಯ್ತು, ವ್ಯರ್ಥವಾಯ್ತು.

798. ಮಣ್ಣಂಗೆಯ್ವವಗೆ = ಒಡ್ಡನಿಗೆ: ಹೊಸರೂಪ. ಜೀವನ = ನೀರು.

800. ಕನ್ನೆಗೆಱೆ = ಹೊಸಕೆರೆ, ಕೆರೆಯೆಂಬ ಕನ್ಯೆ. ಕಲ್ಪ = ? ಕಲ್ಪವೃಕ್ಷ. ಚಕ್ರ = ಚಕ್ರವಾಕ. ನೀಲಿಕಾ = ಒಂದು ಪುಷ್ಪದ ಗಿಡ.

802. ಜೀವನಂ = ಬದುಕು, ನೀರು. ಱೋಡಾಡು = ಪರಿಹಾಸಮಾಡು.

803. ಬಣ್ಣಿಗೆ = ? ಬಣ್ಣ.

804. ಕರ್ವು = ಕಬ್ಬು. ಕಱವೆ = ಭತ್ತ.

805. ಏವುದು = ಏನು ಪ್ರಯೋಜನ. ಬೆಳ್ಕರಿಪುದು = ಹೆದರಿಸುವುದು. ಕೆಮ್ಮನೆ = ಸುಮ್ಮನೆ.

806. ನಡೆದೇಗುಲ?

809. ಪಾಂಡ್ಯನು ತನ್ನ ಕಂಕಣದಿಂದ ಇಂದ್ರನ ಕಿರೀಟವನ್ನು ಹೊಡೆದಂತೆ ಇತಿಹಾಸ ವಿದೆ. ದಾವಣಗೆರೆ 39 ನೆಯ ಶಾಸನದಲ್ಲಿಯೂ ಈ ಅಂಶವು ಹೇಳಿದೆ— ಪೌರಂದರಂ ಚೂಡಾಗ್ರಂ ಕಂಕಣಹತಿ ಕ್ರೇಂಕಾರಿ.

812. ವಿಷಾಣ = ಕೊಂಬು. ಬಿದು = ಕಪೋಲ. ಸಿಂಧುರ = ಆನೆ.

817. ಎಸಕ = ಕಾಂತಿ. ಅಪ್ಪುಕೆಯ್ = ಅಂಗೀಕರಿಸು.

818. ಮಂಡಳಾಗ್ರ = ಕತ್ತಿ. ಎಕ್ಕಲಾವಣಂ: 110, 341 ನ್ನು ನೋಡಿ. ಇಳೇಜ್ಯ = ಭೂನುತ.

819. ಅಂತಕ + ಆನನ, ಅಂತ + ಕಾನನ. ಅಟ್ಟಿ = ಅಡಗು. ಶಾಸಿಸಿ = ಆಜ್ಞಾಪಿಸಿ.

821. ಯಾವನ = ಯುವನಸಂಬಂಧಿ. ಉತ್ಕಲಿಕಾ = ವಿರಹ, ಭಯ.

822. ವೇಳೆ = ಪ್ರತಿಜ್ಞೆ. ಎಱಕೊಂಡು, ಹೊಸರೂಪ. ಮಂಡ ? ಮಡಗೂೞ್ = ಭುಕ್ತೋಚ್ಛಿಷ್ಟ. ಉರದೆ = ಎದೆಯಲ್ಲಿ.

824. ಬೆಸೆವ = ಬೀಗುವ. ಬಿದಿರ್ಚಿ = ಎತ್ತಿಸಿ. ಎಱತಂದ, ಹೊಸರೂಪ. ಸಾಹಣ = ಕುದುರೆಯ ಪೋಷಣೆ,? ಹಯಶಾಲೆ.

825. ಅಟ್ಟೆ = ಮುಂಡ. ವರಜು = ಅಲಗು, ಮೊನೆ. ಮೋದು = ಹೊಡೆ. ಉರ್ಚು = ಎಳೆ.

827. ಚತುರುಪಧಾವಿಶುದ್ಧ = ರಾಜಭಕ್ತಿ, ಅಸ್ವಾರ್ಥಪರತೆ, ಜಿತೇಂದ್ರಿಯತ್ವ, ಧೈರ್ಯ ಈ ಗುಣಗಳಲ್ಲಿ ಪರೀಕ್ಷಿತವಾಗಿ ಶುದ್ಧವಾಗಿರುವ.

828. ಮಟ್ಟಿಸು = ಶಾಂತಮಾಡು. ಈಗ ಹೊಸರೂಪ.

829. ವಲ್ಮೀಕ = ಹುತ್ತು.

831. ಮರುಳ್ = ಪಿಶಾಚ. ಸೋವ = ಓಡಿಸುವ.

832. ನುಡಿದನೆ = ಮಾತುಕೊಟ್ಟನೋ. ಎಡಜು = ಕಷ್ಟ. ಅಜರಾಮರತ್ವಂ = ಮುಪ್ಪುಸಾವುಗಳಿಲ್ಲದಿರುವಿಕೆ. ಇನ್ನನಂ = ಇಂಥವನನ್ನು.

833. ಕಸವರಂ = ಚಿನ್ನ.

834. ಶರ್ಮ = ಸುಖ.

835. ಅಧಿಕಾರಿ = ಅಧಿಕಾರಿ, ಅಧಿಕ + ಅರಿ.

837. ಇವನು ರವಿದೇವ, ಕಮಲವು ಮುಕುಳಿತವಾಗುವುದೂ ನೆಯ್ದಿಲು ಅಲರುವುದೂ ಆಶ್ಚರ್ಯ.

840. ಲಚ್ಚಣ = ಚಿಹ್ನ. ಸುಯ್ಯಲ್ = ಉಸಿರುಬಿಡಲು. ಬೆಂಕೆ = ಕಾಹು. ಸೀಗು + ಎಂದು, ಹೊಸರೂಪ. ವಿಭ್ರಮಂ = ವಿಲಾಸ.

841. ಈರಿ? ಕಾಳಿಜ = ಕಾಲೇಯ(LIVER). ಸುಂಟಗೆ = ಸುಡುಂಬಾಡು. ಅಡಗು =

ಮಾಂಸ. ಬಿಕ್ಕ=ಹೃದಯ, ಮಾಂಸ. ಅಡುರ್ತು=ಕೋಪಿಸಿ. ನಿಳ್ಕ= ನೀಡು.

842. ಹಡಿ=ಕದ. ಉಬ್ಗೆಗಂ=ಉದ್ವೇಗ, ದುಃಖ. ಆಳ್ವರ=ಒಬ್ಬ ರಾಜ.

844. ಅಱದ=ಧರ್ಮದ. ರಾಗ=ಸಂತೋಷ. ಹೇರಱಿಕೆ=ಹೆಗ್ಗುರುತು. ಬೆಳೆಗೆಯ್ಗಳ್=ಗದ್ದೆ ಹೊಲಗಳು.

845. ಶ್ಲೇಷೆ. ದ್ವಿಜರಾಜ=ಬ್ರಾಹ್ಮಣಶ್ರೇಷ್ಠರು, ಗರುಡ. ಬಲಜ್ಯಾಯಂ = ಬಲಿಷ್ಠನು, ಬಲಭದ್ರನನ್ನು ಅಣ್ಣನಾಗಿ ಉಳ್ಳವನು. ಬಲಿಬಂಧನಂ=ವಿಷ್ಣು.

846. ಶ್ಲೇಷೆಯಿಂದ ಬೂಚಣನಿಗೆ ಅಷ್ಟದಿಕ್ಪಾಳರ ಹೆಸರುಗಳನ್ನು ಹೇಳಿದೆ. ಜಿಷ್ಣು = ಜಯಿಸುವವನು, ಇಂದ್ರ. ಭುವನ=ಲೋಕ, ನೀರು. ಉಮಾ=ಕೀರ್ತಿ, ಪಾರ್ವತಿ. ಚಣಂ=ಕುಶಲ.

847. ಕೂರ್ಪು=? ಪ್ರೀತಿಸುವ ಸ್ಥಳ. ಮಾಂತನ=ಪೆರ್ಮೆ: 80, 176 ನ್ನು ನೋಡಿ.

872. ಅಂತ್ರ=ಕರುಳು. 874. ಅಱಗುಲಿ=ಧರ್ಮಧ್ವಂಸಿನಿ.

877. ತರಂಬಿಡಿದು=ವರಿಸೆಯಾಗಿ. ಸೆಕ್ಕೆಗಂಡ=ತುಂಡುತುಂಡಾದ ಮಾಂಸ. ವಿಸಸನ=ಯುದ್ಧ. ಕಾಳ್=ಕಪ್ಪಾದ. ಕಬಂಧ=ಮುಂಡ. ಒಱೆವ= ಸ್ರವಿಸುವ. ಲೋಹಿತ=ರಕ್ತ. ವಿಗಂರ್ವಿಸು=ಭಯಂಕರವಾಗು.

878. ತಱುಂಬು=ತಡೆ. ಪಳಂಚು=ತಾಗು. ಇಂದೆಗೊಂಡು=ರಾಶಿಯಾಗಿ. ಆರ್ದು =ಕೂಗಿ. ಅದಟಂ=ಪರಾಕ್ರಮಿ.

879. ಜೀಯೆ+ಎನಿಸಿತ್ತು. ಏವಣ್ಣಿಪೊಂ=ಏನು ವರ್ಣಿಸುವನು.

880. ನಿಕಾಯ=ಸಮೂಹ.

881. ಮರ್ಯಾದೆ=ಎಲ್ಲೆ. ವಿಕ್ರಾಂತ=ಪರಾಕ್ರಮ.

882. ಆರ್ಪು=ಸಾಮರ್ಥ್ಯ.

883. ಶಬ್ದಕಳಾಪ=ವ್ಯಾಕರಣಶಾಸ್ತ್ರ.

884. ಮಂಡನ=ಆಭರಣ.

885. ತಾರ = ಬಿಳುಪಾದ. ಉಗ್ರಮರೀಚೀ = ಸೂರ್ಯ. ವಾಚಂಯಮಿ = ಮೌನಿ. ವಾಗ್ವಧೂಟೀ = ಸರಸ್ವತಿ. ನಿಟಿಲ = ನೆತ್ತಿ. ಹಟತ್ = ಜ್ವಲಿಸುವ.

886. ಆವೊಂ ತಾಳ್ದಿದೊಂ ಎಂದನ್ವಯ.

888. ನಕ್ರ = ಮೊಸಳೆ. ಚಕ್ರ = ಸಮೂಹ. ರಮಣ = ಆಟ. ಸ್ಥಗಿತ = ಮರಸಲ್ಪಟ್ಟ. ಚಾಮೀಕರ = ಚಿನ್ನ.

889. ತುಂಗಿಮ = ಎತ್ತರವಾದ.

890. ಸ್ವಾಂತ = ಮನಸ್ಸು.

891. ಪೊಡರ್ಪು = ಕಾಂತಿ. ದಳ್ಳಿಪ = ಜ್ವಲಿಸುವ. ಚಾಗ = ತ್ಯಾಗ.

892. ತಳರ್ಚು = ಕದಲಿಸು. ಅಲರ್ = ಬೀಗು. ತಡಂಬರಿ = ನುಗ್ಗು. ಅಂಕಿಸು = ಹೆಮ್ಮೆಪಡು. ಅಳುರ್ವ = ವ್ಯಾಪಿಸುವ.

893. ಬೆಸಗೊಂಡಪೆ = ಕೇಳುವೆ. ಹ್ರದ = ಮಡು. ಪೋತ = ದೋಣಿ.

894. ಕಲಿ = ವೀರ. ಪಂದೆ = ಹೇಡಿ. ಅಂಸ = ಭುಜ. ಕಣ್ದೆಱೆದಳ್ = ನೇತ್ರ ವಿಕಾಸ ಮಾಡಿದಳು.

895. ಶ್ಲೇಷೆ. ಕಮಳಾ = ಐಶ್ವರ್ಯ, ಲಕ್ಷ್ಮಿ. ಉಮಾ = ಕೀರ್ತಿ, ಪಾರ್ವತಿ. ವಿಕ್ರಮ = ಅಡಿಯಿಡುವುದು, ಪರಾಕ್ರಮ. ಸತ್ಪಥ = ಸನ್ಮಾರ್ಗ, ಆಕಾಶ.

896. ಅರಸಂಕ = ಪ್ರಸಿದ್ಧ ರಾಜರ. ಗಾಳ = ಗಂಟಲಗಾಳ.

897. ಶ್ಲೇಷೆ. ನಾಕಂ = ಸ್ವರ್ಗ, ನಾಕನೆಂಬವನು. ವಾಚಸ್ಪತಿ = ಬೃಹಸ್ಪತಿ, ವಿದ್ವಾಂಸ.

900. ಕಲಾಪ = ಸಮೂಹ. ಪದಪು = ಕುತೂಹಲ. ಧಾತ್ರಂ = ಬ್ರಹ್ಮ. ಸಂತೊಸ = ಸಂತೋಷ. ವ್ಯಸನ = ಚಿಂತೆ. ಭೂನಾಕನಂ = ಭೂಮಿಸ್ವರ್ಗಗಳನುಳ್ಳ.

901. ಅಂಗಣ = ಅಂಗಳ. ಆಶ್ರಿತ...ನಂ = ಆಶ್ರಿತರಿಗೆ ಲಕ್ಷ್ಮೀಕಟಾಕ್ಷವನ್ನುಂಟು ಮಾಡುವ.

902. ಅಂಡಲೆ = ತಿರಸ್ಕರಿಸು.

903. ಸ್ಥಿರನೇ = ಸ್ಥಿರನಾಗಿದ್ದಾನೆಯೇ, ಸ್ಥಿರನಾಗಿಯೇ ಇದ್ದಾನೆ.

904. ಅನಿಲತನಯಂ = ಹನುಮಂತ. ಪತಾಕೆ = ಧ್ವಜ.

905. ಚಲ = ಮನೋನಿಶ್ಚಯ. ಅಣ್ಮು = ಸಾಹಸ. ಚೆನ್ನ = ಸುಂದರ. ಚದುರ್ = ಕೌಶಲ.

906. ಪೂಗ = ಅಡಕೆಯ ಮರ. ಪೊನಲ್ = ಪ್ರವಾಹ.

908. ರಥಾಂಗ = ಚಕ್ರವಾಕ. ಪದ್ಮಿನಿ = ಸರಸ್ಸು. ಪ್ರಸಾದ = ಅನುಗ್ರಹ, ತಿಳಿವು.

910. ವೇತಂಡಂ = ಆನೆ.

911. ವಾಕ್ಕಾಮಿನೀ = ಸರಸ್ವತಿ. ಸುರೇಂದ್ರಾವನೀಜ = ಕಲ್ಪವೃಕ್ಷ.

928. ಅಭೋಗ = ವಿಸ್ತಾರ. ಅಗ್ರಹಾರ, ಅಗ್ರ + ಹಾರ. ಪತ್ರ = ಪತ್ರಲೇಖೆ. ನೇತ್ರಪುತ್ರಿಕಾ = ಕಣ್ಣುಗುಡ್ಡು. ಮೆಯ್ಸ್ವತ್ತಿಸಿದಂ = ಅನುರಕ್ತವಾಗಿ ಮಾಡಿದನು. ಪ್ರ, ಶಿಥಿಲ.

930. ತಾರಕ, ಬಿಂದುವಿಲ್ಲ.

930 ಅ. ಮುಂದ್ರಿಸು = ಆಕ್ರಮಿಸು.

930 ಆ. ದೀರ್ಣ = ತೆರೆದ.

930 ಇ. ಪಂದಲೆ = ಕತ್ತರಿಸಿದ ತಲೆ. ಮಂದುರ = ಹಯಶಾಲೆ. ಕಡಿತ = ಪುಸ್ತಕ. ಉಂಡಿಗೆ = ಮುದ್ರೆ. ಓಲೆ = ಆಜ್ಞೆ.

931. ತಳವನಂ = ತಳಕಾಡು. ವಿರಾಟರಾಜನ ನಗರ = ಹಾನುಗಲ್ಲು. ಲೀಲೆಯೆ = ಲೀಲೆಯಿಂದ.

932. ಬ್ರಹ್ಮಣ್ಯ = ಬ್ರಾಹ್ಮಣಪ್ರಿಯ. ಪ್ರತ್ಯರ್ಥಿ = ಶತ್ರು.

933. ಬಿಣ್ಪು = ಭಾರ, ಗೌರವ.

934. ಮರ್ಯಾದೆ = ಎಲ್ಲೆ. ಪರದು = ವ್ಯಾಪಾರ. ತವನಿಧಿ = ಅಕ್ಷಯನಿಧಿ: ತವದ + ನಿಧಿ. ಕೆಯ್ಗಣ್ಮು = ಅಧಿಕವಾಗು.

935. ಕುಮುದ = ಭೂಮಿಯ ಸಂತೋಷ, ನೆಯ್ದಿಲು.

936. ಮುಟ್ಟಿಪೋದ = ಸತ್ತ. ಪುಷ್ಪಕ = ವಿಮಾನ.

938. ತೆಱೆ = ತೆರಿಗೆ. ವೆಸ = ಬೆಸ, ಕೆಲಸ. ಅನ್ನರ್ = ಅಂಥವರು.

939. ಸಂವಳನ = ತಿರಿಚುವಿಕೆ. ಉಮ್ಮುಳ್ = ಉಗುಳು. ಪೊಡರ್ಪು = ಶಕ್ತಿ.

940. ಪುದುವೆ = ಅನ್ಯಸಾಮಾನ್ಯವೇ.

941. ಧರಾಧರಧರಂ = ಕೃಷ್ಣ. ತವಿಪ = ನಾಶಮಾಡುವ. ಸಕತ = ಸಕ್ತ: ಹೊಸ ರೂಪ.

942. ಕ್ರಮಾಲಂಕಾರ. ಹರಿಪುತ್ರಂ, 235 ನ್ನು ನೋಡಿ.

943. ಉರ್ಕು = ಗರ್ವ. ಮಂಡಳಾಗ್ರ = ಕತ್ತಿ. ಚಂಚು = ಕೊಕ್ಕು.

944. ಆಭೋಗ = ವಿಸ್ತಾರ. ದ್ಯುನದೀನಂದನ = ಭೀಷ್ಮ.

945. ಮಿತ್ತು = ಮೃತ್ಯು. ಆರ್ಪು = ಪರಾಕ್ರಮ. ಅಡರ್ಪು = ಅವಲಂಬನ.

947. ತೊರೆದತ್ತು = ಹಾಲನ್ನು ಸುರಿಸಿತು.

948. ಪಾಠೀನ = ಮೀನು. ಆಸ್ಫಾಳ = ಹೊಡೆವ. ಪ್ಲವ = ದೋಣಿ. ನೃಜಗತ್ = ನರಲೋಕ.

949. ಗುಡಿ = ಧ್ವಜ. ಇರ್ಕುಳಿಗೊಳ್ = ವಶಮಾಡಿಕೊಳ್ಳು. ತೊಡರ್ದು = ಹೆಣಗಿ, ಯುದ್ಧಮಾಡಿ.

951. ತೊಣೆ = ಸಮಾನ. ಬಣ್ಣಿಪರು, ಹೊಸರೂಪ. ಉದ್ಘ = ಶ್ಲಾಘ್ಯವಾದ. ನಲ್ಲ = ವಲ್ಲಭ.

952. ಎಕ್ಕತುಳಕ್ಕೆ = ಸರಿಸಮಾನವಾಗಿ, ಪೂರ್ಣಬಲದೊಡನೆ. ಸೀಸಕ = ತಲೆಯುಟವುಳಿ. ಕೆಯ್ದು = ಆಯುಧ.

953. ಕುನುಂಗು = ಬಾಗು. ಕಟಿಲ್ = ಬಡವಾಗು. ಅಟಿಲ್ = ದುಃಖಿಸು. ಪೊಡರ್ಪು = ಕಾಂತಿ.

955. ಬೆಸಂ = ಆಜ್ಞೆ. ಮೂಎವಿಟ್ಟೆ? ಕೆಯ್ವಾರ್ದು = ಸಾವಕಾಶವಾಗಿ.

955 ಅ. ಲೇಖಾ = ರೇಖೆ. ರದನಿ = ಆನೆ.

956. ಎರೆಗೊಳ್ವುದು = ತಿನ್ನುವುದು. ಪಿಶಿತ = ಮಾಂಸ. ರಾಜ = ದೊರೆ, ಚಂದ್ರ. ಮಂಡಳ = ಬಟ್ಟು, ರಾಜ್ಯ.

957. ಧನದಂ = ಕುಬೇರ. ತೀಡು = ಬೀಸು. ಜೈತ್ರೋರ್ವರೆ = ಜಯಹೊಂದಿದ ಭೂಮಿ.

958. ನಿಸ್ತರಿಸಿತ್ತು = ಬದುಕಿಕೊಂಡಿತು.

959. ತಟಿಕ್ಕೈಸು = ಆವರಿಸು. ಪೇಟಿಗೆ = ಬುಟ್ಟಿ. ಸರೋಜಾತಜ = ಬ್ರಹ್ಮ. ಪರ್ದೇಟ್?

960. ಕ್ರೋಡ = ವರಾಹ. ಗುಜ್ಜು = ವಾಮನ, ಕುಳ್ಳ. ಕಲ್ಕಿತ್ವ = ಕಲ್ಕಿಯವತಾರ, ದುಷ್ಟತೆ.

961. ಅರ್ಜುನ = ಅರ್ಜುನ, ಬಿಳುಪಾದ.

962. ಅಹಿಮಕರ = ಉಷ್ಣಕಿರಣ. ಅಮರೇಜ್ಯ = ಬೃಹಸ್ಪತಿ.

964. ಜಡಿ = ಪ್ರಹರಿಸು. ಇಂಡೆಯನಾಡು = ? ಆಟವಾಡು. ಸೌಳನೆ = ನೆಟ್ಟಗೆ. ಇರ್ಪುದು: ಪದ್ಯವು ಹ್ರಸ್ವದಲ್ಲಿ ಮುಗಿಯುತ್ತದೆ. 402, 454 ನ್ನು ನೋಡಿ.

967. ಹಾರವಂ = ಹಾರವನ್ನು, ಹಾ ಎಂಬ ಕೂಗು. ಕಂಕಣಂ = ಕೈಬಳೆ, ನೀರಿನ ಕಣ. ಅಂದುಗೆ = ಕಾಲಕಡಗ, ಶೃಂಖಲ. ಉನ್ನತಿಗೆ = ಉನ್ನತಿಕ್ಕೆ.

968. ತಾರಕಾದ್ರಿ = ಕೈಲಾಸ.

969. ಕುಮುದ್ವತೀ = ಕುಮುದಸಮೂಹ.

970. ಮೆಯ್ಯಿಕ್ಕು, ಕುಂಬಿಕ್ಕು = ನಮಸ್ಕರಿಸು. ಓತು = ಪ್ರೀತಿಸಿ. ನಿಗಳ = ಬೇಡಿ.

971. ಪೂಣ್ಕೆ = ಪ್ರತಿಜ್ಞೆ. ಬಂಟು = ಪರಾಕ್ರಮ.

972. ಮೆಯ್ವತ್ತಿಸು = ಅನುರಕ್ತವನ್ನಾಗಿಮಾಡು. ತೆತ್ತಿಸು = ಪೆಟ್ಟು.

973. ಉತ್ತರವಾಗೆ ಹಸ್ತಂ, ಶ್ಲೇಷೆ. ಉತ್ತರ = ಮೇಲು, ಉತ್ತರಾನಕ್ಷತ್ರ. ಇಜೀವ + ಈವ + ಎಡೆಯೊಳ್. ಇತ್ತನು, ಹೊಸರೂಪ.

974. ವಾಸ್ತು = ಮನೆ.

975. ಸಪ್ತಾಂಗಂ, 778 ನ್ನು ನೋಡಿ. ಅಳವಿ = ಪರಾಕ್ರಮ.

976. ತಾರ್ಕ್ಷ್ಯ = ಗರುಡ, ಉತ್ತಮವಾಜಿ. ಭೋಗ = ಶೇಷನ ದೇಹ, ಸುಖ. ಬಲ = ಬಲರಾಮ, ಶಕ್ತಿ. ಲಕ್ಷ್ಮಿ = ಶ್ರೀ, ವಿಷ್ಣುವರ್ಧನನ ಹೆಂಡತಿ ಲಕ್ಷ್ಮಿ.

977. ಬಿದು = ಕಪೋಲ. ಆಂಪ + ಇದಿರ್ಚುವ.

978. ಮದರದನಿ = ಮತ್ತಗಜ. ಉಚ್ಚಳಿಸುವ = ಹೊರಗೆ ಬರುವ.

979. ನಿಸ್ತಾರಕ = ತಾರಕಾಸುರನಿಲ್ಲದಂತೆ ಮಾಡುವವನು, ನಿರ್ವಾಹಕನು. ಶಕ್ತಿ = ಶಕ್ತ್ಯಾಯುಧ, ಬಲ. ವಿಚಾರ = ಮಯೂರಪಕ್ಷಿಯು ಮೇಲೆ ಸಂಚಾರ, ವಿವೇಚನೆ.

980. ತೋಡು = ಸಮಾನ. ಅಮರಾಲಯಂ = ದೇವಸ್ಥಾನ. ಗುಣ್ಪು = ಸಮೂಹ. ನಿಸದಂ = ನಿಜವಾಗಿ.

981. ಶ್ಲೇಷೆ. ಶೀತರೋಚಿ = ಚಂದ್ರ. ಗೋತ್ರ = ಪರ್ವತ, ವಂಶ. ಕೌಶಿಕ = ಇಂದ್ರ, ಗೂಗೆ. ವಿಪರೀತ = ಪಕ್ಷಿಗಳಿಂದ ವ್ಯಾಪ್ತ, ವಕ್ರ. ಕುಜನ್ಮಕ = ಭೂಮಿಯಿಂದ ಹುಟ್ಟಿದುದು, ಕೆಟ್ಟ ಹುಟ್ಟುಳ್ಳುದು.

985. ಮರಕತ = ಪಚ್ಚೆ. ತರುಣವೇಣು = ಎಳೆಯ ಬಿದಿರು. ಸದೃಕ್ಷ = ಸಮಾನ. ಹರಿನೀಲ = ಇಂದ್ರನೀಲ.

986. ನೆಲವಲಂ = ನೆಲದ ಸೈನ್ಯ. ಪೆರ್ವಲಂ = ದೊಡ್ಡ ಸೈನ್ಯ. ಗಿಲಿಗಿಲಿಗಂಬವಾಡಿಸುವಂ = ? ಪೀಡಿಸುವನು, ಸಾಕುಮಾಡುವನು. ಇನ್ನೆಲಗಳವಂಗೆ? ಗಾಂಪಂ = ಮೂಢ.

987. ಉರವರಿ = ? ವೇಗ. ಕಡಂಗಿ = ಉತ್ಸಾಹದಿಂದ. ಭೋರ್ಗರೆದು = ಗರ್ಜಿಸಿ. ಗೇಣ್ = ಕತ್ತಿ. ಅಂಕ = ಸೈನ್ಯ. ಸುರಿಗೆ = ಕಟಾರಿ.

988. ಚೆಚ್ಚರಂ = ಬೇಗ. ಅಚ್ಚರಸೆಯರ್ = ಅಪ್ಸರಸ್ತ್ರೀಯರು.

989. ದಶ + ಅವತಾರ, ದಶಾ + ಅವತಾರ. ವಿನತಿ = ಗರುಡನ ಸತಿ, ನಮಸ್ಕಾರ.

990. ರಾಜ್ಯವನ್ನು ಸಮುದ್ರವೆಂದು ರೂಪಿಸಿದೆ. ಗೇಹ = ಗೃಹ. ಅನಂತರಮೇಶನಿವಾಸಂ = ಆದಿಶೇಷ ವಿಷ್ಣುಗಳ ವಾಸಸ್ಥಾನ, ಅನೇಕ ವಿಷ್ಣು ದೇವಾಲಯಗಳುಳ್ಳುದು.

991. ಅಮರ್ದು=ಅಮೃತ. ಕಮನೀಯಂ=ಸುಂದರ. ರೂಪು+ಆಶ್ಚರ್ಯಸಂಪಾದಕಂ.

992. ಕೇಶವಪುತ್ರ=ವಿಷ್ಣುಪುತ್ರನಾದ ಮನ್ಮಥ ಎಂದು ಮತ್ತೊಂದರ್ಥ. ಕಳಾಧರ =ಚಂದ್ರ, ವಿದ್ವಾಂಸ. ಪ್ರದ್ಯುಮ್ನಗೋತ್ರಂ=ಪ್ರದ್ಯುಮ್ನನೆಂಬ ಹೆಸರುಳ್ಳವನು, ಪ್ರಕೃಷ್ಟವಾದ ಧನಗೋಸಮೂಹಗಳುಳ್ಳವನು. ಸುಮನೋ...ಧರ್ಮಂ =ಪುಷ್ಪದಿಂದಾದ ಧನುಸ್ಸುಳ್ಳವನು, ಒಳ್ಳೆಯ ಮನಸ್ಸಿನಿಂದ ಆಚರಿಸಿದ ಧರ್ಮ ವುಳ್ಳವನು.

993. ಶ್ಲೇಷೆ. ಕಮಳ+ಆನಂದನ, ಕಮಳಾ (ಲಕ್ಷ್ಮಿ)+ಆನಂದನ. ಕಮಳ... ಹಸ್ತಂ=ಕೈಯಲ್ಲಿ ಕಮಲವುಳ್ಳವನು, ಕಮಲದಂತೆ ಕೈಯುಳ್ಳವನು. ಧರ್ಮ ಜನಕಂ=ಯಮನ ತಂದೆ, ಧರ್ಮವನ್ನು ಆಚರಿಸುವವನು. ಪ್ರಮದ= ಸಂತೋಷ. ಚಕ್ರ=ಚಕ್ರವಾಕ, ಸಮೂಹ.

994. ಹರಿ=ಸಿಂಹ. ವಿಕ್ರಾಂತಂ=ಶೌರ್ಯ. ಕೂರ್ತೊಡೆ=ಪ್ರೀತಿಸಿದರೆ.

995. ಕವಿ=ಯುದ್ಧವಿಶೇಷ, ಕವಿ. ಸದ್ವಾಜಿ=ಒಳ್ಳೆಯ ಕುದುರೆ. ಕೋಡು= ಕೊಂಬು, ದಾನ.

998. 965 ನ್ನು ನೋಡಿ.

999. 962 ನ್ನು ನೋಡಿ.

1000. ವಾಕ್ಯವೇಷ್ಟನ.

1001. ಕೋಳ್=ಸೂರೆ. ಚಾಳಾದಂ=? ಜಳ್ಳಾದನು.

1002. ನಿದಾಘ=ಬೇಸಗೆ. ದಿಗ್ಗಜಗಳಲ್ಲಿ ಒಂದಕ್ಕೆ ಸಾರ್ವಭೌಮ ಎಂದು ಹೆಸರು. ಚಂದ್ರನಿಗೆ ರಾಜ ಎಂಬ ಹೆಸರುಂಟು.

1003. ಇನ=ಸ್ವಾಮಿ, ಗಂಡ.

1004. ಮಂಡನ=ಆಭರಣ.

1005. ಧನದ=ಕುಬೇರ, ದಾತೃ. ರಯ್ಯಂ=ರಮ್ಯ.

1006. ಪಡಿಗ್ಗಹ=ಪ್ರತಿಗ್ರಹ.

1008. ಕುಭೃತ್ಕೂಟ = ಪರ್ವತಶಿಖರ. ಧವ = ಪತಿ. ಪವಣ್ = ಪ್ರಮಾಣ.

1009. ಎಳೆ = ಭೂಮಿ. ಬಳ್ವಳ = ಹೆಚ್ಚಾಗಿ.

1110. ಅಶಾಂತ = ದಿಗಂತ. ಆಲೀಢ = ಆಲಿಂಗಿತ.

1111. ಸುಧಾಧಾಮಂ = ಚಂದ್ರ.ಅನೇಕಪ = ಆನೆ.

1112. ಅರ್ಮ್ಗಂ = ಅವಲಂಬನ, ಸ್ಥಾನ. ಪೆಣ್ಬರಿಜು = ಸ್ತ್ರೀರೂಪ.

1113. ಕುಂತಳ, ಪುಣ್ಯ (ಪೂನ), ಕಾಂಚಿ ಎಂಬ ಸ್ಥಳಗಳು ಸೂಚಿತವಾಗಿವೆ.

1114. ತೊದಳ್ = ಸುಳ್ಳು. ಗೆಡೆಗೊಂಡ = ಹೊಂದಿದ. ನಿಗ್ಗಡಿಗಳ್ = ನೀಚರು, ನಾಚಿಕೆಯಿಲ್ಲದವರು.

1117. ಶ್ಲೇಷೆ. ಅರ್ಜುನ = ಅರ್ಜುನ, ಬಿಳುಪಾದ. ವಾಜೀಶ = ಗರುಡ, ತುರಗ ಶ್ರೇಷ್ಠ, ಅನಂತ = ಆದಿಶೇಷ, ಕೊನೆಯಿಲ್ಲದ. ಸುದರ್ಶನ = ಚಕ್ರ, ಒಳ್ಳೆಯ ನೋಟ.

1120. ಟುಂಟುಕರ್ = ಅಲ್ಪರು. ಟೆಂಟಣಿಸು = ಸೆಣಸು.

1122 ಗಗನಚರ = ಜೀಮೂತವಾಹನ. ಮಗಧಾಧಿಪ = ಜರಾಸಂಧ.

1124. ಲೋಕವಟ್ಟಮೆನೆ?

1125. ಪೆದೊರ್ಱೆ = ಕೃಷ್ಣಾನದಿ.

1127. ಜೀಯ + ಎನೆ. ಕಾ + ಎನೆ.

1128. ಸತ್ಯಪತಾಕ = ಸತ್ಯಧ್ವಜ.

1129. ವೀಚಿ = ಅಲೆ.

1131. ಸಿತಗರ್ = ದುಷ್ಟರು. ಹುರುಳಂ = ವಸ್ತುವನ್ನು. ಜಡಿ = ಜಳಪಿಸು.

1132. ಸೂರುಳಲ್ = ಪ್ರತಿಜ್ಞೆಮಾಡಲು.

1133. ತಳ, ಬಿಂದುವಿಲ್ಲ.

1134. ಪೆರ್ಮಾಡು = ? ಹೆಚ್ಚಾದ ಸೊನೆ, ರಸ. ಸುರ್ವು = ? ಸುರುಗು. ಕಾಲ್ವರಿಯಿಸೆ = ಕಾಲುವೆಯಾಗಿ ಹರಿಯಲು. ಕೇದಾರ = ಗದ್ದೆ.

1136. ವೃತ್ತ = ನಡತೆ, ಗುಂಡಾಗಿರುವುದು.

1139. ಕಮಳ + ಉದಯ, ಕಮಳಾ + ಉದಯ.

1140. ಅಂಡಲೆದು = ಪ್ರಹರಿಸಿ. ಆಸುರಂ = ಭಯಂಕರ. ನಿಕ್ಕುವಂ = ನಿಜ. ಡಿಂಡಿಮ = ವಾದ್ಯವಿಶೇಷ.

1141. ಸಂಗತಸತ್ವರ್ ಬಹುಪುತ್ರರಂ, ಶ.ಮು.ದ. ಸೂತ್ರ 140.

1142. ಗೊರವ = ಗುರು. ನಿಗೋದ = ನರಕ.

1143. ಖಗಾಧಿಪಲಕ್ಷ್ಮಂ = ಗರುಡಧ್ವಜ. ಮೃಗಲಕ್ಷ್ಮ = ಚಂದ್ರ.

1144. ಅರ್ಜುನ = ಅರ್ಜುನ, ಶುದ್ಧವಾದ.

1147. ಪೊಗರ್ = ಕಾಂತಿ. ಸೇಸೆ = ಶೇಷಾಕ್ಷತೆ. ಸುರಾನಕ = ಸುರದುಂದುಭಿ. ನೀಱೆ = ಸುಂದರಿ.

1148. ತರವಾರಿ = ಕತ್ತಿ. ನಳಿದು = ಹೆದರಿ. ಪೌವನೆಪೋಗಿರೆ = ದಿಗಿಲುಬೀಳಲು. ತಿಗುಳ ದಾಮಂ = ಚೋಳರ ಸೇನಾಪತಿಯಾದ ದಾಮೋದರನು.

1150. ಸತ್ವ = ಜಂತು, ಬಲ. ಅವಕರ = ಕಸ.

1152. ಇಂ = ಇನ್ನು ಮೇಲೆ. ಇರ್ಪುದು = ಇರಲಿ.

1153. ಎಡಂಬಡು = ? ವಾಮತೆ, ದೋಷ.

1154. ಇರುಂಗೋಳ = ನಿಡುಗಲ್ಲರಾಜ. ರಾದ್ಧಾಂತ ಚಕ್ರಾಧಿಪಂ = ಸಿದ್ಧಾಂತ ಚಕ್ರವರ್ತಿ.

1159. ತಿಱಿ = ಸುತ್ತು.

1160. ಚಾಳಿಸಿ = ಸೋಲಿಸಿ. ಕೀಲಿಸು = ನಡು.

1161. ಕಡಂಗದಿರ್ = ಸಾಹಸ ಮಾಡಬೇಡ. ಗೊಡ್ಡಂ = ಅಪಾಯದ ಕೆಲಸ.

1162. ಅಡುರ್ತ್ತು = ಮೇಲೆ ಬಿದ್ದು. ತೆತ್ತು + ಇರಿಂ, ಇತ್ತು + ಇರಿಂ. ಮತ್ತೆನವೇಡ = ಬೇರೆ ಮಾತು ಬೇಡ.

1163. ಅನಂತಭೋಗ = ಆದಿಶೇಷನ ಶರೀರ, ಅನಂತವಾದ ಸುಖ. ಉರ್ವೀದಾರ = ಭೂದೇವೀಪತಿ, ಭೂಪತಿ. ಲಕ್ಷ್ಮಿ = ಶ್ರೀ, ವಿಷ್ಣುವರ್ಧನನ ಹೆಂಡತಿ ಲಕ್ಷ್ಮಿ.

1166. 1151 ನ್ನು ನೋಡಿ.

1167. ಕೋಡಿಟ್ಟು = ಪ್ರತಿಭಟಿಸಿ.

1168. ಅಳವು = ಶೌರ್ಯ, ಮಾನ. ನಿಕುಂಜ = ಪೊದರು. ವೇಳೆಗೊಂಡಂ = ಆಶ್ರಯಿಸಿದನು.

1169. ಪಳಂಚಲೆವ = ಸೋಲಿಸುವ. ನೆಗಪು = ಎತ್ತು. ಸುಗಿಯಿಪ = ಹೆದರಿಸುವ.

1170. ಇಂಗಡಲ್ = ಕ್ಷೀರಸಮುದ್ರ.

1171. ಎನಸುಂ = ಹೆಚ್ಚಾಗಿ. ಭಾವಕ = ವಿದ್ವಾಂಸ.

1172. ಅತ್ತಳಗಂ = ಅಸಾಧ್ಯ. ಸಹಸ್ರನಯನ = ಇಂದ್ರ. ವಿಕ್ರಾಂತ = ಪರಾಕ್ರಮ: ಬಿಂದುವಿಲ್ಲ. ವಂದಿಗಳ್ = ಸ್ತುತಿಪಾಠಕರು.

1173. ಸೆಳೆ = ಕೋಲು. ದ್ವೀಪಿ = ಹುಲಿ.

1175. ದೇವದ್ವಿರದ = ಐರಾವತ.

1177. ದಿಕ್ಪಾಲರ ಹೆಸರುಗಳು ಸೂಚಿತವಾಗಿವೆ. ರತ್ನಾಕರನಾಯಕ = ವರುಣ, ರತ್ನಶ್ರೇಷ್ಠ. ಶ್ರೀದ = ಕುಬೇರ, ದಾನಿ. ಐಶ್ಯಭವಂ?

1179. ಕೇಳ = ಕೇಳು. ಸಹಕಾರ = ಮಾವು. ಆಭೀಳ = ಭಯಂಕರ.

1180. ಇಂದ್ರಾತ್ಮಜ = ಅರ್ಜುನ. ಅರ್ಪು = ಶಕ್ತಿ.

1181. ಜೀರಗೆಯೊಕ್ಕಲಿಕ್ಕಿ = ಧ್ವಂಸಮಾಡಿ. ಲಲಾಮ = ತಿಲಕ.

1183. ವಿಪತಾಕಂ = ಗರುಡಧ್ವಜ, ವಿಷ್ಣು.

1185. ಪೊಡರ್ಪು = ತೇಜಸ್ಸು. ಚಂಡಿಕೆ = ದುರ್ಗಿ. ಬವರ = ಯುದ್ಧ.

1186. ಎಳೆವೆಣ್ = ಭೂದೇವಿ. ನೆಟಿಲ್ = ದ್ವಿತೀಯೆಗೆ ಪ್ರಥಮೆ. ಕಜ್ಜಳ = ಕಾಡಿಗೆ. ಗೋಮಿನಿ = ಭೂಮಿ.

1189. ಪದುಳಂ = ಕ್ಷೇಮದಿಂದಿರುವಂತೆ. ಮೇಖಳೆ = ಕಾಂಚಿ. ಕರಟಿ = ಆನೆ. ಬಿದು = ಗಂಡಸ್ಥಳ.

1191. ಬಡ್ಡೆ = ಬುಡ. ಮಾನಸಿಕ್ಕೆ = ಪೌರುಷ, ಅಭಿಮಾನ.

1192. ಭುವನ = ಲೋಕ, ನೀರು. ಸತ್ವ = ಬಲ, ಜಂತು. ಅನಂತಭೋಗ = ಅನಂತ ಸುಖ, ಆದಿಶೇಷನ ಮೈ. ಕೌತುಕ = ಆಶ್ಚರ್ಯ.

1193. ಕೂಟ = ಶಿಖರ. ಆಟಂದು = ಮುತ್ತಿ.

1194. ತೊಡರ್ವರ = ಸೆಣಸುವವರ. ಮಿಟ್ಟು = ಮೃತ್ಯು. ಉಜಿದೆ = ಹೆದರದೆ. ಪೊಡರ್ವವರ = ಜಂಬಮಾಡುವವರ. ಅಂಕಮಾಲೆ = ಬಿರುದಾವಳಿ. ಗಡಣದೆ = ಗುಂಪಾಗಿ.

1195. ಸೇಣಿ = ಶ್ರೇಣಿ. ಸನ್ನಾಹ = ಕವಚ.

1210. ಸುಧಾಂಬರಂ = ಬಿಳಿಯಬಟ್ಟೆ. ಕತ್ತುರಿ + ಇಂ. ಬಾಳಕಂ = ? ಪರಿಮಳ ದ್ರವ್ಯ.

1211. ತ್ರಿದಶಭುವನ = ಸ್ವರ್ಗ. ಭೀತರಿಗೆ, ಹೊಸರೂಪ. ಕ್ರಮಾಲಂಕಾರ.

1212. ಕರವಾಳ್ = ಕತ್ತಿ.

1213. ಅಟಿಜಿಸು = ಹೆದರಿಸು.

1214. ಇಟಿಕ್ಕೊಳಲ್ಕೆ = ಆಕರ್ಷಿಸಲು. ಮುಯ್ವಂ = ಹೆಮ್ಮೆಯನ್ನು.

1215. ಪಡೆಮಾತೇಂ = ಹೆಚ್ಚು ಮಾತೇತಕ್ಕೆ. ಶ.ಮು.ದ. 160 ನೆಯ ಸೂತ್ರದ ಕೆಳಗೆ ಉದಾಹೃತವಾಗಿದೆ.

1217. ಶೂಲ = ಹೊಟ್ಟೆಶೂಲೆ. ಚೋಳ = ಕವಚ.

1218. ಆಸ್ಫಾಳನ = ಹೊಡೆತ. ಶಿಂಶುಮಾರ = ಮೊಸಳೆ. ವೇಳಾ = ಅಂಚು.

1219. ಮೇಖಳಾ = ತಪ್ಪಲು. ಗೋತ್ರಾಚಳ = ಕುಲಪರ್ವತ. ಅಂಘ್ರಿಪ = ವೃಕ್ಷ.

1223. ಶ್ಲೇಷೆ. ಅರ್ಜುನ = ಅರ್ಜುನ, ಮತ್ತಿಯ ಮರ. ಶಶಾಂಕ...ತಂ = ? ಚಂದ್ರವಂಶದ ಧನವುಳ್ಳುದು, ಮೊಲಗಳು ಸೇರಿರುವ ಬಿದಿರು, ದತ್ತೂರಿಗಿಡ ಇವುಗಳಿಂದ ಕೂಡಿರುವುದು. ವಿಭ್ರಮ = ವಿಲಾಸ, ಪಕ್ಷಿಗಳ ಹಾರಾಟ. ಭೀಮನಕುಳ = ಭೀಮನಕುಳರು, ಭಯಂಕರವಾದ ಮುಂಗುಸಿ. ಪುಂಡರೀಕ = ಶ್ವೇತಚ್ಛತ್ರ, ಹುಲಿ.

1225. ಬಂಬಲ್ = ಸಮೂಹ.

1226. ಸೆಡೆ = ಹಿಮ್ಮೆಟ್ಟು. ಅಟ್ಟು = ಕ್ಷಯಿಸು.

1227. ಪಾಳಿ = ವರಿಸೆ. ನಾಗಲತಾ = ವೀಳೆಯದೆಲೆ. ಪೂಗ = ಅಡಕೆ, ಸಮೂಹ.

1228. ಕರಟ = ಕಪೋಲ. ದಾನ = ಖಂಡನ.

1229. ಗೊತ್ತು = ಸ್ಥಳ.

1230. ಪಿನಾಕಾಯುಧ = ಶಿವ. ನದೀಜ = ಭೀಷ್ಮ. ಕಲಶಜ = ದ್ರೋಣ. ಇನಜ = ಕರ್ಣ. ಇಂದ್ರಜ = ಅರ್ಜುನ.

1231. ಭವಂ = ಶಿವ. ಬರ = ವರ.

1232. ಘರಟ್ಟ = ಬೀಸುವ ಕಲ್ಲು.

1234. ಏಗೊಂಡು = ಸಮ್ಮತಿಸಿ.

1235. ಅವದಾತ = ಬಿಳುಪಾದ.

1238. ತಾರ = ಮುತ್ತು.

1244. ಪಾರ್ವಿನಂ = ಇದಿರು ನೋಡಲು.

1246. ಗಂಡುಮಗುಟ್ಟಿದತ್ತು = ಗಂಡಾಗಿ ಪರಿಣಮಿಸಿತು. ಬೇಟ = ಪ್ರೇಮ. ಕೇಸು = ಕೆಂಪಾದ. ಒಱಿಂತೆ = ಒರತೆ.

1247. ಬೆತ್ತಳಿಗ = ? ಬೆತ್ತವನ್ನು ಕೊಡುವವನು. ಘಟ್ಟಿವಳ = ಗಂಧವನ್ನು ಅರೆದು ಕೊಡುವವನು. ಅಡಪ = ಎಲೆಯಡಕೆ ಚೀಲ. ಕಮ್ಮಳಿಗ = ? ನಾಣ್ಯ ಮಾಡುವವನು. ಅಚ್ಚುಳಾಯ್ತ = ಪರಿಚಾರಕ. ಹೆಳೆಯು?

1248. ತಿಳ್ದಿ = ತಿದ್ದಿ. ತಟಿಕ್ಕೈಸಿ = ಆಲಿಂಗಿಸಿ. ಇಲ್ಲಿ ಕುಂತಲ, ಅಂಗ, ಲಾಟ, ಕಾಂಚಿ ಎಂಬ ದೇಶಗಳು ಸೂಚಿತವಾಗಿವೆ. ಪೃಥುಲ + ಲಾಟ, ಪೃಥು + ಲಲಾಟ.

1249. ಗೌರ = ಬಿಳಿಯು. ಶಂಕಿನಿ = ಶಂಕೆಯುಳ್ಳವಳು.

1250. ? ಮಂದ + ರಸ. ಸಾನು = ತಪ್ಪಲು. ಸುಮನಃ = ಒಳ್ಳೆಯ ಮನಸ್ಸು, ಹೂ

1252. ನರಶಾಸನ = ಮನುಷ್ಯ ರೂಪವಾದ ಶಾಸನ. ಪೊದಟಿಕೆ = ಅಭಿವೃದ್ಧಿ.

1253. ಅಜ್ಜಪಜ್ಜರಿಂಪಡೆದ = ವಂಶಕ್ರಮವಾಗಿ ಬಂದ. ಅಸಹಂ = ? ಶತ್ರು.

1254. ಸಯಂಬರ = ಸ್ವಯಂವರ. ತವಿಲ್ = ಕ್ಷೀಣತೆ.

1255. ಉಡುಪ = ಚಂದ್ರ. ಅಭವ = ಶಿವ.

1256. ಶ್ರೀವಚ್ಚಂ = ವಿಷ್ಣು. ವಚ್ಚ = ವತ್ಸ, ಆಭರಣ. ಗೌರಿ = ರೇಚರಸನ ಹೆಂಡತಿ; ಪಾರ್ವತಿ. ವೃಷಭ = ಧರ್ಮ, ಎತ್ತು.

1257. ಸೊವಡು = ಸೊಗಡು. ಬಿಸುಪು = ತಾಪ. ಕಮ್ಮೆಲರ್ = ಸುಗಂಧಿವಾತ.

1258. ಎಚ್ಚು = ಬಾಣಪ್ರಯೋಗಮಾಡಿ. ಕಾಶ್ಮೀರ = ಕುಂಕುಮದ ಹೂ. ಚಂಗಾಳ್ವ = ಒಬ್ಬ ದೊರೆ.

1259. ವೇಳೆ = ದಡ. ವೇಳೆಗೊಂಡು = ಅವಕಾಶ ಹೊಂದಿ.

1266. ಕ್ರಮಾಲಂಕಾರ.

1261. ತೊಡರ್ಪು = ಸಂಬಂಧ. ಪತ್ತುಗೆ = ಸೇರುವಿಕೆ.

1262. ಬೊಪ್ಪಂ = ಸ್ವಾಮಿ.

1263. ಅಣ್ಮುಗೆ = ಪರಾಕ್ರಮಂ.

1265. ಒಡವೆಂ = ಸ್ವತ್ತು.

1266. ಸಾಲಭಂಜಿಕೆ = ಪ್ರತಿಮೆ.

1267. ಜೂಟ = ಜಡೆ. ಮುಗ್ಧತ್ವ = ನಿಷ್ಕಾಪಟ್ಯ.

1268. ಕುಂತಳದೇಶ = ಮುಂಗೂದಲಸ್ಥಾನ. ಕಬರಿಕಾ = ಕೂದಲು.

1269. ಕುಡಿಯುರು = ಒಕ್ಕಲಿಗರು. ನಾಟ್ = ನಾಡು.

1271. ಶ್ಲೇಷೆ. ಸರ = ಕೊಳ, ಸ್ವರ. ರಾಜಹಂಸ = ಶ್ರೇಷ್ಠವಾದ ಹಂಸ, ಚಂದ್ರ ಸೂರ್ಯರು. ಆರವೆಂ = ಆರಾಮ, ಆ ಲಕ್ಷ್ಮಿ.

1272. ಬಯ್ತ್ತಂ = ಬಚ್ಚಿಟ್ಟನು.

1273. ನಿಸರ್ಗ = ದಾನ. ಭರ್ಗ = ಶಿವ.

1274. ವಿಬುಧಭೂಜ = ಕಲ್ಪವೃಕ್ಷ. ರಾಜ = ಚಂದ್ರ. ಸುಮನೋರಾಜ = ಇಂದ್ರ.

1277. ಆಲವಾಲ = ಪಾತಿ.

1278. ವ್ಯಾಕೋಚ = ವಿಕಸಿತ.

1279. ಶ್ರೋಣಿ = ನಿತಂಬ.

1281. ಶಿತಿ = ಕಪ್ಪಾದ.

1283. ತಾರ = ಮುತ್ತು, ಬಿಳಿ.

1285. ನೃತ = ಸತ್ಯ.

1286. ಟೆಂಟಣಿಸು = ಪ್ರತಿಭಟಿಸು.

1287. ಪುಲ್ಮಾನಸರ್ = ಅಲ್ಪಮನುಷ್ಯರು.

1284. ಸಪ್ತಾಂಗ = ಸ್ವಾಮ್ಯಮಾತ್ಯಾದಿ.

1291. ಹಸಗಾಲ = ಕ್ಷಾಮಕಾಲ. ಬೆಸನ = ಚಿಂತೆ.

1292. ಆರವೆ = ಆರಾಮ, ತೋಟ. ಉಜ್ಜುಗ = ಉದ್ಯೋಗ.

1294. ಅನೇಕಪ = ಆನೆ.

1296. ಅಳ್ಕುಱ್ = ಭಯವನ್ನು ಹೊಂದಲು. ಉತ್ತು, ಉಟ್ಟು ಎಂದಿರಬೇಕು.

1297. ಬೆಸನಂ = ಕೆಲಸವನ್ನು. ಚಿಂತೆ + ಇಲ್ಲದಂತೆ.

1299. ಪೀಯೂಷಹಸ್ತ = ಅಮೃತಕರ, ಚಂದ್ರ.

1300. ಬಲ, ಸುಮನಃ, ಗುರು ಇವುಗಳಲ್ಲಿ ಶ್ಲೇಷೆ.

1301. ಮಿತ್ರಾತ್ಮಜ = ಕರ್ಣ.

1302. ಗಾಳು = ಧೂರ್ತ.

1306. ಇದು ಜೈನರ ಬ್ರಹ್ಮದೇವನ ವರ್ಣನೆ. ಹಟ್ಟಿಗೆ = ಪಟ್ಟಿಕೆ. ಜನ್ನುರ = ಜನಿವಾರ. ಭೃಂಗ = ? ಅಭ್ರಕ.

1319. ಅಮರಾಲಯ = ದೇವಸ್ಥಾನ.

1320. ಸಯ್ಪು = ಪುಣ್ಯ. ಸಮ್ಮನಿಸು = ಪ್ರಾಪ್ತವಾಗು.

1321. ಕೋಕನದ = ತಾವರೆ.

1332. ಆಲೇಖ್ಯ = ? ಪಟ, ಬರೆಯಲು ಯೋಗ್ಯವಾದ.

1323. ಅರ್ಜುನ ಶ್ಲೋಕ = ಧವಳಕೀರ್ತಿ. ಧಾತ್ರೀಧವ = ರಾಜ. ರಾಮ, ಅರ್ಜುನ, ಶತಾನೀಕ, ವತ್ಸ ಎಂಬ ಪೂರ್ವರಾಜರ ಹೆಸರುಗಳು ಸೂಚಿತವಾಗಿವೆ.

1324. ಯುಗ್ಮ = ನೊಗ. ಪಿಳ್ಕು = ಪುಂಖ.

1325. ಉಂಡಿಗೆ = ಮುದ್ರೆ. ತೀವ್ರರುಕ್ = ಸೂರ್ಯ.

1326. ಬಾರಿಸಿತ್ತು = ತಿರಸ್ಕರಿಸಿತು.

1328. ಪೊಂಪುೞಿ = ಆಧಿಕ್ಯ. ಗುಂಪು = ಸಂದಣಿ.

1329. ಪುದುಂಗೊಳೆ = ಸೇರಿದ ಹಾಗೆ. ಪೊದಟ್ಟಿ = ಪೊರ್ದುಗೆಯಾದ.

1330. ರಮ್ಯ, ಬಿಂದುವಿಲ್ಲ. ವಿದಗ್ಧತಾ = ವೈದುಷ್ಯ, ಪಾಂಡಿತ್ಯ.

1332. ಎಱೆಯಂ = ಸ್ವಾಮಿ.

1335. ಕಲ್ಕ = ಕಳಂಕ.

1337. ಪೊಡರ್ವ = ಪ್ರತಿಭಟಿಸುವ. ಓಗಡಿಸದ = ಹಿಂದೆಗೆಯದ.

1338. ನೇರ್ಗಿಱಿಯಂ = ? ಅನುಜ, ಶಿಷ್ಯ.

1339. ವರ್ಣೆ = ಯತಿ. ಪರುಸಂ = ಸ್ಪರ್ಶವೇದಿ.

1340. ಹರಿ = ನೀರು, ಕುದುರೆ, ಸೂರ್ಯ, ಸಿಂಹ. ಪದ್ಮ = ಕಮಲ, ದೇವಸ್ಥಾನ, ಲಕ್ಷ್ಮಿ (ಪದ್ಮಾ), ಹಾವು, ಹಂಸ = ಹಂಸ, ಯತಿ, ಕಾಂತಿ, ಕೋಣ. ಪುಂಡರೀಕ = ತಾವರೆ, ಶ್ವೇತಚ್ಛತ್ರ, ಕಲ್ಪವೃಕ್ಷ, ಹುಲಿ.

1342. ಪಾಟಿ = ಸಮಾನ.

1343. ಶುಂಡಾಳ = ಆನೆ.

1344. ಉರವಣೆ = ವೇಗ. ತಕ್ಕು = ಪ್ರಭಾವ.

1345. ಜಾಳಕ = ಜಾಳಾಂದರ, ಸಮೂಹ. ಬಾಣಸು = ಅಡಿಗೆಯ ಮನೆ. ಕೊಟ್ಟಾರ = ಉಗ್ರಾಣ. ವಪ್ರ = ಪ್ರಾಕಾರ. ಉದವಾಸ = ಕೊಳದ ಬಳಿ ಮನೆ.

1346. ಇರ್ವಗಿ = ಎರಡು ಭಾಗ.

1348. ಕೋಳ್ಪೋಯ್ತೆ = ವಶವಾಯಿತೇ.

1349. ಧರ್ಮಗುಣ = ಬಿಲ್ಲಿನ ಹಗ್ಗ, ಧರ್ಮಗುಣ.

1351. ಅಚ್ಯುತ = ವಿಷ್ಣು, ಬಿಡದ. ದೇಸೆಗೆ = ಅಲಂಕಾರಕ್ಕೆ.

1352. ಅಱ್ತಿಯೆ = ಪ್ರೀತಿಯಿಂದ. ಅಳಿಪು = ಆಶೆ.

1353. ಮಂತಣ = ಮಂತ್ರಾಲೋಚನೆ.

1354. ಜೀವನ = ನೀರು. ಬಾಳು.

1355. ಸುರಭವನ = ದೇವಾಲಯ.

1356. ಜೀವಧನ = ಆಕಳು.

1357. ಅಣಿ = ಸೇನೆ, ಚೆಚ್ಚರಂ = ಬೇಗನೆ, ತಾ, ಬಿಂದುವಿಲ್ಲ.

1358. ಇಂಡೆಯಾಡಿ = ? ಕ್ರೀಡಿಸಿ. ಪೂಣಿಗ = ವೀರ.

1359. ಜೂಟ = ಜಡೆ.

1363. ಬಗ್ಗಿಸು = ಕೂಗು. ಅಗುರ್ವಿನ = ದಿಗ್ಭ್ರಮೆಯನ್ನು ಹುಟ್ಟಿಸುವ.

1364. ಏೞ್ವರೆಲಕ್ಕೆ = ಏಳೂವರೆ ಲಕ್ಷದೇಶ, ರಟ್ಟವಾಡಿ. ಏೞ್ವರೆ, ಈ ರೂಪ ಚಿಂತ್ಯ. ನಿಗಳವಿಕ್ಕಿದಂ = ಬಂಧಿಸಿದನು.

1365. ಟೆಂಟಣಿಸು = ಕೋಪಿಸು, ಗರ್ವಿಸು. ಕಂಟೆಯಬಾರ = ಕಂಟಕದ್ವಾರ. ಪಾಣಿಯಬಾರ = ಪಾನೀಯದ್ವಾರ.

1368. ಪಾಥೋದಂತಿ = ನೀರಾನೆ. ಉಡ್ಡೀನ = ನೆಗೆದ. ಅರವ = ಶಬ್ದ.

1370. ದರೀ = ಗುಹೆ. ರುಂದ್ರ = ವ್ಯಾಪ್ತ.

1371. ಶ್ರೀ + ಮಜ್ಜನ, ಶ್ರೀಮತ್ + ಜನ. ಸುಮನಃ = ಪುಷ್ಪ, ಸಜ್ಜನ.

1373. ಅರ್ಬಿಪ = ವ್ಯಾಪಿಸುವ. ಉರ್ವರಂ = ಆಧಿಕ್ಯ. ಅಜೆ಼ಯಟ್ಟಿ = ಹಿಮ್ಮೆಟ್ಟಿ. ಕೋಳ್ = ಹಿಡಿತ.

1374. ಮೂರಿ. 39 ನ್ನು ನೋಡಿ.

1375. ಸ್ರೋತಂ = ಪ್ರವಾಹ.

1380. ಲೇಖಾ = ರೇಖೆ.

1383. ಸೊರೆ = ಸೋರೆಯಕಾಯಿ. ಕರೆ = ? ವೀಣಾದಂಡ. ದಂಡಿಗೆ = ವೀಣೆ. ಬೀವು = ನರ.

1384. ಇರ್ಪನು, ಹೊಸರೂಪ.

1390. ಆಳ್ವೆಱೆ = ಆಳುವೇರಿ. ಡೆಂಕಣಿ = ಧ್ವಜಸ್ತಂಭ.

1391. ಅರ್ಕಜ = ಯಮ. ಕೂಡಿದಳು, ಹೊಸರೂಪ.

1393. ಅಂಕೆಗೊಳ್ = ಹಿಡಿ, ಇದಿರಿಸು. ಒಕ್ಕಲಿಕ್ಕು = ನಾಶವಮಾಡು. ಅಂಗರಿಕ = ಅಂಗರಕ್ಷಕ.

1399. ಅಪವರ್ಗ = ಮೋಕ್ಷ.

1400. ಆಲಿ = ವರ್ಷೋಪಲದಂತೆ. ವೈಕೊಂತ = ವೈಕುಂಠ.

1401. ಉಮ್ಮಳಿಯಪ್ಪಿನಂ = ಶೋಕಿಸುವಂತೆ. ಅಮ್ಮಿ = ಅಣ್ಮೆ : ಹೊಸರೂಪ.

1402. ಬಿಳೆವೋಪಿನಂ?

1403. ಆಸುರ = ಭಯಂಕರ. ಗೆಲ್ಲ = ಜಯ.

1404. ಜೂಬು = ಯೂಪ. ಚೆಮ್ಮಟಿಗೆ = ಚರ್ಮಪಟ್ಟಿಕೆ, ಚಾಟಿ.

1407. ಕಿಱಿಪು = ? ತಿರುಗಿಸು.

1408. ದಶಾವತಾರಗಳು ಸೂಚಿತವಾಗಿವೆ. ಸೌಕರ್ಯ = ಅರ್ಥಾಂತರ ಸೂಕರತ್ವ. ತ್ರಿಕ್ರಮಂ = ತ್ರಿವಿಕ್ರಮ. ಕಲಿ = ಕಲ್ಕಿ.

1409. ಪಟಹ = ಭೇರಿ. ಅಣಕ = ? ಅತಿಶಯ.

1410. ವಾಹಿನಿ = ನದಿ, ಸೈನ್ಯ. ರಾಜವಂಶ = ಶ್ರೇಷ್ಠವಾದ ಬಿದಿರು, ರಾಜಕುಲ. ಕವಿ = ಜಲಪಕ್ಷಿ, ಕವಿ.

1411. ಉಮ್ಮಳ = ತಾಪ.

1413. ಕ್ಷಮಾಜ = ವೃಕ್ಷ.

1415. ಕ್ರಮಾಲಂಕಾರ.

1416. ಜಕ್ಕುಲಿಸು = ಪರಿಹಾಸಮಾಡು. ಮಾರಿಡು = ಅಳತೆಮಾಡು. ನಿಕ್ಕುವಂ = ನಿಜವಾಗಿ.

1417. ದವ = ಕಾಡುಗಿಚ್ಚು. ಪವಿ = ವಜ್ರ. ಪೊಂಗಿ = ಬೀಗಿ.

1418. ಅಳಿಪು = ಆಶಿಸು.

1419. ಪರವಧೂ...ನಂ = ಪರನಾರೀಪುತ್ರನನ್ನು.

1420. ನಿಱಿಸು = ಪೊರ್ದುಗೆ. ತೇರ್ರೈಕೆ = ಹಿಂದಕ್ಕೆ ಹೋಗುವುದು. ಭೃಗು = ಶುಕ್ರಾಚಾರ್ಯ. ಇವು ಜಟ್ಟಿಗಾಳಗಕ್ಕೆ ಸಂಬಂಧಿಸಿದ ಸಂಕೇತ ಶಬ್ದಗಳು.

1421. ತೀರ್ಥಂಕರ = ಜಿನ.

1424. ಲಕ್ಷ್ಮಣ = ಶುಭಚಿಹ್ನಗಳುಳ್ಳವನು, ಲಕ್ಷ್ಮಣ. ಸು + ಮಿತ್ರ, ಸುಮಿತ್ರಾ.

1425. ಬೆಳಪ್ಪಂ = ಬೆಳಗುವವನು.

1426. ತೊಡರ್ = ಬಂಧನ.

1428. ಬಹುವಕ್ತ್ರಂ = ಒಂದೇ ಮಾತಿಲ್ಲದವನು, ಅನೇಕ ಮುಖವುಳ್ಳವನು. ದನುಜ ಗುರು = ಶುಕ್ರಾಚಾರ್ಯ. ಗುರು = ಆಚಾರ್ಯ, ಬೃಹಸ್ಪತಿ. ಜೀವಂ = ಬೃಹಸ್ಪತಿ. ಸುರ + ಅಧೀಶ, ಸುರಾ + ಅಧೀಶ. ಅ(ವಿಷ್ಣುವಿನ) + ಕಾರ್ಯ.

1429. ಗೆಡೆಗೊಂಡಂ = ಸ್ನೇಹಿಸಿದವನು. ಪಡಿ = ಸಮಾನ.

1430. ಓಜು = ? ಉಪಾಧ್ಯಾಯ.

1433. ಚಮರೀಜಕಾಂತೆ = ಚಾಮರ ಹಾಕುವವಳು. ಬುದ್ಧಿವಾನಸೆ = ಮಂತ್ರಿ. ಸಜ್ಜನಂ = ಹೆಂಡತಿ.

1435. ರವಿಸುತ = ಕರ್ಣ. ಪವಮಾನತನೂಜ = ಭೀಮ. ವಾಸವಸುತ = ಅರ್ಜುನ. ಅಶ್ವಿನಿದೇವಪುತ್ರರು. = ನಕುಲ ಸಹದೇವರು. ಪ್ರತಿಮ = ಸಮಾನ.

1436. ಕರಟ = ಕಪೋಲ. ಜಕ್ಕುಲಿಸು = ಅಲ್ಲಾಡಿಸು.

1451. ವಿಸಸನ = ಯುದ್ಧ.

1452. ಕಣ್ಬೊಲ = ಕಟಾಕ್ಷಪ್ರಸರ.

1453. ಸಂಗಡಿಗಂ = ಸ್ನೇಹಿತ. ತಿಂಗಳ್ = ಚಂದ್ರ. ಮಧು = ವಸಂತ.

1454. ತಱಿಸಂದು = ನಿಶ್ಚಯಿಸಿ. ಕೇತಮಲ್ಲ, ಬಿಂದುವಿಲ್ಲ.

1455. ದುಂದುಮೆ = ದುಂದುಭಿ, ? ನರ್ತನ.

1468. ಅವಂದಿರ = ಅವರ.

1469. ನಿಷ್ಪ್ರತ್ಯೂಹ = ಅಡ್ಡಿಯಿಲ್ಲದ.

1470. ಜಾಯಾ = ಹೆಂಡತಿ. ನಿಸ್ತ್ರಿಂಶ = ಕತ್ತಿ.

1471. ಅಳ್ವಿ = ಪೀಡಿಸಲು. ಕಾಯಿ = ರಕ್ಷಿಸು, ಹೊಸರೂಪ.

1472. ಮಾರಿಟ್ಟು = ಮಾರಿನಿಂದ ಅಳತೆಮಾಡಿ. ಒಕ್ಕೈಸು = ಹಿಡಿ. ದಿಂಕಿಡು = ದಾಟು. ಪೃತನಾ = ಸೈನ್ಯ.

1477. ಕಟವೆ = ಭತ್ತ.

1478. ಪರಲ್ = ಕಲ್ಲು.

1480. ಎಡರ್ = ಬಡತನ.

1481. ಕರು = ಮೂಲಸ್ಥಾನ.

1482. ದೋಷ + ಅವಳಿ, ದೋಷಾ (ರಾತ್ರಿ) + ಅವಳಿ.

1483. ಕಮ್ಮಟ = ಟಂಕಸಾಲೆ.

1484. ಅಳಱು = ಹೆದರು. ಆಟವಿಕ = ಧೂರ್ತ. ಎಯ್ದೆ = ಹೆಚ್ಚಾಗಿ.

1485. ಆಲಾನ = ಆನೆಯನ್ನು ಕಟ್ಟುವ ಕಂಬ.

1486. ನಾಟ್ಪ್ರಭು = ನಾಡಿನ ಸ್ವಾಮಿ.

1487. ಟಕೆಯು = ಧ್ವಜ.

1490. ಎಱೆಯು = ಸ್ವಾಮಿ.

1491. ಬಿಟ್ಟಿಗ = ವಿಷ್ಣುವರ್ಧನ. ಪಡಲಿಡು = ಬೀಳು.

1492. ಅಣ್ಮುಟ್ಟು = ? ಸಮೀಪ. ಎಟಲಿಕ್ಕಿ = ಜೋಲಿಸಿ.

1493. ಶುಂಡಾಳ = ಆನೆ.

1494. ಅಳ್ವು = ವ್ಯಾಪಿಸು. ಅಟ್ಟಾಡು = ನಿಶ್ಶೇಷವಾಗು.

1495. ದಂಭೋಳಿ = ವಜ್ರಾಯುಧ. ನಾಗಾರಿ = ಸಿಂಹ. ಅಹಿ (ವೃತ್ರ) ವೈರಿವೈರಿ = ಇಂದ್ರಜಿತು.

1496. ಕೋಟ್ = ಕೋಡು.

1499. ಎಱಕ = ಪ್ರೀತಿ.

1500. ತೆಗೞ್ = ನಿಂದಿಸಲು.

1505. ಪೆಕ್ಕಣ = ನರ್ತನ.

1511. ನಟ್ಟುವಿಗ = ನಟುವ.

1513. ಘುಸೃಣಂ = ಕುಂಕುಮದ ಹೂ.

1514. ಲತಾಂತ = ಪುಷ್ಪ.

1516. ವಾಹಿನೀ = ಸೈನ್ಯ, ಗಂಗೆ. ವೃಷ = ಧರ್ಮ, ಎತ್ತು.

1517. ಸುಮನೋಭೂಧರ = ಮೇರು. ಪತ್ರ = ವಾಹನ. ಎಲೆ.

1518. ಕವಿ, ಭೃಗು = ಶುಕ್ರ. ಐವರ್ = ಐಗೈವರು.

1519. ಶಶಕಪುರ = ಅಂಗಡಿ ಎಂಬ ಸ್ಥಳ.

1520. ಖಚರ = ಜೀಮೂತವಾಹನ.

1521. ನೆಱವು = ಪೂರ್ತಿ.

1523. ಒಡಮೆ = ಸ್ವತ್ತು. ಕೆಟ್ಟನೆ = ಕೆಟ್ಟೇಕೆಟ್ಟನು.

1526. ಎಬ್ಬಿಟ್ಟು = ಓಡಿಸು. ಉರ್ಕು = ಬಲ. ಅಳುರ್ವ = ವ್ಯಾಪಿಸುವ.

1527. ಗಗನಾಹಿ = ರಾಹು.

1530. ಅಸ್ವಪ್ನಾದ್ರಿ = ಮೇರು.

1531. ಕಾನೀನ = ಕರ್ಣ.

1534. ಸಮಾಧಿ = ಅನಶನವ್ರತ.

1535. ಕಳಿವೆಡೆ? ಪಂಚಪದಂ = ಅರುಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಸಾಧುಗಳಿಗೆ ನಮಸ್ಕಾರ ಎಂಬ ಐದು ಮಾತುಗಳು. ಎಕ್ಕಲಾವಣಂ = ಏಕಾಯತ್ತ.

1536. ಸಂವಿತ್ = ಜ್ಞಾನ.

1537. ಸುಮನೋವಿಭೂತಿ = ದೇವತೆಗಳ ಐಶ್ವರ್ಯ.

1540. ಪರ್ಯಂತ ಬಿಂದುವಿಲ್ಲ.

1547. ಭಿದುರ = ಸಿಡಿಲು. ರುವತ್ = ಶಬ್ದ ಮಾಡುವ. ದೊರೆ = ಸಮಾನ.

1551. ವಕ್ಕೆ (ಬಕ್ಕೆ) = ಹಲಸು.

1553. ನಿಸ್ಸಾಣ = ಭೇರಿ. ಸುಸ್ವಸ್ಥರ್ = ಸುಖಿಗಳು, ಸ್ವರ್ಗವಾಸಿಗಳು.

1554. ಆಟಿಪ = ಆಶೆಪಡುವ. ಬಳ್ಳು = ನರಿ.

1555. ಬಲುಗಂಡ, ಹೊಸರೂಪ. ಆಳಿಸಿ = ? ಆಡಿಸಿ.

1556. ಒಳುಗಂಡ, ಹೊಸರೂಪ.

1557. ತೊಂಡರ್ = ದುಷ್ಟರು. ಮಂಡಲೀಕ = ಬಿಂದುವಿಲ್ಲ.

1559. ಬಿನವ, ಬಿಂದುವಿಲ್ಲ. ಬಸವಟಿ = ಮೂರ್ಛೆಹೋಗು.

1560. ಕುಂಭಿನಿ = ಭೂಮಿ, ಹೆಣ್ಣಾನೆ. ಸ್ಫಟಾ = ಹೆಡೆ. ನೆರ್ಮಿ = ಅವಲಂಬಿಸಿ. ಕುಂಜ = ಪೊದರು. ಆಳಾನ = ಆನೆಯನ್ನು ಕಟ್ಟುವ ಕಂಬ.

1564. ಇಳಾ = ಭೂಮಿ, ಬುಧನ ಹೆಂಡತಿ. ಅಪಡಕ್ಷೀಣ = ಗೂಢ, ಗಂಭೀರ. ಉಮಾ = ಪಾರ್ವತಿ, ಬಲ್ಲಾಳನ ಹೆಂಡತಿ.

1565. ಆನರ್ತ = ರಂಗಸ್ಥ ಲ.

1566. ದೇಸಿ = ಅಲಂಕಾರ.

1568. ಕ್ರಮಾಲಂಕಾರ. ಉತ್ಸಂಗ = ತೊಡೆ. ಅಭಿಷವ = ಅಭಿಷೇಕ. ಎಡಱ = ಸೋತಂ. ಊಡು = ಆಹಾರ. ಆಗವೇಡಾ = ಆಗಬೇಡವೇ.

1570. ಪೊಲಂಗೊಂಡು = ದಿಕ್ಕುದಿಕ್ಕಿಗೆ. ಗಾಂಪು = ಮುಟ್ಠಾಳತನ.

1573. ಮಾಧವ = ವಸಂತ. ತಕ್ಕು = ಯೋಗ್ಯತೆ.

1575. ಪರತ್ರೆ = ಪರಲೋಕ. ಇಹತ್ರೆ = ಇಹಲೋಕ.

1576. ದೊರೆವಡೆ = ಯೋಗ್ಯನಾಗು. ಅಳವಿ = ? ನಂಬಿಕೆ.

1578. ವಿಧು = ಚಂದ್ರ. ಭೋಗಿನೀಜಾಯಂ = ಆದಿಶೇಷ. ರಥಿನೀ = ಸೇನೆ.

1580. ನಮೇರು = ವೃಕ್ಷಭೇದ. ಸಾಧನೆವೋಯ್ತು = ಸ್ವಾಧೀನವಾಯ್ತು.

1582. ಎಕ್ಕವದಂ = ಏಕಪದ.

1585. ಬೀಸರಂಬೋಗು = ಕೆಡು. ಎಡರ್ = ಕಷ್ಟ. ತಾತ್ಪರ್ಯ = ತತ್ಪರತೆ.

1586. ಬಲ್ಲಿಗೆ? ಪಾಪೆ = ಬೊಂಬೆ.

1588. ಕೈಪಿಡಿ = ? ಅವಲಂಬನ.

1589. ಪೆಂಡಾರ = ಪೆಂಡೆಯ.

1591. ಪೂಣ್ಕೆ = ಪ್ರತಿಜ್ಞೆ.

1592. ಒಡದೊಱೆದಂ = ಸಂಗಡ ಸನ್ಯಾಸಗೈದು. ನಿಗ್ಗಡಿ = ನಾಚಿಕೆಗೇಡಿ.

1598. ಲೆಂಕ = ಭೃತ್ಯ. ಪುಚ್ಚೞಿವರ್ = ಕೆಡುವರು.

1601. ಅವಯವಗಳಿಗೆ ಮೂರು ಮೂರು ಉಪಮಾನಗಳು ಕೊಟ್ಟಿವೆ.

1604. ಬೇಳ್ಮಾಡಿ = ಮರುಳುಮಾಡಿ. ಪಿಂಬಡು = ಅನಂತರ. ಱೋಡಾಡು = ಪರಿಹಾಸಮಾಡು.

1605. ಅಯ್ವದಿಂಬರ್ = ಐವತ್ತು ಮಂದಿ.

1606. ವೇಳೆ = ಪ್ರತಿಜ್ಞೆ.

1607. ಕೌಶಿಕ = ಗೂಗೆ. ವಿಷ್ಣ = ವ್ಯಾಪ್ತವಾದ.

1611. ಮಗರೆಗ = ಒಬ್ಬದೊರೆ.

1614. ಎನಸು + ಉಂತು. ಪೂರ್ವಾರ್ಧವು ಸರಿಯಾಗಿ ಅರ್ಥವಾಗುವುದಿಲ್ಲ.

1618. ಸವಖಂಡಂ = ಸಮಖಂಡವಾಗಿ. ಇನಿಯರಂ = ಗಂಡರನ್ನು. ಛಟಾ = ಕಾಂತಿ.

1619. ಜಟಾ = ಬೀಳಲು, ಜಡೆ.

1621. ಸೆರಗಂ = ? ಭೇದ.

1622. ಮಡ, ಬಿಂದುವಿಲ್ಲ. ಪೇಷಣಹಣ್ಮ = (ಶತ್ರುಗಳನ್ನು) ನಾಶಮಾಡುವುದರಲ್ಲಿ ಹನುಮಂತ.

1623. ಕೈವಾರ = ಸ್ತುತಿ. ದಟ್ಟುಮಾಡು = ? ಹಿಂಸಿಸು,

1624. ತಡಂಬೊಕ್ಕು = ಪ್ರಸರಿಸಿ. ಕಂಜಪ್ರಿಯುಂ = ಸೂರ್ಯ.

1625. ಅದಿಯುಮ = ಚೋಳರ ಸೇನಾಪತಿ. ಮಕರ, ಕಾಡವ; ರಾಜರು. ಕವರ್ತೆಗೊಳ್ = ಹಿಡಿ. ಎಟ್ಟಿರಕ್ಕೆ ತಂದುದಂ = ಉದ್ಧರಿಸಿದುದನ್ನು.

1626. ಊಡು = ಆಧಾರ. ಸೆಱಂಗು = ಅಂಚು. ನಿಱಿಪ + ಇನಿತ್ತು.

1627. ಕರಂ = ಸೊಂಡಿಲು.

1628. ಧಾರೆ = ಅಲಗು.

1629. ದುಸರ = ಜೋಡುಸರ. ಓಯರ = ? ಚೆಲ್ವು.

1630. ಶ್ಲೇಷೆ. ಶ್ರೀ = ಲಕ್ಷ್ಮಿ, ವಿಷ. ದ್ವಿಜರಾಜ = ಗರುಡ, ಚಂದ್ರ. ಗೋಪ = ಗೋಪಾಲ, ವೃಷಭ. ಅಬ್ಜ = ಕಮಲ, ಚಂದ್ರ.

1638. ದೇವರ್ = ದಿಕ್ಪಾಲರು. ಡಕ್ಕೆವಾಜಿಸೆ = ಡಬಡಬ–ಎನಲು. ಮೂವಿಟ್ಟಿಗಂ ಬರಿಸಿದಂ = ? ದಾಸರನ್ನಾಗಿ ಮಾಡಿದನು. 995 ನ್ನು ನೋಡಿ.

1639. ಭೃಗುಸುತ = ಪರಶುರಾಮ. ರಂಹ = ವೇಗ.

1641. ಅಳಿಱು = ಕೆಸರು.

1642. ಸುತ್ಥಣೆಯರ್ = ? ವೀರರು. ಶ.ಮು.ದ. ಸೂತ್ರ 15 ರ ಕೆಳಗೆ ಈ ಶಬ್ದವು ಬಂದಿದೆ. ಪರ್ಯ್ಯಾಣ = ಪಲ್ಲಣ.

1645. ಎಕ್ಕಲಾವಣಂ = ಏಕಾಯಂತ್ರ.

1646. ಜವರಾತುಂ ಇತ್ಯಾದಿ, ಮರಾಠಿ. ಡೆಂಚೆಯು = ಅಂಬಾರಿ.

1647. ಅಳುರ್ಕೆಯಿಂದೆ = ಆವರಿಸಿ.

1650. ಮಿಂಗಿಲ್ಗಣ್? ಆಕಲ್ಪಂ = ಆಭರಣ.

1651. ತೆಂಕಣರಾಯ = ಹೊಯ್ಸಳರಾಜ. ದಂಡೆ = ? ಹಾರ. ಅಡ್ಡಣ = ಹಲಗೆ. ಗುರಾಣಿ. ಲೆಪ್ಪ = ಪ್ರತಿಮೆ. ಎಂಬ = ಎನ್ನುವೆಯಾ. ಎಣಿಸಾ = ಎಣಿಸು.

1652. ಬೊಟ್ಟು = ಬೆರಳು. ಒಂಕಿರ್ದ = ? ಘಟಿಸಿದ.

1653. ಉತ್ಸೇಕ = ಗರ್ವ. ಪದನಂ = ಸ್ಥಾನವನ್ನು.

1654. ರಞಂಪಿಸು = ? ಬೆಳಗು. ಮಾಱಂಡಲ = ? ಸಾಟಿ. 723 ನ್ನು ನೋಡಿ.

1656. ಪಾಂಚಾಳಿಕಾ = ಪುತ್ತಳಿ.

1657. ಪದ್ಮ = ಕಟ್ಟಡದಲ್ಲಿ ಭೇದ, ಕಮಲ. ಕೀರ್ತಿ = ? ಕೀರ್ತಿಮುಖ (ಸಿಂಹ ಲಲಾಟ). ಕುಮುದ, ಘಂಟೆ = ಕಟ್ಟಡದ ಭಾಗಗಳು.

1658. ನಗವಾಯ್ ಇತ್ಯಾದಿ. ಕಟ್ಟಡಕ್ಕೆ ಸಂಬಂಧಿಸಿದ ಸಂಕೇತಶಬ್ದಗಳು.

1662. 235 ನ್ನು ನೋಡಿ.

1663. ಬಾಯ್ಕೋಳಿಸಿ = ವಶಮಾಡಿಕೊಂಡು. ಆಂಕೆ = ಎಲ್ಲೆ. ಏಳಿಸಿದಂ = ತಿರಸ್ಕರಿಸಿದನು.

1666. ಸಪ್ತಾಂಗ, 778 ನ್ನು ನೋಡಿ.

1668. ನಾಳ್ವರ್ತನ = ? ದಿನಗೆಲಸ.

1672. ರಂಭಾ = ಬಾಳೆ, ತುಱುಗಲ್ = ಸಮೂಹ. ಕಲಿಕಾ = ಮೊಗ್ಗು.

1673. ಕೋಡುವ = ಕುಳಿರ್ವ. ಸೂಡು = ತಾಪ.

1678. ಅಭ್ರಂಕಷತಾ = ಗಗನವನ್ನು ಮುಟ್ಟುವಿಕೆ. ಚೂಳ = ಶಿಖರ. ಉತ್ತಾಳತೆ = ಉದ್ದ.

1689. ಅಡಗುವಂ = ಅಡಗುವ. ನಡಪಲಿ = ಕಾಪಾಡಲಿ, ಹೊಸರೂಪ.

1696. ದಿಗುಂಭರ, ಹೊಸರೂಪ. 587 ನ್ನು ನೋಡಿ.

1697. ಕಡುಪು = ವೇಗ. ಕುಡುವಂ = ಕೊಡೋಣ.

1698. ಒಡ್ಡಣಂ = ಸೈನ್ಯ. ಅಣಿ = ಸೈನ್ಯ.

1701. ಇರ್ಕು, ಹೊಸರೂಪ.

1702. ಬಾಹುಪೂರಕ = ಕೇಯೂರ.

1704. ಆಂತರಿಗೆ, ಹೊಸರೂಪ.

1705. ಮಧುಚ್ಯುತಂ?

1706. ಅಱವಟ್ಟು = ಅರವಟ್ಟಿಗೆ.

1707. ಅಂತಿರಲಿ = ಹಾಗಿರಲಿ. ಹೊಸರೂಪ.

1710. ಕುಳ ಲಕಾರಗಳಿಗೆ ಪ್ರಾಸ.

1711. ಪ್ರ. ಶಿಥಿಲ. ಬಣ್ಣಿಪರು, ಹೊಸರೂಪ.

1712. ಕೊಂದ, ಬಿಂದುವಿಲ್ಲ.

1713. ಮಿದುಳುಗಳಿಂ, ಹೊಸರೂಪ. ಪೊನಲ್ಗಳಿಂದೆ, ಶಿಥಿಲ.

1715. ಮೋಹರ = ಸೈನ್ಯ. ಕಟಾರ = ಕಟಾರಿ.

1724. ಕುಂಚ = ಚಾಮರ.

1725 ಸಾವಗಿಸದೆ = ಸುಮ್ಮನಿರದೆ.

1731. ಕರಪತ್ರಂ = ಕೈಯಕಟಾರಿ.

1731ಅ. ತೆಮಱು = ನಾಶಮಾಡಿ.

1733. ಸೆಟ್ಟಿವಟ್ಟ = ಸೆಟ್ಟಿಯುಪಟ್ಟ.

1734. ನಿಸ್ತಾರ = ನಿರ್ವಾಹ.

1738. ಹಸ = ಕ್ಷಾಮ.

1741. ವೇದಿ = ಜಗಲಿ.

1760. ಕಾಳಿಜ = ಕಾಲೇಯ. ಬಿಕ್ಕ = ಹೃದಯ. ತೊರಳೆ = ಪ್ಲೀಹ. ಸಿಂಘ?

1769. ಜವನಿಕೆ = ? ತೆರೆ.

1771. ಅಳ್ಕಿದನು, ಹೊಸರೂಪ.

1774. ಅಕಾರ?

1779. ತಮ = ಕಾಲತುದಿ.

1781. ರಕ್ಷಿಸಲು, ಹೊಸರೂಪ.

1785 ಸಿಂದ = ಧ್ವಜ

1786. ಧರ್ಮ್ಮವ, ಬಿಂದುವಿಲ್ಲ.

1788. ನೀರಜಜಾತ, ಬಿಂದುವಿಲ್ಲ.

1789. ದೌವಾರಿಕರ್ = ದ್ವಾರಪಾಲಕರು. ಬೈಚಿಣಿಸೆನಲ್ = ? ಬೈಚಿಡುಗೆವಲ್.

1790. ಒಪ್ಪಿದ, ಬಿಂದುವಿಲ್ಲ.

1791. ಬಲುಪು, ಹೊಸರೂಪ. ಉದುಟಿ?

1792. ಅಡರಿದರ್, ಕಾಣಿಕೆ; ಹೊಸರೂಪ. ವೇಳೆ + ಆಳ್.

1793. ವೈರಿಶ್ರಿಯುಂ, ಈ ರೂಪವು ಚಿಂತ್ಯ.

1798. ತೋರಹತ್ತಂ = ? ಅಧಿಕನು.

1806. ಗೋವ = ? ಗಂಡ. ಭಾರ್ಗವ = ಪರಶುರಾಮ.

1807. ಡೊಂಬು = ಜಂಬ, ಹೆಮ್ಮೆ. ಹೇವೈಸು = ಅಸಹ್ಯಪಡು.

1809. ಗೋರಾಜಂ = ಇಂದ್ರ, ಚಂದ್ರ, ಧರ್ಮ್ಮರಾಜ. ಕೂಚಿರಾಜ, ಬಿಂದುವಿಲ್ಲ.

1817. ಎಯ್ದೆ + ಅಡರ್ವಿನಂ.

1818. ನಿರುತ = ದೃಢವಿಶ್ವಾಸ. ದೇಸೆ = ಅಂದ, ಚೆಲ್ವು. ರುಕ್ಮ = ಚಿನ್ನ. ವಾಕ್ಯಾದಿ ವರ್ಣಾಹ್ವಯರ್ = ವಾಕ್ಯಗಳ ಮೊದಲಕ್ಷರಗಳಿಂದ ಘಟಿತವಾದ ಹೆಸರುಳ್ಳವರು: ಮುನಿಭದ್ರದೇವರು.

1821. ಡಾವರಿಸು = ಸುತ್ತು. ಸಂತೈಸಲು, ಹೊಸರೂಪ.

1822. ರೌತರ್ = ರಾವುತರು. ಜೋದರು, ಹೊಸರೂಪ. ಅಗಲ್?

1823. ಭೀತರು, ಹೊಸರೂಪ. ಹೂವಿನ ತಱುವಾಯ್ = ಹೂವಾದ ಮೇಲೆ ಹುಟ್ಟುವುದು, ಕಾಯಿ (ರಕ್ಷಿಸು).

1827. ಕ್ರಮಾಲಂಕಾರ. ಅದ್ರಿಧರ = ವಿಷ್ಣು.

1828. ತರಳ = ? ಕಾಂತಿ.

1830. ವಾರಿಜಸದ್ಮೆ = ಲಕ್ಷ್ಮಿ. ಪಾರದಂ = ಸಿದ್ಧರಸ. ಸುಮನೋಮಣಿ = ಚಿಂತಾಮಣಿ. ಓರಣಂ = ವರಿಸೆ.

1831. ಕೂರ್ಮೆ = ಪ್ರೀತಿ. ಪ್ರಭುವಿಗೆ, modern

1834. ಗೋಪತಿ ವಾಹನ = ಐರಾವತ, ಹಂಸ, ಶಿವ.

1847. ಮಾಂಕರಿಸು = ತಿರಸ್ಕರಿಸು.

# ಕೆಲವು ಕಠಿಣಪದಗಳು

**ಅ**

ಅಂತ್ರ=ಕರುಳು (?)
ಅಂಭಶ್ಚರ=ಜಲಚರ
ಅಗುಂದಲೆ=ಆಧಿಕ್ಯ, ದೊಡ್ಡತನ
ಅಗುರ್ವು=ಭೀತಿ, ಭಯಂಕರ
ಅಗೆ = ಮೊಳಕೆ
ಅಡರ್ಪು=ಊರೆಗೋಲು
ಅಣೆಯರ=ದೊಡ್ಡ, ಹಿರಿಯ
ಅಣುಗ = ಪ್ರೀತಿಪಾತ್ರ
ಅಣುಗಾಳ್=ಪ್ರೀತಿಪಾತ್ರನಾದ ವ್ಯಕ್ತಿ, ಸೇವಕ

ಅಟ್ಟೆ=ತಲೆಯಿಲ್ಲದ ದೇಹ
ಅದವಟಿಲ್=ಸಂತಾಪ, ತೊಂದರೆ, ಬೇಗುದಿ
ಅನಿಮಿಷ=ದೇವತೆ
ಅನುವರ=ಯುದ್ಧ; ಕಷ್ಟ
ಅಪೇಯ=ಕುಡಿಯಲು ಕಷ್ಟವಾದ, ಕುಡಿಯಬಾರದ
ಅಭ್ರಾನಿಳನ್ = ಮೋಡಕ್ಕೆ ಗಾಳಿ ಯಂತಿರುವವನು
ಅಱಗುಲಿಮಾರಿ = ದುಷ್ಟಳಾದ ಮಾರಿದೇವತೆ
ಅಱುವಣ = ಒಂದು ಬಗೆಯ ತೆರಿಗೆ
ಅವಗಾಹವಿರಿಸು = ಮುಳುಗಿಸಿಡು
ಅವಯವ = ಅಶ್ರಮ, ಸುಲಭ

**ಆ**

ಆಂತೊರನ್ = ಎದುರಿಸಿದವರನ್ನು
ಆಣೆ=ಆಜ್ಞೆ
ಆತಂಬರಂ=ಆತನವರೆಗೆ, ಆತನಷ್ಟು
ಆಪಲ್ಲತಿಕಾ ಲವಿತ್ರ=ಆಪತ್ತೆಂಬ ಬಳ್ಳಿಗೆ ಕುಡುಗೋಲು
ಆಯತ=ಸರಿಯಾಗಿ, ಸುಲಭವಾಗಿ
ಆಯತನ=ಮನೆ, ಆಲಯ
ಆಯುವನ (ಆಯತನ)=ಆಲಯ
ಆಯಾತರ್=ಬಂದವರು, ಸಮೀಪಿಸಿದವರು
ಆರ್ಮಂ=ಆಶ್ರಯಸ್ಥಾನ
ಆರಂ=ಹಾರ
ಆರಮೆ=ಆರಾಮ, ತೋಟ, ಉಪವನ
ಆಸುರ=ಭಯಂಕರ

**ಇ**

ಇಂದ್ರಾಪಗೆ=ದೇವಗಂಗೆ
ಇದಾನೀಂತನ=ಈ ಕಾಲದ
ಇದಿರ್=ಶತ್ರು, ಶತ್ರುಸಮೂಹ
ಇರ್ಕೆ=ಇರುವ ಜಾಗ
ಇಷ್ಟಿಗೆ=ಯಾಗ

**ಉ**

ಉಗ್ರಾಸಿ=ಹರಿತವಾದ ಕತ್ತಿ
ಉತ್ಸಂಗ=ತೊಡೆ
ಉಬ್ಬಟೆ=ಬಹಳ, ಅಧಿಕ
ಉರ್ಬು=ಉಕ್ಕು, ಜಂಬ
ಉಱದೆ=ಲೆಕ್ಕಿಸದೆ
ಉವರ್=ಅನ್ಯರು

**ಎ**

ಎಕ್ಕೆವೆತ್ತ=ಔನ್ನತ್ಯವನ್ನು ಪಡೆದ

ಎಚಿಕೆವಟ್ಟನ್ = ಕಿರೀಟಪ್ರಾಯನು

**ಏ**

ಏನಃಪರಾಙ್ಮುಖರ್ = ಪಾಪದಿಂದ ದೂರವಿರುವವರು

**ಒ**

ಒಟ್ಟಜೆ = ಸಮೂಹ; ಸಾಲುಸಾಲು, ಪರಾಕ್ರಮ

ಒರೆ = ಸಮಾನ

**ಓ**

ಓಜೆ = ಕ್ರಮ, ರೀತಿ

ಓಳಿ = ಸಾಲು, ಸಮೂಹ

**ಕ**

ಕಂಡ = ಮಾಂಸಖಂಡ

ಕಂಜಾಸನ = ಬ್ರಹ್ಮ

ಕಚ = ಜಡೆ

ಕಡಂಗಿ = ಉತ್ಸಾಹವನ್ನು ತೋರಿ

ಕಡಿತಲೆ = ಒಂದು ಬಗೆಯ ಆಯುಧ

ಕಣಯ = ಒಂದು ಆಯುಧ

ಕಣೆ = ಗಣೆ

ಕನ್ನೆಗೆಱೆ = ಮೊದಲ ಕೆರೆ (?)

ಕಪಿಳ = ಕಂದುಬಣ್ಣ

ಕಮನೀಯ = ಮನೋಹರ

ಕರ್ದಮ = ಕೆಸರು

ಕಱುಪು = ಹುರುಪು, ಅಸೂಯೆ

ಕಲಿತ = ಕೂಡಿದ

ಕಲ್ಪವಿಟಪಿ = ಕಲ್ಪವೃಕ್ಷ

ಕವರ್ದುಕೊ = ಕಿತ್ತುಕೊ

ಕಳಾಪ = ಸಮೂಹ

ಕಳೆದುಕೊ = ಕಿತ್ತುಕೊ, ಕೈಗೆತೆಗೆದುಕೊ

ಕೞಲ್ಚು = ಕಳಚು, ಬಿಚ್ಚು, ಉದುರಿಸು

ಕಾಂಚಿ = ನಡುಪಟ್ಟಿ, ಡಾಬು, ಒಂದು ಪಟ್ಟಣ

ಕಾಗಿಣಿ = ಒಂದು ಚಿಕ್ಕ ನಾಣ್ಯ

ಕಾತುದು = ಕಾಯಿಬಿಟ್ಟಿತು

ಕಾಯ್ದು = ಕೋಪಗೊಂಡು, ಶುಖವನ್ನು ಪಡೆದು

ಕಾಹಳ = ಕಹಳೆ

ಕಾಟ್ಬುರ = ಕಾಡಿನ ಹೊಳೆ, ಪ್ರವಾಹ

ಕಿಬ್ಬರಿ = ಹೊಟ್ಟೆಯ ಕೆಳಭಾಗ

ಕಿಱುದೊಱೆ = ತುಂಗಭದ್ರಾ ನದಿ

ಕುಂತಳ = ತಲೆಗೂದಲು, ಕುಂತಳದೇಶ

ಕುಂಬು = ಬಾಗು, ಓಲಾಡು

ಕುಳಿಕಾಹಿ = ವಿಷಸರ್ಪ

ಕೂಜಿತ = ಧ್ವನಿಮಾಡಲ್ಪಟ್ಟ

ಕೂರ್ಪು = ಧೈರ್ಯ, ಪರಾಕ್ರಮ

ಕೃತ = ಕೃತಯುಗ

ಕೆಯ್ = ಹೊಲ, ಗದ್ದೆ

ಕೇವಣ = ಪೋಣಿಸಿದ್ದು (ಹಾರ)

ಕೊಟ್ಟಜವಾವಿ = ? (ಕೊಟ್ಟಜ = ಕಪ್ಪ)

ಕೌಕ್ಷೇಯಕ = ಕತ್ತಿ

ಕ್ರಕಚ = ಗರಗಸ

ಕ್ಷ್ಮಾಜ = ಮರ

ಕ್ಷ್ಮಾದಯಿತ = ಭೂಪತಿ, ರಾಜ

ಕ್ಷ್ಮಾಮರ = ಧರಾಮರ, ಬ್ರಾಹ್ಮಣ

**ಖ**

ಖರ್ವಡ = ಸುತ್ತಲೂ ಗುಡ್ಡಗಳಿರುವ ಊರು

ಖುರ = ಗೊರಸು

ಖೇಡ = ಗಿರಿ, ನದಿಗಳಿಂದ ರಕ್ಷಿತವಾದ ಊರು

**ಗ**

ಗರಿಮುವ್ = ದೊಡ್ಡತನ

ಗರುತ್ವ(ತ್ಮ) = ಗರುಡ

ಗವಸಣಿಗೆ = ತೆರೆ, ಮುಚ್ಚಳ

**ಚ**

ಚಂದ್ರಕಾಂತೋಪಲ = ಚಂದ್ರಕಾಂತಶಿಲೆ
ಚಟ್ಟಸಮಯ = ವಿದ್ಯಾರ್ಥಿಗಳಿಗೆ ಮಾಡಿದ ವ್ಯವಸ್ಥೆ
ಚತುರ್ವಿಧದಾನ = ಜೈನರ ಆಹಾರ, ಅಭಯ, ಔಷಧ, ಶಾಸ್ತ್ರ ಎಂಬ ನಾಲ್ಕು ಬಗೆಯ ದಾನಗಳು.
ಚಮೂ = ಸೇನೆ

**ಜ**

ಜೀವಿಸಿದಂ = ಬದುಕಿಸಿದನು, ಪಾಲಿಸಿದನು

**ಡ**

ಡೊಂಬು = ದೊಂಬರಾಟ

**ತ**

ತಡಾಗ = ತಟಾಕ, ಕೆರೆ
ತಮಾಲ = ಹೊಂಗೆಮರ
ತರ್ಜಿಸಿ = ಸುಮ್ಮನಿರಿಸಿ
ತಳಿರ್ = ಚಿಗುರು
ತಾಯ್ನೆಲ = ಮಾತೃಭೂಮಿ
ತಿಱಿದ = ತೆರವ, ಕೊಡದ
ತುಲಾಪುರುಷಾರೋಹಣ = ತುಲಾಪುರುಷವೆಂಬ ಮಹಾದಾನ ಮಾಡುವುದು
ತುಟಿಲಾಳ್ತನ = ಶೌರ್ಯದ ಸ್ವಾಮಿಕಾರ್ಯ
ತೋಡುಂ ಬೀಡುಂ = (ಬಾಣವನ್ನು) ತೊಡುವಿಕೆ ಮತ್ತು ಬಿಡುವಿಕೆ

**ದ**

ದಂಭೋಳಿ = ವಜ್ರಾಯುಧ
ದಿನಕೃತ್ = ಸೂರ್ಯ
ದೃಕ್ಕಜ್ಜಳ = ಕಣ್ಣಿನ ಕಾಡಿಗೆ
ದೇಸೆ = ಸೊಗಸು, ಸೌಂದರ್ಯ, ಮಹಿಮೆ
ದೊರೆ = ಸಮಾನ
ದ್ರೋಣಾಮುಖ = ಜಲಮಾರ್ಗವುಳ್ಳ ಊರು

**ಧ**

ಧ್ವಾನ = ಶಬ್ದ

**ನ**

ನಡಪು = ಸಾಕು
ನಾಟ್ಕಿ = ನಾಡಿಗೆ
ನಿಗೋದ = ಅನೇಕ ಮನುಷ್ಯರಿಗೆ ಒದಗುವ ಸಾಮಾನ್ಯ ಸ್ಥಿತಿ, ನರಕ(?)
ನಿರ್ದಳನ = ತುಳಿಯುವಿಕೆ
ನಿರ್ಧೂತಾಘನಿಚಯನ್ = ತೊಳೆಯಲ್ಪಟ್ಟ ಪಾಪಗಳನ್ನುಳ್ಳವನು, ಪುಣ್ಯಶಾಲಿ.
ನಿಲೆನುಡಿವ ಓಜೆ = ಬಹುಕಾಲ ನಿಲ್ಲುವಂತಹ ಮಾತಾಡುವ ಕ್ರಮ ಅಥವಾ ರೀತಿ
ನಿಸ್ಸಾಳ = ಒಂದು ವಾದ್ಯ
ನಿಳಿಂಪಾಂಗನೆ = ದೇವಾಂಗನೆ, ದೇವತಾಸ್ತ್ರೀ
ನೀರಾಕರ = ಸಮುದ್ರ
ನೀರೇಜ ಪುತ್ರಾಂಡ = ಬ್ರಹ್ಮಾಂಡ
ನೂಪುರ = ಕಾಲಂದುಗೆ
ನೈಷ್ಠಿಕಮುನಿ = ಬ್ರಹ್ಮಚಾರಿ ಮುನಿ

**ಪ**

ಪಂಕೇಜಾತಾಸ್ಯಜಾತೆ = ಬ್ರಹ್ಮನ ಮುಖದಿಂದ ಹುಟ್ಟಿದವಳು, ಸರಸ್ವತಿ
ಪಂದಲೆ = ಹಸಿತಲೆ, ರಕ್ತಸೋರುವ ತಲೆ
ಪಕ್ಕರಕ್ಕೆ = ಪಕ್ಷರಕ್ಷೆ, ಆನೆಕುದುರೆಗಳಿಗೆ ಹಾಕುವ ಕವಚ
ಪಟ್ಟಿಸ ಭಂಡಾರ = ?
ಪಡಿ = ಪ್ರತಿ, ಸಮಾನ
ಪಡಿಸಲಿಸು = ಸರಿಪಡಿಸು
ಪಣ್ = ಸಿದ್ಧಪಡಿಸು
ಪಣ್ಣಿಗೆ = ಸಿದ್ಧಪಡಿಸಿದ್ದು, ಅಂಬಾರಿ
ಪತ್ತನ = ಸಮುದ್ರದ ದಡದ ಊರು

ಪರದ = ವ್ಯಾಪಾರಿ
ಪಲ್ಲಣ = ಜೀನು
ಪಸರ = ಪ್ರಸರ, ಹಬ್ಬುವಿಕೆ
ಪಸುರ್ಪುವಡೆ = ಹಸುರುಬಣ್ಣಪಡೆ
ಪೞಿ = ನಿಂದೆ
ಪಾಟಿ = ಸಮಾನ
ಪಾಯದಳ = ಪದಾತಿ ಸೇನೆ
ಪಾರ್ವೆ = ಬ್ರಾಹ್ಮಣಸ್ತ್ರೀ
ಪಿಂಡು = ಹಿಂಡು
ಪೀನ = ದೊಡ್ಡ, ಬಲಿಷ್ಠ
ಪುಂಗವ = ಎತ್ತು
ಪುಂಜಿಸು = ಸೇರಿಸು
ಪೂತುದು = ಹೂಬಿಟ್ಟಿತು
ಪೊಂಗು = ಅಹಂಕಾರದಿಂದ ಕೂಡು
ಪೊಡೆಯುಲರಾತನ್ = ವಿಷ್ಣು
ಪ್ರತ್ಯಗಾಶಾಪತಿ = ವರುಣ
ಪ್ರಾಂಶು = ಎತ್ತರ, ಉನ್ನತ

## ಬ

ಬಯ್ತಿಟ್ಟ = ಹೂಳಿಟ್ಟ, ನಿಕ್ಷಿಪ್ತ
ಬಸನ = ವ್ಯಸನ
ಬಿಣ್ಗುಂಡು = ಭಾರವಾದ ಗುಂಡು, ಲಂಗರು
ಬಿಸವಂದ = ಆಶ್ಚರ್ಯ
ಬೀಡಿಕ್ಕೆ = ಬೀಡುಜಾಗ
ಬೆಟ್ಟು = ಗುಡ್ಡ, ರಾಶಿ
ಬೆಳರ್ತು = ಬೆಳ್ಳಗಾಗಿ, ಬಿಳಿಚಿಕೊಂಡ
ಬೆಳ್ಳೆರಳೆ = ದಡ್ಡ ಜಿಂಕೆ
ಬ್ರಹ್ಮಪುರ = ಬ್ರಾಹ್ಮಣರು ಇರುವ ಪಟ್ಟಣದ ಬಡಾವಣೆ

## ಭ

ಭೈತ್ರ = ಹಡಗು

## ಮ

ಮಖ = ಯಾಗ
ಮಡಂಬ (ಮದಂಬ) = ಐನೂರು ಹಳ್ಳಿಗಳಿಂದ ಸುತ್ತುವರಿದ ಊರು
ಮತ್ತದ್ವಿರದ = ಮದ್ದಾನೆ
ಮಲೆದು = ಪ್ರತಿಭಟಿಸಿ ನಿಂತು
ಮುಯ್ಯ್ = ಭುಜ, ತೋಳು
ಮೆಱಿಕೋಲು = ಕೊಕ್ಕೆಯಿರುವ ಕೋಲು (ಕಣದಲ್ಲಿ ದವಸವಿರುವ ಹುಲ್ಲನ್ನು ಕೆದಕುವ ಕೋಲು)
ಮೇಲಕ್ಕ = ?
ಮೊಳೆವೋಯ್ತು = ಮೊಳಕೆಯಾಯಿತು

## ರ

ರಾಜಕಂ = ರಾಜಸಮೂಹ
ರಾಮಾರಾಮ = ಮನೋಹರವಾದ ತೋಟ

## ವ

ವದಾನ್ಯತೆ = ಮೃದುಭಾಷಿತ್ವ, ಪ್ರಿಯಭಾಷಿತ್ವ
ವಾರಾಂಗನೀಕ = ವೇಶ್ಯೆಯರ ಸಮೂಹ
ವಾಸವಾಂಗನೆಯರ್ = ದೇವತಾಸ್ತ್ರೀಯರು
ವಿಕಚೋತ್ಪಳ = ಅರಳಿದ ನೈದಿಲೆ
ವಿಕೀರ್ಣ = ಸಮೂಹ
ವಿಕ್ರಿಯೆ = ರೂಪ ಬದಲಾವಣೆ
ವಿತರಣ = ದಾನ
ವಿನ್ಯಸ್ತ = ಇಡಲ್ಪಟ್ಟ
ವಿಪಣಿ = ಅಂಗಡಿ
ವಿಷ್ಟರ = ಸಿಂಹಾಸನ
ವೀಸ = ಒಂದು ಬಗೆಯ ನಾಣ್ಯ
ವೃಷ = ವೃಷಭ; ಸದ್ಧರ್ಮ
ವೇತ್ರಹಸ್ತರ್ = ದಂಡಧಾರಿಗಳು

## ಶ

ಶತಮಖ = ಇಂದ್ರ

